ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮ




# ಶ್ರೀ ಸ್ಕಾಂದಮಹಾಪುರಾಣಂ

## ಮಾಹೇಶ್ವರಖಂಡ

೩

## ಅರುಣಾಚಲಮಾಹಾತ್ಮ್ಯ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೪೫

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮ



# ಶ್ರೀ ಸ್ಕಾಂದಮಹಾಪುರಾಣಂ

## ಮಾಹೇಶ್ವರಖಂಡ

## ೩

## ಅರುಣಾಚಲಮಾಹಾತ್ಮ್ಯ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**



ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೪೫



# ಶ್ರೀ ಸ್ಕಾಂದಮಹಾಪುರಾಣಂ

(ಮೂಲ ಮತ್ತು ಅನುವಾದ ಸಹಿತ)



ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದಮಹಾಪುರಾಣಂ

## ಮಾಹೇಶ್ವರಖಂಡ

## ೩

## ಅರುಣಾಚಲಮಾಹಾತ್ಮ್ಯ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
**ನೋಟಿಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೪೫

# ಅರಿಕೆ

ಈ ಸಂಪುಟದಲ್ಲಿ ಶ್ರೀ ಸ್ಕಾಂದಮಹಾಪುರಾಣದ ಮೊದಲನೆಯ ಮಾಹೇಶ್ವರಖಂಡದ ಕಡೆಯ ಉಪಖಂಡವಾದ ಅರುಣಾಚಲ ಮಾಹಾತ್ಮ್ಯವು ಸಂಪೂರ್ಣವಾಗಿರುತ್ತದೆ. ಇಲ್ಲಿಂದ ಮುಂದಕ್ಕೆ ಎರಡನೆಯ ಮೂಲಖಂಡ ವಾದ ವೈಷ್ಣವಖಂಡವು ಪ್ರಾರಂಭವಾಗುವುದು.

ಅರುಣಾಚಲ ಮಾಹಾತ್ಮ್ಯವು ಪೂರ್ವಾರ್ಧ ಉತ್ತರಾರ್ಧಗಳೆಂಬುದಾಗಿ ಎರಡು ಭಾಗಗಳಾಗಿದೆ. ಪೂರ್ವಾರ್ಧದಲ್ಲಿ ನಿರೂಪಿತವಾಗಿರುವ ವಿಷಯಗಳೇ ಉತ್ತರಾರ್ಧದಲ್ಲಿ ನಂದೀಶ್ವರ ಮಾರ್ಕಂಡೇಯ ಸಂವಾದ ಪುರಸ್ಸರವಾಗಿ ವಿಸ್ತಾರರೂಪದಲ್ಲಿ ನಿರೂಪಿತವಾಗಿರುತ್ತವೆ. ಅಲ್ಲದೆ, ಕೆಲಕೆಲವು ಅಪೂರ್ವ ಶಿವಪೂಜಾಕ್ರಮಗಳೂ, ಶೈವಧರ್ಮಗಳೂ ವಿಶೇಷ ರೀತಿಯಿಂದ ಉಕ್ತವಾಗಿರು ತ್ತವೆ. ಓದುಗರಿಗೆ ಇವು ಜ್ಞಾನಬೋಧಕಗಳಾದುವು.

ಈ ಅರುಣಾಚಲ ಮಾಹಾತ್ಮ್ಯವು, ಭಾರತದ ದಕ್ಷಿಣ ಪ್ರಾಂತದ 'ತಿರುವಣ್ಣಾಮಲೈ' ಎಂಬ ಕ್ಷೇತ್ರದಲ್ಲಿ ಬಹಳ ಪ್ರಸಿದ್ಧವಾಗಿರುತ್ತದೆ. ಇದಕ್ಕಿ ರುವ ರೈಲ್ವೇ ನಿಲ್ದಾಣದ ನಾಮಧೇಯವೂ 'ತಿರುವಣ್ಣಾಮಲೈ' ಎಂದೇ. ಮದ್ರಾಸಿಗೆ ದಕ್ಷಿಣದಲ್ಲಿ 'ವಳೀಪುರಂ' ಜಂಕ್ಷನ್ನಿಗೆ ಪಶ್ಚಿಮಕ್ಕೆ ಈ ಕ್ಷೇತ್ರ ವಿರುತ್ತದೆ; ಪ್ರಖ್ಯಾತವಾದ ಯಾತ್ರಾಸ್ಥಳವಿದು.

ಕೆಲವು ಪ್ರತಿಗಳಲ್ಲಿ ಈ ಮಾಹಾತ್ಮ್ಯದ ಪ್ರತ್ಯಧ್ಯಾಯದ ಕಡೆಯಲ್ಲಿಯೂ "ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಕೋಟಿರುದ್ರಸಂಹಿತಾಯಾಮರುಣಾಚಲ ಮಾಹಾತ್ಮ್ಯೇ........" ಎಂದಿರುತ್ತದೆ. ಇದರಿಂದ ಶ್ರೀ ಸ್ಕಾಂದ ಮಹಾ ಪುರಾಣದಲ್ಲಿ ಕೋಟಿರುದ್ರಸಂಹಿತೆಯೆಂಬ ಉಪಖಂಡವಿರುವುದೇ ಎಂಬ ಸಂದೇಹ ಕ್ಕೆಡೆಯುಂಟು.

ಆದರೆ, ಶ್ರೀ ನಾರದ ಪುರಾಣದಲ್ಲಿ ಹೇಳಿರುವ ಕ್ರಮದಂತೆ ಕುಮಾರಿಕಾ ಖಂಡ (?) (ಕೌಮಾರಿಕಾಖಂಡ)ವು ಮುಗಿದ ಬಳಿಕ 'ಅರುಣಾಚಲಕಥಾ ಪ್ರಸ್ತಾವ' ಆರಂಭದಲ್ಲಿ 'ಸನಕ ಬ್ರಹ್ಮಸಂವಾದ' ಮುಂತಾದ ವಿಷಯಗಳ ಅನುಕ್ರಮಣಿಕೆ ಕೊಟ್ಟಿದೆ. ಅದೇ ಕ್ರಮವನ್ನನುಸರಿಸಿ ಇಲ್ಲಿ ಕೌಮಾರಿಕಾ ಖಂಡವಾದ ಮೇಲೆ ಅರುಣಾಚಲ ಮಾಹಾತ್ಮ್ಯವು ಪ್ರಾರಂಭವಾಗಿದೆ.

ಅಂತು ಶ್ರೀ ನಾರದ ಪುರಾಣಾನುಸಾರ ಈ ಪುರಾಣದ ಪ್ರಥಮಖಂಡ ಮಾಹೇಶ್ವರ; ಅದರಲ್ಲಿ ಕೇದಾರಖಂಡ— ಕೌಮಾರಿಕಾಖಂಡ— ಅರುಣಾಚಲ ಮಾಹಾತ್ಮ್ಯ ಇವು ಉಪಖಂಡಗಳು. ಇದಾದ ಮೇಲೆ ವೈಷ್ಣವಖಂಡ.

ಶಿವಮಾಹಾತ್ಮ್ಯ, ಶೈವಧರ್ಮ, ಶಿವಪೂಜಾಕ್ರಮ, ವಿವಿಧ ತೀರ್ಥ ಕ್ಷೇತ್ರಾದಿ ಮಾಹಾತ್ಮ್ಯಗಳೇ ಮೊದಲಾದ ಅನೇಕಾನೇಕ ವಿಷಯಗಳನ್ನು

ಅಖಂಡವಾಗಿ ಪ್ರತಿಪಾದಿಸಿರುವ ಇಂತಹ ಉತ್ತಮ ಗ್ರಂಥರತ್ನವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಪ್ರೋತ್ಸಾಹವನ್ನಿತ್ತು ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಜಗದೀಶ್ವರನು ದೀರ್ಘಾಯುರಾರೋಗ್ಯಗಳನ್ನೂ, ಇತೋಪ್ಯತಿಶಯವಾದ ಸನ್ಮಂಗಳಗಳನ್ನೂ ಅನುಗ್ರಹಿಸಿ ಸಂರಕ್ಷಿಸಲೆಂದು ಪ್ರಾರ್ಥಿಸುತ್ತೇನೆ.

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ

## ಪೂರ್ವಾರ್ಧ

## ಉತ್ತರಾರ್ಧ

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

ಲಲಾಟೇ ತ್ರೈಪುಂಡ್ರೀ ನಿಟಿಲಕೃತಕಸ್ತೂರಿತಿಲಕಃ
ಸ್ಫುರನ್ಮಾಲಾಧಾರಃ ಸ್ಫುರಿತಕಟಿಕೌಪೀನವಸನಃ ।
ದಧಾನೋ ದುಸ್ತಾರಂ ಶಿರಸಿ ಫಣಿರಾಜಂ ಶಶಿಕಲಾಂ
ಪ್ರದೀಪಸ್ಸರ್ವೇಷಾಮರುಣಗಿರಿಯೋಗೀ ವಿಜಯತೇ ॥

ತಾತ್ಪರ್ಯ

ಲಲಾಟದಲ್ಲಿ ಭಸಿತತ್ರಿಪುಂಡ್ರವನ್ನೂ,
ನಿಟಿಲದಲ್ಲಿ ಕಸ್ತೂರಿಯ ತಿಲಕವನ್ನೂ, ಕೊರಳಲ್ಲಿ
ಸ್ಫುರಿಸುತ್ತಿರುವ ಸುಮಮಾಲೆಯನ್ನೂ ಧರಿಸಿ, ನಡುವಿನಲ್ಲಿ
ಮೆರೆಯುತ್ತಿರುವ ಕೌಪೀನವೊಂದೇ ವಸನವುಳ್ಳವನಾಗಿ, ಜಟಾಜೂಟದಲ್ಲಿ
ಫಣಿರಾಜನನ್ನೂ, ಚಂದ್ರಖಂಡವನ್ನೂ ತಾಳಿ ಸಮಸ್ತರಿಗೂ ಪ್ರದೀಪ
ಸ್ವರೂಪನೂ, ಜ್ಞಾನಪ್ರದಾಯಕನೂ ಆಗಿರುವ ಶ್ರೀಮದರುಣ
ಗಿರಿಯೋಗಿಯು ಲೋಕಾನುಗ್ರಹಕ್ಕಾಗಿ
ಜಯಶೀಲನಾಗಿರುತ್ತಾನೆ

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

ಅಥ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ

## ಪೂರ್ವಾರ್ಧಂ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥ ಪ್ರಥಮೋಽಧ್ಯಾಯಃ

### ಜ್ಯೋತಿರ್ಲಿಂಗ ಪ್ರಾದುರ್ಭಾವ ವರ್ಣನಂ

ವ್ಯಾಸ ಉವಾಚ :—

**ಅಥಾಹುರ್ಮುನಯಸ್ಸೂತಂ ನೈಮಿಷಾರಣ್ಯವಾಸಿನಃ ।**
**ಅರುಣಾಚಲಮಾಹಾತ್ಮ್ಯಂ ತ್ವತ್ತಃ ಶುಶ್ರೂಷವೋ ವಯಂ ॥ ೧ ॥**
**ತನ್ಮಾಹಾತ್ಮ್ಯಂ ವದೇತ್ಯುಕ್ತಃ ಸೂತಃ ಪ್ರೋವಾಚ ತಾನ್ಮುನೀನ್ ॥ ೨ ॥**

ಶ್ರೀ ಸೂತ ಉವಾಚ :—

**ಏತದರ್ಥಂ ಚತುರ್ವಕ್ತ್ರಂ ಪಪ್ರಚ್ಛ ಸನಕಃ ಪುರಾ ॥ ೩ ॥**

---

### ಕನ್ನಡದ ಅನುವಾದ

#### ಜ್ಯೋತಿರ್ಲಿಂಗ ಪ್ರಾದುರ್ಭಾವ ವರ್ಣನ

೧–೩. ವ್ಯಾಸಮುನಿಯು ಹೇಳುತ್ತಾನೆ:— ನೈಮಿಷಾರಣ್ಯವಾಸಿಗಳಾದ ಶೌನಕಾದಿ ಮುನಿಗಳು ಸೂತಪೌರಾಣಿಕನನ್ನು ಈ ರೀತಿ ಬೆಸಗೊಂಡರು. "ನಿನ್ನಿಂದ ಅರುಣಾಚಲದ ಮಾಹಾತ್ಮ್ಯವನ್ನು ಕೇಳಬೇಕೆಂಬ ಕುತೂಹಲವು ನಮಗುಂಟಾಗಿದೆ. ಅದನ್ನು ನಮಗೆ ವಿಸ್ತರಿಸುವವನಾಗು." ಹೀಗೆ ಹೇಳಿದ ಮುನಿಗಳನ್ನು ಕುರಿತು ಸೂತನು ಹೇಳುತ್ತಾನೆ:— "ಇದೇ ವಿಷಯವನ್ನೇ ಪೂರ್ವದಲ್ಲಿ ಸನಕಋಷಿಯು ಬ್ರಹ್ಮನನ್ನು ಕುರಿತು ಪ್ರಶ್ನೆಮಾಡಿದನು.

ಶೃಣುತಾವಹಿತಾ ಯೂಯಂ ತದ್ಯೋ ವಕ್ಷ್ಯಾಮಿ ಸಾಂಪ್ರತಂ ।
ಯದಾಕರ್ಣಯತಾಂ ಭಕ್ತ್ಯಾ ನರಾಣಾಂ ಪಾಪನಾಶನಂ ॥ ೪ ॥
ಸತ್ಯಲೋಕೇ ಸ್ಥಿತಂ ಪೂರ್ವಂ ಬ್ರಹ್ಮಾಣಂ ಕಮಲಾಸನಂ ।
ಸನಕಃ ಪರಿಪಪ್ರಚ್ಛ ಪ್ರಣತಃ ಪ್ರಾಂಜಲಿಃ ಸ್ಥಿತಃ ॥ ೫ ॥

ಸನಕ ಉವಾಚ :—

ಭುವನಾಧಾರ ದೇವೇಶ ವೇದವೇದ್ಯ ಚತುರ್ಮುಖ ।
ಆಸೀದಶೇಷವಿಜ್ಞಾನಂ ಪ್ರಸಾದಾದ್ಭವತೋ ಮಮ ॥ ೬ ॥
ಭವದ್ಭಕ್ತಿವಿಭೂತ್ಯಾಮೇ ಶೋಧಿತೇ ಚಿತ್ತದರ್ಪಣೇ ।
ಬಿಂಬತೇ ಸಕಲಾಜ್ಞಾನಂ ಸಕೃದೇವೋಪದೇಶತಃ ॥ ೭ ॥
ಸಾರಾರ್ಥಂ ವೇದ ವೇದಾನಾಂ ಶಿವಜ್ಞಾನಮನಾಕುಲಂ ।
ಲಬ್ಧವಾನಹಮತ್ಯಂತಂ ಕಟಾಕ್ಷೈಸ್ತೇ ಜಗದ್ಗುರೋಃ ॥ ೮ ॥
ಲಿಂಗಾನಿ ಭುವಿ ಶೈವಾನಿ ದಿವ್ಯಾನಿ ಚ ಕೃಪಾನಿಧೇ ।
ಮಾನುಷಾಣಿ ಚ ಸೈದ್ಧಾನಿ ಭೌತಾನಿ ಸುರನಾಯಕ ॥ ೯ ॥
ಯಲ್ಲಿಂಗಮಮಲಂ ದಿವ್ಯಮರಿಚ್ಛೇದನವೈಭವಂ ।
ಸ್ವಯಂಭುಜಾಂಬವೇ ದ್ವೀಪೇ ತೈಜಸಂ ತದ್ವದಸ್ವ ಮೇ ॥ ೧೦ ॥

---

೪. ನೀವು ಏಕಾಗ್ರಚಿತ್ತದಿಂದ ಕೇಳುವಿರಾದರೆ ವಿಶದವಾಗಿ ಹೇಳುತ್ತೇನೆ; ಕೇಳಿರಿ. ಇದನ್ನು ಭಕ್ತಿಯಿಂದ ಕೇಳಿದರೆ ಮನುಷ್ಯರ ಸಮಸ್ತ ಪಾಪಗಳೂ ನಾಶವಾಗುತ್ತವೆ.

೫. ಪೂರ್ವದಲ್ಲಿ ಒಮ್ಮೆ ಸನಕನು ಸತ್ಯಲೋಕದಲ್ಲಿ ಪದ್ಮಾಸನಾಸೀನನಾದ ಚತುರ್ಮುಖಬ್ರಹ್ಮನನ್ನು ಕಂಡು ಆತನನ್ನು ನಮಸ್ಕರಿಸಿ ಅಂಜಲಿಬಂಧವನ್ನು ಮಾಡಿ ಕೇಳಿದನು :—

೬. 'ಹದಿನಾಲ್ಕು ಲೋಕಗಳಿಗೆ ಆಧಾರನೂ, ದೇವತೆಗಳಿಗೆ ಒಡೆಯನೂ, ವೇದಸ್ತುತ್ಯನೂ ಆದ ಚತುರ್ಮುಖನೆ! ನಿನ್ನ ಅನುಗ್ರಹದಿಂದ ನನಗೆ ಸಂಪೂರ್ಣವಾದ ಜ್ಞಾನವು ಉಂಟಾಯಿತು.

೭. ನಿನ್ನ ಭಕ್ತಿಯೆಂಬ ಐಶ್ವರ್ಯದಿಂದ ನಿಷ್ಕಲ್ಮಷವಾದ ನನ್ನ ಮನಸ್ಸಿನಲ್ಲಿ ಎಲ್ಲಾ ಜ್ಞಾನವೂ ಒಮ್ಮೆ ಉಪದೇಶಹೊಂದುವುದರಿಂದಲೇ ಪ್ರತಿಬಿಂಬಿಸುತ್ತದೆ.

೮. ವೇದವೇದಾಂತಗಳಲ್ಲಿ ಸಾರಭೂತವೂ, ಅಖಂಡವೂ ಆದ ಶಿವಜ್ಞಾನವನ್ನೂ ಸಹ ಲೋಕಗುರುವಾದ ನಿನ್ನ ಕಟಾಕ್ಷದ ಕೃಪೆಯಿಂದ ಹೊಂದಿರುವವನಾಗಿದ್ದೇನೆ.

೯–೧೦. ಎಲೈ ಕೃಪಾಸಮುದ್ರನೆ! ಭೂಲೋಕದಲ್ಲಿ ದಿವ್ಯ, ಮಾನುಷ, ಸಿದ್ಧ, ಭೌತಿಕವೇ ಮೊದಲಾದ ಉತ್ತಮೋತ್ತಮಗಳಾದ ಯಾವ ಶೈವಲಿಂಗ

ನಾಮ ಸ್ಮರಣಮಾತ್ರೇಣ ಯತ್ಪಾತಕವಿನಾಶನಂ ।
ಶಿವಸಾರೂಪ್ಯದಂ ನಿತ್ಯಂ ಮಹ್ಯಂ ವದ ದಯಾನಿಧೇ ॥ ೧೧ ॥
ಅನಾದಿ ಜಗದಾಧಾರಂ ಯತ್ತೇಜಃ ಶೈವಮವ್ಯಯಂ ।
ಯಚ್ಚ ದೃಷ್ಟ್ವಾ ಕೃತಾರ್ಥಸ್ಸ್ಯಾತ್ತನ್ಮಹ್ಯಮುಪದಿಶ್ಯತಾಂ ॥ ೧೨ ॥
ಇತಿ ಭಕ್ತಿಯುತಸ್ತಸ್ಯ ಕೌತೂಹಲಸಮನ್ವಿತಂ ।
ವಾಕ್ಯಮಾಕರ್ಣ್ಯ ಭಗವಾನ್ಪ್ರಸಸಾದ ತಪೋನಿಧಿಃ ॥ ೧೩ ॥
ಪಧ್ಯೌ ಚ ಸುಚಿರಂ ಶಂಭುಂ ಪಂಕಜಾಸನಸಂಸ್ಥಿತಃ ।
ಅಂತರಂಗಸುಖಾಂಭೋಧಿಮಗ್ನಚೇತಾಶ್ಚತುರ್ಮುಖಃ ॥ ೧೪ ॥
ದೃಷ್ಟ್ವಾ ಯದಾ ಪುರಾ ದೃಷ್ಟಂ ತೇಜಸ್ತಂಭಮಯಂ ಶಿವಂ ।
ಉತ್ತೀರ್ಣಸಕಲಾಧಾರಂ ನ ಕಿಂಚಿತ್ಪ್ರತ್ಯಬುಧ್ಯತ ॥ ೧೫ ॥

---

ಗಳಿರುವುವೋ ಮತ್ತು ಜಂಬೂ ದ್ವೀಪದಲ್ಲಿ ನೆಲಸಿರುವ ದಿವ್ಯವಾದುದೂ, ಕಾಮಾದಿ ಅರಿಷಡ್ವರ್ಗಗಳನ್ನು ನಾಶಗೊಳಿಸುವುದೂ, ಪರಿಶುದ್ಧವೂ ಆದ ಯಾವ ಸ್ವಯಂಭುಲಿಂಗವಿರುವುದೋ ಅದನ್ನು ನನಗೆ ತಿಳಿಸು.

೧೧. ಯಾವುದರ ನಾಮವನ್ನು ಸ್ಮರಿಸಿದಮಾತ್ರದಿಂದ ಸರ್ವ ಪಾಪಗಳೂ ಪರಿಹಾರವಾಗುವುವೋ, ಶಾಶ್ವತವಾದ ಶಿವಸಾರೂಪ್ಯ ರೂಪವಾದ ಮೋಕ್ಷವು ದೊರಕುವುದೋ ಅದನ್ನು ದಯಾಮಯನಾದ ನೀನು ನನಗೆ ತಿಳಿಸಬೇಕು.

೧೨. ಅನಾದಿಯಾದುದೂ, ಜಗತ್ತಿಗೆ ಆಧಾರಭೂತವಾದುದೂ, ನಾಶ ರಹಿತವಾದುದೂ, ದರ್ಶನಮಾತ್ರದಿಂದಲೇ ಮನುಷ್ಯರನ್ನು ಕೃತಾರ್ಥರನ್ನಾಗಿ ಮಾಡುವುದೂ ಆಗಿರುವಂತಹ ಶಿವನ ತೇಜೋಮಹಿಮೆಯನ್ನು ನನಗೆ ಉಪದೇಶ ಮಾಡುವವನಾಗು.'

೧೩. ಭಕ್ತಿಯುಕ್ತನಾದ ಸನಕನು ಕುತೂಹಲದಿಂದೊಡಗೂಡಿ ಹೇಳಿದ ಈ ಮಾತುಗಳನ್ನು ಕೇಳಿ ತಪೋನಿಧಿಯಾದ ಬ್ರಹ್ಮನು ಪ್ರಸನ್ನಾಂತಃಕರಣ ನಾದನು.

೧೪. ಬಳಿಕಲಾ ಚತುರ್ಮುಖನು ಪದ್ಮಾಸನಾಸೀನನಾಗಿ ಚಿರಕಾಲ ಪರಶಿವ ನನ್ನು ಕುರಿತು ಧ್ಯಾನಿಸಿದನು. ಆಗಲಾತನು ಆತ್ಮಾನಂದವೆಂಬ ಸಮುದ್ರದಲ್ಲಿ ಮಗ್ನವಾದ ಚಿತ್ತವುಳ್ಳವನಾದನು.

೧೫. ತಾನು ಪೂರ್ವದಲ್ಲಿ ಕಂಡಂತಹ ಸಕಲ ನಾಮರೂಪವ್ಯಾಕೃತ ವಾದ ಬ್ರಹ್ಮಾಂಡಕ್ಕೂ ಆಧಾರಸ್ತಂಭದಂತಿರುವ ಸದಾಶಿವನ ತೇಜೋಲಿಂಗದ ಆಕಾರವನ್ನು ಮನಸ್ಸಿನಲ್ಲಿ ಕಂಡೊಡನೆಯೇ ಆತನು ಬಾಹ್ಯಜ್ಞಾನಶೂನ್ಯ ನಾದನು.

ಪುನರಾಜ್ಞಾಂ ಶಿವಾಲ್ಲಬ್ಧ್ವಾ ಅನುಪಾಲಯಿತುಂ ಪ್ರಭುಃ ।
ನಿರ್ವರ್ತ್ಯ ಹೃದಯಂ ಯೋಗಾತ್ಸಸ್ಮಾರ ಸುತಮಾನತಂ ॥ ೧೬ ॥
ಶಿವದರ್ಶನ ಸಂಜಾತಪುಲಕಾಂಕಿತ ವಿಗ್ರಹಃ ।
ಆನಂದಬಾಷ್ಪವನ್ನೇತ್ರಃ ಸಗದ್ಗದಮಭಾಷತ ॥ ೧೭ ॥

ಬ್ರಹ್ಮೋವಾಚ :—

ಅಂತಃ ಸಂಸ್ಮಾರಿತಃ ಪುತ್ರ ಭವತಾಽಹಂ ಪುರಾತನಂ ।
ಶಿವಯೋಗಮನುಧ್ಯಾಯನ್ನಸ್ಮಾರ್ಷಂ ತವ ಚಾದರಾತ್ ॥ ೧೮ ॥
ಶಿವಭಕ್ತಿಃ ಪರಾ ಜಾತಾ ತಪೋಭಿರ್ಬಹುಭಿಸ್ತ್ವವ ।
ತಯಾ ಮದೀಯಂ ಹೃದಯಂ ವ್ಯಾವರ್ತಿತಮಿವ ಕ್ಷಣಾತ್ ॥ ೧೯ ॥
ಪಾವಯಂತಿ ಜಗತ್ಸರ್ವಂ ಚರಿತ್ರೈಸ್ತೇ ನಿರಾಕುಲೇ ।
ಯೇಷಾಂ ಸದಾಶಿವೇ ಭಕ್ತಿರ್ವರ್ಧತೇ ಸಾರ್ವಕಾಲಿಕೀ ॥ ೨೦ ॥
ಸಂಭಾಷಣಂ ಸಹಾವಾಸಃ ಕ್ರೀಡಾ ಚೈವ ವಿಮಿಶ್ರಣಂ ।
ದರ್ಶನಂ ಶಿವಭಕ್ತಾನಾಂ ಸ್ಮರಣಂ ಚಾಘನಾಶನಂ ॥ ೨೧ ॥

---

೧೬. ತರುವಾಯ ಶಿವನಿಂದಲೇ ಆಜ್ಞಪ್ತನಾಗಿ ಆತನ ಆಜ್ಞಾಧಾರಕನಾದ ಬ್ರಹ್ಮನು ಮನಸ್ಸನ್ನು ಯೋಗಸಮಾಧಿಯ ದೆಸೆಯಿಂದ ಬಹಿರ್ಮುಖಗೊಳಿಸಿ ಕೊಂಡು ಎದುರಿನಲ್ಲಿ ಪ್ರಣತನಾಗಿದ್ದ ಮಗನನ್ನು ಕಂಡನು.

೧೭. ಶಿವದರ್ಶನದಿಂದುಂಟಾದ ಮೈನವಿರುಗಳಿಂದ ಕೂಡಿದವನಾಗಿ, ಕಣ್ಣುಗಳಿಂದ ಆನಂದಭಾಷ್ಪಗಳನ್ನು ಸುರಿಸುತ್ತ, ಕಂಠವು ಗದ್ಗದಿತವಾಗುತ್ತಿರಲು, ಅವನು ಆ ಸನಕನನ್ನು ಕುರಿತು ಹೀಗೆಂದನು :—

೧೮–೧೯. 'ಎಲೈ ಪುತ್ರನೆ! ನಿನ್ನಿಂದ ನನ್ನ ಆತ್ಮವು ಸ್ಮೃತಿಗೆ ಬರುವಂಥದಾಯಿತು. ಅಲ್ಲದೆ ಪುರಾತನವಾದ ಶಿವಯೋಗವನ್ನೂ ಸಹ ನಿನ್ನ ಕುತೂಹಲದ ನೆವದಿಂದ ಪಡೆದು ಧ್ಯಾನ ಮತ್ತು ಸ್ಮರಣೆಗಳನ್ನು ಮಾಡುವ ಯೋಗವು ನನಗೆ ಲಭಿಸಿತು. ನೀನು ಅನೇಕ ವಿಧಗಳಾದ ತಪಸ್ಸುಗಳನ್ನು ಮಾಡಿರುವುದರಿಂದಲೇ ನಿನ್ನಲ್ಲಿ ಅಪೂರ್ವವಾದ ಶಿವಭಕ್ತಿಯುಂಟಾಯಿತು. ಅದರ ಬಲದಿಂದಲೇ ಶಿವನಲ್ಲಿ ಐಕ್ಯವನ್ನು ಹೊಂದಿದ್ದ ನನ್ನ ಮನಸ್ಸನ್ನೂ ಸಹ ಬಹಿರ್ಮುಖವಾಗುವಂತೆ ಮಾಡಿದೆ.

೨೦–೨೧. ಯಾರ ಹೃದಯಗಳಲ್ಲಿ ನಿರಂತರವಾದ ಶಿವಭಕ್ತಿಯು ವೃದ್ಧಿಯಾಗುತ್ತಿರುವುದೊ, ಅವರು ನಿರಾಕುಲರಾಗಿದ್ದುಕೊಂಡು ತಮ್ಮ ನಡೆನುಡಿಗಳಿಂದ ಜಗತ್ತನ್ನೇ ಪಾವನಮಾಡುವರು. ಇಂತಹ ಶಿವಭಕ್ತರೊಡನೆ ಮಾತನಾಡುವುದು, ವ್ಯವಹಾರ ಮಾಡುವುದು, ಆಟಪಾಟಗಳು, ಸ್ನೇಹಸಂಬಂಧಗಳು ಮತ್ತು ಇವರ ಸ್ಮರಣ— ಇವೆಲ್ಲವೂ ಪಾಪನಾಶಕಗಳಾಗಿವೆ.

ಶ್ರೂಯತಾಮದ್ಭುತಂ ಶೈವಮಾವಿರ್ಭೂತಂ ಯಥಾ ಪುರಾ ।
ಅವ್ಯಾಜಕರುಣಾಪೂರ್ಣಮರುಣಾದ್ರ್ಯಭಿಧಂ ಮಹಃ ॥ ೨೨ ॥
ಅಹಂ ನಾರಾಯಣಶ್ಚೋಭೌ ಜಾತೌ ವಿಶ್ವಾಧಿಕೋದಯಾತ್ ।
ಬಹುಸ್ಯಾಮಿತಿ ಸಂಕಲ್ಪಂ ವಿತನ್ವಾನಾತ್ಸದಾಶಿವಾತ್ ॥ ೨೩ ॥
ಸ್ವಭಾವೇನ ಸಮುದ್ಭೂತೌ ವಿವದಂತೌ ಪರಸ್ಪರಂ ।
ನಚ ಶ್ರಾಂತೌ ನಿಯುಧ್ಯಂತೌ ಸಾಹಂಕಾರೌ ಕದಾಚನ ॥ ೨೪ ॥
ಪರಸ್ಪರಂ ರಣೋತ್ಸಾಹಮಾವಯೋರತಿಭೀಷಣಂ ।
ಆಲೋಕ್ಯ ಕರುಣಾಮೂರ್ತಿರಚಿಂತಯದಥೇಶ್ವರಃ ॥ ೨೫ ॥
ಕಿಮರ್ಥಮನಯೋರ್ಯುದ್ಧಂ ಜಾಯತೇ ಲೋಕನಾಶನಂ ।
ಮಯಾ ಸೃಷ್ಟಮಹಂ ಪಾತೇತಿ ವಿವಾದಮುಥಿತಸ್ಥಿತಯೋಃ ॥ ೨೬ ॥
ಸಮಯೇಽಸ್ಮಿನ್ ಸ್ವಯಂ ಲಕ್ಷ್ಯೇ ಮುಗ್ಧಯೋರನಯೋರ್ಭೃಶಂ ।
ಯದಿ ಯುದ್ಧಂ ನರೋತ್ಸ್ಯಾಮಿ ತದಾಸ್ಯಾದ್ಭುವನಕ್ಷಯಃ ॥ ೨೭ ॥
ವೇದೇಷು ಮಮ ಮಾಹಾತ್ಮ್ಯಂ ವಿಶ್ವಾಧಿಕ್ಯತಯಾ ಶ್ರುತಂ ।
ನಜಾನಾತೇ ಇಮೌ ಮುಗ್ಧೌ ಕ್ರೋಧತೋ ಗಳಿತಸ್ಮೃತೀ ॥ ೨೮ ॥

---

೨೨. ಪೂರ್ವದಲ್ಲಿ ಅರುಣಾಚಲವೆಂಬ ನಾಮದಿಂದ ಅದ್ಭುತವಾದ ಅವ್ಯಾಜ ಕರುಣಾಮೂರ್ತಿಯಾದ ಪರಶಿವನ ಮಹದ್ರೂಪವು ಆವಿರ್ಭೂತವಾದುದನ್ನು ಕೇಳು.

೨೩. ವಿಶ್ವಾಧಿಕನಾದ ಸದಾಶಿವನು ತಾನು ಅನೇಕವಾಗಬೇಕೆಂದು ಸಂಕಲ್ಪಿಸಿದಮಾತ್ರದಿಂದಲೇ ನಾನೂ, ನಾರಾಯಣನೂ ಹುಟ್ಟಿದೆವು.

೨೪. ಸ್ವತಃ ಉದ್ಭವಿಸಿದ ನಾವೀರ್ವರೂ ಅಹಂಕಾರಾವಿಷ್ಟರಾಗಿ ವಿವಾದ ಮಾಡುತ್ತ ಅಶ್ರಾಂತವಾದ ಯುದ್ಧವನ್ನು ಮಾಡತೊಡಗಿದೆವು.

೨೫. ನಮ್ಮನಮ್ಮಲ್ಲಿಯೇ ಈ ರೀತಿ ಭಯಂಕರವಾದ ರಣೋತ್ಸಾಹವುಂಟಾದುದನ್ನು ಕಂಡು ಕರುಣಾಸಾಗರನಾದ ಶಂಕರನು ತನ್ನಲ್ಲಿಯೇ ಇಂತು ಯೋಚಿಸಿದನು.

೨೬. "ನಾನೇ ಸೃಷ್ಟಿಕರ್ತನು! ನಾನೇ ಪಾಲಕನು! ಎಂದು ವಿವಾದ ಮಾಡುತ್ತಿರುವ ಈ ಇಬ್ಬರಲ್ಲಿ ಲೋಕನಾಶಕ್ಕೆ ಕಾರಣವಾದ ಯುದ್ಧವು ಏತಕ್ಕೆ?

೨೭–೨೮. ನಾನು ಈ ಸಮಯದಲ್ಲಿ ಮುಗ್ಧರಾಗಿರುವ ಇವರಿಬ್ಬರಿಗೂ ಬೇಗನೆ ಕಾಣಿಸಿಕೊಂಡು ಈ ಯುದ್ಧವನ್ನು ನಿಲ್ಲಿಸದಿದ್ದರೆ ಸಮಸ್ತ ಲೋಕಗಳ ಹಾನಿಯೇ ಆದೀತು. ಮೋಹಗೊಂಡ ಇವರೀರ್ವರೂ ಕ್ರೋಧದಿಂದ ಸ್ಮೃತಿ ತಪ್ಪಿದವರಾಗಿ ಸಕಲ ವೇದಗಳಲ್ಲಿಯೂ ವಿಶ್ವಾಧಿಕನೆಂದು ಹೊಗಳಲ್ಪಟ್ಟಿರುವ ನನ್ನ ಮಾಹಾತ್ಮ್ಯವನ್ನು ತಿಳಿಯಲಿಲ್ಲ.

ಸರ್ವೋಽಪಿ ಜಂತುರಾತ್ಮಾನಮಧಿಕಂ ಮನ್ಯತೇ ಭೃಶಂ ।
ಅಮತಾನ್ಯಸಮಾಧಿಕ್ಯಸ್ತ್ವಧಃಪತತಿದುರ್ಮತಿಃ ॥ ೨೯ ॥
ಯದ್ಯಹಂ ಕ್ವಾಪಿ ಭುವನೇ ದಾಸ್ಯಾಮಿ ಮಿತಿಮಾತ್ಮನಃ ।
ತದಾ ತದ್ರೂಪವಿಜ್ಞಾನಾತ್ಸ ಆತ್ಮಾ ಸೋಽಪಿ ಮಾಮಿಯಾತ್ ॥ ೩೦ ॥
ಇತಿ ನಿಶ್ಚಿತ್ಯ ಮನಸಾ ಸ್ವಯಮೇವ ಸದಾಶಿವಃ ।
ಆವಯೋರ್ಯುಧ್ಯತೋರ್ಮಧ್ಯೇ ವಹ್ನಿಸ್ತಂಭಃ ಸಮುದ್ಯತಃ ॥ ೩೧ ॥
ಅತೀತ್ಯ ಸಕಲಾನ್‌ಲೋಕಾನ್ಸರ್ವತೋಽಗ್ನಿರಿವ ಜ್ವಲನ್ ।
ಅನಾದ್ಯಂತತಯಾ ಚಾಥ ದೃಗಾತೌ ಸಂವ್ಯತಿಷ್ಠತಾಂ ॥ ೩೨ ॥
ತೇಜಸ್ತಂಭಂ ಜ್ವಲಂತಂ ತಮಾಲೋಕ್ಯ ಶಿಥಿಲಾಶಯೌ ॥ ೩೩ ॥
ಆವಯೋಃ ಪುರತೋ ಜಾತಾ ವಾಣೀ ಚಾಪ್ಯಶರೀರಿಣೀ ।
ಕಿಮರ್ಥಂ ಬಾಲಕೌ ಯುದ್ಧಂ ಕಲ್ಪ್ಯತೇ ಮೂಢಮಾನಸೌ ॥ ೩೪ ॥
ಯುವಯೋರ್ಬಲವೈಷಮ್ಯಂ ಶಿವ ಏವ ವಿವೇಕ್ಷ್ಯತೇ ।
ತೇಜಸ್ತಂಭಮಯಂ ರೂಪಮಿದಂ ಶಂಭೋರ್ವ್ಯವಸ್ಥಿತಂ ॥ ೩೫ ॥

---

೨೯. ಲೋಕದಲ್ಲಿ ಸರ್ವ ಜಂತುಗಳಿಗೂ ತನ್ನ ಆತ್ಮವೆಂಬುದು ಅಧಿಕ ಪ್ರೀತ್ಯಾಸ್ಪದವಾಗಿದೆ. ಆದರೂ ಸಹ ಅನ್ಯರಲ್ಲಿ ಸಮಾಧಿಕ್ಯಗಳನ್ನು ತಿಳಿಯದ ಮೂಢನು ಅಧಃಪತನವನ್ನು ಹೊಂದುವನಾಗುವನು.

೩೦. ನಾನು ಭೂಲೋಕದಲ್ಲಿ ಎಲ್ಲಿಯಾದರೊಂದೆಡೆ ನನ್ನ ಸ್ವರೂಪವನ್ನು ತೋರಿದರೆ ಆ ರೂಪದ ಪ್ರತ್ಯಕ್ಷಜ್ಞಾನದಿಂದ ಮಂದಾತ್ಮರೂ ಕೂಡ ನನ್ನನ್ನೇ ಹೊಂದುತ್ತಾರೆ.''

೩೧. ಹೀಗೆಂದು ಸದಾಶಿವನು ತನ್ನಲ್ಲಿಯೇ ನಿರ್ಧಾರಮಾಡಿಕೊಂಡು ಯುದ್ಧನಿರತರಾಗಿದ್ದ ನಮ್ಮಿಬ್ಬರ ಮಧ್ಯದಲ್ಲಿ ಅಗ್ನಿಸ್ತಂಭದ ರೂಪದಿಂದ ಆವಿರ್ಭವಿಸಿದನು.

೩೨–೩೩. ಹದಿನಾಲ್ಕು ಲೋಕಗಳನ್ನೂ ಅತಿಕ್ರಮಿಸಿ ಸುತ್ತಲೂ ಅಗ್ನಿಯಂತೆ ತೇಜಃಪುಂಜವಾಗಿ ಆದಿಮಧ್ಯಾಂತಗಳಿಲ್ಲದ ದೇದೀಪ್ಯಮಾನವಾದ ಈ ಜ್ಯೋತಿರ್ಲಿಂಗವನ್ನು ಕಂಡು ನಮ್ಮಿಬ್ಬರಿಗೂ ಕಣ್ಣುಕುಕ್ಕಿದಂತಾಗಿ ಬುದ್ಧಿಭ್ರಮಣೆಯುಂಟಾಯಿತು.

೩೪. ಆಗ ಅಶರೀರವಾಣಿಯು ನಮ್ಮನ್ನು ಕುರಿತು ಈ ರೀತಿಯಾಗಿ ನುಡಿಯಿತು. ''ಮೂಢಬುದ್ಧಿಯುಳ್ಳವರಾದ ನೀವು ಕೇವಲ ಬಾಲಕರಂತೆ ಏತಕ್ಕೆ ಯುದ್ಧಮಾಡುತ್ತೀರಿ ?

೩೫. ನಿಮ್ಮಿಬ್ಬರ ಬಲಾಬಲಗಳನ್ನು ಸದಾಶಿವನೇ ಪರೀಕ್ಷೆಮಾಡುತ್ತಾನೆ. ನಿಮ್ಮ ಮುಂದಿರುವ ಅಗ್ನಿಸ್ತಂಭರೂಪನಾದ ಶಿವನನ್ನು ನೋಡಿರಿ.

ಆದ್ಯಂತಯೋರ್ಯದಿ ಯುವಾಮಾಕ್ಷಿಪಾಥಾಂ ಬಲಾಧಿಕೌ ।
ಇತಿ ತಾಂ ಗಿರಮಾಕರ್ಣ್ಯ ನಿಯುದ್ಧಾದ್ವಿರತೌ ತದಾ ॥ ೩೬ ॥
ಅಹಂ ವಿಷ್ಣುಶ್ಚ ಗತಿಮಾನ್ನಿಚೇತುಂ ತದ್ವ್ಯವಸ್ಥಿತೌ ।
ಅಗ್ನಿಸ್ತಂಭಮಯಂ ರೂಪಂ ಶಂಭೋರಾದ್ಯಂತವರ್ಜಿತಂ ॥ ೩೭ ॥
ಆಲೋಕಿತುಂ ವ್ಯವಸಿತಾವಾವಾಮಾದ್ಯಂತಭಾಗತಃ ।
ಬಿಂಬಿತಂ ವ್ಯೋಮಗಂ ಚಂದ್ರಂ ಯಥಾ ಬಾಲೋ ಜಿಘೃಕ್ಷತಃ ॥ ೩೮ ॥
ತಥೈವಾವಾಂ ಸಮುದ್ಯುಕ್ತೌ ಪರಿಚ್ಛೇತ್ತುಂ ಚ ತನ್ಮಹಃ ।
ಅಥ ವಿಷ್ಣುರ್ಮಹೋತ್ಸಾಹಾತ್ಕ್ರೋಡೋಽಭೂತ್ಸುಮಹಾವಪುಃ ॥
ತನ್ಮೂಲವಿಚಯಾಽಯಾಚ್ಚ ಭೂಮಿಗರ್ಭಂ ವಿದಾರಯನ್ ।
ಅಹಂ ಚ ಹಂಸತಾಂ ಪ್ರಾಪ್ತೋ ಮಹಾವೇಗಂ ಸಮುತ್ಪತನ್ ॥ ೪೦ ॥
ದಿದೃಕ್ಷುಸ್ತಚ್ಛಿರೋಭಾಗಂ ವಿಯದೂರ್ಧ್ವಮಗಾಹಿಷಂ ।
ಅಧೋಽಧೋ ದಾರಯನ್ ಕ್ಷೋಣಿಮಶೇಷಾಮಪಿ ಮಾಧವಃ ॥ ೪೧ ॥

---

೩೬. ನಿಮ್ಮಿಬ್ಬರಲ್ಲಿ ಈ ಜ್ಯೋತಿರ್ಲಿಂಗದ ತುದಿಮೊದಲುಗಳನ್ನು ಕಂಡು ಹಿಡಿಯುವ ಚೈತನ್ಯಾನುಸಾರವಾಗಿ ನಿಮ್ಮಲ್ಲಿ ಬಲಾಬಲಗಳಿವೆಯೆಂದು ತಿಳಿಯಿರಿ.'' ಹೀಗೆ ಹೇಳಿದ ಅಶರೀರವಾಣಿಯನ್ನು ಕೇಳಿ ನಾವಿಬ್ಬರೂ ಯುದ್ಧದಿಂದ ವಿಮುಖರಾದೆವು.

೩೭. ಬಳಿಕ ನಾನೂ, ವೇಗವಂತನಾದ ಮಹಾವಿಷ್ಣುವೂ ಸಹ ಅನಾದ್ಯಂತವಾದ ಆ ಶಂಭುವಿನ ತೇಜಸ್ಸ್ತಂಭರೂಪದ ನೆಲೆಯನ್ನು ತಿಳಿಯುವ ಪ್ರಯತ್ನದಲ್ಲಿ ಉದ್ಯುಕ್ತರಾದೆವು.

೩೮. ತೇಜೋಲಿಂಗದ ಆದ್ಯಂತಗಳನ್ನು ಶೋಧಿಸಲೆಳಸಿದ ನಮ್ಮಿಬ್ಬರ ಪ್ರಯತ್ನಗಳೂ ಕಡೆಗೆ ಜಲದಲ್ಲಿ ಪ್ರತಿಬಿಂಬಿಸಿದ ಚಂದ್ರನ ಬಿಂಬವನ್ನು ಹಿಡಿಯಲೆಳಸುವ ಬಾಲಕನ ಪ್ರಯತ್ನಗಳಂತೆ ವ್ಯರ್ಥವೇ ಆದುವು.

೩೯. ಹಾಗೂ ಆ ಮಹದ್ರೂಪವನ್ನು ಅಳೆಯುವ ಉದ್ದೇಶದಿಂದ ನಮ್ಮಿಬ್ಬರಲ್ಲಿ ಮಹಾವಿಷ್ಣುವು ಅತ್ಯಂತ ಸಂರಂಭಸಹಿತನಾಗಿ ದೊಡ್ಡದಾದ ಹಂದಿಯ ರೂಪವನ್ನು ಸ್ವೀಕರಿಸಿದನು.

೪೦. ಆ ಲಿಂಗದ ಮೂಲವನ್ನು ಶೋಧಿಸುವವನಾಗಿ ಆತನು ಭೂಗರ್ಭವನ್ನು ಭೇದಿಸಿ ಹೊರಟನು. ನಾನೂ ಸಹ ಹಂಸರೂಪವನ್ನು ಧಾರಣಮಾಡಿ ಮಹಾವೇಗದಿಂದ ಮೇಲಕ್ಕೆ ಹಾರಿದೆನು.

೪೧. ನಾನು ಆ ಲಿಂಗದ ಶಿರೋಭಾಗವನ್ನು ನೋಡುವವನಾಗಿ ಆಕಾಶದಲ್ಲಿ ಹೊರಟೆನು. ವಿಷ್ಣುವೂ ಸಹ ಭೂಮಿಯನ್ನು ಸೀಳಿಕೊಂಡು ಅಧೋಲೋಕಗಳಿಗೆ ಹೊರಟನು.

ಆವಿರ್ಭೂತಮಿವಾಧಸ್ತಾದಗ್ನಿಸ್ತಂಭಮವೈಕ್ಷತ ।
ಅನೇಕಕೋಟಿ ವರ್ಷಾಣಿ ವಿಚಿನ್ವನ್ನಪಿ ತೇಜಸಃ ॥ ೪೨ ॥
ಅಪಶ್ಯನ್ನಾದಿ ಮಧ್ಯಸ್ಯ ಮಾರ್ತರೂಪಃ ಸ ವಿಹ್ವಲಃ ।
ವಿದೀರ್ಣದಂಷ್ಟ್ರವಲಯೋ ವಿಗಳತ್ಸಂಧಿಬಂಧನಃ ॥ ೪೩ ॥
ಶ್ರಮಾತುರಸ್ತೃಷಾಕ್ರಾಂತೋ ನೋ ಯಂತುಮಶಕದ್ಧರಿಃ ।
ವಾರಾಹಂ ರೂಪಮತುಲಂ ಸಂಧಾರಯಿತುಮಕ್ಷಮಃ ॥ ೪೪ ॥
ವಿಹಂತುಮಪಿ ವಿಶ್ರಾಂತೋ ವಿಷಸಾದ ರಮಾಪತಿಃ ।
ಅಚಿಂತಯದನೋಯಾತ್ಮಾ ಪರಿಶ್ರಾಂತಶರೀರವಾನ್ ॥ ೪೫ ॥
ಗಳಿತಶ್ರೀಃ ಕ್ರಿಯಾಶ್ರಾಂತಃ ಶರಣ್ಯಂ ಶಿವಮಾಶ್ರಯನ್ ।
ಧಿಙ್ಮಮೇದಂ ಮಹನ್ಮೌಗ್ಧ್ಯಮಹಂಕಾರಸಮುದ್ಭವಂ ॥ ೪೬ ॥
ಯೇನಾಹಮಾತ್ಮನೋನಾಥಮಾತ್ಮಾನಂ ನಾವಬುದ್ಧವಾನ್ ।
ಅಯಂ ಹಿ ಸರ್ವವೇದಾನಾಂ ದೇವಾನಾಂ ಜಗತಾಮಪಿ ॥ ೪೭ ॥
ಮೂಲಭೂತಃ ಶಿವಃ ಸಾಕ್ಷಾನ್ಮೂಲಮಸ್ಯ ಕಥಂ ಭವೇತ್ ।
ಅಸ್ಮಾದೇವ ಸಮುದ್ಭೂತೋಽಸ್ಮ್ಯಹಮಾದ್ಯಂತವರ್ಜಿತಾತ್ ॥ ೪೮ ॥

---

೪೨–೪೩. ಕೆಳಕೆಳಗೆ ಹೋದಹಾಗೆಲ್ಲ ಲಿಂಗವು ಮತ್ತೂ ಕೆಳಗಿನಿಂದಲೇ ಉದ್ಭವವಾದಂತೆ ಕಾಣುತ್ತಿದ್ದಿತು. ಹೀಗೆ ಅನೇಕ ಕೋಟಿ ವರ್ಷಗಳ ಕಾಲ ಶೋಧನಮಾಡಿದರೂ ಸಹ ತೇಜೋಲಿಂಗದ ಆದಿಯನ್ನು ಕಾಣದೆ ಭ್ರಾಂತನಾಗಿರಲು, ಆತನ ಕ್ರೋಡರೂಪದ ಕೋರೆಹಲ್ಲುಗಳು ಸವೆದುಹೋಗಿ ಶರೀರದ ಕೀಲುಗಳೆಲ್ಲವೂ ಸಡಿಲವಾದುವು.

೪೪. ಅತ್ಯಂತ ಆಯಾಸಗೊಂಡವನಾಗಿ ಬಾಯಾರಿಕೆಯಿಂದೊಡಗೂಡಿ ಆ ಹರಿಯು ಮುಂದೆ ಹೋಗಲೊಲ್ಲದವನಾದನು. ದೊಡ್ಡದಾದ ವರಾಹದ ರೂಪವನ್ನು ಕೂಡ ಧರಿಸಿರುವುದೇ ಕಷ್ಟವಾಯಿತು.

೪೫. ಹಿಂದಿರುಗುವುದಕ್ಕೂ ಸಹ ಶಕ್ತಿಯಿಲ್ಲದವನಾಗಿ ಲಕ್ಷ್ಮೀರಮಣನಾದ ಆ ಮಹಾವಿಷ್ಣುವು ಶರೀರಾಯಾಸವನ್ನು ಪಡೆದನು.

೪೬. ಆತನು ತೇಜೋಹೀನನೂ ಅತ್ಯಂತ ಬಳಲಿದವನೂ ಆಗಿ ಶರಣಾಗತ ರಕ್ಷಕನಾದ ಸದಾಶಿವನನ್ನೇ ಆಶ್ರಯಿಸಿ ಹೀಗೆ ಯೋಚಿಸಿದನು. ' ಅಯ್ಯೋ ! ಅಹಂಕಾರದಿಂದ ಹುಟ್ಟಿದ ನನ್ನ ಅಪಾರವಾದ ಮುಗ್ಧತೆಗೆ ಧಿಕ್ಕಾರವಿರಲಿ !

೪೭–೪೮. ಇದರಿಂದಲ್ಲವೆ ನಾನು ನನ್ನ ಒಡೆಯನಾದ ಪರಮಾತ್ಮನನ್ನು ತಿಳಿಯದೆಹೋದೆನು. ಸದಾಶಿವನೇ ಸರ್ವವೇದಗಳಿಗೂ, ದೇವತೆಗಳಿಗೂ, ಸಕಲ ಲೋಕಗಳಿಗೂ ಮೂಲಭೂತನಾಗಿರುವವನು. ಆತನಿಗೆ ಮೂಲವೆಲ್ಲಿ ಬರಬೇಕು ? ಆದ್ಯಂತರಹಿತನಾದ ಆತನಿಂದಲೇ ನಾನೂ ಸಹ ಉತ್ಪನ್ನನಾಗಿರುವೆನು.

ಯನ್ಮಯಾನ್ವೇಷ್ಟುಮಾರಬ್ಧಂ ಶಿವಂ ಪಶುವಪುರ್ಧೃತಾ ।
ಅವ್ಯಾಜಕರುಣಾಬಂಧೋಃ ಪಿತುಃ ಶಂಭೋಃ ಪ್ರಸಾದತಃ ।
ಪುನರೇವೇದೃಶೀ ಲಬ್ಧಾ ಮತಿರ್ಮೇಽಸ್ವಾತ್ಮಬೋಧಿನಾ ॥ ೪೯ ॥
ಸ್ವಯಮೇವ ಮಹಾದೇವಃ ಶಂಭುರ್ಯಂ ಪಾತುಮಿಚ್ಛತಿ ॥ ೫೦ ॥
ತಸ್ಯಸದ್ಯೋಽಭವೇಜ್ಞಾನಮುನಹಂಕಾರಮಾತ್ಮಜಂ ।
ನ ಶಕ್ನೋಮಿ ಪುನಃ ಕರ್ತುಂ ಪೂಜಾಮಸ್ಯ ಜದಗ್ಗುರೋಃ ॥ ೫೧ ॥
ನಿವೇದಯಾಮಿ ಚಾತ್ಮಾನಂ ಶರಣಂ ಯಾಮಿ ಶಂಕರಂ ।
ಇತಿ ದಧ್ಯೌ ಶಿವಂ ವಿಷ್ಣುಃ ಸ್ತುತ್ಯಾಮರ್ಪಿತಚೇತನಃ ॥ ೫೨ ॥
ಸತ್ಪ್ರಸಾದಾದ್ಭೂತಪತೇಃ ಪುನರೇವೋದ್ಧೃತಃ ಕ್ಷಿತೌ ।
ಅಹಂಚ ಗಗನೇಽಭ್ರಾಮ್ಯಮನೇಕಾನಪಿ ವತ್ಸರಾನ್ ॥ ೫೩ ॥
ಆಘೂರ್ಣಮಾನನಯನಃ ಶ್ಲಥಪಕ್ಷಃ ಶ್ರಮಂ ಗತಃ ।
ಉಪರ್ಯುಪರಿ ಚಾಪಶ್ಯಂ ಜ್ವಲನಂ ಪುರತಃ ಸ್ಥಿತಂ ।
ತೇಜಃಸ್ತಂಭಂ ಸ್ಥೂಲಲಿಂಗಾಭಂ ಶೈವಂ ತೇಜಃ ಸುರಾರ್ಚಿತಂ ॥ ೫೪ ॥

---

೪೯. ಪಶುರೂಪವನ್ನು ಧರಿಸಿ ಯಾರ ರೂಪವನ್ನು ಅನ್ವೇಷಣೆ ಮಾಡಲೆಳಸಿದೆನೋ, ಅಂತಹ ಅವ್ಯಾಜಕರುಣಾಮೂರ್ತಿಯಾದ ನನ್ನ ತಂದೆಯಾದ ಶಂಭುವಿನ ಪ್ರಸಾದದಿಂದ ಆತ್ಮಬೋಧರೂಪವಾದ ಸದ್ಬುದ್ಧಿಯು ನನ್ನಲ್ಲಿ ಪುನಃ ಉಂಟಾಯಿತು.

೫೦–೫೧. ಮಹಾದೇವನಾದ ಶಂಭುವು ತಾನಾಗಿಯೇ ಯಾರನ್ನು ರಕ್ಷಿಸುತ್ತಾನೋ ಅವನಿಗೆ ಅಹಂಕಾರವು ನಾಶವಾಗಿ ಆತ್ಮಜ್ಞಾನವು ತಕ್ಷಣದಲ್ಲಿಯೇ ಉಂಟಾಗುವುದು. ಇಂತಹ ಜಗದ್ಗುರುವಿಗೆ ಪೂಜೆಯನ್ನು ಮಾಡಲು ನಾನು ಸರ್ವಥಾ ಶಕ್ತನಲ್ಲವು.

೫೨. ಈಗ ನಾನು ಆತ್ಮನಿವೇದನವನ್ನೇ ಮಾಡಿ ಆ ಶಂಕರನನ್ನೇ ಶರಣು ಹೊಂದುತ್ತೇನೆ.' ಹೀಗೆಂದು ಯೋಚಿಸಿ ಮಹಾವಿಷ್ಣುವು ಶಿವನ ಸ್ತೋತ್ರದಲ್ಲಿಯೇ ಮನಸ್ಸುಳ್ಳವನಾಗಿ ಧ್ಯಾನಾಸಕ್ತನಾದನು.

೫೩. ಭೂತಪತಿಯ ಅನುಗ್ರಹದಿಂದ ಮಹಾವಿಷ್ಣುವು ತಕ್ಷಣವೇ ಭೂಲೋಕಕ್ಕೆ ಎತ್ತಲ್ಪಟ್ಟನು. ನಾನೂ ಸಹ ಅನೇಕ ವರ್ಷಗಳ ಕಾಲ ಆಕಾಶದಲ್ಲಿ ಭ್ರಮಿಸುವವನಾದೆನು.

೫೪. ಈ ಊರ್ಧ್ವಗಮನದಿಂದ ನನ್ನ ಕಣ್ಣುಗಳು ತಿರುಗಿ ರೆಕ್ಕೆಗಳು ಶಿಥಿಲವಾಗಿ ನಾನೂ ಬಹಳ ಬಳಲಿದೆನು. ಆದರೂ ಸಹ ಸಕಲ ದೇವತೆಗಳಿಂದಲೂ ಪೂಜ್ಯವಾದ ಶಿವತೇಜೋರೂಪವಾದ ಸ್ತಂಭವು ಸ್ಥೂಲಲಿಂಗದಂತೆ ಆಕಾರವನ್ನು ಹೊಂದಿ ನನ್ನ ಮುಂದೆ ಜ್ವಲಿಸುತ್ತ ಮತ್ತೂ ಮೇಲೆ ಮೇಲೆಯೇ ಕಾಣುತ್ತಿದ್ದಿತು.

ಆಹುಃ ಸ್ಮ ಕೇಚಿದಾಲೋಕ್ಯ ಸಿದ್ಧಾಸ್ತೇಜೋಽಂಶಸಂಭವಾಃ ।
ನಿತ್ಯಾಂ ಶಂಭೋಃ ಪರಾಂ ಕೋಟಿಂ ದಿದೃಕ್ಷುಂ ಮಾಂ ಕೃತೋದ್ಯಮಂ ॥
ಅಹೋಽಯಂ ಸತ್ಯಂ ಮುಗ್ಧತ್ವಮದ್ಯಾಪಿ ಚ ಚಿಕೀರ್ಷತಿ ।
ಆಸನ್ನದೇಹಪಾತೋಽಪಿ ನಾಹಂಕಾರೋಽಸ್ಯ ವೈ ಗತಃ ॥ ೫೬ ॥
ವಿಶೀರ್ಯಮಾಣಪಕ್ಷೋಽಯಂ ಶ್ರಾಂತ್ವಾ ವಿಭ್ರಾಂತಲೋಚನಃ ।
ಅಪಾರ ತೇಜಸಿ ವ್ಯರ್ಥೋ ವಿಮೋಹೋಽಯಂ ಭವಿಷ್ಯತಿ ॥ ೫೭ ॥
ಏವಂ ವ್ಯಾಕುಲಚಿತ್ತೋಽಯಂ ಕ್ರೋಡರೂಪೀ ಜನಾರ್ದನಃ ।
ವ್ಯಾವರ್ತಿತಃ ಶಿವೇನೈವ ನಿರ್ವ್ಯಾಜಕರುಣಾಜುಷಾ ॥ ೫೮ ॥
ಈದೃಶಾಂ ಬ್ರಹ್ಮಮುಖ್ಯಾನಾಂ ಸುರಾಣಾಂ ಕೋಟಿ ಸಂಭವಃ ।
ಯತ್ತೇಜಃ ಪರಮಾಣುಭ್ಯಸ್ತಸ್ಯ ಪಾರಂ ದಿದೃಕ್ಷತೇ ॥ ೫೯ ॥
ಸ್ವಾತ್ಮನೋ ಯೋಗತೋ ಧ್ಯಾತ್ವಾ ಸಮಯೇ ಭಗವಾನ್ ಶಿವಃ ।
ಯದಿ ಬುದ್ಧಿಂ ದದಾತ್ಯಸ್ಮೈ ತಸ್ಯ ನಶ್ಯೇದಹಂಕ್ರಿಯಾ ॥ ೬೦ ॥

---

೫೫. ಆಗ ಪರಮಾತ್ಮನ ತೇಜೋಽಂಶಸಂಭವರಾದ ಕೆಲವರು ಸಿದ್ಧರು ನನ್ನ ಅವಸ್ಥೆಯನ್ನು ಕಂಡು ಶಂಭುವಿನ ಪಾರವನ್ನು ನೋಡಲೆಳಸುತ್ತಿರುವ ನನ್ನ ವಿಚಾರವಾಗಿ ಹೀಗೆ ಮಾತಾಡಿಕೊಂಡರು.

೫೬. 'ಅಹಹ! ಇವನು ಈಗಲೂ ಮುಗ್ಧತ್ವವನ್ನು ಮಾಡಲೆಳಸುತ್ತಿರುವನಲ್ಲಾ! ದೇಹವನ್ನು ಬಿಡುವ ಅವಸ್ಥೆಯೊದಗಿದ್ದರೂ ಸಹ ಇವನ ಅಹಂಕಾರವು ಕಳೆಯುಲೊಲ್ಲದು.

೫೭. ತನ್ನ ಪಕ್ಷಗಳು ಶಿಥಿಲವಾಗಿ ಬಳಲಿದವನಾಗಿರುವುದರಿಂದ ಈತನ ಕಣ್ಣುಗಳು ತಿರುಗುತ್ತಿವೆ. ಆದರೂ ಅಪಾರ ತೇಜೋಮೂರ್ತಿಯಲ್ಲಿ ಇವನಿಗಿರುವ ಈ ಅಜ್ಞಾನವು ವ್ಯರ್ಥವೇ ಸರಿ.

೫೮–೫೯. ಇವನಹಾಗೆಯೇ ವ್ಯಾಕುಲಾಂತರಂಗನಾದ ಮಹಾವಿಷ್ಣುವು ವರಾಹರೂಪಿಯಾಗಿ ಅವ್ಯಾಜಕರುಣಾಮೂರ್ತಿಯಾದ ಶಿವನಿಂದಲೇ ಭೂಲೋಕಕ್ಕೆ ಎತ್ತಲ್ಪಟ್ಟನು. ಯಾರ ತೇಜಃಪರಮಾಣುಗಳಿಂದಲೇ ಇಂತಹ ಬ್ರಹ್ಮಾದಿ ದೇವತಾಕೋಟಿಗಳೇ ಉತ್ಪನ್ನವಾಗುವುವೋ ಆ ಮಹಾಮಹಿಮನ ಪಾರವನ್ನು ತಿಳಿಯಲು ಇವನು ಯತ್ನಿಸುತ್ತಿರುವನಲ್ಲ!

೬೦. ಭಗವಂತನಾದ ಶಿವನು ತಾನಾಗಿಯೇ ಸುಪ್ರಸನ್ನನಾಗಿ ಯಾವ ಸಮಯದಲ್ಲಿ ಈತನಿಗೆ ಬುದ್ಧಿಯನ್ನು ದಯೆಪಾಲಿಸುವನೋ!! ಆಗಲೇ ಈತನ ಅಹಂಕಾರವು ನಾಶವಾಗುತ್ತದೆ.'

ಇತ್ಯೇವಂ ವದತಾಂ ತೇಷಾಂ ಸಿದ್ಧಾನಾಂ ಸದಯಂ ವಚಃ ।
ಆಕರ್ಣ್ಯ ಶೀರ್ಣಾಹಂಕಾರೋ ಹ್ಯಹಮಾತ್ಮನ್ಯಚಿಂತಯಂ ॥ ೬೧ ॥
ನ ವೇದರಾಶಿವಿಜ್ಞಾನಾತ್ತಪಸ್ತೀರ್ಥನಿಷೇವಣಾತ್ ।
ಸಂಜಾಯತೇ ಶಿವಜ್ಞಾನಮಸ್ಯೈವಾನುಗ್ರಹಾದೃತೇ ॥ ೬೨ ॥
ಶೀರ್ಣೋಽಪಿ ಪಕ್ಷಯುಗಳೇ ಸೀದತ್ಯಂಗೇ ಹ್ಯಚಂಚಲೇ ।
ಪುನರುತ್ಸಹತೇ ಚೇತಃ ಸ್ವಾಹಂಕಾರಸ್ಯ ಸಂಗ್ರಹೇ ॥ ೬೩ ॥
ಧಿಙ್ಮಾಮಹಂಕ್ರಿಯಾಕ್ರಾಂತಮನಾತ್ಮಬಲವೇದಿನಂ ।
ಶಿವಾರ್ಪಿತಮನಸ್ಕೇಭ್ಯಃ ಸಿದ್ಧೇಭ್ಯಃ ಸತತಂ ನಮಃ ॥ ೬೪ ॥
ಯೇಷಾಂ ಸಂಸರ್ಗಲಬ್ಧೇನ ತಪಸಾ ಶೋಧಿತಾಶಯಃ ॥ ೬೫ ॥
ಶಿವಮೇನಂ ವಿಜಾನಾಮಿ ಸ್ವಾತ್ಮಹೇತುಂ ಪುರಃಸ್ಥಿತಂ ।
ಯತ್ಪ್ರಸಾದೋಪಲಬ್ಧೇನ ವಿಭವೇನ ಸಮನ್ವಿತಾಃ ॥ ೬೬ ॥
ದೇವಾಃ ಸರ್ವೇ ಭವಿಷ್ಯಂತಿ ಸತತಂ ಶಮಿತಾರಯಃ ।
ಯಸ್ಯ ವೇದಾ ನಜಾನಂತಿ ಪರಮಾರ್ಥಂ ಮಹಾಗಮೈಃ ॥ ೬೭ ॥

---

೬೧. ಹೀಗೆ ಹೇಳುತ್ತಿರುವ ಸದಯಾಂತಃಕರಣರಾದ ಸಿದ್ಧರ ವಚನಗಳನ್ನು ಕೇಳಿ ನನ್ನ ಅಹಂಕಾರವೆಲ್ಲ ನಾಶವಾಗಲು ನಾನು ಮನಸ್ಸಿನಲ್ಲಿಯೇ ಹೀಗೆ ಯೋಚಿಸಿದೆನು.

೬೨. 'ವೇದರಾಶಿಗಳನ್ನು ಆಮೂಲಾಗ್ರವಾಗಿ ಓದುವುದರಿಂದಲೂ, ನಾನಾ ವಿಧಗಳಾದ ತಪೋಹೋಮಾದಿಗಳಿಂದಲೂ, ತೀರ್ಥಾಟನಗಳಿಂದಲೂ ಶಿವನ ಮಾಹಾತ್ಮ್ಯಜ್ಞಾನವು ಆತನ ಅನುಗ್ರಹವಿಲ್ಲದವರಿಗೆ ಸರ್ವಥಾ ಆಗುವುದಿಲ್ಲ.

೬೩. ನನ್ನ ಪಕ್ಷಗಳು ಶಿಥಿಲಗಳಾಗಿದ್ದರೂ ಶರೀರವು ತಪಿಸುತ್ತಿದ್ದರೂ ಸಹ ಮತ್ತೆ ಮತ್ತೆ ನನ್ನ ಮನಸ್ಸು ಅಹಂಕಾರಾವಿಷ್ಟವಾಗಿಯೇ ಇರುವುದಲ್ಲವೆ!

೬೪. ಅಹಂಕಾರದಿಂದ ಮತ್ತನಾಗಿ ಸ್ವಬಲವನ್ನೇ ತಿಳಿಯದ ನನಗೆ ಧಿಕ್ಕಾರವಿರಲಿ. ಶಿವನಲ್ಲಿಯೇ ನಟ್ಟಮನಸ್ಸುಳ್ಳವರಾದ ಸಿದ್ಧರಿಗೆ ನಿರಂತರವಾದ ನಮಸ್ಕಾರವು!

೬೫–೬೭. ಇವರ ಸಹವಾಸದಿಂದ ಲಬ್ಧವಾದ ತಪಸ್ಸಿನಿಂದಲೇ ನಿಷ್ಕಲ್ಮಷವಾದ ಮನಸ್ಸುಳ್ಳವನಾಗಿ, ನನಗೂ ಕಾರಣಭೂತನಾಗಿ ಎದುರಿಗಿರುವಂತಹ ಶಿವನನ್ನು ತಿಳಿಯುವವನಾದೆನು. ಯಾರ ಪ್ರಸಾದದಿಂದ ಐಶ್ವರ್ಯವನ್ನು ಹೊಂದಿ ಸಕಲ ದೇವತೆಗಳೂ ನಿರಂತರದಲ್ಲಿಯೂ ತಮ್ಮ ಶತ್ರುಗಳನ್ನು ದಮನ ಮಾಡುತ್ತಾರೆಯೋ, ಯಾರ ಪರಾತ್ಪರ ರೂಪವನ್ನು ವೇದಗಳೂ ಕೂಡ ತಮ್ಮ ಮಹಾಮಂತ್ರಗಳಿಂದ ತಿಳಿಯಲಾರವೋ, ಅಂತಹ ಪ್ರಪಂಚವಿಲಕ್ಷಣಚಿದ್ರೂಪನಾದ ಶಿವನನ್ನೇ ಶರಣುಹೊಗುತ್ತೇನೆ.'

ತಮೇವ ಶರಣಂ ಯಾಮಿ ಶಂಭುಂ ವಿಶ್ವವಿಲಕ್ಷಣಂ ।
ಅವಾದಿಷಮಥಾಬಾಷ್ಯಂ ವಿಷ್ಣುಂ ಕಮಲಲೋಚನಂ ॥ ೬೮ ॥
ಲಬ್ಧದೇಹಃ ಶಿವಂ ಭಕ್ತ್ಯಾ ಸಂಶ್ರಿತಶ್ಚಂದ್ರಶೇಖರಂ ।
ಅಹೋ ಕಿಮಿದಮಾಶ್ಚರ್ಯಮಾಗತಂ ಶೌರ್ಯಶಾಲಿನಾಂ ॥ ೬೯ ॥
ಶಂಭುನಾ ಯತ್ಸಮುದ್ಭೂತಮಹಂಕಾರಮುಪಾಶ್ರಿತೌ ।
ಆವಾಂ ಪರಸ್ಪರಂ ಯುದ್ಧಮಾಕರ್ಣ್ಯ ವಿಪುಲಂ ಮಹತ್ ॥ ೭೦ ॥
ಸ ಏವ ಶಂಕರಃ ಸರ್ವಮಹಂಕಾರಮಥಾವಯೋಃ ।
ಅಪಾಹರದಮೇಯಾತ್ಮಾ ಸ್ವಮಾಹಾತ್ಮ್ಯಪ್ರಕಾಶನಾತ್ ॥ ೭೧ ॥
ಇಮಮೀಶ್ವರಮಾನತಂ ಸುರೈ
ರನಲಸ್ತಂಭಮಯಂ ಸದಾಶಿವಂ ।
ಅಭಿಪೂಜಯಿತುಂ ಪ್ರವರ್ತತೇ
ಸ ಭವೇದ್ವೈ ಭವಸಾಗರಸ್ಯ ನೌಃ ॥ ೭೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಪೂರ್ವಾರ್ಧೇ ಬ್ರಹ್ಮ ಸನಕಸಂವಾದೇ "ಜ್ಯೋತಿರ್ಲಿಂಗ ಪ್ರಾದುರ್ಭಾವವರ್ಣನಂ" ನಾಮ ಪ್ರಥಮೋಽಧ್ಯಾಯಃ

---

೬೮. ಹೀಗೆ ಯೋಚಿಸಿದ ಬಳಿಕ ಚಂದ್ರಮೌಳಿಯಾದ ಸದಾಶಿವನನ್ನೇ ಭಕ್ತಿಯಿಂದ ಭಜಿಸಿ ಪುನಃ ಸ್ವಸ್ಥಶರೀರನಾಗಿ ಕಮಲನೇತ್ರನಾದ ಮಹಾವಿಷ್ಣುವನ್ನು ಕುರಿತು ಹೀಗೆ ಹೇಳಿದೆನು :—

೬೯–೭೦. 'ಆಹಾ! ಅಹಂಕಾರವನ್ನು ಆಶ್ರಯಿಸಿ ನಾವಿಬ್ಬರೂ ಮಾಡುತ್ತಿದ್ದ ಭಯಂಕರವಾದ ಮಹದ್ಯುದ್ಧವನ್ನು ಕೇಳಿ ಪರಶಿವನಿಂದ ಉದ್ಭೂತವಾದ ನಮ್ಮೆದುರಿಗಿರುವ ಈ ಆಶ್ಚರ್ಯವು ಯಾವುದಾಗಿರಬಹುದು ?

೭೧–೭೨. ಆ ಸರ್ವೇಶ್ವರನಾದ ಶಂಕರನೇ ಅಪ್ರಮೇಯವಾದ ತನ್ನ ಮಾಹಾತ್ಮ್ಯವನ್ನು ಈರೀತಿಯಾಗಿ ನಮಗೆ ತೋರ್ಪಡಿಸಿ ನಮ್ಮಿಬ್ಬರ ಅಹಂಕಾರವನ್ನೂ ಮುರಿದಿರುವನು. ಸಕಲ ದೇವತೆಗಳಿಂದಲೂ ಅಭಿಪೂಜ್ಯವಾದ ತೇಜಸ್ತಂಭಮಯವಾದ ಸದಾಶಿವನ ರೂಪವನ್ನು ಯಾವಾತನು ಪೂಜಿಸಲು ಪ್ರಯತ್ನಿಸುತ್ತಾನೆಯೋ ಆತನೇ ಇತರರನ್ನು ಸಂಸಾರಸಾಗರದಿಂದ ಪಾರುಮಾಡತಕ್ಕ ನಾವೆಯಾಗುತ್ತಾನೆ.' "

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ
ಅರುಣಾಚಲ ಮಾಹಾತ್ಮ್ಯದ ಪೂರ್ವಾರ್ಧದಲ್ಲಿ "ಜ್ಯೋತಿರ್ಲಿಂಗ ಪ್ರಾದುರ್ಭಾವ
ವರ್ಣನ"ವೆಂಬ ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿತೀಯೋಽಧ್ಯಾಯಃ

### ಬ್ರಹ್ಮ ವಿಷ್ಣು ಕೃತ ಸ್ತುತಿಪೂರ್ವಕಂ ಶಂಕರಸ್ಯ ಸ್ಥಾವರಲಿಂಗಮಾಹಾತ್ಮ್ಯವರ್ಣನಂ

ಬ್ರಹ್ಮೋವಾಚ :—

ಅಥಾಹಮುಚ್ಚರನ್ವೇದಾನಶೇಷೈರ್ವದನೈಃ ಶಿವಂ ।
ಅಸ್ತೌಷಂ ಭಕ್ತಿಸಂಪೂರ್ಣಂ ಕೃತ್ವಾ ಮಾನಸಮರ್ಚನಂ ॥ ೧ ॥
ನಮಃ ಶಿವಾಯ ಮಹತೇ ಸರ್ವಲೋಕೈಕಹೇತವೇ ।
ಯೇನ ಪ್ರಕಾಶ್ಯತೇ ಸರ್ವಂ ಧ್ರಿಯತೇ ಸತತಂ ನಮಃ ॥ ೨ ॥
ವಿಶ್ವವ್ಯಾಪ್ತಮಿದಂ ತೇಜಃ ಪ್ರಕಾಶಯತಿ ಸಂತತಂ ।
ನೇಕ್ಷಂತೇ ತ್ವದ್ದಯಾಹೀನಾ ಜಾತ್ಯಂಧಾ ಭಾಸ್ಕರಂ ಯಥಾ ॥ ೩ ॥
ಭೂಲಿಂಗಮಮಲಂ ಹ್ಯೇತದ್ದೃಶ್ಯಮಧ್ಯಾತ್ಮಚಕ್ಷುಷಾ ।
ಅಂತಸ್ಥಂ ವಾ ಬಹಿಸ್ಥಂ ವಾ ತ್ವದ್ಭಕ್ತೈರನುಭೂಯತೇ ॥ ೪ ॥
ಅಪರಿಚ್ಛೇದ್ಯಮಾಕಾರಮಂತರಾತ್ಮನಿ ಯೋಗಿನಃ ।
ತದೇತತ್ತವ ದೇವೇಶ ಜ್ವಲಿತಂ ದರ್ಪಣೇ ಯಥಾ ॥ ೫ ॥

---

### ಕನ್ನಡದ ಅನುವಾದ

#### ಬ್ರಹ್ಮ ವಿಷ್ಣು ಕೃತ ಶಿವಸ್ತೋತ್ರ— ಸ್ಥಾವರಲಿಂಗದ ಮಾಹಾತ್ಮ್ಯವರ್ಣನ

೧. ಬ್ರಹ್ಮನು ಹೇಳುತ್ತಾನೆ:—ಬಳಿಕ ನಾನು ಪೂರ್ಣಭಕ್ತಿಯುಕ್ತನಾಗಿ ಮಾನಸಪೂಜೆಯನ್ನು ಮಾಡಿ ನನ್ನ ನಾಲ್ಕು ಮುಖಗಳಿಂದಲೂ ವೇದಗಳನ್ನು ಉಚ್ಚರಿಸುತ್ತ ಶಿವನನ್ನು ಈ ರೀತಿ ಸ್ತುತಿಸಿದೆನು.

೨. "ಯಾವನಿಂದ ಸರ್ವಬ್ರಹ್ಮಾಂಡವೂ ಬೆಳಗುತ್ತಿದೆಯೋ, ಯಾವನು ಇದನ್ನು ಸತತವೂ ಧಾರಣಮಾಡಿರುವನೋ, ಸರ್ವಲೋಕಗಳಿಗೂ ಯಾವನು ಕಾರಣಭೂತನಾಗಿರುವನೋ ಅಂತಹ ಮಹಾತ್ಮನಾದ ಶಿವನಿಗೆ ನಮಸ್ಕಾರವು!

೩. ಎಲೈ ಸ್ವಾಮಿಯೆ! ಹುಟ್ಟುಕುರುಡರು ಸೂರ್ಯನನ್ನು ಹೇಗೆ ನೋಡಲಾರರೋ ಹಾಗೆಯೇ ನಿನ್ನ ಕೃಪೆಗೆ ಪಾತ್ರರಾಗದ ಮೂಢರೂ ಸಹ ಹದಿನಾಲ್ಕು ಲೋಕಗಳಲ್ಲಿಯೂ ವ್ಯಾಪಿಸಿರುವ ಸರ್ವ ಪದಾರ್ಥಗಳನ್ನೂ ಪ್ರಕಾಶಗೊಳಿಸುವ ನಿನ್ನ ತೇಜಸ್ಸನ್ನೂ ನೋಡಲಾರರು!

೪-೫. ಸ್ವಚ್ಛವಾದ ಈ ಭೂಲಿಂಗವನ್ನು ಅಂತರಂಗದಲ್ಲಾಗಲಿ, ಬಹಿರಂಗದಲ್ಲಾಗಲಿ ನಿನ್ನ ಭಕ್ತರು ಮಾತ್ರ ಅಧ್ಯಾತ್ಮದೃಷ್ಟಿಯಿಂದ ತಿಳಿಯುವವರಾಗುತ್ತಾರೆ. ಆದ್ಯಂತರಹಿತವಾದ ನಿನ್ನ ಆಕಾರವು ದರ್ಪಣದಂತೆ ಸ್ವಚ್ಛವಾದ ಯೋಗಿಯ ಮನಸ್ಸಿನಲ್ಲಿ ಪ್ರತಿಫಲಿಸುತ್ತಿದೆ.

ಅಥವಾ ಶಾಂಕರೀ ಶಕ್ತಿಃ ಸತ್ಯಾಽಣೋರಪ್ಯಣೀಯಸೀ ।
ಮತ್ತೋ ನಾನ್ಯತರಃ ಕಶ್ಚಿದ್ಯಸ್ಮಿನ್ನಪ್ಯಪಿ ವಿಲೀಯತೇ ॥ ೬ ॥
ಅಣುಸ್ತೇ ಕರುಣಾಪಾತ್ರಂ ಮಹತ್ವಂ ಧ್ರುವಮಶ್ನುತೇ ।
ನಾಧಿಕೋಽಸ್ತಿ ಪರಸ್ತ್ವತ್ತೋ ನ ಮತ್ತೋಽಪಿ ತ್ವದಾಶ್ರಯಾತ್ ॥ ೭ ॥
ತ್ವಯ್ಯರ್ಪಿತಂ ಮನಸ್ತ್ವತ್ತೋ ನ ವಿಯೋಗಮಪೇಕ್ಷತೇ ।
ವಾಚಃ ಕಥಂ ಪ್ರವೃತ್ತಿಃ ಸ್ಯಾತ್ತವ ವೈ ಭವಕೀರ್ತನೇ ॥ ೮ ॥
ಸ್ವಯಮೀಶ ಮಹಾದೇವ ಪ್ರಸೀದ ಭುವನಾಧಿಕ ।
ಆದಿಶ ಪ್ರಿಯತಂ ಭಕ್ತಮಪೇಕ್ಷಿತನಿಯುಕ್ತಿಷು ॥ ೯ ॥
ಇದಂ ವಿಜ್ಞಾಪ್ಯ ವಿನಯಾನ್ನಮಸ್ಕೃತ್ವಾ ಪುನಃ ಪುನಃ ।
ಪ್ರಾಂಜಲಿರ್ದೇವ ದೇವೇಶಂ ನ್ಯಷೀದಂ ಸವಿಧೇ ವಿಭೋಃ ॥ ೧೦ ॥
ಅಥ ವಿಷ್ಣುರ್ನವಾಂಭೋದಗಂಭೀರಧ್ವನಿರಭ್ಯಧಾತ್ ।
ವಾಚಃ ಕೃತಾರ್ಥಯನ್ನುಚ್ಚೈಃ ಶುಕ್ಲಾಃ ಶಂಕರಕೀರ್ತನೈಃ ॥ ೧೧ ॥

---

೬. ಅಥವಾ ನನಗಿಂತ ಕೀಳಾದವರು ಯಾರೂ ಇಲ್ಲದಿದ್ದರೂ ನನ್ನಲ್ಲಿಯೂ ಸಹ ನಿನ್ನ ಶಕ್ತಿಯು ಲೀನವಾಗುವುದೆಂದಮೇಲೆ ಆ ಶಕ್ತಿಯು ಅಣುವಿಗಿಂತ ಅಣುವಾಗಿರಲೇಬೇಕೆಂದು ತಿಳಿಯಬೇಕು.

೭. ನಿನ್ನ ಕೃಪಾಕಟಾಕ್ಷಕ್ಕೆ ಪಾತ್ರವಾದ ಅಣುವೂ ಕೂಡ ಮಹತ್ತ್ವವನ್ನೂ, ಧ್ರುವತ್ತ್ವವನ್ನೂ ಹೊಂದುತ್ತದೆಯೆಂದಮೇಲೆ ನಿನಗಿಂತಲೂ ಅಧಿಕನೂ ಪರನೂ ಯಾರೂ ಇಲ್ಲವು. ಅಲ್ಲದೆ ನಿನ್ನನ್ನಾಶ್ರಯಿಸಿರುವ ನನಗಿಂತಲೂ ಅಧಿಕರೂ ಇಲ್ಲವೆಂದೇ ಹೇಳಬಹುದು!

೮. ನಿನ್ನಲ್ಲಿ ನೆಲಸಿದ ಮನಸ್ಸು ನಿನ್ನ ಅಗಲಿಕೆಯನ್ನು ಆಶಿಸುವುದೇ ಇಲ್ಲ. ಹೀಗಿರಲು ನಿನ್ನ ಮಹಿಮೆಗಳನ್ನು ಹೊಗಳುವುದರಲ್ಲಿ ನಾಲಿಗೆಯುತಾನೆ ಹೇಗೆ ಪ್ರವರ್ತಿಸಬಹುದು?

೯. ಲೋಕೇಶನೂ, ಮಹಾದೇವನೂ, ಲೋಕಾತೀತನೂ ಆದ ನೀನೇ ಪ್ರಸನ್ನನಾಗಿ ಬಳಲಿರುವಂಥ ಭಕ್ತನಾದ ನನ್ನನ್ನು ಇಷ್ಟಬಂದ ಕಾರ್ಯದಲ್ಲಿ ನಿಯೋಜಿಸು.''

೧೦. ಹೀಗೆ ಬಿನ್ನವಿಸಿ ನಾನು ಮತ್ತೆ ಮತ್ತೆ ನಮಸ್ಕಾರಮಾಡಿ ಆ ಮಹಾದೇವನಲ್ಲಿ ಅಂಜಲಿಬಂಧವನ್ನು ಮಾಡಿ ಆತನ ಸಮ್ಮುಖದಲ್ಲಿ ಕುಳಿತೆನು.

೧೧. ಬಳಿಕ ಶ್ರೀಮಹಾವಿಷ್ಣುವು ಮೇಘಗಂಭೀರವಾದ ಧ್ವನಿಯುಳ್ಳವನಾಗಿ ಶಂಕರನ ಸ್ತೋತ್ರಗಳಿಂದ ತನ್ನ ವಾಣಿಯನ್ನೇ ಕೃತಾರ್ಥಗೊಳಿಸುವನಂತೆ ಅಲ್ಲಿಗೆ ಬಂದನು.

ಜಯ ತ್ರಿಭುವನಾಧೀಶ ಜಯ ಗಂಗಾಧರ ಪ್ರಭೋ ।
ಜಯನಾಥ ವಿರೂಪಾಕ್ಷ ಜಯ ಚಂದ್ರಾರ್ಧಶೇಖರ ॥ ೧೨ ॥
ಅವ್ಯಾಜಮನಿತಂ ಶಂಭೋ ಕಾರುಣ್ಯಂ ತವ ವರ್ಧತೇ ।
ಯೇನ ನಿರ್ಧೂತಮಖಿಲಂ ಭಕ್ತೇಷು ಜ್ಞಾನಮಾಹಿತಂ ॥ ೧೩ ॥
ಪಾಲನಂ ಸರ್ವವಿದ್ಯಾನಾಂ ಪ್ರಾಪಣಂ ಭೂತಿಸಂಚಯೈಃ ।
ಪುರಾಣಂ ಚ ಸಪುತ್ರಾಣಾಂ ಪಿತುರೇವ ಪ್ರವರ್ಧನಂ ॥ ೧೪ ॥
ಶತಾನಾಮಪಿ ಮೂರ್ತೀನಾಮೇಕಾಮಪಿ ನವೈಃ ಸ್ತವೈಃ ।
ಸ್ತೋತುಂ ನ ಶಕ್ನುಮೇಶಾನ ಸಮವಾಯಸ್ತು ಕಿಂ ಪುನಃ ॥ ೧೫ ॥
ತ್ವಮೇವ ತ್ವಾಮಲಂ ವೇತ್ತುಂ ಯದಿ ವಾ ತ್ವತ್ಪ್ರಸಾದತಃ ।
ಭ್ರಮರಃ ಕೀಟಮಾಕೃಷ್ಯ ಸ್ವಾತ್ಮಾನಂ ಕಿಂ ನ ಚಾನಯೇತ್ ॥ ೧೬ ॥
ದೇವಾಸ್ತ್ವದಂಶಸಂಭೂತಿಪ್ರಭವೋ ನ ಭವಂತಿ ಕಿಂ ।
ಅಪ್ಯಾಯಸಾಗ್ನಿಕೀಲಸ್ಯ ದಾಹಶಕ್ತಿರ್ನ ಕಿಂ ಭವೇತ್ ॥ ೧೭ ॥

---

೧೨. "ಮೂರುಲೋಕಗಳಿಗೆ ಒಡೆಯನೂ, ಗಂಗಾಧರನೂ, ಹಣೆಯಲ್ಲಿ ಮೂರನೆಯ ನೇತ್ರವನ್ನು ಪಡೆದಿರುವವನೂ, ಅಷ್ಟಮಿಚಂದ್ರನನ್ನು ಜಡೆಯಲ್ಲಿ ಧರಿಸಿರುವನೂ ಆದ ಓ ಸದಾಶಿವನೇ! ನಿನಗೆ ನಮಸ್ಕಾರವು!!

೧೩. ನಿನ್ನ ಭಕ್ತರಲ್ಲಿರುವ ಅಜ್ಞಾನವನ್ನು ನಿರ್ಮೂಲಗೊಳಿಸುವಂತಹ ನಿನ್ನ ಕರುಣೆಯು ಅವ್ಯಾಜವೂ ಅನಂತವೂ ಆಗಿರುವುದು.

೧೪. ಲೋಕಪತಿಯಾದ ನಿನ್ನ ಆ ಅವ್ಯಾಜಕರುಣವೇ ಮಕ್ಕಳಾದ ನಮಗೆ ಪಾಲಕವಾಗಿದೆಯಲ್ಲದೆ ಅದು ಅಷ್ಟವಿಭೂತಿಗಳಿಂದೊಡಗೂಡಿದ ಸಕಲ ವಿದ್ಯೆಗಳನ್ನೂ ತಿಳಿಸುವುದೂ, ಪುರಾತನವೂ, ವರ್ಧಿಷ್ಣುವೂ ಆಗಿರುತ್ತದೆ.

೧೫. ನಿನ್ನ ನೂರಾರು ರೂಪಗಳಲ್ಲಿ ಒಂದನ್ನು ಕೂಡ ಹೊಸತಾದ ಸ್ತೋತ್ರಗಳಿಂದ ಕೀರ್ತನಮಾಡಲು ನಾವು ಅಶಕ್ತರೆಂದಮೇಲೆ ಸಮಷ್ಟಿರೂಪವನ್ನು ಹೇಗೆ ತಾನೆ ಸ್ತುತಿಸಲಾಪೆವು?

೧೬. ನಿನ್ನನ್ನು ತಿಳಿಯಲು ನೀನೊಬ್ಬನೇ ಸಮರ್ಥನು. ಅಥವಾ ನಿನ್ನ ಅನುಗ್ರಹದಿಂದ ಮತ್ತೊಬ್ಬರಿಗೆ ಅದು ಸಾಧ್ಯವಾದೀತು. ಭ್ರಮರವು ಕೀಟವನ್ನು ತನ್ನಂತೆಯೇ ಮಾಡಿಕೊಳ್ಳುವಂತೆ ಅಂಥವರನ್ನೂ ನೀನು ನಿನ್ನಂತೆಯೇ ಮಾಡಿಕೊಂಡಿರುವೆ.

೧೭. ದೇವತೆಗಳೂಕೂಡ ನಿನ್ನ ಅಂಶಸಂಭೂತರಾದುದರಿಂದಲೇ ಸಮರ್ಥರಾಗಿರುವರು. ಕಾದ ಕಬ್ಬಿಣದಿಂದ ಹೊರಟ ಕಿಡಿಗೂ ಕೂಡ ಅದೇ ದಾಹಕ ಶಕ್ತಿಯಿರುವುದಿಲ್ಲವೆ?

ದೇಶಕಾಲಕ್ರಿಯಾ ಯೋಗಾದ್ಯಥಾಗ್ನೇರ್ಭೇದಸಂಭವಃ ।
ತಥಾ ವಿಷಯಭೇದೇನ ತ್ವಮೇಕೋಽಪಿ ವಿಭಿದ್ಯಸೇ ॥ ೧೮ ॥
ಅನುಗ್ರಹಪರೋ ದೇವ ಮೂರ್ತಿಂ ದರ್ಶಯ ಶಂಕರ ।
ಆವಯೋರಖಿಲಾಧಾರ ನಯನಾನಂದ ದಾಯಿನೀಂ ॥ ೧೯ ॥
ಏವಂ ಪ್ರಣಮತೋರ್ದೇವಃ ಶ್ರದ್ಧಾಭಕ್ತಿಸಮನ್ವಿತಂ ।
ಪ್ರಸಸಾದ ಪರಂ ಶಂಭುಃ ಸ್ತುವತೋರಾವಯೋರ್ದ್ವಯೋಃ ॥ ೨೦ ॥
ತೇಜಸ್ತಂಭಾತ್ಪುನಸ್ತಸ್ಮಾದ್ದೇವಶ್ಚಂದ್ರಾರ್ಧಶೇಖರಃ ।
ಆವಿರ್ಬಭೂವ ಪುರುಷಃ ಕಪಿಲಃ ಕಾಲಕಂಧರಃ ॥ ೨೧ ॥
ಪರಶುಂ ಬಾಲಹರಿಣಂ ಕರೈರಭಯವಿಶ್ರಮೌ ।
ದಧಾನಃ ಪುರುಷೋಽವಾದೀತ್ಪುತ್ರಾವಾವಾಮಿತಿ ಪ್ರಭುಃ ॥ ೨೨ ॥
ಪರಿತುಷ್ಟೋಽಸ್ಮಿ ಯುವಯೋರ್ಭಕ್ತ್ಯಾ ಯುಕ್ತಾತ್ಮನೋರ್ಮಯಿ ।
ಭವತಂ ಸರ್ವಲೋಕಾನಾಂ ಸೃಷ್ಟಿರಕ್ಷಾಧಿಪೌ ಯುವಾಂ ॥ ೨೩ ॥

---

೧೮. ಒಂದೇ ಅಗ್ನಿಯಲ್ಲಿ ದೇಶಕಾಲ ಕರ್ತವ್ಯ ವೈಪರೀತ್ಯಗಳಿಂದ ಗಾರ್ಹಪತ್ಯ, ಆಹವನೀಯ, ದಾಕ್ಷಿಣೇಯ ಮುಂತಾದ ಅನೇಕ ವ್ಯವಹಾರಗಳು ಹೇಗೆ ಉಂಟಾಗುವುವೋ ಹಾಗೆಯೇ ನೀನೂ ಸಹ ಅದ್ವಿತೀಯನಾದರೂ ವಿಷಯ ಭೇದಗಳನ್ನನುಸರಿಸಿ ಭಿನ್ನಭಿನ್ನವಾಗಿ ತೋರುವೆ.

೧೯. ಎಲೈ ದೇವದೇವನೆ! ಸಕಲ ಜಗತ್ತಿಗೂ ಆಧಾರವಾಗಿ ನೋಡುವವರಿಗೆ ಆನಂದವನ್ನುಂಟುಮಾಡುವುದಾದ ನಿನ್ನ ದಿವ್ಯ ರೂಪವನ್ನು ನಮಗೆ ದಯೆಮಾಡಿ ತೋರಿಸು.''

೨೦. ಈ ರೀತಿಯಾಗಿ ಶ್ರದ್ಧಾಭಕ್ತಿಗಳಿಂದೊಡಗೂಡಿ ಸ್ತೋತ್ರಮಾಡುತ್ತ ಪ್ರಣಾಮವನ್ನು ಮಾಡುತ್ತಿರುವ ನಮ್ಮಿಬ್ಬರನ್ನೂ ಕಂಡು ಆ ಸದಾಶಿವನು ಸುಪ್ರಸನ್ನನಾದನು.

೨೧-೨೨. ಆ ತೇಜಸ್ತಂಭದಿಂದಲೇ ದೇವದೇವನಾದ ಚಂದ್ರಶೇಖರನು ನೀಲಕಂಠನಾಗಿ ಕಪಿಲವರ್ಣಯುಕ್ತನಾದ ಶರೀರವನ್ನು ಧರಿಸಿ ಪರಶುವನ್ನೂ ಜಿಂಕೆಯ ಮರಿಯನ್ನೂ ಎರಡು ಕೈಗಳಲ್ಲಿಯೂ ಹಿಡಿದುಕೊಂಡು ಮತ್ತೆರಡು ಕೈಗಳಿಂದ ವರದ, ಅಭಯಗಳೆಂಬ ಮುದ್ರೆಗಳನ್ನು ತೋರುತ್ತ ಆವಿರ್ಭವಿಸಿದವನಾಗಿ ಮಕ್ಕಳಾದ ನಮ್ಮಿರ್ವರನ್ನೂ ಕುರಿತು ಹೀಗೆ ಅಪ್ಪಣೆ ಕೊಡಿಸಿದನು :—

೨೩. "ನನ್ನಲ್ಲಿಯೇ ನಟ್ಟಮನಸ್ಸುಳ್ಳವರಾದ ನಿಮ್ಮಿರ್ವರ ಭಕ್ತಿಯಿಂದ ಸಂತೋಷವನ್ನು ಹೊಂದಿದ್ದೇನೆ. ನೀವಿಬ್ಬರೂ ಸರ್ವಲೋಕಗಳಿಗೂ ಸೃಷ್ಟಿ ಮತ್ತು ಪಾಲನಗಳನ್ನು ಮಾಡುವುದರಲ್ಲಿ ನಿಯುಕ್ತರಾಗಿರಿ.

ಯುವಯೋರಿಷ್ಟಸಿದ್ಧ್ಯರ್ಥಮಾವಿರ್ಭೂತೋಽಸ್ಮ್ಯಹಂ ಯತಃ ।
ವರಂ ವೃಣುತಮನ್ಯಂ ಚ ವರದೋಽಹಮುಪಾಗತಃ ॥ ೨೪ ॥
ಇತಿ ದೇವಸ್ಯ ವಚನಾತ್ಸುಪ್ರೀತೌ ಚ ಕೃತಾಂಜಲೀ ।
ವಿಜ್ಞಾಪಯಾಮಾಸಿವ ತೌ ಸ್ವಂ ಸ್ವಮರ್ಥಂ ಪೃಥಕ್ಪೃಥಕ್ ॥ ೨೫ ॥
ಅಹಂ ಮಂತ್ರೈಃ ಶಿಶುಪ್ರಾಯ ಜಗತ್ತ್ರಯವಿಧಾಯಕಃ ।
ಸಂಸ್ತುವನ್ವೈದಿಕೈರ್ಮಂತ್ರೈರೀಶಾನಮಪರಾಜಿತಂ ॥ ೨೬ ॥
ನಮಸ್ಯೇಽಹಮಿದಂ ರೂಪಂ ಶಶ್ವದ್ವರದಮೀಶ್ವರಂ ।
ತೇಜೋಮಯಂ ಮಹಾದೇವಂ ಯೋಗಿಧ್ಯೇಯಂ ನಿರಂಜನಂ ॥ ೨೭ ॥
ಆಪೂರ್ಯಮಾಣಂ ಭವತಾ ತೇಜಸಾ ಗಗನಾಂತರಂ ।
ಪರಿಪೃಚ್ಛಃ ಸುರಾವಾಸಃ ಕ್ಷಣಾದ್ದ್ವೇವ ಭವಿಷ್ಯತಿ ॥ ೨೮ ॥
ಸಿದ್ಧಚಾರಣಗಂಧರ್ವಾ ದೇವಾಶ್ಚ ಪರಮರ್ಷಯಃ ।
ನಾವಾಸಂ ದಿವಿ ಸಂಚಾರಂ ಲಭೇರಂಸ್ತೇಜಸಾ ತವ ॥ ೨೯ ॥

---

೨೪. ನಿಮ್ಮ ಅಭೀಷ್ಟಗಳನ್ನೀಡೇರಿಸುವುದಕ್ಕೋಸ್ಕರ ನಾನು ಬಂದಿರುವೆನಾದುದರಿಂದ ವರದನಾದ ನನ್ನಲ್ಲಿ ಇತರ ವರಗಳನ್ನು ಕೇಳಿರಿ.''

೨೫. ಹೀಗೆ ಹೇಳಿದ ದೇವೇಶ್ವರನ ವಚನಗಳಿಂದ ಸುಪ್ರೀತರಾದ ನಾವಿಬ್ಬರೂ ಅಂಜಲಿಬದ್ಧರಾಗಿ ನಮಗೆ ಬೇಕಾದ ವರಗಳನ್ನು ಬೇರೆಬೇರೆಯಾಗಿಯೇ ಕೇಳಿದೆವು.

೨೬. ಆಗ ಶಿಶುಪ್ರಾಯನಾದ ನಾನು ಜಗತ್ತ್ರಯವನ್ನೂ ವಿಧಾಯಕ ಮಾಡುವವನಾಗಿ ನಾನಾ ವಿಧವಾದ ವೈದಿಕ ಮಂತ್ರಗಳಿಂದ ಅಜೇಯನಾದ ಈಶ್ವರನನ್ನು ಸ್ತುತಿಸಿದೆನು.

೨೭. '' ಶಾಶ್ವತವೂ, ವರಪ್ರದಾತೃವೂ, ತೇಜೋಮಯವೂ, ಯೋಗಿಗಳ ಧ್ಯಾನಕ್ಕೆ ವಿಷಯವೂ, ನಿರಂಜನವೂ ಆದ ಮಹಾದೇವನ ಈ ರೂಪಕ್ಕೆ ನಮಸ್ಕರಿಸುತ್ತೇನೆ.

೨೮. ನಿನ್ನ ತೇಜಸ್ಸಿನಿಂದ ಆಕಾಶವೆಲ್ಲವೂ ವ್ಯಾಪ್ತವಾಗಿರುವುದರಿಂದ ಸ್ವರ್ಗಲೋಕವೂ ಕೂಡ ಕೂಡಲೆ 'ಇದೆಯೋ? ಇಲ್ಲವೇ?' ಎಂಬ ವಿಕಲ್ಪ ಸಹಿತ ಪ್ರಶ್ನೆಗಳಿಗೆ ವಿಷಯವಾಯಿತು.

೨೯. ಸಿದ್ಧರೂ, ಚಾರಣರೂ, ಗಂಧರ್ವರೂ, ದೇವತೆಗಳೂ, ಮಹರ್ಷಿಗಳೂ ಸ್ವರ್ಗಲೋಕದಲ್ಲಿ ವಾಸವನ್ನಾಗಲಿ ಸಂಚಾರವನ್ನಾಗಲಿ ಮಾಡಲು ನಿನ್ನ ತೇಜಸ್ಸಿನ ತಾಪದಿಂದ ಅಶಕ್ತರಾಗಿದ್ದಾರೆ.

ಪೃಥ್ವೀ ಚ ಸಕಲಾ ಚೈವ ತಪ್ಯಮಾನಾ ತವೌಜಸಾ ।
ಚರಾಚರಸಮುತ್ಪತ್ತಿಕ್ಷಮಾ ನೈವ ಭವಿಷ್ಯತಿ ॥ ೩೦ ॥
ಉಪಸಂಹೃತ್ಯ ತೇಜಸಃ ಸ್ವಮರುಣಾಚಲಸಂಜ್ಞಯಾ ।
ಭವ ಸ್ಥಾವರಲಿಂಗಂ ತ್ವಂ ಲೋಕಾನುಗ್ರಹಕಾರಣಾತ್ ॥ ೩೧ ॥
ಜ್ಯೋತಿರ್ಮಯಮಿದಂ ರೂಪಮರುಣಾಚಲಸಂಜ್ಞಿತಂ ।
ಯೇ ನಮಂತಿ ನರಾ ಭಕ್ತ್ಯಾ ತೇ ಭವನ್ತ್ಯಮರಾಧಿಕಾಃ ॥ ೩೨ ॥
ಸೇವತಾಂ ಸಕಲಾ ಲೋಕಾಃ ಸಿದ್ಧಾಶ್ಚ ಪರಮರ್ಷಯಃ ।
ಗಣಾಶ್ಚ ವಿವಿಧಾ ಭೂಮೌ ಮಾನುಷಂ ಭಾವಮಾಸ್ಥಿತಾಃ ॥ ೩೩ ॥
ದಿವ್ಯಾರಾಮಸಮುದ್ಭೂತಕಲ್ಪಕಾದ್ಯಾಃ ಸುರದ್ರುಮಾಃ ।
ಸೇವಿನಸ್ತ್ವಾಂ ಪ್ರರೋಹಂತು ಭರಿತಾ ವಿವಿಧೈಃ ಫಲೈಃ ॥ ೩೪ ॥
ದಿವ್ಯೌಷಧಿಗಣಾಸ್ಸರ್ವೇ ಸಿಂಹಾದ್ಯಾ ಮೃಗಜಾತಯಃ ।
ಪ್ರಶಾಂತಾಃ ಪರಿವರ್ತಂತಾಂ ಪಾಪಕಲ್ಮಷನಾಶನಂ ॥ ೩೫ ॥

---

೩೦. ನಿನ್ನ ತೇಜಸ್ಸಿನ ಜ್ವಾಲೆಗಳಿಂದ ಸಮಸ್ತ ಭೂಮಿಯೂ ತಪಿಸುವುದಾಗಿ ಚರಾಚರ ಪದಾರ್ಥಗಳ ಧಾರಣೆಯನ್ನು ಮಾಡಲು ಸಹ ಅಶಕ್ತವಾಗುವುದು.

೩೧. ಆದುದರಿಂದ ಓ ಪರಮೇಶ್ವರಾ! ನೀನು ಈ ತೇಜೋರೂಪವನ್ನು ಉಪಸಂಹಾರ ಮಾಡಿ ಅರುಣಾಚಲವೆಂಬ ಹೆಸರಿನಿಂದ ಸ್ಥಾವರಲಿಂಗದ ಆಕಾರವನ್ನು ಧರಿಸು.

೩೨. ಅರುಣಗಿರಿಯೆಂಬ ಈ ನಿನ್ನ ಜ್ಯೋತಿರ್ಲಿಂಗವನ್ನು ಯಾವ ಮನುಷ್ಯರು ಭಕ್ತಿಯುಕ್ತರಾಗಿ ನಮಸ್ಕರಿಸುವರೊ ಅವರು ದೇವತೆಗಳಿಗಿಂತಲೂ ಉತ್ತಮೋತ್ತಮರೆನಿಸುವರು.

೩೩. ಈ ನಿನ್ನ ಅದ್ಭುತ ರೂಪವನ್ನು ಸಕಲ ಲೋಕವಾಸಿಗಳೂ, ಸಿದ್ಧರೂ, ಬ್ರಹ್ಮರ್ಷಿಗಳೂ, ವಿವಿಧ ಪಾರ್ಷದ ಗಣಗಳೂ ಭೂಲೋಕದಲ್ಲಿ ಮನುಷ್ಯರೂಪಗಳಿಂದವತರಿಸಿ ಸೇವಿಸಲಿ.

೩೪. ದಿವ್ಯವಾದ ಉಪವನದಲ್ಲಿ ಹುಟ್ಟಿದ ಕಲ್ಪವೃಕ್ಷವೇ ಮೊದಲಾದ ಸುರವೃಕ್ಷಗಳೆಲ್ಲವೂ ನಾನಾ ವಿಧಗಳಾದ ಫಲಗಳಿಂದ ತುಂಬಿದವುಗಳಾಗಿ ಇಲ್ಲಿ ಉದ್ಭವವಾಗಲಿ.

೩೫. ಸಕಲ ಪಾಪಗಳೆಂಬ ಕಲ್ಮಷವನ್ನು ನಾಶಮಾಡತಕ್ಕ ಈ ಅರುಣಾಚಲದಲ್ಲಿ ಎಲ್ಲ ವಿಧವಾದ ಔಷಧಿ ವನಸ್ಪತಿಗಳೂ, ಸಿಂಹಾದಿ ಮೃಗಗಳೂ ಸಮೃದ್ಧಿಯಾಗಿರಲಿ.

ಅಯನದ್ವಯಸಂಭಿನ್ನೇನ ಗಮನೇನಾಪಿ ಸಂಯುತಃ ।
ನ ಲಂಘಯಿಷ್ಯತಿ ರವಿಃ ಶೃಂಗಂ ಲಿಂಗತನೋಸ್ತವ ॥ ೩೬ ॥
ದಿವ್ಯದುಂದುಭಿಶಂಖಾನಾಂ ಘೋಷೈಃ ಪುಷ್ಪೌಘವೃಷ್ಟಿಭಿಃ ।
ಸೇವಿತೋ ಭವ ದೇವ ತ್ವಮಪ್ಸರೋನೃತ್ಯಗೀತಿಭಿಃ ॥ ೩೭ ॥
ಅಮರತ್ವಂ ಚ ಸಿದ್ಧತ್ವಂ ರಸಸಿದ್ಧೀಶ್ಚ ನಿರ್ವೃತಿಂ ।
ಲಭಂತಾಂ ಮಾನುಷಾ ನಿತ್ಯಂ ತ್ವತ್ಸನ್ನಿಧಿಮುಪಾಗತಾಃ ॥ ೩೮ ॥
ಈಶತ್ವಂ ಚ ವಶಿತ್ವಂ ಚ ಸೌಭಾಗ್ಯಂ ಕಾಲವಂಚನಂ ।
ತ್ವಾಮಾಶ್ರಿತ್ಯ ನರಾಸ್ಸರ್ವೇ ಲಭಂತಾಮರುಣಾಚಲ ॥ ೩೯ ॥
ಸರ್ವಾವಯವದಾನೇನ ಸರ್ವವ್ಯಾಧಿ ವಿನಾಶನಾತ್ ।
ಸರ್ವಾಭೀಷ್ಟಪ್ರದಾನೇನ ದೃಶ್ಯೋ ಭವ ಮಹೀತಲೇ ॥ ೪೦ ॥
ತಥೇತಿ ವರದಂ ದೇವಮರುಣಾದ್ರಿಪತಿಂ ಶಿವಂ ।
ಪ್ರಣಮ್ಯ ಕಮಲಾನಾಥಃ ಪ್ರಾರ್ಥಯನ್ನಿದಮಬ್ರವೀತ್ ॥ ೪೧ ॥

---

೩೬. ಉತ್ತರಾಯಣ ದಕ್ಷಿಣಾಯನಗಳಲ್ಲಿ ಭಿನ್ನಗತಿಯುಳ್ಳ ಸೂರ್ಯನು ಯಾವ ಕಾಲದಲ್ಲಿಯೂ ಲಿಂಗಶರೀರಿಯಾದ ನಿನ್ನ ತುದಿಯನ್ನು ಉಲ್ಲಂಘಿಸದಿರಲಿ.

೩೭. ದಿವ್ಯ ದುಂದುಭಿಗಳಿಂದಲೂ, ಶಂಖಘೋಷಗಳಿಂದಲೂ, ಪುಷ್ಪವೃಷ್ಟಿಗಳಿಂದಲೂ, ಅಪ್ಸರಸ್ತ್ರೀಯರ ನೃತ್ಯಗೀತಾದಿಗಳಿಂದಲೂ ನೀನು ನಿರಂತರವೂ ಸೇವಿತನಾಗು.

೩೮. ನಿನ್ನ ಸನ್ನಿಧಿಯನ್ನು ಸೇರಿದ ಮಾತ್ರದಿಂದಲೇ ಮನುಷ್ಯರು ಅಮರತ್ವವನ್ನೂ, ಸಿದ್ಧಪದವಿಯನ್ನೂ, ಸಕಲ ರಸಸಿದ್ಧಿಗಳನ್ನೂ, ಮೋಕ್ಷವನ್ನೂ ಪಡೆಯುವವರಾಗಲಿ.

೩೯. ಎಲೈ ಅರುಣಾಚಲನೆ! ನಿನ್ನ ಆಶ್ರಯವಿಶೇಷದಿಂದ ಮನುಷ್ಯರಿಗೆ ಈಶಿತ್ವ, ವಶಿತ್ವ, ಸಕಲ ಸೌಭಾಗ್ಯಗಳೂ ಮತ್ತು ಕಾಲನನ್ನು ವಂಚಿಸುವ ಅಮರಣಧರ್ಮವೂ ಸಹ ಸರ್ವಕಾಲಗಳಲ್ಲಿಯೂ ಉಂಟಾಗಲಿ.

೪೦. ನಿನ್ನ ಭಕ್ತರಿಗೆ ಹೃಷ್ಟಪುಷ್ಟ ಶರೀರಗಳೂ, ಸಕಲ ವ್ಯಾಧಿಗಳ ನಾಶಗಳೂ ಉಂಟಾಗಿ ಸಕಲರ ಅಭೀಷ್ಟಗಳನ್ನೂ ನೆರವೇರಿಸುವ ಈ ರೂಪವನ್ನು ಭೂಮಿಯಲ್ಲಿ ನಿಲ್ಲಿಸು."

೪೧. ಹಾಗೆಯೇ ಆಗಲೆಂದು ವರವನ್ನು ನನಗೆ ದಯಪಾಲಿಸಿದ ಅರುಣಾಚಲೇಶ್ವರನನ್ನು ಕಂಡು ಶ್ರೀಮಹಾವಿಷ್ಣುವು ಈ ರೀತಿಯಾಗಿ ಪ್ರಾರ್ಥನೆ ಮಾಡಿದನು.

ಪ್ರಸೀದ ಕರುಣಾಪೂರ್ಣ ಶೋಣಶೈಲೇಶ್ವರ ಪ್ರಭೋ ।
ಮಹೇಶ ಸರ್ವಲೋಕಾನಾಂ ಹಿತಾಯ ಪ್ರಕಟೋದಯ ॥ ೪೨ ॥
ಯದಾಹಂ ತ್ವಾಮುಪಾಶ್ರಿತ್ಯ ಜಗದ್ರಕ್ಷಣದಕ್ಷಿಣಃ ।
ಶ್ರೀಪತಿತ್ವಮನುಪ್ರಾಪ್ತಸ್ತಥಾ ಭಕ್ತಾ ಭವಂತು ತೇ ॥ ೪೩ ॥
ನಾಲ್ಪಪುಣ್ಯೈರುಪಾಸ್ಯೇತ ತ್ವದ್ರೂಪಂ ಮಹದದ್ಭುತಂ ।
ಮಯಾ ಚ ಬ್ರಹ್ಮಣಾ ಚೈವಮದೃಷ್ಟಪದಶೇಖರಃ ॥ ೪೪ ॥
ಪ್ರದಕ್ಷಿಣಾನಮಸ್ಕಾರೈರ್ನೃತ್ಯಗೀತೈಶ್ಚ ಪೂಜನೈಃ ।
ತ್ವಾಮರ್ಚಯಂತಿ ಯೇ ಮರ್ತ್ಯಾಃ ಕೃತಾರ್ಥಾಸ್ತೇ ಗತಾಂಹಸಃ ॥ ೪೫ ॥
ಉಪವಾಸೈರ್ವ್ರತೈಃ ಸತ್ರೈರುಪಹಾರೈಸ್ತಥಾರ್ಚನೈಃ ।
ತ್ವಾಮರ್ಚಯಂತಿ ಮನುಜಾಃ ಸಾರ್ವಭೌಮಾ ಭವಂತು ತೇ ॥ ೪೬ ॥
ಆರಾಮಂ ಮಂಡಪಂ ಚಾಪಿ ಕೂಪಂ ವೀಥಿವಿಶೋಧನಂ ।
ಕುರ್ವತಾಮರುಣಾದ್ರೀಶ ಸನ್ನಿಧಾನೇ ಪುನರ್ಭವ ॥ ೪೭ ॥

---

೪೨. "ಎಲೈ ಕರುಣಾಸಮುದ್ರನೆ! ಅರುಣಾದ್ರೀಶ್ವರನೆ! ಜಗನ್ನಾಥಾ! ಸಕಲ ಲೋಕಗಳಿಗೂ ಹಿತವನ್ನುಂಟುಮಾಡುವ ಹಿತದೃಷ್ಟಿಯಿಂದ ಭೂಲೋಕದಲ್ಲಿ ಸ್ವರೂಪವನ್ನು ಪ್ರಕಟಗೊಳಿಸಿರುವವನೆ! ಪ್ರಸನ್ನನಾಗು.

೪೩. ಎದುವರೆಗೆ ನಾನು ನಿನ್ನನ್ನೇ ಆಶ್ರಯಿಸಿಕೊಂಡು ಲಕ್ಷ್ಮೀಪತಿಯಾಗಿ ಜಗದ್ರಕ್ಷಣ ಕಾರ್ಯದಲ್ಲಿ ತತ್ಪರನಾಗಿರುವೆನೋ, ಆದುವರೆಗೂ ನಿನ್ನ ಭಕ್ತರ ಸಮಾಗಮವು ಮೇಲಿಂದಮೇಲೆ ನನಗೆ ಆಗುತ್ತಿರಲಿ.

೪೪. ನನ್ನಿಂದಲೂ ಬ್ರಹ್ಮನಿಂದಲೂ ತುದಿಮೊದಲುಗಳನ್ನು ಕಾಣಲಾಗದೆ ಹೋದ ಈ ನಿನ್ನ ರೂಪವು ಅದ್ಭುತವಾಗಿರುವುದರಿಂದ ಮಂದಭಾಗ್ಯರಾದ ನರರಿಗೆ ಕಾಣಿಸದಿರಲಿ.

೪೫. ಯಾವ ಮಾನವರು ನಿನ್ನನ್ನು ಪ್ರದಕ್ಷಿಣೆ, ನಮಸ್ಕಾರಗಳು, ನೃತ್ಯಗೀತಗಳು, ಪೂಜೆಗಳು ಮೊದಲಾದುವುಗಳಿಂದ ಅರ್ಚಿಸುತ್ತಾರೆಯೋ ಅವರ ಸಮಸ್ತ ದುರಿತಗಳೂ ಕ್ಷಯವಾಗಿ ಕೃತಕೃತ್ಯರಾಗುವರು.

೪೬. ಯಾರಾದರೆ ಉಪವಾಸಗಳು, ವ್ರತಗಳು, ಯಾಗಗಳು, ಉಪಹಾರಾದಿಗಳು, ಹಾಗೂ ವಿಶೇಷ ಪೂಜೆಗಳು — ಇವುಗಳಿಂದ ನಿನ್ನನ್ನು ತೃಪ್ತಿಪಡಿಸುತ್ತಾರೆಯೋ ಅವರು ಮನುಷ್ಯೋತ್ತಮರಾಗುವಂತೆ ಅನುಗ್ರಹಿಸು.

೪೭. ಎಲೈ ಅರುಣಾಚಲೇಶ್ವರನೆ! ನಿನ್ನ ವಿಶೇಷ ಸನ್ನಿಧಾನದಲ್ಲಿ ಯಾರು ತೋಟಗಳು, ಮಂಟಪಗಳು, ಬಾವಿಗಳು, ಮಾರ್ಗಾನುಕೂಲಗಳು ಮುಂತಾದ ಪುಣ್ಯಕೆಲಸಗಳನ್ನು ಮಾಡುವರೋ ಅವರನ್ನು ಅನುಗ್ರಹಿಸುವವನಾಗು.

ಅಂಗಪ್ರದಕ್ಷಿಣಂ ಕುರ್ವನ್ನಷ್ಟೈಶ್ವರ್ಯಸಮನ್ವಿತಃ ।
ಅಶೇಷಪಾತಕೈಃ ಸದ್ಯೋ ವಿಮುಕ್ತೋ ನಿರ್ಮಲಾಶಯಃ ॥ ೪೮ ॥
ಆವಾಮುಷ್ಯವಿಮುಂಚಂತೌ ಸದಾ ತ್ವತ್ಪಾದಪಂಕಜಂ ।
ಧ್ಯಾತವ್ಯಂ ಮನುಜೈಃ ಸರ್ವೈಸ್ತ್ರವ ಸನ್ನಿಧಿಮಾಗತೈಃ ॥ ೪೯ ॥
ತಥಾಸ್ತ್ವಿತಿ ವರಂ ದತ್ವಾ ವಿಷ್ಣವೇ ಚಂದ್ರಶೇಖರಃ ।
ಅರುಣಾಚಲರೂಪೇಣ ಪ್ರಾಪ್ತಃ ಸ್ಥಾವರಲಿಂಗತಾಂ ॥ ೫೦ ॥
ತೈಜಸಂ ಲಿಂಗಮೇತದ್ಧಿ ಸರ್ವಲೋಕೈಕಕಾರಣಂ ।
ಅರುಣಾದ್ರಿರಿತಿಖ್ಯಾತಂ ದೃಶ್ಯತೇ ವಸುಧಾತಲೇ ॥ ೫೧ ॥
ಯುಗಾಂತಸಮಯೇ ಕ್ಷುಭ್ಧೈಶ್ಚತುರ್ಭಿರಪಿ ಸಾಗರೈಃ ।
ಆಪಿ ನಿಮಗ್ನಲೋಕಾಂತೈರಸ್ಪೃಷ್ಟಾಂತಿಕ ಭೂತಲಂ ॥ ೫೨ ॥
ಗಜಪ್ರಮಾಣೈಃ ಪೃಷತೈಃ ಪೂರಯಂತೋ ಜಗತ್ತ್ರಯಂ ।
ಪುಷ್ಕರಾದ್ಯಾ ಮಹಾಮೇಘಾ ವಿಶ್ರಾಂತಾ ಯಸ್ಯ ಸಾನುನಿ ॥ ೫೩ ॥

---

೪೮. ನಿನ್ನ ಶರೀರರೂಪವಾದ ಈ ಅರುಣಾಚಲವನ್ನು ಯಾರು ಪ್ರದಕ್ಷಿಣೆ ಮಾಡುವರೋ ಅವರು ಅಷ್ಟೈಶ್ವರ್ಯಯುಕ್ತರಾಗುವರು. ಅವರ ಜನ್ಮಾಂತರ ಕೃತ ಪಾಪಕೋಟಿಗಳೆಲ್ಲವೂ ತಕ್ಷಣದಲ್ಲಿಯೇ ನಾಶವನ್ನೈದುವುವು.

೪೯. ನಿನ್ನ ಪವಿತ್ರವಾದ ಸನ್ನಿಧಿಗೆ ಬರುವ ಪುಣ್ಯಪುರುಷರಿಂದ ಧ್ಯಾನಿಸ ತಕ್ಕ ನಿನ್ನ ಪಾದಕಮಲಗಳನ್ನೂ ಸಹ ನಾವಿಬ್ಬರೂ ಎಂದಿಗೂ ಮರೆಯದಂತೆ ಅನುಗ್ರಹಿಸು.''

೫೦. ಬಳಿಕ ಚಂದ್ರಶೇಖರನು ಅದೇ ರೀತಿಯಾದ ವರವನ್ನು ವಿಷ್ಣುವಿಗೆ ಕೊಟ್ಟು, ಅರುಣಾಚಲವೆಂಬ ಹೆಸರುಳ್ಳ ಸ್ಥಾವರಲಿಂಗದ ರೂಪವನ್ನು ಧರಿಸಿದನು.

೫೧. ಈಗಲೂ ಕೂಡ ಈ ಜ್ಯೋತಿರ್ಲಿಂಗವೇ ಜಗತ್ಕಾರಣಭೂತವಾಗಿ ಅರುಣಾದ್ರಿಯೆಂಬ ಹೆಸರಿನಿಂದ ಖ್ಯಾತಿಯನ್ನು ಹೊಂದಿ ಭೂಲೋಕದಲ್ಲಿ ಕಂಗೊಳಿಸುತ್ತಿರುವುದು.

೫೨. ಪ್ರಳಯಕಾಲದಲ್ಲಿ ಸಪ್ತಸಮುದ್ರಗಳು ಕ್ಷೋಭೆಯನ್ನು ಹೊಂದಿದರೂ, ಭೂಪ್ರದೇಶವನ್ನೆಲ್ಲಾ ಆವರಿಸಿದರೂ ಈ ಅರುಣಾಚಲ ಪ್ರದೇಶವು ಮಾತ್ರ ಯಥಾಸ್ಥಿತಿಯುಳ್ಳದಾಗಿಯೇ ಇರುತ್ತದೆ.

೫೩. ಆಗ ಪುಷ್ಕರ ಬಲಾಹಕಾದಿ ಮಹಾಮೇಘ... ಆನೆಯ... ಮಳೆಹನಿಗಳಿಂದ ಮೂರು ಲೋಕಗಳನ್ನೂ ಮುಳುಗಿ... ಬೆಟ್ಟದ ತಪ್ಪಲಿನ... ನಿಲ್ಲುವುವು.



ಪ್ರವೃತ್ತೇ ಭೂತಸಂಹಾರೇ ಪ್ರಕೃತೌ ಪ್ರತಿಸಂಚರೇತ್ ।
ಭವಿಷ್ಯತ್ಸರ್ವಬೀಜಾನಿ ನಿಷೇದುರ್ಯತ್ರ ನಿಶ್ಚಯಂ ॥ ೫೪ ॥
ಮಯಾ ಚಾಹೂಯಮಾನೇಭ್ಯಃ ಪ್ರಳಯಾನಂತರಂ ಪುನಃ ।
ಯತ್ಪಾದಸೇವಿ ವಿಪ್ರೇಭ್ಯೋ ವೇದಾಧ್ಯಯನಸಂಗ್ರಹಃ ॥ ೫೫ ॥
ಸರ್ವಾಸಾಮಪಿ ವಿದ್ಯಾನಾಂ ಕಲಾನಾಂ ಶಾಸ್ತ್ರಸಂಪದಾಂ ।
ಆಗಮಾನಾಂ ಚ ವೇದಾನಾಂ ಯತ್ರ ಸತ್ಯವ್ಯವಸ್ಥಿತಿಃ ॥ ೫೬ ॥
ಯದ್ಗುಹಾಗಹ್ವರಾಂತಸ್ಥಾಃ ಮುನಯಃ ಶಂಸಿತವ್ರತಾಃ ।
ಜಟಿನಃ ಸಂಪ್ರಕಾಶಂತೇ ಕೋಟಿಸೂರ್ಯಾಗ್ನಿತೇಜಸಃ ॥ ೫೭ ॥
ಪಂಚಬ್ರಹ್ಮಮಯೈರ್ಮಂತ್ರೈಃ ಪಂಚಾಕ್ಷರವಪುರ್ಧರೈಃ ।
ಆಕಾರಪೀಠಿಕಾರೂಢೋ ನಾದಾತ್ಮಾ ಯಃ ಸದಾಶಿವಃ ॥ ೫೮ ॥
ಅಷ್ಟಾಭಿಶ್ಚ ಸದಾ ಲಿಂಗೈರಷ್ಟದಿಕ್ಪಾಲಪೂಜಿತಃ ।
ಅಷ್ಟಮೂರ್ತಿತಯಾ ಯೋಽಯಮಷ್ಟಸಿದ್ಧಿಪ್ರದಾಯಕಃ ॥ ೫೯ ॥
ಯತ್ರ ಸಿದ್ಧಾಸ್ತಥಾಲೋಕಾನ್ಸ್ವಾನ್ಸ್ವಾನ್ಮುಕ್ತ್ವಾ ಸುರೇಶ್ವರಾಃ ।
ಅಪೇಕ್ಷಂತೇ ಸ್ಥಿತಿಂ ಮುಕ್ತಿಂ ವಿಹಾಯ ಕನಕಾಚಲಂ ॥ ೬೦ ॥

---

೫೪–೫೫. ಪ್ರಕೃತಿಯು ಉಪಸಂಹಾರವನ್ನು ಹೊಂದಿ, ಸಮಸ್ತಪ್ರಾಣಿಗಳ ಸಂಹಾರವಾಗತೊಡಗಲು ಮುಂದಿನ ಸೃಷ್ಟಿಗೆ ಬೇಕಾಗುವ ಸರ್ವಬೀಜಗಳೂ ಇಲ್ಲಿಯೇ ಇರುತ್ತವೆ. ಇಲ್ಲಿಯೇ ಪ್ರಳಯಾನಂತರದಲ್ಲಿ ನನ್ನಿಂದ ಕರೆಯಲ್ಪಟ್ಟವರಾಗಿ ಪರಮಾತ್ಮನ ಪಾದಸೇವಕರಾದ ಬ್ರಾಹ್ಮಣರಿಂದ ವೇದಾಧ್ಯಯನ ಸಂಗ್ರಹವು ನಡೆಯುತ್ತದೆ.

೫೬. ಆಗ ಸಕಲ ವಿದ್ಯೆಗಳಿಗೂ, ಕಲೆಗಳಿಗೂ, ಶಾಸ್ತ್ರಸಮೂಹಗಳಿಗೂ, ಆಗಮಗಳಿಗೂ, ವೇದಗಳಿಗೂ ಈ ಅರುಣಾಚಲವೇ ನಿವಾಸಸ್ಥಾನವಾಗುವುದು.

೫೭–೫೮. ಈ ಅರುಣಾಚಲದ ಗುಹೆಗಳಲ್ಲಿ ತಪೋನಿಷ್ಠರೂ, ಜಟಾಧಾರಿಗಳೂ, ಕೋಟಿಸೂರ್ಯಾಗ್ನಿಗಳಂತೆ ತೇಜೋವಂತರೂ ಆದ ಅನೇಕ ಮುನಿಗಳು ಪ್ರಕಾಶಿಸುತ್ತಿರುವರು. ಪಂಚಾಕ್ಷರೀರೂಪರಾದ ಪಂಚಬ್ರಹ್ಮರಿಂದೊಡಗೂಡಿದ ಮಂತ್ರಗಳ ಮೂಲಾಕ್ಷರವಾದ ಆಕಾರವೆಂಬ ಪೀಠದಲ್ಲಿ ಮಂಡಿಸಿರುವವನೇ ನಾದಾತ್ಮಕನಾದ ಸದಾಶಿವನು.

೫೯. ಆತನೇ ಅಷ್ಟಮೂರ್ತಿ ರೂಪದಿಂದ ಅಷ್ಟಲಿಂಗಗಳಾಗಿ ಅಷ್ಟದಿಕ್ಪಾಲಕರಿಂದಲೂ ಪೂಜಿತನಾಗಿ ಅವರಿಗೆ ಅಷ್ಟೈಶ್ವರ್ಯಗಳನ್ನು ಕೊಡುತ್ತಿರುವನು.

೬೦. ಸಕಲ ಸಿದ್ಧರೂ ದೇವತೆಗಳೂ ಮೇರುಪರ್ವತವನ್ನೂ ತಮ್ಮ ಇತರ ನೆಲೆಗಳನ್ನೂ ಬಿಟ್ಟು ಈ ಪರ್ವತದಲ್ಲಿಯೇ ನೆಲಸಿ ಮುಕ್ತಿಯನ್ನು ಹೊಂದಲೆಳಸುವರು.

ಏವಂ ವಸುಂಧರಾಪುಣ್ಯಪರಿಪಾಕಸಮುಚ್ಚಯಃ ।
ಅರುಣಾದ್ರಿರಿತಿ ಖ್ಯಾತೋ ಭಕ್ತಭಕ್ತಿವರಪ್ರದಃ ॥ ೬೧ ॥
ಕೈಲಾಸಾನ್ಮೇರುಶಿಖರಾದಾಗತೈರ್ದೇವಸಂಚಯೈಃ ।
ಪೂಜ್ಯತೇ ಶೋಣಶೈಲಾತ್ಮಾ ಶಂಭುಃ ಸರ್ವವರಪ್ರದಃ ॥ ೬೨ ॥
ಇತಿಕಮಲಜವಕ್ತ್ರಪದ್ಮಜಾತಂ
ಮುದಿತಮನಾಃ ಸನಕೋ ನಿಶಮ್ಯ ಭಕ್ತ್ಯಾ ।
ವಿರಚಿತವಿನಯಃ ಪ್ರಣಮ್ಯ ಪುತ್ರಃ
ಪಿತರಮಪೃಚ್ಛದಶೇಷವೇದಸಾರಂ ॥ ೬೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಪೂರ್ವಾರ್ಧೇ "ಬ್ರಹ್ಮ ವಿಷ್ಣು ಸ್ತುತಿಪೂರ್ವಕಂ ಶಂಕರಸ್ಯ ಸ್ಥಾವರಲಿಂಗ ಮಾಹಾತ್ಮ್ಯವರ್ಣನಂ" ನಾಮ ದ್ವಿತೀಯೋಽಧ್ಯಾಯಃ

---

೬೧. ಈ ರೀತಿಯಾಗಿ ಭಕ್ತರ ಸಮಸ್ತ ಇಷ್ಟಾರ್ಥಗಳನ್ನೂ ಈಡೇರಿಸಿ ಕೊಡುವ ಅರುಣಾಚಲವು ಭೂಲೋಕದ ಪುಣ್ಯಪರಿಪಾಕದಿಂದಲೇ ಇಲ್ಲಿ ನೆಲಸಿರುವುದು.

೬೨. ಇಲ್ಲಿ ಕೈಲಾಸದಿಂದಲೂ, ಮೇರುಪರ್ವತದಿಂದಲೂ ಬಂದ ದೇವತಾ ಸಮೂಹಗಳಿಂದ ವರಪ್ರದನಾದ ಅರುಣಾಚಲೇಶ್ವರನು ಸದಾ ಪೂಜೆಗೊಳ್ಳುತ್ತಿರುವನು.

೬೩. ಸೂತನು ಹೇಳುತ್ತಾನೆ:—ಹೀಗೆ ಹೇಳಿದ ಬ್ರಹ್ಮನ ಮಾತುಗಳನ್ನು ಕೇಳಿ ಸಂತುಷ್ಟಾಂತರಂಗನಾದ ಸನಕಋಷಿಯು ಭಕ್ತಿಯಿಂದ ಕೇಳಿ ವಿನೀತ ಭಾವದಿಂದ ನಮಸ್ಕರಿಸಿ ಪುನಃ ಸಕಲ ವೇದಗಳ ಸಾರವನ್ನು ಅಪ್ಪಣೆಕೊಡಿಸಬೇಕೆಂದು ಕೇಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯ ಪೂರ್ವಾರ್ಧದಲ್ಲಿ "ಬ್ರಹ್ಮ ವಿಷ್ಣು ಕೃತ ಶಿವಸ್ತೋತ್ರ — ಸ್ಥಾವರಲಿಂಗದ ಮಾಹಾತ್ಮ್ಯ ವರ್ಣನ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತೃತೀಯೋಽಧ್ಯಾಯಃ

**ಪಾರ್ವತ್ಯಾಃ ಶಿವನೇತ್ರನಿಮೀಲನೇನ ತನುಸಾ ಕ್ಷುಬ್ಧಲೋಕಭಯೇನ ಕಾಂಚ್ಯಾಂ ಕಂಪಾಸ್ಥಿತ್ಯೈಕಾಮ್ರತಲೇ ತಪಶ್ಚರ್ಯಾರ್ಥಮಾಗಮನಂ**

ಸನಕ ಉವಾಚ :—

ಭಗವನ್ನರುಣಾದ್ರೀಶಮಾಹಾತ್ಮ್ಯಮಿದಮುತ್ತಮಂ ।
ಶ್ರುತಂ ಶಿವಪ್ರಸಾದೇನ ದಯಯಾ ತೇ ಜಗದ್ಗುರೋಃ ॥ ೧ ॥
ಆಶ್ಚರ್ಯಮೇತನ್ಮಾಹಾತ್ಮ್ಯಂ ಸರ್ವಪಾಪವಿನಾಶನಂ ।
ಆರಾಧಯನ್ಪುನಃ ಕೇ ವಾ ವರದಂ ಶೋಣಪರ್ವತಂ ॥ ೨ ॥
ಅನಾದಿರಂತರಹಿತಃ ಶಿವಃ ಶೋಣಾಚಲಾಕೃತಿಃ ।
ಯುವಯೋಸ್ತಪಸಾ ದೇವ ವರದಾನಾಯ ಸಂಸ್ಥಿತಃ ॥ ೩ ॥
ಸಕೃತ್ಸಂಕೀರ್ತಿತೇ ನಾಮ್ನಿ ಶೋಣಾದ್ರಿರಿತಿ ಮುಕ್ತಿದೇ ।
ಸನ್ನಿಧಿಃ ಸರ್ವಕಾಮಾನಾಂ ಜಾಯತೇ ಚಾಘನಾಶನಂ ॥ ೪ ॥
ಶಿವಶಬ್ದಾಮೃತಾಸ್ವಾದಃ ಶಿವಾರ್ಚನಕಥಾಕ್ರಮಃ ।
ಇತಿ ತದ್ವಚನಂ ಶ್ರುತ್ವಾ ದೇವದೇವಃ ಪಿತಾಮಹಃ ।
ಉವಾಚ ಕರುಣಾಮೂರ್ತಿರರುಣಾದ್ರೀಶಮಾನಮನ್ ॥ ೫ ॥

---

### ಕನ್ನಡದ ಅನುವಾದ

**ಪಾರ್ವತಿಯು ಶಿವನ ನೇತ್ರಗಳನ್ನು ಮುಚ್ಚಲು ಅದರಿಂದ ಕತ್ತಲೆಕವಿದು ಲೋಕವೆಲ್ಲ ತತ್ತಳಿಸಿದ ಭಯದಿಂದ ಕಾಂಚೀಪುರದ ಸಮೀಪದಲ್ಲಿ ಕಂಪಾಕ್ಷೇತ್ರಕ್ಕೆ ಬಂದುದು**

೧. ಸನಕಮಹರ್ಷಿಯು ಕೇಳುತ್ತಾನೆ:—"ಷಡ್ಗುಣೈಶ್ವರ್ಯಪರಿಪೂರ್ಣನಾದ ಎಲೈ ಬ್ರಹ್ಮನೆ! ಶಿವನ ಪರಮಾನುಗ್ರಹದಿಂದಲೂ, ಜಗದ್ಗುರುವಾದ ನಿನ್ನ ದಯೆಯಿಂದಲೂ ಅರುಣಾಚಲೇಶ್ವರನ ಅದ್ಭುತ ಮಾಹಾತ್ಮ್ಯವನ್ನು ಕೇಳಿದೆನು.

೨. ಈ ಮಾಹಾತ್ಮ್ಯವು ಆಶ್ಚರ್ಯಯುಕ್ತವೂ ಸಕಲ ಪಾಪವಿಮೋಚಕವೂ ಆಗಿರುವುದು. ಪೂರ್ವದಲ್ಲಿ ಯಾರು ಯಾರು ಈ ಅರುಣಾಚಲೇಶ್ವರನನ್ನು ಪೂಜಿಸಿ ವರಗಳನ್ನು ಪಡೆದರು ?

೩. ಆದ್ಯಂತರಹಿತನಾದರೂ ನಿಮ್ಮಿಬ್ಬರ ತಪಸ್ಸಿಗೆ ತಕ್ಕ ಫಲವನ್ನು ಕೊಡುವವನಾಗಿ ಶಿವನು ಅರುಣಾಚಲ ರೂಪದಿಂದ ನಿಂತನು.

೪–೫. ಅರುಣಾಚಲೇಶ್ವರನೆಂಬ ಮುಕ್ತಿದಾಯಕವಾದ ನಾಮವನ್ನು ಒಂದುಸಲ ಉಚ್ಚರಿಸಿದ ಮಾತ್ರದಿಂದಲೇ ಸಕಲ ಕಾಮ್ಯಾರ್ಥಗಳೂ ಸಿದ್ಧಿಸುವುವು. ಶಿವನಾಮಾಮೃತಪಾನವೂ, ಶಿವಪೂಜಾವಿಧಿಯ ಅನುಸರಣವೂ ಸಮಸ್ತ ಪಾಪಗಳನ್ನೂ ಕಳೆಯುವುವು." ಈ ಮಾತುಗಳನ್ನು ಕೇಳಿ ದೇವೋತ್ತಮನಾದ ಚತುರ್ಮುಖನು ಕರುಣಾರ್ದ್ರಹೃದಯನಾಗಿ ಅರುಣಾಚಲೇಶ್ವರನನ್ನು ಮನಸ್ಸಿನಲ್ಲಿಯೇ ವಂದಿಸಿ ಹೇಳತೊಡಗಿದನು :—

ಬ್ರಹ್ಮೋವಾಚ :—
ಶ್ರೂಯತಾಂ ವತ್ಸ ಪಾರ್ವತ್ಯಾಶ್ಚರಿತಂ ಯತ್ಪುರಾತನಂ ।
ಅರುಣಾದ್ರೀಶಮಾಶ್ರಿತ್ಯ ಯಥಾ ಸಾ ನಿರ್ವೃತಾಭವತ್ ॥ ೬ ॥
ಆಸಸಾದ ಮಹಾದೇವಃ ಕದಾಚಿತ್ಪಾರ್ವತೀಪತಿಃ ।
ರತ್ನಸಿಂಹಾಸನಂ ದಿವ್ಯಂ ರತ್ನತೋರಣಸಂಯುತಂ ॥ ೭ ॥
ರತ್ನಪುಷ್ಪಫಲೋಪೇತ ಕಲ್ಪದ್ರುಮಮನೋಹರಂ ।
ಪರಾರ್ಧ್ಯದೃಷದಾಸ್ತೀರ್ಣಂ ಬದ್ಧಮುಕ್ತಾವಿತಾನಕಂ ॥ ೮ ॥
ವಿಮುಕ್ತ ಪುಷ್ಪಪ್ರಕರದಿವ್ಯಧೂಪೋರುಸೌರಭಂ ।
ಪ್ರಲಂಬಮಾಲಿಕಾಜಾಲನಿನದದ್ಭೃಂಗಸಂಕುಲಂ ॥ ೯ ॥
ದಿವ್ಯತೂರ್ಯಘನಾರಾವಪ್ರನೃತ್ಯದ್ಗುಹವಾಹನಂ ।
ಪಾರ್ವತೀಸಿಂಹಸಂಚಾರಪರಿತ್ರಸ್ತಮಹಾಗಜಂ ॥ ೧೦ ॥
ಅಪ್ಸರೋಭಿಃ ಪ್ರನೃತ್ತಾಭಿರ್ಗಾಯಂತೀಭಿಶ್ಚ ಕೇವಲಂ ।
ಆಸೇವಿತಪುರೋರಂಗಂ ದಿಕ್ಪಾಲಕನಿಷೇವಿತಂ ॥ ೧೧ ॥

---

೬. ಬ್ರಹ್ಮನು ಹೇಳುತ್ತಾನೆ:—"ಎಲೈ ಮಗನೆ! ಪೂರ್ವದಲ್ಲಿ ಒಮ್ಮೆ ಪಾರ್ವತಿಯು ಅಕಾರ್ಯವೊಂದನ್ನೆಸಗಿ ಅರುಣಾಚಲೇಶ್ವರನ ಆಶ್ರಯ ಪ್ರಭಾವದಿಂದ ಹೇಗೆ ಸುಖವನ್ನು ಹೊಂದಿದಳೆಂಬ ವೃತ್ತಾಂತವನ್ನು ಹೇಳುತ್ತೇನೆ. ಸಾವಧಾನವಾಗಿ ಕೇಳು.

೭–೮. ಒಂದಾನೊಂದು ಸಲ ಪಾರ್ವತೀಪತಿಯಾದ ಮಹೇಶ್ವರನು ದೇವ ಯೋಗ್ಯವಾಗಿಯೂ, ರತ್ನತೋರಣಗಳಿಂದಲಂಕೃತವಾಗಿಯೂ ಇದ್ದ ಸಿಂಹಾಸನ ದಲ್ಲಿ ಮಂಡಿಸಿದ್ದನು. ಆ ಪ್ರದೇಶವು ರತ್ನಮಯಗಳಾದ ಫಲ ಪುಷ್ಪಗಳಿಂದ ತುಂಬಿದ ಕಲ್ಪತರುಗಳಿಂದೊಡಗೂಡಿ, ಅನರ್ಘ್ಯ ಶಿಲಾವೇದಿಕೆಗಳಿಂದಲಂಕೃತ ವಾಗಿ, ಆಣಿಮುತ್ತುಗಳ ಗೊಂಚಲುಗಳಿಂದೊಪ್ಪುತ್ತಿದ್ದಿತು.

೯. ಗಿಡಗಳಿಂದ ಉದುರುತ್ತಿರುವ ಪುಷ್ಪಸಮೂಹದ ಮತ್ತು ದಿವ್ಯ ಧೂಪ ಗಳ ಸೌರಭಯುಕ್ತವೂ, ಉದ್ದವಾಗಿ ಓಲಾಡುತ್ತಿರುವ ಪೂಮಾಲೆಗಳಿಗೆರಗು ತ್ತಿರುವ ದುಂಬಿಗಳ ಝೇಂಕಾರದಿಂದ ಮನೋಹರವೂ ಆಗಿದ್ದಿತು.

೧೦. ದಿವ್ಯ ಮಂಗಳವಾದ್ಯಗಳ ಗಂಭೀರ ಶಬ್ದವನ್ನು ಕೇಳಿ ಷಣ್ಮುಖ ಸ್ವಾಮಿಯ ವಾಹನವಾದ ನವಿಲು ಕುಣಿದಾಡುತ್ತಿದ್ದಿತು. ಪಾರ್ವತಿಯ ಲೀಲಾ ಸಿಂಹದ ಸಂಚಾರದಿಂದ ಅಲ್ಲಿಯ ಗಜಗಳೆಲ್ಲವೂ ತ್ರಾಸವನ್ನು ಹೊಂದಿದ್ದವು.

೧೧. ನಾಟ್ಯವನ್ನೂ, ಗಾಯನವನ್ನೂ ಮಾಡುತ್ತಿದ್ದ ಅನೇಕ ಅಪ್ಸರ ಸ್ತ್ರೀಯರು ರಂಗಮಂಟಪವನ್ನು ಅಲಂಕರಿಸಿದ್ದರು. ಅಷ್ಟದಿಕ್ಪಾಲಕರೂ ತಮ್ಮ ತಮ್ಮ ಸ್ಥಾನಗಳಲ್ಲಿದ್ದರು.

ಋಗ್ಯಜುಸ್ಸಾಮಭಿರ್ಮಂತ್ರೈಃ ಸ್ತುವದ್ಭಿರ್ಮುನಿಪುಂಗವೈಃ ।
ಬ್ರಹ್ಮರ್ಷಿಭಿಸ್ತಥಾ ದೇವೈಃ ಸಿದ್ಧೈಃ ರಾಜರ್ಷಿಭಿರ್ವೃತಂ ॥ ೧೨ ॥
ಗಣೈಶ್ಚ ವಿವಿಧಾಕಾರೈರ್ಭಸ್ಮಾಲಂಕೃತ ವಿಗ್ರಹೈಃ ।
ರುದ್ರಾಕ್ಷಧಾರಸುಭಗೈರಾಪೂರ್ಣಂ ಶಿವತತ್ಪರೈಃ ॥ ೧೩ ॥
ವೀಣಾವೇಣುಮೃದಂಗಾದಿ ತೌರ್ಯತ್ರಿಕಜನಿಸ್ಸ್ವನೈಃ ।
ಘಂಟಾಟಂಕಾರ ಸುಭಗೈರ್ವೇದಧ್ವನಿವಿಮಿಶ್ರಿತೈಃ ॥ ೧೪ ॥
ಮನೋಹರಂ ಮಹಾದಿವ್ಯಮಾಸನಂ ಪಾರ್ವತೀಸಖಃ ।
ಅಲಂಚಕಾರ ಭಗವಾನ್ಭಕ್ತಾನುಗ್ರಹಕಾಮ್ಯಯಾ ॥ ೧೫ ॥
ಆಸ್ಥಾಯ ವಿಮಲಂ ರೂಪಂ ಸರ್ವತೇಜೋಮಯಂ ಶಿವಂ ।
ಅಂಬಿಕಾಸಹಿತಃ ಶ್ರೀಮಾನ್ವಿಜಹಾರ ದಯಾನಿಧಿಃ ॥ ೧೬ ॥
ಸಂಗೀತೇನ ಕಥಾಭೇದೈರ್ದ್ಯೂತಕ್ರೀಡಾವಿಕಲ್ಪನೈಃ ।
ಗಣಾನಾಂ ವಿಕಟೈರ್ನೃತ್ಯೈ ರಮಯಾಮಾಸ ಪಾರ್ವತೀಂ ॥ ೧೭ ॥
ವಿಸೃಜ್ಯ ಸಕಲಾನ್ದೇವಾನೃಷೀಂಶ್ಚಾಪಿ ಸಭಾಸದಃ ॥ ೧೮ ॥

---

೧೨–೧೩. ವೇದಮಂತ್ರಗಳಿಂದ ಸ್ತೋತ್ರಮಾಡುತ್ತಿರುವ ಮುನಿಶ್ರೇಷ್ಠರಿಂದಲೂ, ಬ್ರಹ್ಮರ್ಷಿಗಳು, ದೇವತೆಗಳು, ಸಿದ್ಧಚಾರಣರು ಮತ್ತು ರಾಜರ್ಷಿಗಳೇ ಮೊದಲಾದವರಿಂದ ಆ ಸಭಾಸ್ಥಾನವು ತುಂಬಿದ್ದಿತು. ಶಿವಸೇವಾತತ್ಪರರೂ, ಶರೀರದಲ್ಲಿ ಭಸ್ಮವನ್ನು ಧರಿಸಿದವರೂ, ರುದ್ರಾಕ್ಷಮಾಲಾಲಂಕೃತರೂ ಆದ ಪ್ರಮಥಗಣಗಳಿಂದ ಆ ಸಭಾಸ್ಥಾನವು ವಿರಾಜಿಸುತ್ತಿದ್ದಿತು.

೧೪–೧೫. ವೀಣಾ, ವೇಣು, ಮೃದಂಗವೇ ಮೊದಲಾದ ಮಂಗಳವಾದ್ಯಗಳ ಧ್ವನಿಯಿಂದಲೂ, ಘಂಟಾನಾದಗಳಿಂದಲೂ, ವೇದೋಚ್ಚಾರಣ ಧ್ವನಿಗಳಿಂದಲೂ ಮನೋಹರವಾದ ದಿವ್ಯಾಸನವನ್ನು ಪಾರ್ವತೀಪತಿಯಾದ ಪರಶಿವನು ಭಕ್ತರನ್ನು ಅನುಗ್ರಹಿಸುವ ವ್ಯಾಜದಿಂದ ಅಲಂಕರಿಸಿ ಕಂಗೊಳಿಸುತ್ತಿದ್ದನು.

೧೬. ದಯಾಮಯನಾದ ಆ ಮಹೇಶ್ವರನು ಪಾರ್ವತೀಸಮೇತನಾಗಿ ತೇಜೋಮಯವೂ, ಶಾಂತವೂ, ವಿಶುದ್ಧವೂ ಆದ ರೂಪವನ್ನು ಸ್ವೀಕರಿಸಿ ವಿಹರಿಸುತ್ತಿದ್ದನು.

೧೭. ಸಂಗೀತ, ನಾನಾವಿಧವಾದ ಇತಿಹಾಸ ಕಥನ, ಜೂಜಿನಾಟ, ಪ್ರಮಥಗಣಗಳ ವಿಕಟವಾದ ನೃತ್ಯಗಳು ಇವೇ ಮುಂತಾದುವುಗಳಿಂದ ಪರಮೇಶ್ವರನು ಪಾರ್ವತಿಯ ಮನಸ್ಸನ್ನು ಸಂತೋಷಗೊಳಿಸುತ್ತಿದ್ದನು.

೧೮–೧೯. ಬಳಿಕಲಾ ಶಿವನು ಸಕಲ ದೇವತೆಗಳನ್ನೂ ಬೀಳ್ಕೊಟ್ಟು ಭಕ್ತಕೋಟಿಗೆ ನಾನಾವಿಧವಾದ ವರಗಳನ್ನು ದಯೆಪಾಲಿಸಿ ಇಚ್ಛಾಸೃಷ್ಟಗಳೂ,

ವರಾನ್ಪ್ರದಾಯ ವಿವಿಧಾನ್ಭಕ್ತಲೋಕಾಯ ವಾಂಛಿತಾನ್ ।
ಆಗಮೇಷು ವಿಚಿತ್ರೇಷು ಸರ್ವರ್ತುಕುಸುಮೇಷುಚ ॥ ೧೯ ॥
ವಿಜಹಾರೋಮಯಾ ಸಾರ್ಧಂ ರತ್ನಪ್ರಾಸಾದಪಙ್ಕ್ತಿಷು ।
ವಾಪಿಕಾಸು ಮನೋಜ್ಞಾಸು ರತ್ನಸೋಪಾನ ಪಙ್ಕ್ತಿಷು ।
ಕೇಳೀಪರ್ವತಶೃಂಗೇಷು ಹೇಮರಂಭಾವನಾಂತರೇ ॥ ೨೦ ॥
ಗಂಗಾತರಂಗಶೀತೇನ ಫುಲ್ಲಪಂಕಜಗಂಧಿನಾ ॥ ೨೧ ॥
ವಾತೇನ ಮಂದಗತಿನಾ ವಿಹಾರವಿಗತಶ್ರಮಃ ।
ಸ್ವಕಾಮತಃ ಸ್ವಯಂ ದೇವಃ ಪ್ರೇಯಸೀಮಭ್ಯನಂದಯತ್ ॥ ೨೨ ॥
ರತಿರೂಪಾಂ ಶಿವಾಂ ದೇವೀಂ ಸರ್ವಸೌಭಾಗ್ಯಸುಂದರೀಂ ।
ಕದಾಚಿದ್ರಹಸಿ ಪ್ರೀತಂ ನಿಜಾಜ್ಞಾವಶವರ್ತಿನಂ ॥ ೨೩ ॥
ರಮಣಂ ಜಾನತೀ ಮುಗ್ಧಾ ಪಶ್ಚಾದಭ್ಯೇತ್ಯ ಸಾದರಂ ।
ಕರಾಭ್ಯಾಂ ಕಮಲಾಭಾಭ್ಯಾಂ ತ್ರಿಣೇತ್ರಾಣಿ ಜಗದ್ಗುರೋಃ ।
ಪಿದಧೇ ಲೀಲಯಾ ಶಂಭೋಃ ಕಿಮೇತದಿತಿ ಕೌತುಕಾತ್ ॥ ೨೪ ॥
ಚಂದ್ರಾದಿತ್ಯಾಗ್ನಿರೂಪೇಣ ಪಿಹಿತೇಷ್ವಕ್ಷಿಷು ಕ್ರಮಾತ್ ।
ಅಂಧಕಾರೋಽಭವತ್ತತ್ರ ಚಿರಕಾಲಂ ಭಯಂಕರಃ ॥ ೨೫ ॥

---

ವಿಚಿತ್ರಗಳೂ, ಸಕಲ ಋತುಗಳ ಫಲಗಳನ್ನೂ ಏಕಕಾಲದಲ್ಲಿಯೇ ಕೊಡುವಂಥ ವುಗಳೂ ಆದ ವೃಕ್ಷಗಳಿಂದ ಕೂಡಿದ ರತ್ನಸೌಧಗಳಲ್ಲಿ ಪಾರ್ವತಿಯೊಡನೆ ವಿಹರಿಸುತ್ತಿದ್ದನು.

೨೦. ಆತನು ಮನೋಜ್ಞಗಳಾದ ಈಜುಗೊಳಗಳಲ್ಲಿಯೂ, ರತ್ನಸೋಪಾನ ಸಮೂಹಗಳಲ್ಲಿಯೂ, ಕ್ರೀಡಾಪರ್ವತಗಳ ಕೋಡುಗಲ್ಲುಗಳಲ್ಲಿಯೂ, ಬಂಗಾರದ ಬಾಳೆಯ ಗಿಡಗಳ ವನದಲ್ಲಿಯೂ ರಾರಾಜಿಸುತ್ತಿದ್ದನು.

೨೧–೨೪. ಗಂಗಾಜಲ ಬಿಂದುಗಳಿಂದ ಶೀತಲವೂ, ಕಮಲಗಳ ಸುಗಂಧ ಯುಕ್ತವೂ ಆಗಿ ಮಂದವಾಗಿ ಬೀಸುತ್ತಿರುವ ಮಾರುತನಿಂದ ಶ್ರಮವನ್ನು ಕಳೆದುಕೊಂಡವನಾಗಿ ಆ ಪರಮೇಶ್ವರನು ಸ್ವೇಚ್ಛೆಯಿಂದಲೇ ಪ್ರೀತಿಪಾತ್ರಳೂ ರತಿಸುಂದರರೂಪಳೂ, ಸರ್ವಸೌಭಾಗ್ಯಸಂಪದ್ಯುಕ್ತಳೂ ಆದ ಪಾರ್ವತಿಯನ್ನು ಆನಂದಗೊಳಿಸಿದನು. ಒಂದು ಸಲ ಮುಗ್ಧೆಯಾದ ಪಾರ್ವತಿಯು ಗಂಡನನ್ನು ತನ್ನ ಆಜ್ಞಾಧಾರಕನನ್ನಾಗಿ ಮಾಡಿಕೊಂಡು ಅತ್ಯಂತ ಸಂತೋಷದಿಂದವನಲ್ಲಿನ ಪ್ರೀತಿ ಯಿಂದ ಅವನ ಹಿಂದೆ ಮೆಲ್ಲನೆ ಬಂದು ಕಮಲಸದೃಶಗಳಾದ ತನ್ನ ಕರಗಳಿಂದ ಜಗದ್ಗುರುವಾದ ಆ ಶಂಕರನ ತ್ರಿನೇತ್ರಗಳನ್ನೂ ಮುಚ್ಚಿ ಹಿಡಿದುಕೊಂಡಳು.

೨೫. ಸೂರ್ಯ, ಚಂದ್ರ ಮತ್ತು ಅಗ್ನಿರೂಪಗಳಾದ ಆ ಮೂರು ನೇತ್ರ

ನಿಮಿಷಾರ್ಧೇನ ದೇವಸ್ಯ ಜಗ್ಮುರ್ವತ್ಸರ ಕೋಟಯಃ ।
ದೇವೀ ಲೀಲಾಸಮುತ್ಥೇನ ತಮಸಾಭೂಜ್ಜಗಕ್ಷಯಃ ॥ ೨೬ ॥
ತಮಸಾ ಪೂರಿತಂ ವಿಶ್ವಮಪಾರೇಣ ಸಮಂತತಃ ।
ಶೂನ್ಯಂ ಜ್ಯೋತಿಃ ಪ್ರಚಾರೇಣ ವಿನಾಶಂ ಪ್ರತ್ಯಪದ್ಯತ ॥ ೨೭ ॥
ನ ವ್ಯಜೃಂಭಂತ ವಿಬುಧಾ ನ ಚ ವೇದಾಶ್ಚಕಾಶಿರೇ ।
ನಾಪಿ ಜೀವಾಸ್ಸಮಭವನ್ ಅವ್ಯಕ್ತಂ ಕೇವಲಂ ಸ್ಥಿತಂ ॥ ೨೮ ॥
ಜಗತಾಮಪಿ ಸರ್ವೇಷಾಮಕಾಲೇ ವೀಕ್ಷ್ಯ ಸಂಕ್ಷಯಂ ॥ ೨೯ ॥
ತಪಸಾ ಲಬ್ಧಸ್ಫೂರ್ತಿನಾಂ ವಿಚಾರಃ ಸಮಪದ್ಯತ ।
ಕಿಮೇತತ್ತಮಸೋ ಜನ್ಮ ಭುವನಕ್ಷಯ ಕಾರಣಂ ॥ ೩೦ ॥
ಭಗವಾನಪಿ ಸರ್ವಾತ್ಮಾ ನ ನೂನಂ ಕಾಲಮಾಕ್ಷಿಪತ್ ।
ದೇವೀ ವಿನೋದರೂಪೇಣ ಪಿಧತ್ತೇ ಪುರಜಿದ್ದೃಶಃ ॥ ೩೧ ॥

---

ಗಳನ್ನೂ ಪಾರ್ವತಿಯು ಮುಚ್ಚಲು ಕೆಲವು ಕಾಲ ಭಯಂಕರವಾದ ಅಂಧಕಾರ ಉಂಟಾಯಿತು.

೨೬. ಪರಮೇಶ್ವರನ ಲೀಲೆಯ ನಿಮಿಷಾರ್ಧವೆ ಪ್ರಪಂಚದ ಕಾಲಮಾನದಿಂದ ಕೋಟಿಕೋಟಿ ಸಂವತ್ಸರಗಳಾಗಿ ಪರಿಣಮಿಸಿತು. ಗಿರಿಜೆಯು ಪ್ರೇಮ ಚೇಷ್ಟೆಯಿಂದುಂಟಾದ ತಮಸ್ಸಿನಿಂದ ಲೋಕಗಳ ಸಂಕ್ಷಯವೇ ಉಂಟಾಯಿತು.

೨೭. ಬ್ರಹ್ಮಾಂಡವು ಎಲ್ಲೆಡೆಯಲ್ಲಿಯೂ ಅಪಾರವಾದ ತಮಸ್ಸಿನಿಂದ ವ್ಯಾಪಿಸಲ್ಪಟ್ಟಿತು; ಸೂರ್ಯ ಚಂದ್ರಾದಿ ಜ್ಯೋತಿಗಳ ಅಭಾವದಿಂದ ವಿನಾಶವನ್ನೇ ಹೊಂದಿತು.

೨೮. ಮಹರ್ಷಿಗಳು ಪ್ರಕಾಶಹೀನರಾದರು. ವೇದಗಳು ಶಕ್ತಿಹೀನಗಳಾದುವು. ನಾನಾ ವಿಧಗಳಾದ ಜೀವರಾಶಿಗಳೂ ಲಯವನ್ನು ಹೊಂದಿದುವು. ಎಲ್ಲವೂ ಕೇವಲ ಅವ್ಯಕ್ತವಾಗಿಯೇ ಅವಶಿಷ್ಟವಾಯಿತು.

೨೯-೩೦. ಆಗ ತಪಃಪ್ರಭಾವದಿಂದ ಜ್ಞಾನವನ್ನು ಪಡೆದ ಋಷಿಶ್ರೇಷ್ಠರೆಲ್ಲರೂ ಒಂದೆಡೆ ಕೂಡಿದವರಾಗಿ ಈ ಅಕಾಲದಲ್ಲಿ ಉಂಟಾದ ಲೋಕಸಂಕ್ಷಯವನ್ನು ಕುರಿತು ಇದರ ಕಾರಣವೇನೆಂದು ಯೋಚಿಸತೊಡಗಿದರು :—"ಲೋಕಕ್ಷಯಕಾರಕವಾದ ಈ ಅಂಧತಮಸ್ಸು ಯಾವ ಕಾರಣದಿಂದುಂಟಾಗಿರಬಹುದು ?"

೩೧. ಸರ್ವರ ಹೃದಯಗಳಲ್ಲಿ ಅಂತರ್ಯಾಮಿಯಾದ ಭಗವಂತನು ನಿಜವಾಗಿಯೂ ಕಾಲವನ್ನು ಸಂಹಾರಮಾಡಲಿಲ್ಲ. ಪಾರ್ವತಿಯೇ ಹುಡುಗಾಟಿಕೆಯಿಂದ ಪರಮೇಶ್ವರನ ತ್ರಿನೇತ್ರಗಳನ್ನು ಮುಚ್ಚಿರುತ್ತಾಳೆ.

ತೇನೇದಮಖಿಲಂ ಜಾತಂ ನಿಸ್ತೇಜೋ ಭುವನತ್ರಯಂ ।
ಅಕಾಲ ತಮಸಾ ವ್ಯಾಪ್ತೇ ಸಕಲೇ ಭುವನತ್ರಯೇ ॥ ೩೨ ॥
ಕಾಗತಿರ್ಲಬ್ಧರಾಜ್ಯಾನಾಂ ತಪಸಾ ದೇವಜನ್ಮನಾಂ ।
ನ ಯಜ್ಞಾಃ ಸಂಪ್ರವರ್ತಂತೇ ನ ಪೂಜ್ಯಂತೇ ಸುರಾ ಭುವಿ ॥ ೩೩ ॥
ಇತಿ ನಿಶ್ಚಿತ್ಯ ಮನಸಾ ವೀಕ್ಷ್ಯತೇ ಜ್ಞಾನಚಕ್ಷುಷಾ ।
ನಿತ್ಯಾಸ್ತೇ ಸೂರಯೋ ಭಕ್ತ್ಯಾ ಶಂಭುಮಾನಮ್ಯ ತುಷ್ಟುವುಃ ॥ ೩೪ ॥
ನಮಸ್ಸರ್ವಜಗತ್ಕರ್ತ್ರೇ ಶಿವಾಯ ಪರಮಾತ್ಮನೇ ।
ಮಾಯಯಾ ಶಕ್ತಿರೂಪೇಣ ಪೃಥಗ್ಭಾವಮುಪೇಯುಷೇ ॥ ೩೫ ॥
ಅವಿನಾಭಾವಿನೀ ಶಕ್ತಿರಾದ್ಯೈಕಾ ಶಿವರೂಪಿಣೀ ।
ಲೀಲಯಾ ಜಗದುತ್ಪತ್ತಿರಕ್ಷಾಸಂಹೃತಿಕಾರಿಣೀ ॥ ೩೬ ॥
ಅರ್ಧಾಂಗೀ ಸಾ ತವ ದೇವ ಶಿವ ಶಕ್ತ್ಯಾತ್ಮಕಂ ವಪುಃ ।
ಏಕ ಏವ ಮಹಾದೇವೋ ನ ಪರೋ ತ್ವದ್ವಿನಾ ವಿಭೋ ॥ ೩೭ ॥

---

೩೨–೩೩. ಅದರಿಂದಲೇ ನಿಶ್ಶೇಷವಾದ ಲೋಕತ್ರಯವೂ ತೇಜೋಹೀನವಾಗಿರುವುದು. ಈ ರೀತಿಯಾದ ಅಕಾಲದ ಸಂಕ್ಷಯದಿಂದ ಲೋಕವು ವ್ಯಾಪ್ತವಾಗಲು ತಪಸ್ಸನ್ನು ಮಾಡಿ ರಾಜ್ಯಗಳನ್ನೂ ದೇವತಾಸ್ಥಾನಗಳನ್ನೂ ಪಡೆದಿರುವವರ ಗತಿಯೇನು? ಭೂಮಿಯಲ್ಲಿ ಯಜ್ಞಯಾಗಾದಿ ಕರ್ಮಗಳು ನಡೆಯಲಾರವು. ಭೂಲೋಕದಲ್ಲಿ ದೇವತೆಗಳ ಪೂಜೆಯೂ ಸಹ ನಡೆಯುವುದಿಲ್ಲ.''

೩೪. ಜ್ಞಾನದೃಷ್ಟಿಯಿಂದ ನಡೆದ ವಿಚಾರವನ್ನೆಲ್ಲ ಆದ್ಯಂತಸಹಿತವಾಗಿ ತಿಳಿದ ನಿತ್ಯಸಿದ್ಧರಾದ ಮಹರ್ಷಿಗಳು ಮನಸ್ಸಿನಲ್ಲಿಯೇ ಈ ರೀತಿ ಚಿಂತಿಸಿ ಭಕ್ತಿಯಿಂದ ನಮಸ್ಕಾರಪೂರ್ವಕವಾಗಿ ಪರಮಶಿವನನ್ನು ಸ್ತೋತ್ರಮಾಡಿದರು.

೩೫. ''ಸಕಲ ಲೋಕಗಳಿಗೆ ಉತ್ಪತ್ತಿಕಾರಣನೂ ಪರಾತ್ಪರನಾದರೂ ಮಾಯೆಯೆಂಬ ತನ್ನ ಶಕ್ತಿಯ ಸಹಾಯದಿಂದ ಭಿನ್ನ ಭಿನ್ನ ರೂಪಗಳನ್ನು ಧರಿಸಿದವನೂ ಆದ ಶಿವನಿಗೆ ನಮಸ್ಕಾರವು.

೩೬. ನಿನ್ನ ರೂಪದಿಂದ ಅಭಿನ್ನವಾಗಿ ಆದಿಯಿಂದಲೂ ಏಕರೂಪವಾಗಿರುವ ನಿನ್ನ ಶಕ್ತಿಯೇ ಲೀಲಾಮಾತ್ರದಿಂದ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಗಳನ್ನು ಮಾಡುತ್ತದೆ.

೩೭. ಆ ಶಕ್ತಿಯೇ ನಿನ್ನ ಅರ್ಧಾಂಗಿಯಾದ ಪಾರ್ವತಿಯು. ಹಾಗೂ ನಿನ್ನ ಶರೀರವು ಶಿವಶಕ್ತ್ಯಾತ್ಮಕವಾಗಿರುವುದು. ಮಹಾದೇವನಾದ ನಿನ್ನನ್ನು ಬಿಟ್ಟರೆ ಮತ್ತೊಂದು ಪರದೈವವಾವುದೂ ಇರುವುದಿಲ್ಲವು.

ಲೀಲಯಾ ತವ ಲೋಕೋಽಯಮಕಾಲೇ ಪ್ರಳಯಂಗತಃ ।
ಕರುಣಾ ತವ ನಿರ್ವ್ಯಾಜಾ ವರ್ಧತಾಂ ಲೋಕವರ್ಧನೀ ॥ ೩೮ ॥
ಭವತೋ ನಿಮಿಷಾರ್ಧೇನ ತೇಜಸಾಮುಪಸಂಹೃತೇಃ ।
ಗತಾನ್ಯನೇಕವರ್ಷಾಣಿ ಜಗತಾಂ ನಾಶಹೇತವೇ ॥ ೩೯ ॥
ತತಃ ಪ್ರಸೀದ ಕರುಣಾಮೂರ್ತೇ ಕಾಲ ಸದಾಶಿವ ।
ವಿರಮ ಪ್ರಣಯಾರಬ್ಧಾದಮುಷ್ಮಾಲ್ಲೋಕ ಸಂಕ್ಷಯಾತ್ ॥ ೪೦ ॥
ಇತಿತೇಷಾಂ ವಚಃ ಶ್ರುತ್ವಾ ಭಕ್ತಾನಾಂ ಸಿದ್ಧಿಶಾಲಿನಾಂ ।
ವಿಸೃಜಾಕ್ಷಿಣೀ ಗೌರೀತಿ ಕರುಣಾಮೂರ್ತಿರಬ್ರವೀತ್ ॥ ೪೧ ॥
ವಿಸಸರ್ಜ ಚ ಸಾ ದೇವೀ ಪಿಧಾನಂ ಹರಚಕ್ಷುಷಾಂ ।
ಸೋಮಸೂರ್ಯಾಗ್ನಿರೂಪಾಣಾಂ ಪ್ರಕಾಶಮಭವಜ್ಜಗತ್ ॥ ೪೨ ॥
ಕಿಯಾನ್ಕಾಲೋ ಗತಶ್ಚೇತಿ ಪೃಷ್ಟೈಃ ಸಿದ್ಧೈಶ್ಚ ನೈ ನತೈಃ ।
ಉಕ್ತಂ ತ್ವನ್ನಿಮಿಷಾರ್ಧೇನ ಜಗ್ಮುರ್ವತ್ಸರಕೋಟಯಃ ॥ ೪೩ ॥

---

೩೮. ನಿನ್ನ ಪ್ರೇಮಲೀಲೆಯೆಂಬ ವ್ಯಾಜದಿಂದ ಈ ಅಕಾಲದಲ್ಲಿ ಲೋಕವು ಪ್ರಳಯವನ್ನು ಹೊಂದಿತು. ಆದುದರಿಂದ ನಿರ್ವ್ಯಾಜವಾದ ನಿನ್ನ ಕೃಪಾಕಟಾಕ್ಷವು ಲೋಕದ ಸೃಷ್ಟಿಕಾಲದಲ್ಲಿ ಪ್ರವರ್ತಿಸಲಿ.

೩೯. ಕ್ಷಣಕಾಲದ ನಿನ್ನ ತೇಜಸ್ಸಿನ ಉಪಸಂಹಾರದಿಂದ ಅನೇಕವರ್ಷಗಳ ಜಗನ್ನಾಶವೇ ಉಂಟಾಗಿರುವುದು.

೪೦. ಎಲೈ ಕಾಲಾತ್ಮಕನಾದ ಸದಾಶಿವನೆ! ಕರುಣಾಸಮುದ್ರನಾದ ನೀನು ಪ್ರಸನ್ನನಾಗಿ ಪ್ರೇಮದಿಂದ ಉತ್ಪನ್ನವಾದ ಈ ಲೋಕಕ್ಷಯದಿಂದ ನಿವೃತ್ತನಾಗು.”

೪೧. ಹೀಗೆ ಸ್ತುತಿಸುತ್ತಿರುವ ಭಕ್ತರ ವಾಕ್ಯವನ್ನು ಕೇಳಿ ಸಿದ್ಧಪುರುಷರಾದ ಅವರಲ್ಲಿ ಕರುಣವುಳ್ಳವನಾಗಿ ‘ಎಲೈ ಗೌರಿಯೆ! ನನ್ನ ಕಣ್ಣುಗಳನ್ನು ಬಿಡು’ ಎಂದು ಹೇಳಿದನು.

೪೨. ಅಂತೆಯೇ ಪಾರ್ವತಿಯೂ ಕೂಡ ಪರಶಿವನ ಸೂರ್ಯಚಂದ್ರಾಗ್ನಿರೂಪಗಳಾದ ನೇತ್ರಗಳನ್ನು ಬಿಟ್ಟಳು. ಆ ಕ್ಷಣದಲ್ಲಿ ಜಗದಾಂಧ್ಯವು ನಾಶವಾಗಿ ಎಲ್ಲವೂ ಪ್ರಕಾಶಮಯವಾಗಿ ಕಂಡಿತು.

೪೩. ಬಳಿಕ ಮಹಾದೇವನು ಎಷ್ಟುಕಾಲವು ಕಳೆಯಿತೆಂದು ಪ್ರಶ್ನೆಮಾಡಲು ಪ್ರಾಂಜಲಿಪುಟರಾದ ಸಿದ್ಧರು, “ಸ್ವಾಮಿ! ನಿನ್ನ ಕಾಲಮಾನದಲ್ಲಿ ನಿಮಿಷಮಾತ್ರವಾದರೂ ಪ್ರಪಂಚದಲ್ಲಿ ಅನೇಕ ಕೋಟಿ ಸಂವತ್ಸರುಗಳು ಕಳೆದುಹೋದುವು” ಎಂದು ತಿಳಿಸಿದರು.

ಅಥ ದೇವಃ ಕೃಪಾಮೂರ್ತಿರಾಲೋಕ್ಯ ವಿಹಸನ್ಪ್ರಿಯಾಂ ।
ಅಬ್ರವೀತ್ಪರಮೋದಾರಃ ಪರಂ ಧರ್ಮಾರ್ಥಸಂಗ್ರಹಂ ॥ ೪೪ ॥
ಅವಿಚಾರ್ಯ ಕೃತಂ ಮುಗ್ಧೇ ಭುವನಕ್ಷಯಕಾರಣಾತ್ ।
ಅಯುಕ್ತಮಿಹ ಪಶ್ಯಾಮಿ ಜಗನ್ಮಾತುಸ್ತ್ವಯೈವಹಿ ॥ ೪೫ ॥
ಅಹಮಪ್ಯಖಿಲಾನ್ಲೋಕಾನ್ಸಂಹರಿಷ್ಯಾಮಿ ಸಂಕ್ಷಯೇ ।
ಪ್ರಾಪ್ತೇ ಕಾಲೇ ತ್ವಯಾ ಮೌಗ್ಧ್ಯಾದಕಾಲೇ ಪ್ರಳಯಂಗತಾಃ ॥ ೪೬ ॥
ಕೇಯಂ ವಾ ತಾದೃಶೀ ಕುರ್ಯಾದೀದೃಶಂ ಸದ್ವಿಗರ್ಹಿತಂ ।
ಕರ್ಮ ನರ್ಮಣ್ಯಪಿ ಸದಾ ಕೃಪಾಮೂರ್ತಿರ್ನಬಾಧತೇ ॥ ೪೭ ॥
ಇತಿ ಶಂಭೋರ್ವಚಃ ಶ್ರುತ್ವಾ ಧರ್ಮಲೋಪಭಯಾಕುಲಾ ।
ಕಿಂ ಕರಿಷ್ಯಾಮಿ ತಚ್ಛಾಂತ್ಯೈ ಇತ್ಯಪೃಚ್ಛತ್ಸ್ವ ತಂ ಪ್ರಿಯಾ ॥ ೪೮ ॥
ಅಥ ದೇವಃ ಪ್ರಸನ್ನಾತ್ಮಾ ವ್ಯಾಜಹಾರ ದಯಾನಿಧಿಃ ।
ದೇವ್ಯಾಸ್ತೇನಾನುತಾಪೇನ ಭಕ್ತ್ಯಾಚ ತೋಷಿತಃ ಶಿವಃ ॥ ೪೯ ॥

---

೪೪. ಆಗ ಉದಾರಚರಿತನೂ, ಕೃಪಾಸಮುದ್ರನೂ ಆದ ಪರಮೇಶ್ವರನು ಪಾರ್ವತಿಯನ್ನು ಕುರಿತು ಗಟ್ಟಿಯಾಗಿ ನಕ್ಕು, ಧರ್ಮೋಪೇತವಾದ ಮಾತುಗಳನ್ನಾಡಿದನು.

೪೫. "ಎಲೈ ಉಮೆಯೆ! ನೀನು ಜಗನ್ಮಾತೆಯಾದರೂ ಮುಗ್ಧೆಯಾಗಿ ಪೂರ್ವಾಪರ ವಿವೇಚನೆಯಿಲ್ಲದೆ ಲೋಕದ ಕ್ಷಯವನ್ನೇ ಮಾಡಿದೆ! ನಿನ್ನ ಈ ಕಾರ್ಯವು ತುಂಬ ಅಯುಕ್ತವು!!

೪೬. ನಾನಾದರೋ ಕಾಲವನ್ನರಿತು ಪ್ರಳಯ ಸಮಯದಲ್ಲಿ ಸಕಲ ಲೋಕಗಳನ್ನು ಉಪಸಂಹರಿಸುತ್ತೇನೆ. ಆದರೆ ನೀನು ಅಕಾಲದಲ್ಲಿ ಲೋಕಕ್ಷಯವನ್ನುಂಟುಮಾಡಿರುವೆ.

೪೭. ನಿನ್ನಂತಹ ಉತ್ತಮಳು ಯಾವಳುತಾನೇ ಪರಿಹಾಸಕ್ಕಾದರೂ ಇಂತಹ ಲೋಕನಿಂದ್ಯವಾದ ಕರ್ಮವನ್ನು ಮಾಡಲೆಳಸುವಳು? ಆದರೂ ಕೃಪಾಮೂರ್ತಿಯಾದವನು ಯಾರನ್ನೂ ಬಾಧಿಸುವುದಿಲ್ಲ.

೪೮. ಈ ರೀತಿಯಾದ ಮಾತುಗಳನ್ನು ಸದಾಶಿವನಿಂದ ಕೇಳಿ ಧರ್ಮವ್ಯತಿಕ್ರಮದಿಂದ ಭಯಗೊಂಡವಳಾದ ಗಿರಿಜೆಯು ಗಂಡನನ್ನು ಕುರಿತು "ಈ ದೋಷಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದೆಂತು?" ಎಂದು ಬೆಸಗೊಂಡಳು.

೪೯. ಆಗ ಪಾರ್ವತಿಯ ಪಶ್ಚಾತ್ತಾಪದಿಂದಲೂ, ಭಕ್ತಿಯಿಂದಲೂ ಸಂತುಷ್ಟಾಂತರಂಗನಾದ ಶಿವನು ಪ್ರಸನ್ನನಾಗಿ ದಯೆಯಿಂದೊಡಗೂಡಿದ ವಾಕ್ಯಗಳನ್ನು ಈ ರೀತಿ ಹೇಳಿದನು.

ಮನ್ಮೂರ್ತೇಸ್ತವ ಕೋಯಂ ವಾ ಪ್ರಾಯಶ್ಚಿತ್ತಿರಿಹೋಚ್ಯತೇ ।
ಅಥಾಪಿ ಧರ್ಮಮಾರ್ಗೋಽಯಂ ತ್ವಯ್ಯೈವ ಪರಿಪಾಲ್ಯತೆ ॥ ೫೦ ॥
ಶ್ರುತಿಸ್ಮೃತಿಕ್ರಿಯಾಕಲ್ಪಾ ವಿದ್ಯಾಶ್ಚ ವಿಬುಧಾದಯಃ ।
ತ್ವದ್ರೂಪಮೇತದಖಿಲಂ ಮಹದರ್ಥೋಽಸ್ಮಿ ತನ್ಮಹಃ ॥ ೫೧ ॥
ಮಾನ್ಯಾಯಾಭಿನ್ನಯಾ ದೇವ್ಯಾ ಭಾವ್ಯಂ ಲೋಕಸಿಸೃಕ್ಷಯಾ ।
ತಸ್ಮಾಲ್ಲೋಕಾನುರೂಪಂ ತೇ ಪ್ರಾಯಶ್ಚಿತ್ತಂ ವಿಧೀಯತೆ ॥ ೫೨ ॥
ಷಡ್ವಿಧೋ ಗದಿತೋ ಧರ್ಮಃ ಶ್ರುತಿಸ್ಮೃತಿ ವಿಚಾರತಃ ॥ ೫೩ ॥
ಸ್ವಾಮಿನಾ ನಾನುಪಾಲ್ಯೇತ ಯದಿ ತ್ಯಾಜ್ಯೋಽನುಜೀವಿಭಿಃ ।
ನ ತ್ವಾಂ ವಿಹಾಯ ಶಕ್ನೋಮಿ ಕ್ಷಣಮಪ್ಯಾಸಿತುಂ ಕ್ವಚಿತ್ ॥ ೫೪ ॥
ಅಹಮೇವ ತಪಸ್ಸರ್ವಂ ಕರಿಷ್ಯಾಮ್ಯಾತ್ಮನಿ ಸ್ಥಿತಃ ।
ಪೃಥ್ವೀ ಚ ಸಕಲಾ ಭಯಾತ್ತಪಸಾ ಸಫಲಾ ತವ ॥ ೫೫ ॥
ತ್ವತ್ಪಾದಪದ್ಮ ಸಂಸ್ಪರ್ಶಾತ್ತ್ವತ್ತಪೋದರ್ಶನಾದಪಿ ।
ನಿರಸ್ಯಂತಿ ಸ್ವಸಾನ್ನಿಧ್ಯಾದ್ದುಷ್ಟಜಾತಮುಪದ್ರವಂ ।
ಕರ್ಮಭೂಮೇಸ್ತ್ವಮಾಧಿಕ್ಯಹೇತವೇ ಪುಣ್ಯಮಾಚರ ॥ ೫೬ ॥

---

೫೦. "ಎಲೈ ಮೃಡಾಣಿಯೆ! ನನ್ನ ಅಪರೂಪಳಾದ ನಿನಗೆ ಯಾವ ವಿಧವಾದ ಪ್ರಾಯಶ್ಚಿತ್ತವು ತಾನೆ ವಿಹಿತವಾಗಿದೆ? ಹಾಗೂ ನಿನ್ನ ಆಜ್ಞಾರೂಪವಾದ ಧರ್ಮಮಾರ್ಗವನ್ನು ನೀನೇ ಪಾಲಿಸಲು ಇಚ್ಛಿಸುತ್ತಿರುವೆ.

೫೧–೫೨. ಶ್ರುತಿಗಳು, ಸ್ಮೃತಿಗಳು, ಕ್ರಿಯಾಕಲ್ಪಗಳು ಮುಂತಾದ ಸಕಲ ವಿದ್ಯೆಗಳೂ ನಿನ್ನ ರೂಪಗಳೇ ಆಗಿವೆ. ನಾನೂ ಕೂಡ ಇವುಗಳ ಗೂಢಾರ್ಥವೇ ಆಗಿರುವೆನು. ನನ್ನಿಂದ ಅಭಿನ್ನಳೂ ಮಾನ್ಯಳೂ ಆದ ಲೋಕದ ಸೃಷ್ಟಿಗೆ ಉನ್ಮುಖಳಾದ ನಿನ್ನಿಂದಲೇ ಪ್ರಾಯಶ್ಚಿತ್ತವು ನಡೆಯಲ್ಪಡಬೇಕು. ಆದುದರಿಂದ ಲೋಕಮರ್ಯಾದೆಯನ್ನನುಸರಿಸಿ ನಿನಗೆ ಪ್ರಾಯಶ್ಚಿತ್ತವನ್ನು ವಿಧಿಸುತ್ತೇನೆ.

೫೩–೫೪. ಶ್ರುತಿ ಸ್ಮೃತಿಗಳನ್ನು ವಿಚಾರಿಸಿ ನೋಡಿದಲ್ಲಿ ಧರ್ಮವು ಆರು ವಿಧಗಳುಳ್ಳದ್ದಾಗಿ ತಿಳಿಯಬೇಕು. ಸ್ವಾಮಿಯೇ ಪಾಲನಮಾಡದ ಧರ್ಮಗಳನ್ನು ಅವರ ಅನುಯಾಯಿಗಳೂ ಅನುಸರಿಸುವುದೇ ಇಲ್ಲ. ಆದರೂ ನಿನ್ನನ್ನಗಲಿ ನಾನು ಕ್ಷಣಮಾತ್ರವೂ ಇರಲಾರೆನು. ಆದುದರಿಂದ ನಾನೇ ಆತ್ಮಸಂಸ್ಥನಾಗಿ ಈ ಕಾರ್ಯದ ಪ್ರಾಯಶ್ಚಿತ್ತವನ್ನು ನಿಶ್ಶೇಷವಾಗಿ ಮಾಡುತ್ತೇನೆ.

೫೫. ನಿನ್ನ ತಪಸ್ಸಿನಿಂದಲೂ ಅದರ ಸಂದರ್ಶನದಿಂದಲೂ ನಿನ್ನ ಪಾದಕಮಲಗಳ ಸಂಸ್ಪರ್ಶದಿಂದಲೂ ಭೂಲೋಕವು ಪವಿತ್ರವಾಗಲಿ.

೫೬. ನಿನ್ನ ಸಾನ್ನಿಧ್ಯವಿಶೇಷದಿಂದ ಜನರು ತಮ್ಮ ದೋಷಗಳಿಂದುಂಟಾದ ಉಪದ್ರವಗಳನ್ನೆಲ್ಲ ಕಳೆದುಕೊಳ್ಳುವರು. ಆದುದರಿಂದ ನೀನು ಕರ್ಮಭೂಮಿಯಾದ ಭರತವರ್ಷದ ಪುಣ್ಯವನ್ನು ಹೆಚ್ಚಿಸುವ ನೆವದಿಂದ ತಪಸ್ಸನ್ನು ಮಾಡು.

ತ್ವತ್ತಪಶ್ಚರಣಂ ಲೋಕೇ ವಿಕ್ಷ್ಯ ಸರ್ವೋಽಪಿ ಸಂತತಂ ।
ಧರ್ಮೇ ದೃಢತರಾಂ ಬುದ್ಧಿಂ ನಿಬಧ್ನೀಯಾನ್ನ ಸಂಶಯಃ ॥ ೫೭ ॥
ಕೃತಾರ್ಥಯಿಷ್ಯತಿ ಮಹೀಂ ದಯಾ ತೇ ಧರ್ಮಪಾಲನೈಃ ।
ತ್ವಯ್ಯೈವ ಸಕಲಾ ಪ್ರೋಕ್ತಾ ವೇದೈರ್ದೇವಿ ಸನಾತನೈಃ ॥ ೫೮ ॥
ಅಸ್ತಿ ಕಾಂಚೀ ಪುರೀ ಖ್ಯಾತಾ ಸರ್ವಭೂತಿಸಮನ್ವಿತಾ ।
ಯಾ ದಿವಂ ದೇವಸಂಪೂರ್ಣಾಂ ಪ್ರತ್ಯಕ್ಷಯತಿ ಭೂತಲೇ ॥ ೫೯ ॥
ಯತ್ರಾಲ್ಪಂ ತಪಃ ಕಿಂಚಿದನಂತಫಲಮುಚ್ಯತೇ ।
ದೇವಾಶ್ಚ ಮುನಯಃ ಸರ್ವೇ ವಾಸಂ ವಾಂಛಂತಿ ಸಂತತಂ ॥ ೬೦ ॥
ತತ್ರ ಕಂಪೇತಿ ವಿಖ್ಯಾತಾ ಮಹಾಪಾತಕನಾಶಿನೀ ।
ಯತ್ರ ಸ್ಥಿತಾನಾಂ ಮರ್ತ್ಯಾನಾಂ ಕಂಪಂತೇ ಪಾಪಕೋಟಯಃ ॥ ೬೧ ॥
ತತ್ರ ಚೂತದ್ರುಮಶ್ಚೈಕೋ ರಾಜತೇ ನಿತ್ಯಪಲ್ಲವಃ ।
ಸಂಪೂರ್ಣಶೀತಲಚ್ಛಾಯಃ ಪ್ರಸೂನಫಲಪಲ್ಲವೈಃ ॥ ೬೨ ॥

---

೫೭. ನಿನ್ನ ತಪಸ್ಸನ್ನು ನೋಡಿ ಸದಾ ಕಾಲದಲ್ಲಿಯೂ ಜನರು ಧರ್ಮಾಚರಣೆಯಲ್ಲಿ ದೃಢವಾದ ಆಸಕ್ತಿಯುಳ್ಳವರಾಗುವರು. ಇದರಲ್ಲಿ ಸಂಶಯವಿಲ್ಲವು.

೫೮. ನಿನ್ನ ದಯೆಯೆಂಬುದು ಧರ್ಮಪಾಲನದ ವ್ಯಾಜದಿಂದ ಭೂಮಿಯನ್ನೇ ಕೃತಾರ್ಥವನ್ನಾಗಿ ಮಾಡುತ್ತದೆ. ನಿನ್ನಿಂದಲೇ ಈ ಧರ್ಮರಹಸ್ಯವೆಲ್ಲವೂ ಸನಾತನಗಳಾದ ವೇದಗಳಲ್ಲಿ ಹೇಳಲ್ಪಟ್ಟಿವೆ.

೫೯. ಭೂಲೋಕದಲ್ಲಿ ಕಾಂಚಿಯೆಂಬ ಪ್ರಖ್ಯಾತವಾದ ಕ್ಷೇತ್ರವು ಸಕಲ ಐಶ್ವರ್ಯಗಳಿಂದ ತುಂಬಿರುವುದು. ಅದು ದೇವತೆಗಳಿಂದ ತುಂಬಿದ ಸ್ವರ್ಗವನ್ನೇ ಭೂಮಿಯಲ್ಲಿ ಪ್ರತ್ಯಕ್ಷಗೊಳಿಸುತ್ತಿರುವಂತಿರುವುದು.

೬೦. ಅಲ್ಲಿ ಆಚರಿಸಿದ ಸ್ವಲ್ಪವಾದ ತಪಸ್ಸೂ ಕೂಡ ಅನಂತವಾದ ಫಲವನ್ನು ಕೊಡುತ್ತದೆ. ಆದುದರಿಂದಲೇ ಸಮಸ್ತ ದೇವತೆಗಳೂ, ಮುನಿಗಳೂ ಅಲ್ಲಿಯೇ ವಾಸಮಾಡಲೆಳಸುತ್ತಾರೆ.

೬೧. ಅಲ್ಲಿ ಮಹಾಪಾತಕಗಳನ್ನೂ ನಾಶಮಾಡತಕ್ಕ ಶಕ್ತಿಯುಳ್ಳ ಕಂಪಾ ಎಂಬ ನದಿಯಿರುವುದು. ಅದರಿಂದ ಅಲ್ಲಿರುವ ಮನುಷ್ಯರ ಪಾಪಕೋಟಿಗಳು ತಕ್ಷಣದಲ್ಲಿಯೇ ನಷ್ಟವಾಗುತ್ತವೆ.

೬೨. ಅದರ ಸಮೀಪದಲ್ಲಿಯೇ ಒಂದು ಮಾವಿನಮರವಿರುವುದು. ಆ ಮರವು ಸರ್ವರ್ತುಗಳಲ್ಲಿಯೂ ಪತ್ರ ಪುಷ್ಪ ಫಲಗಳಿಂದ ಭರಿತವಾಗಿ ಶೀತಲವಾದ ನೆಳಲಿನಿಂದ ಕೂಡಿರುವುದು.

ತತ್ರ ಜಪ್ತಂ ಹುತಂ ದತ್ತಮನಂತಫಲದಂ ಭವೇತ್ ॥ ೬೩ ॥
ಗಣಾಶ್ಚ ವಿವಿಧಾಕಾರಾ ಡಾಕಿನ್ಯೋ ಯೋಗಿನೀ ಗಣಾಃ ।
ಪರಿತಸ್ತ್ವಾಂ ನಿಷೇವಂತಾಂ ವಿಷ್ಣುಮುಖ್ಯಾಸ್ತಥಾ ಪರಾಃ ॥ ೬೪ ॥
ಅಹಂಚ ನಿಷ್ಕಲೋ ಭೂತ್ವಾ ತವ ಮಾನಸಪಂಕಜೇ ।
ಸನ್ನಿಧಾಸ್ಯಾಮಿ ಮಾಭೂಸ್ತ್ವಂ ದೇವಿ ಮದ್ವಿರಹಾಕುಲಾ ॥ ೬೫ ॥
ಇತ್ಯುಕ್ತಾ ದೇವದೇವೇನ ದೇವೀ ಕಂಪಾಂತಿಕಂ ಯಯೌ ।
ತಪಃ ಕರ್ತುಂ ಸಖೀಯುಕ್ತಾ ವಿಸ್ಮಯಾಕ್ರಾಂತಲೋಚನಾ ॥ ೬೬ ॥
ಕಂಪಾಂಚ ವಿಮಲಾಂ ಸಿಂಧುಂ ಮುನಿಸಂಘನಿಷೇವಿತಾಂ ।
ಆಲೋಕ್ಯ ಕೋಮಲದಳನೇಕಾಮ್ರಂ ದೃಷ್ಟಿವಾರಣಂ ॥ ೬೭ ॥
ಫಲ ಪುಷ್ಪಸಮಾಕೀರ್ಣಂ ಕೋಕಿಲಾಲಾಪಸಂಕುಲಂ ।
ಪ್ರಸಸಾದ ಪುನರ್ದೇವಂ ಸಸ್ಮಾರ ಚ ಮಹೇಶ್ವರಂ ॥ ೬೮ ॥
ಕಾಮಾಗ್ನಿಪರಿವೀತಾಂಗೀ ತಪಃಕಾಮೇವ ಸಾಭವತ್ ।
ಅಭ್ಯಭಾಷತ ಸಾ ಗೌರೀ ವಿಜಯಾಂ ಪಾರ್ಶ್ವವರ್ತಿನೀಂ ॥ ೬೯ ॥

---

೬೩–೬೪. ಆ ಮರದ ನೆರಳಲ್ಲಿ ಮಾಡಿದ ಜಪ, ಹೋಮ, ದಾನಗಳು ಅನಂತಗುಣಿತವಾದ ಫಲಗಳನ್ನು ಕೊಡುತ್ತವೆ. ಅಲ್ಲಿ ನಿನ್ನ ಪರಿವಾರದವರಾದ ನಾನಾ ವಿಧ ಪ್ರಮಥಗಣಗಳೂ, ಡಾಕಿನಿಯರೂ, ಯೋಗಿನೀಸಮೂಹಗಳೂ, ವಿಷ್ಣುವೇ ಮೊದಲಾದ ಸಕಲ ದೇವತೆಗಳೂ ನಿನ್ನನ್ನು ಉಪಚರಿಸುತ್ತಿರಲಿ.

೬೫. ನಾನೂ ಸಹ ನಿರಾಕಾರನಾಗಿ ನಿನ್ನ ಹೃತ್ಕಮಲದಲ್ಲಿ ಸದಾ ಸನ್ನಿಹಿತನಾಗಿಯೇ ಇರುವೆನು. ಆದುದರಿಂದ ನೀನು ನನ್ನ ವಿರಹದಿಂದ ದುಃಖ ಪಡಬೇಕಾದುದಿಲ್ಲ.''

೬೬. ದೇವದೇವನ ಈ ಮಾತುಗಳನ್ನು ಕೇಳಿ ವಿಸ್ಮಿತಳಾದ ಆ ಪಾರ್ವತಿಯು ತಪಸ್ಸನ್ನು ಮಾಡುವುದಕ್ಕಾಗಿ ತನ್ನ ಸಖಿಯೊಡನೆ ಆ ಕಂಪಾ ಪ್ರದೇಶಕ್ಕೆ ಬಂದಳು.

೬೭–೬೯. ಮುನಿಸಮೂಹಗಳಿಂದ ಸತತವೂ ಸೇವಿತವಾದ ಕಂಪಾತಟಾಕವನ್ನೂ, ಆಕಾಶದ ದೃಷ್ಟಿಯನ್ನೇ ನಿರೋಧಮಾಡುವಂತೆ ದಟ್ಟವಾದ ಚಿಗುರೆಲೆಗಳಿಂದಲೂ, ಹೂವು ಹಣ್ಣುಗಳಿಂದಲೂ, ಹಣ್ಣುಗಳಿಗೆರಗುವ ಕೋಗಿಲೆಗಳ ಇಂಚರದಿಂದಲೂ ಮನೋಹರವಾಗಿದ್ದ ಆ ಮಾವಿನ ಮರವನ್ನೂ ನೋಡಿ ಆಕೆಯ ಮನಸ್ಸು ಸುಪ್ರಸನ್ನವಾಯಿತು. ಆಗಲಾಕೆಯು ತನ್ನ ನಾಥನಾದ ಮಹೇಶ್ವರನನ್ನು ಸ್ಮರಿಸಿದಳು. ಆಕೆಯು ಕಾಮಾಗ್ನಿಪೀಡಿತಳಾಗಿ ತಪಃಕ್ಲೇಶದಿಂದ ಕೃಶಳಾದವಳಂತೆ ಕಾಣುತ್ತಿದ್ದಳು. ಆಗಲಾಕೆಯು ತನ್ನ ಸಹಚರಿಯಾದ ವಿಜಯೆಯೆಂಬವಳನ್ನು ಕುರಿತು ಹೇಳತೊಡಗಿದಳು :—

ಕಾಮಶೋಕಪರೀತಾಂಗೀ ಪುರಾರಿವಿರಹಾಕುಲಾ ॥ ೭೦ ॥
ಇಮಮಘಹರಮಾಗತಾನಿಶಂ
ಸ್ವಯಮಪಿ ಪೂಜಯಿತುಂ ತಪೋಭಿರೀಶಂ ।
ಅಯಮಭಿನವಪಲ್ಲವಪ್ರಸೂನೈಃ
ಸ್ಮರಯತಿ ಮಾಂ ಸ್ಮರಬಂಧುರೇಕಚೂತಃ ॥ ೭೧ ॥
ಕಥಮಿವ ವಿರಹಃ ಶಿವಸ್ಯ ಸಹ್ಯಃ
ಕ್ಷುಭಿತಧಿಯಾತ್ರ ಭೃಶಂ ಮನೋಭವೇನ ।
ತದಪಿ ಚ ತರುಣೇಂದುಚೂಡಪಾದ
ಸ್ಮರಣ ಮಹೌಷಧಮೇಕಮೇವ ದೃಷ್ಟಂ ॥ ೭೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಪೂರ್ವಾರ್ಧೇ "ಪಾರ್ವತ್ಯಾಃ ಶಿವನೇತ್ರನಿಮೀಲನೇನ ತಮಸಾ ಕ್ಷುಬ್ಧಲೋಕಪಾಪಭಯೇನ ಕಾಂಚ್ಯಾಂ ಕಂಪಾಸ್ಥಿತೈಕಾಮ್ರತಲೇ ತಪಶ್ಚರ್ಯಾರ್ಥಮಾಗಮನಂ"ನಾಮ ತೃತೀಯೋಽಧ್ಯಾಯಃ

---

೭೦–೭೨. "ಕಾಮಶೋಕಗಳಿಂದ ಆಂದೋಳಿತವಾದ ಅಂತಃಕರಣವುಳ್ಳವಳೂ, ಮಹೇಶ್ವರನ ವಿರಹದಿಂದ ಆತುರಳಾದವಳೂ ಆದ ನಾನು ನಿರಂತರವಾದ ತಪಸ್ಸಿನಿಂದ ಈಶ್ವರನನ್ನು ಪೂಜಿಸಲು ಪಾಪಹಾರಿಯಾದ ಈ ವೃಕ್ಷದ ಸಮೀಪಕ್ಕೆ ಬಂದೆನು. ಆದರೆ ಮನ್ಮಥನಿಗೆ ನೆಲೆವೀಡಾದ ಈ ಮಾವಿನ ಮರವು ತನ್ನ ಚಿಗುರುಗಳಿಂದಲೂ, ಪುಷ್ಪಗಳಿಂದಲೂ ನನ್ನಲ್ಲಿ ಕಾಮೋದ್ರೇಕವನ್ನೇ ಉಂಟುಮಾಡುತ್ತಿದೆ. ಮನ್ಮಥನಿಂದ ಕ್ಷೋಭಹೊಂದಿದ ಮನಸ್ಸುಳ್ಳ ನನ್ನಿಂದ ಶಿವನ ವಿರಹತಾಪವು ಹೇಗೆತಾನೆ ಸಹಿಸಲು ಶಕ್ಯವು? ಅದಕ್ಕೂ ಸಹ ಬಾಲೇಂದುಶೇಖರನ ಪಾದಪದ್ಮಗಳ ಭಜನೆಯೆಂಬುದೊಂದೇ ಮಹೌಷಧಿಯು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲಮಾಹಾತ್ಮ್ಯೆಯಲ್ಲಿ "ಪಾರ್ವತಿಯು ಶಿವನ ಕಂಗಳನ್ನು ಮುಚ್ಚಿದುದರಿಂದ ಲೋಕವೆಲ್ಲವೂ ಕತ್ತಲೆಕವಿದು ಕ್ಷೋಭೆಗೊಳ್ಳಲು ಆ ಪಾಪಭಯದಿಂದ ಕಾಂಚೀಪುರದ ಸಮೀಪದ ಕಂಪಾಕ್ಷೇತ್ರಕ್ಕೆ ಬಂದುದು" ಎಂಬ ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ಥೋಽಧ್ಯಾಯಃ

### ಪಾರ್ವತ್ಯಾ ಗೌತಮಾಶ್ರಮಾಗಮನವರ್ಣನಂ

ಬ್ರಹ್ಮೋವಾಚ :—

ಅಥಾಭ್ಯಧತ್ತ ವಿಜಯಾ ಪ್ರಣಮ್ಯ ಜಗದಂಬಿಕಾಂ ।
ಸಾಂತ್ವಯಂತೀ ಸ್ತುತಿಶತೈರುಪಾಯೈಃ ಶಿವದರ್ಶನೈಃ ॥ ೧ ॥
ದೇವಿ ತ್ವಮವಿನಾಭೂತಾ ಸದಾ ದೇವೇನ ಶಂಭುನಾ ।
ಪ್ರಾಣೇಶ್ವರೀ ತ್ವಮೇಕಾಸಿ ಶಕ್ತಿಸ್ತಸ್ಯ ಪರಾತ್ಮನಃ ॥ ೨ ॥
ತಥಾ ಮಾಯಾಂ ತ್ವಮಾತ್ಮೀಯಾಂ ಸಂದರ್ಶಯಿತುಮೀಹಸೇ ।
ಪೃಥಗ್ಭಾವಮಿವೇಶಾನಃ ಪ್ರಕಾಶಯತಿ ನ ಸ್ವಯಂ ॥ ೩ ॥
ಆದ್ಯೇ ತಂ ಪ್ರತಿಗೃಹ್ಯೈವ ಸಮುಪೇತಾಸಿ ಪಾರ್ವತಿ ।
ಅಲಂಘನೀಯಾ ಸೇವಾಜ್ಞಾ ಶಾಂಭವೀ ಸರ್ವದಾ ತ್ವಯಾ ॥ ೪ ॥
ವಿಧಾತವ್ಯಂ ತಪಃ ಪ್ರಾಪ್ತಂ ಸ್ಥಾನೇಽಸ್ಮಿನ್ಶಿವಕಲ್ಪಿತೇ ।
ನಿವೃತ್ಯ ನಿಖಿಲಾನ್ಕಾಮಾನ್ಶಂಭುಮಾಶ್ರಿತಯಾ ತ್ವಯಾ ॥ ೫ ॥

---

### ಕನ್ನಡದ ಅನುವಾದ

#### ಪಾರ್ವತಿಯು ಗೌತಮಾಶ್ರಮಕ್ಕೆ ಬಂದುದು

೧. ಆಗ ಸಖಿಯಾದ ವಿಜಯೆಯು ಜಗನ್ಮಾತೆಯಾದ ಪಾರ್ವತಿಯನ್ನು ಸಮಾಧಾನಗೊಳಿಸುವವಳಾಗಿ ಶಿವಸಂದರ್ಶನಕ್ಕೆ ನೆರವಾಗುವ ಅನೇಕ ಕಾರಣಗಳನ್ನು ಹೇಳುವವಳಾದಳು.

೨–೪. "ಎಲೌ ದೇವಿಯೆ! ನೀನು ಯಾವಾಗಲೂ ಶಿವನಿಂದ ಅಭಿನ್ನಳಾಗಿರುವವಳೇ ಅಲ್ಲವೆ? ಆತನಿಗೆ ಪ್ರಾಣಪ್ರಿಯೆಯೂ ಆತನ ಶಕ್ತಿರೂಪಿಣಿಯೂ ನೀನೊಬ್ಬಳೇ ಆಗಿರುವೆ. ಹಾಗೂ ನೀನು ನಿನ್ನ ಮಾಯೆಯನ್ನು ಜಗತ್ತಿಗೆ ತೋರಿಸುವ ಇಚ್ಛೆಯನ್ನು ಹೊಂದಿರುವೆ. ಈಶ್ವರನೂ ಕೂಡ ಅನಪಾಯಿನಿಯಾದ ನಿನ್ನನ್ನು ಪೃಥಗ್ವ್ಯಕ್ತಿಯೆಂದೇ ತೋರಿಸುತ್ತಿರುವನು. ಆತನ ಆಜ್ಞೆಯನ್ನೇ ಶಿರಸಾವಹಿಸಿ ನೀನು ಇಲ್ಲಿಗೆ ಬಂದಿರುವೆ. ಶಂಭುವಿನ ಸೇವಾರೂಪವಾದ ಆಜ್ಞೆಯು ನಿನ್ನಿಂದ ಸರ್ವಥಾ ಉದಾಸೀನ ಮಾಡಲಾಗದು.

೫. ಈಗ ಸರ್ವಕಾಮನೆಗಳನ್ನೂ ದೂರಮಾಡಿ ಶಂಭುವನ್ನೇ ಆಶ್ರಯವಾಗಿ ಮಾಡಿಕೊಂಡು ನೀನು ಶಿವನಿಂದ ಕಲ್ಪಿತವಾದ ಈ ಪ್ರದೇಶದಲ್ಲಿಯೇ ಪ್ರಾಯಶ್ಚಿತ್ತರೂಪವಾದ ತಪಸ್ಸನ್ನು ಮಾಡಬೇಕು.

ಅನ್ಯಥಾಪಿ ಜಗದ್ರಕ್ಷಾ ತ್ವದಧೀನಾ ಜಗನ್ಮಯಿ ।
ಧರ್ಮಸಂರಕ್ಷಣಂ ಭೂಯಃ ಶಿವೇನ ಸಹಿತಂ ತವ ॥ ೬ ॥
ನಿಷ್ಕಲಂ ಶಿವಮತ್ಯಂತಂ ಧ್ಯಾಯಂತ್ಯಾತ್ಮನ್ಯವಸ್ಥಿತಂ ।
ವಿಯೋಗದುಃಖಂ ಕಚ್ಚಿತ್ತ್ವಂ ನ ಸ್ಮರಿಷ್ಯಸಿ ಪಾರ್ವತಿ ॥ ೭ ॥
ಭಕ್ತಾನಾಂ ತವ ಮುಖ್ಯಾನಾಂ ತವೈವಾಚಾರಸಂಗ್ರಹಃ ।
ಉಪದೇಶಿತಯಾ ಲೋಕೇ ಪ್ರಥತಾಂ ಧರ್ಮವತ್ಸಲೇ ॥ ೮ ॥
ಇತಿ ತಸ್ಯಾ ವಚಃ ಶ್ರುತ್ವಾ ಗೌರೀ ಸುಸ್ಥಿರಮಾನಸಾ ।
ತಪಃ ಕರ್ತುಂ ಸಮಾರೇಭೇ ಕಂಪಾನದ್ಯಾಸ್ತಟೇ ಶುಭೇ ॥ ೯ ॥
ವಿಮುಚ್ಯ ವಿವಿಧಾಭೂಷಾ ರುದ್ರಾಕ್ಷಗಣಭೂಷಿತಾ ।
ವಿಸೃಜ್ಯ ದಿವ್ಯಂ ವಸನಂ ಪರ್ಯಧಾದ್ವಲ್ಕಲೇ ಶುಭೇ ॥ ೧೦ ॥
ಅಲಕೈಃ ಸಹಸಾ ಶಿಲ್ಪಮನಯಚ್ಚ ಕಪರ್ದತಾಂ ।
ಅಲಿಂಪತ ತನೂಂ ಸರ್ವಾಂ ಭಸ್ಮನಾ ಮುಕ್ತಕುಂಕುಮಾ ॥ ೧೧ ॥

---

೬. ಹಾಗೂ ಸಮಸ್ತ ಲೋಕಗಳ ಸಂರಕ್ಷಣೆಯು ನಿನ್ನ ಅಧೀನವೇ ಆಗಿರುವುದು. ಆದುದರಿಂದ ಪುಣ್ಯಫಲಕ್ಕೆ ಕಾರಣವಾದ ಧರ್ಮದ ರಕ್ಷಣೆಯೂ ಸಹ ನಿನ್ನಿಂದಲೇ ಆಗಬೇಕು.

೭. ಎಲೌ ಪಾರ್ವತಿಯೆ! ನಿನ್ನ ಹೃತ್ಪದ್ಮದಲ್ಲಿ ನೆಲಸಿರುವ ನಿಷ್ಕಳಂಕನಾದ ಶಿವನನ್ನೇ ತದೇಕಧ್ಯಾನದಿಂದ ಪೂಜಿಸುತ್ತಿದ್ದರೆ ಆತನ ವಿಯೋಗದಿಂದುಂಟಾದ ದುಃಖವು ನಿನ್ನನ್ನು ಸ್ವಲ್ಪವೂ ಅಂಟುವುದಿಲ್ಲವು.

೮. ಎಲೌ ಧರ್ಮವತ್ಸಲೆಯೇ! ಧರ್ಮವನ್ನು ನಡೆಸುವುದರಲ್ಲಿಯೇ ತತ್ಪರಳಾದ ನಿನ್ನ ನಡವಳಿಕೆಯು ಮುಖ್ಯರಾದ ನಿನ್ನ ಭಕ್ತರಿಗೆ ಮೇಲ್ಪಂಙ್ತಿಯಾಗಿ ಲೋಕದಲ್ಲಿ ಯಶಸ್ಸನ್ನು ಪಡೆಯಲಿ.”

೯. ಹೀಗೆಂದ ಸಖಿಯಾದ ವಿಜಯೆಯ ಮಾತನ್ನು ಕೇಳಿ ಆ ಪಾರ್ವತಿಯು ಸ್ಥಿರಚಿತ್ತಳಾಗಿ ಆ ಕಂಪಾನದಿಯ ಪವಿತ್ರವಾದ ದಡದಲ್ಲಿ ತಪಸ್ಸನ್ನು ಮಾಡಲು ಉಪಕ್ರಮಿಸಿದಳು.

೧೦. ಆಗಲಾ ದೇವಿಯು ವಿಧವಿಧವಾದ ಆಭರಣಗಳನ್ನೆಲ್ಲ ತೆಗೆದುಹಾಕಿ ರುದ್ರಾಕ್ಷಮಾಲೆಗಳಿಂದಲಂಕೃತಳಾಗಿ ದಿವ್ಯಪೀತಾಂಬರವನ್ನು ತೆಗೆದಿಟ್ಟು ಶುಭ್ರವಾದ ವಲ್ಕಲಗಳನ್ನುಟ್ಟುಕೊಂಡಳು.

೧೧. ಉದ್ದವಾದ ತನ್ನ ತಲೆಗೂದಲುಗಳಿಂದ ಜಟೆಯನ್ನು ಮಾಡಿಕೊಂಡಳು. ಕುಂಕುಮಾದಿ ಲೇಪನಗಳನ್ನು ವಿಸರ್ಜಿಸಿ ದೇಹದ ಆದ್ಯಂತದಲ್ಲೂ ಭಸ್ಮವನ್ನು ಲೇಪನ ಮಾಡಿಕೊಂಡಳು.

ಮೃಗೇಷು ಕೃತಸಂತೋಷಾ ಶಿಲೋಂಛೀಕೃತವೃತ್ತಿಷು ।
ಜಜಾಪ ನಿಯಮೋಪೇತಾ ಶಿವಪಂಚಾಕ್ಷರಂ ಪರಂ ॥ ೧೨ ॥
ಕೃತ್ವಾ ತ್ರಿಷವಣಂ ಸ್ನಾನಂ ಕಂಪಾಪಯಸಿ ನಿರ್ಮಲೇ ।
ಕೃತ್ವಾಚ ಸೈಕತಂ ಲಿಂಗಂ ಪೂಜಯಾಮಾಸ ಸಾದರಂ ॥ ೧೩ ॥
ವೃಕ್ಷಪ್ರರೋಪಣೈರ್ದಾನೈರಶೇಷಾತಿಥಿಪೂಜನೈಃ ।
ಶ್ರಾಂತಿಂ ಹರಂತೀ ಜೀವಾನಾಂ ದೇವೀ ಧರ್ಮಮಪಾಲಯತ್ ॥ ೧೪ ॥
ಗ್ರೀಷ್ಮೇ ಪಂಚಾಗ್ನಿಮಧ್ಯಸ್ಥಾ ವರ್ಷಾಸು ಸ್ಥಂಡಿಲೇಶಯಾ ।
ಹೇಮಂತೇ ಜಲಮಧ್ಯಸ್ಥಾ ಶಿಶಿರೇ ಚಾಕರೋತ್ತಪಃ ॥ ೧೫ ॥
ಪುಣ್ಯಾತ್ಮನಾಂ ಮಹರ್ಷೀಣಾಂ ದರ್ಶನಾರ್ಥಮುಪೇಯುಷಾಂ ।
ವಿಸ್ಮಯಂ ಜನಯಾಮಾಸ ಪೂಜಯಾಮಾಸ ಸಾದರಂ ॥ ೧೬ ॥
ಕದಾಚಿತ್ಸ್ವಯಮುಚ್ಚಿತ್ಯ ವನಾಂತಾತ್ಪಲ್ಲವಾನ್ವಿತಂ ।
ಪುಷ್ಪೋತ್ಕರಂ ವಿಶೇಷೇಣ ಶೋಧಿತುಂ ಸಮುಪಾವಿಶತ್ ॥ ೧೭ ॥

---

೧೨. ಶಿಲಾ ಮತ್ತು ಉಂಛವೃತ್ತಿಗಳಿಂದ ಜೀವಿಸುವ ಮೃಗಗಳ ಸಹವಾಸದಿಂದ ಆನಂದಹೊಂದಿದವಳಾಗಿ ಶಾಸ್ತ್ರೋಕ್ತ ಕ್ರಮದಿಂದ ಉತ್ತಮವಾದ ಶಿವಪಂಚಾಕ್ಷರೀ ಮಂತ್ರವನ್ನು ಪುರಶ್ಚರಣ ಮಾಡುತ್ತಿದ್ದಳು.

೧೩. ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಪರಿಶುದ್ಧವಾದ ಕಂಪಾನದಿಯ ಜಲದಲ್ಲಿ ಮಿಂದು ಮರಳಿನಲ್ಲಿಯೇ ಲಿಂಗವನ್ನು ಮಾಡಿ ಅತ್ಯಂತ ಆದರದಿಂದ ಪೂಜೆಯನ್ನು ಮಾಡುತ್ತಿದ್ದಳು.

೧೪. ಗಿಡಗಳನ್ನು ಸಾಕುವುದರಿಂದಲೂ, ದಾನಗಳಿಂದಲೂ, ಮನಃಪೂರ್ವಕವಾದ ಅತಿಥಿ ಪೂಜೆಗಳಿಂದಲೂ, ಸಕಲ ಜೀವರಾಶಿಗಳ ದುಃಖಗಳನ್ನೂ ಹೋಗಲಾಡಿಸುತ್ತ ಆ ಪಾರ್ವತಿಯು ತಪೋಧರ್ಮವನ್ನು ಪರಿಪಾಲಿಸುತ್ತಿದ್ದಳು.

೧೫. ಆಕೆಯು ಗ್ರೀಷ್ಮರ್ತುವಿನಲ್ಲಿ ಪಂಚಾಗ್ನಿಗಳ ಮಧ್ಯದಲ್ಲೂ, ವರ್ಷಾಕಾಲದಲ್ಲಿ ಭೂಶಯನದಿಂದಲೂ, ಹೇಮಂತ ಮತ್ತು ಶಿಶಿರ ಋತುಗಳಲ್ಲಿ ಜಲಮಧ್ಯದಲ್ಲಿಯೂ ತಪಸ್ಸನ್ನು ಮಾಡಿದಳು.

೧೬. ತನ್ನ ದರ್ಶನಾರ್ಥವಾಗಿ ಬಂದ ಪುಣ್ಯಶ್ಲೋಕರಾದ ಮಹರ್ಷಿಗಳಿಗೆಲ್ಲ ವಿಸ್ಮಯವನ್ನುಂಟುಮಾಡುವವಳಾದರೂ, ಅವರ ಸತ್ಕಾರವನ್ನು ಮಾತ್ರ ಶ್ರದ್ಧೆಯಿಂದ ಮಾಡುತ್ತಿದ್ದಳು.

೧೭. ಒಮ್ಮೆ ಆ ಪಾರ್ವತಿಯು ಚಿಗುರುಗಳನ್ನೂ, ಹೂವುಗಳನ್ನೂ ಬಿಡಿಸಿ ತಂದು ಅವುಗಳನ್ನು ಆರಿಸಲು ಕುಳಿತುಕೊಂಡಳು.

ಕೃತ್ವಾಚ ಸೈಕತಂ ಲಿಂಗಂ ಕಂಪಾರೋಧಸಿ ಪಾವನೇ ।
ಸಂಪೂಜಯಿತುಮಾರೇಭೇ ನ್ಯಾಸಾವಾಹನಪೂರ್ವಕಂ ॥ ೧೮ ॥
ಸೂರ್ಯಮಭ್ಯರ್ಚ್ಯ ವಿಧಿವದ್ರಕ್ತೈಃ ಪುಷ್ಪೈಶ್ಚ ಚಂದನೈಃ ।
ಪಂಚಾವರಣಸಂಯುಕ್ತಂ ಕ್ರಮಾದಾನರ್ಚ ಶಂಕರಂ ॥ ೧೯ ॥
ಧೂಪೈರ್ದೀಪೈಶ್ಚ ನೈವೇದ್ಯೈರ್ಭಕ್ತಿಭಾವಸಮನ್ವಿತೈಃ ।
ಅಪರೋಕ್ಷಿತಮೀಶಾನಮಾಲುಲೋಕೇ ಪುರೋಹಿತಂ ॥ ೨೦ ॥
ಅಥ ದೇವಃ ಶಿವಃ ಸಾಕ್ಷಾತ್ಸಂಶೋಧಯಿತುಮಂಬಿಕಾಂ ।
ಕಂಪಾನದ್ಯಾಃ ಪ್ರವಾಹೇಣ ಮಹತಾ ಪರ್ಯವೇಷ್ಟಯತ್ ॥ ೨೧ ॥
ಅತಿವೃದ್ಧಂ ಪ್ರವಾಹಂ ತಂ ಕಂಪಾಯಾಃ ಸಮುಪಸ್ಥಿತಂ ।
ಆಲೋಕ್ಯ ನಿಯಮಾಸೀನಾಮಾಹುಃ ಸಖ್ಯಸ್ತದಾಂಬಿಕಾಂ ॥ ೨೨ ॥
ಉತ್ತಿಷ್ಠ ದೇವಿ ಬಹುಲಃ ಪ್ರವಾಹೋಽಯಂ ವಿಜೃಂಭತೇ ।
ದಿಶಾಂ ಮುಖಾನಿ ಸಂಪೂರ್ಯ ತರಸಾ ಪ್ಲಾವಯಿಷ್ಯತಿ ॥ ೨೩ ॥
ಇತಿ ತದ್ವಚನಂ ಶ್ರುತ್ವಾ ಧ್ಯಾಯಂತೀ ಮೀಲಿತೇಕ್ಷಣಾ ।
ಉನ್ಮೀಲ್ಯ ವೇಗಮತುಲಂ ನದ್ಯಾಸ್ತಂ ಸಮವೈಕ್ಷತ ॥ ೨೪ ॥

---

೧೮. ಪವಿತ್ರವಾದ ಕಂಪಾನದಿಯ ದಡದಲ್ಲಿ ಮರಳಿನ ಲಿಂಗವನ್ನು ಮಾಡಿ ಅಂಗನ್ಯಾಸ, ಕರನ್ಯಾಸ, ಆವಾಹನ ಮುಂತಾದ ಕ್ರಮಗಳಿಂದ ಅದನ್ನು ಆರಾಧಿಸಲು ಉಪಕ್ರಮಿಸಿದಳು.

೧೯–೨೦. ಮೊದಲು ವಿಧ್ಯುಕ್ತವಾದ ರೀತಿಯಿಂದ ಸೂರ್ಯನನ್ನು ರಕ್ತ ಪುಷ್ಪಗಳಿಂದ ಪೂಜಿಸಿ ಬಳಿಕ ಪಂಚಾವರಣಗಳ ಮಧ್ಯದಲ್ಲಿ ಶಂಕರನನ್ನು ಕ್ರಮವಾಗಿ ಪೂಜಿಸಿದಳು. ಭಕ್ತಿಪ್ರೇಮಗಳನ್ನೇ ಮುಂದುಮಾಡಿಕೊಂಡು ಧೂಪ, ದೀಪ, ನೈವೇದ್ಯಗಳನ್ನರ್ಪಿಸಿ ಈಶ್ವರಾಪರೋಕ್ಷಜ್ಞಾನದಿಂದ ತನ್ನೆದುರಿನಲ್ಲಿಯೇ ಶಿವನನ್ನು ಸಾಕ್ಷಾತ್ಕರಿಸಿಕೊಂಡಳು.

೨೧–೨೨. ಆ ಕಾಲದಲ್ಲಿ ಪರಮೇಶ್ವರನು ಪಾರ್ವತಿಯ ನಿಷ್ಠೆಯನ್ನು ಪರೀಕ್ಷೆಮಾಡುವ ನೆವದಿಂದ ಕಂಪಾನದಿಯಲ್ಲಿ ಪ್ರವಾಹವನ್ನುಂಟುಮಾಡಿ ಆಕೆಯನ್ನು ಸುತ್ತುವರೆಸಿದನು. ಅಪಾರವಾಗಿದ್ದ ನದಿಯ ಪ್ರವಾಹವನ್ನೂ, ವ್ರತ ನಿರತಳಾಗಿದ್ದ ಗಿರಿಜೆಯನ್ನೂ ಕಂಡು ಸಖಿಯರು ಆಕೆಗೆ ಹೇಳತೊಡಗಿದರು :—

೨೩. "ಎಲೌ ಗೌರಿಯೆ! ಜಾಗ್ರತಳಾಗು. ನದಿಯ ಪ್ರವಾಹವು ಅಪಾರವಾಗಿ ಎಲ್ಲೆಡೆಗಳಲ್ಲಿಯೂ ಹರಿಯುತ್ತ ನಿನ್ನನ್ನೂ ಸಹ ಮುಳುಗಿಸಬಹುದು."

೨೪. ಸಖಿಯರ ಈ ಮಾತುಗಳನ್ನು ಕೇಳಿ ಗಿರಿಜೆಯು ಧ್ಯಾನಾಸಕ್ತವಾದ ಮನಸ್ಸನ್ನು ಬಹಿರ್ಮುಖವನ್ನು ಮಾಡಿ ಸುತ್ತಲೂ ವೇಗವಾಗಿ ಭೋರ್ಗರೆಯುತ್ತಿದ್ದ ಪ್ರವಾಹವನ್ನು ಕಂಡಳು.

ಅಚಿಂತಯಚ್ಚ ಸಾ ದೇವೀ ಪೂಜಾವಿಘ್ನಸಮಾಕುಲಾ ।
ಕಿಂ ಕರೋಮಿ ನ ಶಕ್ನೋಮಿ ಹಾತುಮಾರಬ್ಧಮರ್ಚನಂ ॥ ೨೫ ॥
ಶ್ರೇಯಃ ಪ್ರಾಪ್ತುಮವಿಘ್ನೇನ ಪ್ರಾಯಃ ಪುಣ್ಯಾತ್ಮನಾಂ ಭುವಿ ।
ಘಟತೇ ಧರ್ಮಸಂಯೋಗೋ ಮನೋರಥಫಲಪ್ರದಃ ॥ ೨೬ ॥
ಸೈಕತಂ ಲಿಂಗಮತುಲಪ್ರವಾಹಾಲ್ಲಯಮೇಷ್ಯತಿ ।
ಲಿಂಗನಾಶೇ ವಿನೋಕ್ತವ್ಯಃ ಸದ್ಭಕ್ತ್ಯೈಃ ಪ್ರಾಣಸಂಗ್ರಹಂ ॥ ೨೭ ॥
ಪ್ರವಾಹೋಽಯಂ ಸಮಾಯಾತಿ ಶಿವಮಾಯಾತಿ ನಿರ್ಮಿತಃ ।
ವಿಶೋಧಯಿತುಮಾತ್ಮಾನಂ ಭಕ್ತಿಯುಕ್ತಾಂ ನಿಜೇ ಪದೇ ॥ ೨೮ ॥
ಆಲಿಂಗ್ಯ ಸುದೃಢಂ ದೋರ್ಭ್ಯಾಂ ಏತಲ್ಲಿಂಗಮನಾಕುಲಂ ।
ಅಹಂ ವತ್ಸ್ಯಾಮಿ ಯಾತಾಶು ಸಖ್ಯೋ ಯೂಯಂ ವಿದೂರತಃ ॥ ೨೯ ॥
ಇತ್ಯುಕ್ತ್ವಾ ಸೈಕತಂ ಲಿಂಗಂ ಗಾಢಮಾಲಿಂಗ್ಯ ಸಾಂಬಿಕಾ ।
ನ ಮುಮೋಚ ಪ್ರವಾಹೇನ ವೇಷ್ಟಮಾನಾಪಿ ವೇಗತಃ ॥ ೩೦ ॥

---

೨೫. ತನ್ನ ಪೂಜೆಗೆ ವಿಘ್ನವು ಪ್ರಾಪ್ತವಾದುದರಿಂದ ವ್ಯಾಕುಲಹೊಂದಿದವಳಾಗಿ ಆಕೆಯು ಹೀಗೆ ಯೋಚಿಸಿದಳು :—"ಈಗ ಏನುಮಾಡಲಿ ? ಉಪಕ್ರಮ ಮಾಡಿದ ಪೂಜೆಯನ್ನು ಮಧ್ಯದಲ್ಲಿ ನಿಲ್ಲಿಸಲು ಸರ್ವಥಾ ನನ್ನ ಮನಸ್ಸು ಒಪ್ಪುವುದಿಲ್ಲ.

೨೬. ಪ್ರಾಯಿಕವಾಗಿ ಪುಣ್ಯಾತ್ಮರಿಗೆ ಉತ್ತರೋತ್ತರ ಶ್ರೇಯಸ್ಸುಂಟಾಗುವ ಯೋಗವಿದ್ದರೆ ಸರ್ವಮನೋರಥಗಳನ್ನೂ ಈಡೇರಿಸಿಕೊಡುವ ಧರ್ಮಾಚರಣೆಯು ನಿರ್ವಿಘ್ನವಾಗಿಯೇ ನೆರವೇರುವುದು.

೨೭. ಈ ಸೈಕತಲಿಂಗವು ಪ್ರವಾಹದಲ್ಲಿ ಖಂಡಿತವಾಗಿಯೂ ನಾಶವನ್ನು ಹೊಂದುತ್ತದೆ. ಅರ್ಚಾಲಿಂಗದ ನಾಶವಾದರೆ ಉತ್ತಮ ಶಿವಭಕ್ತರು ತಕ್ಷಣದಲ್ಲಿಯೇ ಪ್ರಾಣತ್ಯಾಗವನ್ನು ಮಾಡಬೇಕು.

೨೮. ಅಕಾಲದಲ್ಲಿ ಉಂಟಾದ ಈ ಪ್ರವಾಹವು ಖಂಡಿತವಾಗಿಯೂ ಶಿವನ ಪಾದಪದ್ಮಗಳಲ್ಲಿ ನನಗಿರುವ ಅನನ್ಯಭಕ್ತಿಯನ್ನು ಪರೀಕ್ಷಿಸಲೆಳಸುವ ಶಿವನ ಮಾಯೆಯಿಂದಲೇ ಉಂಟಾದುದೆಂಬುದರಲ್ಲಿ ಸಂದೇಹವಿಲ್ಲ.

೨೯. ಅವ್ಯಗ್ರಚಿತ್ತಳಾಗಿ ಈ ಲಿಂಗವನ್ನೇ ನನ್ನ ಬಾಹುಗಳಿಂದ ಆಲಿಂಗನ ಮಾಡಿಕೊಂಡು ಇಲ್ಲಿಯೇ ನಿಲ್ಲುತ್ತೇನೆ. ಎಲೌ ಸಖಿಯರೆ! ನೀವು ಮಾತ್ರ ದೂರಕ್ಕೆ ಹೊರಟುಹೋಗಿರಿ."

೩೦. ಹೀಗೆ ಆಜ್ಞಾಪಿಸಿ ಅಂಬಿಕೆಯು ಆ ಸೈಕತಲಿಂಗವನ್ನು ಬಿಗಿಯಾಗಿ ಅಪ್ಪಿಕೊಂಡಳು ; ನೀರಿನ ಪ್ರವಾಹವು ಸುತ್ತುಗಟ್ಟಿದರೂ ಸಹ ಆಕೆಯು ಅದನ್ನು ಬಿಡಲಿಲ್ಲ.

ಸ್ತನಚೂಚುಕ ನಿರ್ಮಗ್ನಮುದ್ರಾಪ್ರದರ್ಶಿತ ಲಾಂಛನಂ ।
ಮಹಾಲಿಂಗಂ ಸ್ವಸಂಯುಕ್ತಂ ಪ್ರಣನಾಮ ತದಾದರಾತ್ ॥ ೩೧ ॥
ನಿಮೀಲಿತೇಕ್ಷಣಾ ಧ್ಯಾನನಿಷ್ಠೈಕ ಹೃದಯಾ ಸ್ಥಿತಾ ।
ಪುಲಕಾಂಚಿತ ಸರ್ವಾಂಗೀ ಸಾ ಸ್ಮರಂತೀ ಸದಾಶಿವಂ ॥ ೩೨ ॥
ಕಂಪಸ್ವೇದಪರಿತ್ರಾಣ ಲಜ್ಜಾ ಪ್ರಣಯಕೇಳಿಸಾತ್ ।
ಕ್ಷಣಮಪ್ಯಚಲಾ ಲಿಂಗಾನ್ನ ವಿಯೋಗಮಪೇಕ್ಷತೇ ॥ ೩೩ ॥
ಅಥ ತಾಮಬ್ರವೀತ್ಕಾಪಿ ದೈವೀ ವಾಗಶರೀರಿಣೀ ।
ವಿಮುಂಚ ಬಾಲಿಕೇ ಲಿಂಗಂ ಪ್ರವಾಹೋಽಯಂ ಗತೋ ಮಹಾನ್ ॥
ತ್ವಯಾರ್ಚಿತಮಿದಂ ಲಿಂಗಂ ಸೈಕತಂ ಸ್ಥಿರವೈಭವಂ ।
ಭವಿಷ್ಯತಿ ಮಹಾಭಾಗೇ ವರದಂ ಸುರಪೂಜಿತಂ ॥ ೩೫ ॥
ತಪಶ್ಚರ್ಯಾಂ ತವಾಲೋಕ್ಯ ರಚಿತಂ ಧರ್ಮಪಾಲನಂ ।
ಲಿಂಗಂ ಚೈತನ್ನಮಸ್ಕೃತ್ಯ ಕೃತಾರ್ಥಾಸ್ಸಂತು ಮಾನವಾಃ ॥ ೩೬ ॥

---

೩೧. ಈ ಆಲಿಂಗನದಿಂದ ಆಕೆಯ ಸ್ತನಚೂಚುಕಗಳ ಚಿಹ್ನಗಳು ಆ ಲಿಂಗದಲ್ಲಿ ಕಾಣುತ್ತಿದ್ದುವು. ಆಗಲಾಕೆಯು ಅತ್ಯಂತ ಭಕ್ತಿಯಿಂದ ತನ್ನೊಡನಿರುವ ಆ ಮಹಾಲಿಂಗವನ್ನು ನಮಸ್ಕರಿಸಿದಳು.

೩೨. ಕಣ್ಣುಗಳನ್ನು ಮುಚ್ಚಿಕೊಂಡು ಶಿವಧ್ಯಾನದಲ್ಲಿಯೇ ನಿರತವಾದ ಅಂತಃಕರಣವುಳ್ಳವಳಾಗಿ ಮೈಯೆಲ್ಲವೂ ರೋಮಾಂಚಿತವಾಗಲು ಆಕೆಯು ಸದಾಶಿವನನ್ನೇ ಸ್ಮರಿಸುತ್ತಿದ್ದಳು.

೩೩. ತನುಕಂಪ, ಸ್ವೇದೋತ್ಕರ್ಷ, ಪರಿರಕ್ಷಣ, ಲಜ್ಜೆ ಮತ್ತು ಪ್ರಣಯ ಚೇಷ್ಟೆಗಳನ್ನುಂಟುಮಾಡುವ ಆ ಲಿಂಗದಿಂದ ಕ್ಷಣಮಾತ್ರವೂ ಆಕೆಯು ವಿಯೋಗವನ್ನು ಸಹಿಸಲಾರದಾದಳು.

೩೪. ಆ ಸಮಯದಲ್ಲಿ ಒಂದಾನೊಂದು ಅಶರೀರವಾಣಿಯು ಆಕೆಯನ್ನು ಕುರಿತು ಹೀಗೆಂದು ಹೇಳಿತು:—"ಓ ಬಾಲೇ! ಈ ಲಿಂಗವನ್ನು ಬಿಟ್ಟುಬಿಡು. ಪ್ರವಾಹವೆಲ್ಲವೂ ನಿಂತೇಹೋಯಿತು.

೩೫. ನಿನ್ನಿಂದ ಪೂಜಿಸಲ್ಪಟ್ಟ ಈ ಮರಳಿನ ಲಿಂಗವು ಶಾಶ್ವತವಾದ ವೈಭವದಿಂದ ಕೂಡಿದುದಾಗಿ ದೇವತೆಗಳಿಗೂ ಪೂಜ್ಯವಾಗಿ ಸಕಲಾಭೀಷ್ಟಗಳನ್ನೂ ನೆರವೇರಿಸುವುದು.

೩೬. ಧರ್ಮರಕ್ಷಣರೂಪವಾದ ನಿನ್ನ ಈ ಉಗ್ರವಾದ ತಪಸ್ಸನ್ನೂ ಅದರ ಸಾಕ್ಷಿಭೂತವಾದ ಈ ಸೈಕತಲಿಂಗವನ್ನೂ ನೋಡಿ ಲೋಕದ ಜನರು ಕೃತಾರ್ಥರಾಗಲಿ.

ಅಹಂ ಹಿ ತೈಜಸಂ ರೂಪಮಾಸ್ಥಾಯ ವಸುಧಾತಲೇ ।
ವಸಾಮಿ ಚಾತ್ರ ಸಿದ್ಧ್ಯರ್ಥಮರುಣಾಚಲಸಂಜ್ಞಯಾ ॥ ೩೭ ॥
ರುಣದ್ಧಿ ಸರ್ವಲೋಕೇಭ್ಯಃ ಪರುಷಂ ಪಾಪಸಂಚಯಂ ।
ರುಣೋ ನ ವಿದ್ಯತೇ ಯಸ್ಮಿನ್ದೃಷ್ಟೇ ತೇನಾರುಣಾಚಲಃ ॥ ೩೮ ॥
ಋಷಯಃ ಸಿದ್ಧಗಂಧರ್ವಾ ಮಹಾತ್ಮಾನಶ್ಚ ಯೋಗಿನಃ ।
ಮುಕ್ತ್ವಾ ಕೈಲಾಸ ಶಿಖರಂ ಮೇರುಂ ಚೈನಮುಪಾಸತೇ ॥ ೩೯ ॥
ಮದಂಶಜಾತಯೋಃ ಪೂರ್ವಂ ಯುಧ್ಯತೋರ್ಬ್ರಹ್ಮಕೃಷ್ಣಯೋಃ ।
ಅಹಂ ಮೋಹಮಪಾಕರ್ತುಂ ತೇಜೋರೂಪೋ ವ್ಯವಸ್ಥಿತಃ ॥ ೪೦ ॥
ಬ್ರಹ್ಮಣಾ ಹಂಸರೂಪೇಣ ವಿಷ್ಣುನಾ ಕ್ರೋಡರೂಪಿಣಾ ।
ಅದೃಷ್ಟಶೇಖರಪದಃ ಪ್ರಣತೋ ಭಕ್ತಿಯೋಗತಃ ॥ ೪೧ ॥
ತತಃ ಪ್ರಸನ್ನಃ ಪ್ರತ್ಯಕ್ಷಸ್ತಾಭ್ಯಾಂ ವರಮಭೀಪ್ಸಿತಂ ।
ಪ್ರಾದಾಂ ಜಗತ್ತ್ರಯಸ್ಯಾಸ್ಯ ಸಂರಕ್ಷಾಯಾಂ ತು ಕೌಶಲಂ ॥ ೪೨ ॥
ಪ್ರಾರ್ಥಿತಶ್ಚ ಪುನಸ್ತಾಭ್ಯಾಮರುಣಾಚಲಸಂಜ್ಞಯಾ ।
ಅನ್ವೈಷಿ ತೈಜಸಂ ರೂಪಮಹಂ ಸ್ಥಾವರಲಿಂಗತಾಂ ॥ ೪೩ ॥

---

೩೭. ನಾನೂ ಸಹ ತೈಜಸರೂಪದಿಂದ ಜನರ ಇಷ್ಟಾರ್ಥಗಳನ್ನು ನೀಡುತ್ತ ಈ ಸ್ಥಳದಲ್ಲಿಯೇ ಅರುಣಾಚಲನೆಂಬ ಹೆಸರಿನಿಂದ ವಾಸಮಾಡುತ್ತೇನೆ.

೩೮. ಸಕಲ ಲೋಕಗಳ ಪಾಪಸಂಚಯವನ್ನು ನಾಶಮಾಡುವುದರಿಂದಲೂ ದರ್ಶನಮಾತ್ರದಿಂದಲೇ ತಾಪತ್ರಯಗಳನ್ನು ನಿರ್ಮೂಲಮಾಡುವುದರಿಂದಲೂ ಈ ಲಿಂಗಕ್ಕೆ ಅರುಣಾಚಲೇಶ್ವರನೆಂಬ ಹೆಸರುಂಟಾಗಲಿ.

೩೯. ಋಷಿಗಳು, ಸಿದ್ಧರು, ಗಂಧರ್ವರು, ಮಹಾಪುರುಷರು, ಯೋಗಿವರ್ಯರು ಮುಂತಾದ ಸಾಧಕರೆಲ್ಲರೂ ಮೇರು ಕೈಲಾಸಪರ್ವತಗಳನ್ನು ಬಿಟ್ಟು ಈ ಲಿಂಗವನ್ನು ಉಪಾಸನೆ ಮಾಡುವರು.

೪೦. ಪೂರ್ವದಲ್ಲಿ ನನ್ನಿಂದಲೇ ಸಂಭೂತರಾದ ಬ್ರಹ್ಮವಿಷ್ಣುಗಳ ಮೋಹವನ್ನು ಕಳೆಯುವುದಕ್ಕಾಗಿ ನಾನು ಈ ತೇಜೋರೂಪದಿಂದ ಅವತರಿಸಿದೆನು.

೪೧. ಹಂಸರೂಪಿಯಾದ ಬ್ರಹ್ಮನೂ, ವರಾಹರೂಪಿಯಾದ ಮಹಾವಿಷ್ಣುವೂ ನನ್ನ ತುದಿಮೊದಲುಗಳನ್ನು ನೋಡಲಾರದೆಹೋದರು. ಆಗಲವರು ಭಕ್ತಿಯೋಗದಿಂದ ನನ್ನನ್ನು ನಮಸ್ಕರಿಸಿದರು.

೪೨–೪೩. ನಾನು ಪ್ರಸನ್ನನಾಗಿ ತ್ರಿಲೋಕಗಳ ಸಂರಕ್ಷಣಾರೂಪವಾದ ವರವನ್ನು ಕೊಡುವವನಾಗಿ ಅವರಿಬ್ಬರಿಗೂ ಪ್ರತ್ಯಕ್ಷನಾದೆನು. ಅವರಿಂದಲೇ ಪ್ರಾರ್ಥಿತನಾಗಿ ನನ್ನ ತೇಜೋರೂಪವನ್ನು ಸ್ಥಾವರಲಿಂಗವನ್ನಾಗಿ ಮಾರ್ಪಡಿಸಿಕೊಂಡು ಅರುಣಾಚಲೇಶ್ವರನೆಂಬ ಹೆಸರಿನಿಂದ ಇಲ್ಲಿ ನಿಂತೆನು.

ಗತ್ವಾ ಪೃಚ್ಛ ಮಹಾಭಾಗಂ ಮದ್ಭಕ್ತಂ ಗೌತಮಂ ಮುನಿಂ ।
ಅರುಣಾಚಲಮಾಹಾತ್ಮ್ಯಂ ಶ್ರುತ್ವಾ ತತ್ರ ತಪಶ್ಚರ ॥ ೪೪ ॥
ತತ್ರ ತೇ ದರ್ಶಯಿಷ್ಯಾಮಿ ತೈಜಸಂ ರೂಪಮಾತ್ಮನಃ ।
ಸರ್ವಪಾಪನಿವೃತ್ತ್ಯರ್ಥಂ ಸರ್ವಲೋಕಹಿತಾಯ ಚ ॥ ೪೫ ॥
ಇತಿ ವಾಚಂ ಸಮಾಕರ್ಣ್ಯ ನಿಷ್ಕಲಾತ್ಕಥಿತಾಂ ಶಿವಾತ್ ।
ತಥೇತಿ ಸಹಸಾ ದೇವೀ ಗಂತುಂ ಸಮುಪಚಕ್ರಮೇ ॥ ೪೬ ॥
ಅಥ ದೇವಾನೃಷೀನ್ಸರ್ವಾನ್ಸ್ಪಶ್ಚಾತ್ಸೇವಾರ್ಥಮಾಗತಾನ್ ।
ಅವಾದೀದಂಬಿಕಾಲೋಕ್ಯ ಸ್ನೇಹಪೂರ್ಣೇನ ಚಕ್ಷುಷಾ ॥ ೪೭ ॥
ತಿಷ್ಠತಾತ್ರೈವ ವೈ ದೇವಾ ಮುನಯಶ್ಚ ದೃಢವ್ರತಾಃ ।
ನಿಯಮಾಂಶ್ಚಾಧಿತಿಷ್ಠಂತಃ ಕಂಪಾರೋಧಸಿ ಪಾವನೇ ॥ ೪೮ ॥
ಸರ್ವಪಾಪಕ್ಷಯಕರಂ ಸರ್ವಸೌಭಾಗ್ಯವರ್ಧನಂ ।
ಪೂಜ್ಯತಾಂ ಸೈಕತಂ ಲಿಂಗಂ ಕುಚಕಂಕಣಲಾಂಛನಂ ॥ ೪೯ ॥
ಅಹಂ ಹಿ ನಿಷ್ಕಲಂ ರೂಪಮಾಸ್ಥಾಯೈತದ್ದಿವಾನಿಶಂ ।
ಆರಾಧಯಾಮಿ ಮಂತ್ರೇಣ ಶೋಣೇಶ್ವರಂ ವರಪ್ರದಂ ॥ ೫೦ ॥

---

೪೪. ನೀನು ಇಲ್ಲಿಂದ ಹೊರಟು ಗೌತಮ ಮುನಿಯನ್ನು ಸಂದರ್ಶಿಸಿ ನನ್ನಲ್ಲಿ ಭಕ್ತಿಯನ್ನು ಮಾಡುವ ವಿಧಾನವನ್ನೂ ಅರುಣಾಚಲ ಮಾಹಾತ್ಮ್ಯೆ ವನ್ನೂ ಆತನಿಂದ ತಿಳಿದು ಅಲ್ಲಿಯೇ ತಪಸ್ಸನ್ನು ಮಾಡುವವಳಾಗು.

೪೫. ಅಲ್ಲಿ ಸರ್ವಪಾಪಗಳ ನಿವೃತ್ತಿಗಾಗಿಯೂ, ಸಕಲ ಲೋಕಗಳ ಹಿತದೃಷ್ಟಿಯಿಂದಲೂ ನಿನಗೆ ನನ್ನ ತೈಜಸರೂಪವನ್ನು ತೋರಿಸುತ್ತೇನೆ.''

೪೬. ಅಶರೀರಿಯಾದ ಪರಮೇಶ್ವರನ ಈ ಮಾತುಗಳನ್ನು ಕೇಳಿ ಗಿರಿಜೆಯು ಹಾಗೆಯೇ ಮಾಡಲು ನಿಶ್ಚಯಿಸಿ ಸಂಭ್ರಮದಿಂದ ಹೊರಡಲುದ್ಯುಕ್ತಳಾದಳು.

೪೭. ಆಗ ತನ್ನನ್ನು ಸೇವಿಸಲು ಬಂದ ದೇವತೆಗಳನ್ನೂ, ಋಷಿಗಳನ್ನೂ, ಮನುಷ್ಯರನ್ನೂ ಕುರಿತು ಸ್ನೇಹಪೂರಿತವಾದ ದೃಷ್ಟಿಯುಳ್ಳವಳಾಗಿ ಇಂತೆಂದಳು.

೪೮. "ಎಲೈ ದೇವತೆಗಳೆ! ಮಹರ್ಷಿಗಳೆ! ನೀವೆಲ್ಲರೂ ನಿಮ್ಮ ನಿಮ್ಮ ನಿಯಮಗಳನ್ನನುಸರಿಸಿ ದೃಢವಾದ ಮನಸ್ಸಿನಿಂದ ವ್ರತಗಳನ್ನು ಮಾಡುತ್ತ ಪುಣ್ಯತಮವಾದ ಈ ಕಂಪಾನದಿಯ ದಡದಲ್ಲಿಯೇ ನೆಲಸುವವರಾಗಿರಿ.

೪೯–೫೦. ಸರ್ವಪಾಪಗಳನ್ನೂ ನಿರ್ಮೂಲಗೊಳಿಸಿ ಸಕಲ ಸೌಭಾಗ್ಯ ಗಳನ್ನು ಕೊಡುವುದೂ, ಚೂಚುಕಕಂಕಣಗಳಿಂದ ಅಂಕಿತವಾಗಿರುವುದೂ ಆದ ಈ ಸೈಕತಲಿಂಗವನ್ನು ನೀವು ಪೂಜೆಮಾಡಿರಿ. ನಾನೂ ಅಹೋರಾತ್ರಿಗಳಲ್ಲಿಯೂ ಶಿವನ ತೇಜೋರೂಪವನ್ನು ಮನಸ್ಸಿನಲ್ಲಿ ಧರಿಸಿದವಳಾಗಿ ವೇದಮಂತ್ರಗಳಿಂದ ವರಪ್ರದನಾದ ಅರುಣಾಚಲೇಶ್ವರನನ್ನು ಪೂಜಿಸುತ್ತೇನೆ.

ಮತ್ತಪಶ್ಚರಣಾಲ್ಲೋಕೇ ಮದ್ಧರ್ಮಪರಿಪಾಲನಾತ್ ।
ಮಲ್ಲಿಂಗದರ್ಶನಾಚ್ಚೈವ ಸಿದ್ಧ್ಯಂತ್ಯಷ್ಟ ವಿಭೂತಯಃ ॥ ೫೧ ॥
ಸರ್ವಕಾಮಪ್ರದಾನೇನ ಕಾಮಾಕ್ಷೀತಿ ಕಾಮತಃ ।
ಮಾಂ ಪ್ರಣಮ್ಯಾತ್ರ ಮದ್ಭಕ್ತಾ ಲಭಂತಾಂ ವಾಂಛಿತಂ ವರಂ ॥ ೫೨ ॥
ಅಹಂ ಹಿ ದೇವದೇವಸ್ಯ ಶಂಭೋರವ್ಯಾಹತೋ ಜನಃ ।
ಆದೇಶಂ ಪಾಲಯಿಷ್ಯಾಮಿ ಗತ್ವಾರುಣಮಹೀಧರಂ ॥ ೫೩ ॥
ತತ್ರ ಗತ್ವಾ ತಪಸ್ತೀವ್ರಂ ಕೃತ್ವಾ ಶಂಭುಂ ಪ್ರಸಾದ್ಯ ಚ ।
ಮಾಂ ತು ಲಬ್ಧವರಾಂ ಯೂಯಂ ಪಶ್ಚಾದ್ದ್ರಕ್ಷ್ಯಥ ಸಂಗತಾಃ ॥ ೫೪ ॥
ಇತಿ ಸರ್ವಾನ್ವಿಸೃಜ್ಯಾಶು ಸದ್ಭಕ್ತಾನ್ಪಾದಸೇವಿನಃ ।
ಅರುಣಾದ್ರಿಂ ಗತಾ ಬಾಲಾ ತಪಸೇ ಶಂಕರಾಜ್ಞಯಾ ॥ ೫೫ ॥
ನಿತ್ಯಾಭಿಸೇವಿತಾಕಾರಿ ಸಖೀಭಿರಭಿಯೋಗತಃ ।
ಆಸಸಾದಾರುಣಾದ್ರೀಶಂ ದಿವ್ಯದುಂದುಭಿನಾದಿತಂ ॥ ೫೬ ॥
ಅಂತಸ್ತೇಜೋಮಯಂ ಶಾಂತಮರುಣಾಚಲನಾಯಕಂ ।
ಅಪ್ಸರೋನೃತ್ಯಗೀತೈಶ್ಚ ಪೂಜಿತಂ ಪುಷ್ಪವೃಷ್ಟಿಭಿಃ ॥ ೫೭ ॥

---

೫೧–೫೨. ನಾನು ಮಾಡಿದ ಈ ತಪಸ್ಸಿನ ಪುಣ್ಯದಿಂದಲೂ ನನ್ನ ಧರ್ಮ ರಕ್ಷಣ ಕಾರ್ಯದಿಂದಲೂ ನನ್ನ ಈ ಸೈಕತಲಿಂಗದ ದರ್ಶನದಿಂದಲೂ ಸಕಲ ಭಕ್ತರಿಗೂ ಇಷ್ಟಸಿದ್ಧಿಗಳುಂಟಾಗಲಿ. ಎಲ್ಲರ ಇಷ್ಟಾರ್ಥಗಳನ್ನೂ ಇಚ್ಛಾಮಾತ್ರ ದಿಂದಲೇ ಉಂಟುಮಾಡಿಕೊಡುವ ನನ್ನನ್ನು ಕಾಮಾಕ್ಷಿಯೆಂಬ ಹೆಸರಿನಿಂದ ಇಲ್ಲಿ ನನ್ನ ಭಕ್ತರು ಸೇವಿಸಿ ತಮ್ಮ ತಮ್ಮ ಕೋರಿಕೆಗಳನ್ನು ಹೊಂದುವರು.

೫೩. ನಾನೂ ಸಹ ಪರಮೇಶ್ವರನ ಅವಿಚ್ಛಿನ್ನಭಕ್ತಳಾಗಿರುವೆನು. ಈಗ ನಾನು ಆತನ ಆಜ್ಞೆಯನ್ನು ಶಿರಸಾವಹಿಸಿ ಅರುಣಾಚಲಕ್ಕೆ ಹೊರಡುತ್ತೇನೆ.

೫೪. ಅಲ್ಲಿಗೆ ಹೋಗಿ ಉಗ್ರವಾದ ತಪಸ್ಸನ್ನು ಮಾಡಿ ಸದಾಶಿವನನ್ನು ಸಾಕ್ಷಾತ್ಕಾರಮಾಡಿಕೊಂಡು ಈಪ್ಸಿತ ವರಗಳನ್ನು ಹೊಂದಿ ಹಿಂದಿರುಗಿದ ನನ್ನನ್ನು ಪುನಃ ನೀವು ನೋಡುತ್ತೀರಿ.''

೫೫. ಹೀಗೆ ಹೇಳಿ ಭಕ್ತರನ್ನೆಲ್ಲ ಬೀಳ್ಕೊಟ್ಟು ಆ ದೇವಿಯು ಶಿವನ ಆಜ್ಞೆಯನ್ನು ಪಾಲಿಸುವವಳಾಗಿ ಅರುಣಾಚಲದಲ್ಲಿ ತಪಸ್ಸನ್ನು ಮಾಡಲು ಹೊರಟಳು.

೫೬–೫೭. ನಿತ್ಯದಲ್ಲಿಯೂ ತನ್ನ ಸಖಿಯರಿಂದು ಪರಿಚರಿಸಲ್ಪಟ್ಟವಳಾಗಿ ದಿವ್ಯ ದುಂದುಭಿಗಳಿಂದ ಸೇವಿಸಲ್ಪಟ್ಟುದೂ, ಒಳಗೆ ತೇಜೋಮಯವಾಗಿದ್ದರೂ ಹೊರಗೆ ಶಾಂತರೂಪದಿಂದ ಕಂಗೊಳಿಸುವುದೂ, ಅಪ್ಸರಸ್ತ್ರೀಯರ ನೃತ್ಯ, ಗೀತ, ಪುಷ್ಪವರ್ಷಗಳಿಂದ ಸದಾ ಸಂಸೇವ್ಯವಾದುದೂ ಆದ ಅರುಣಾಚಲೇಶ್ವರ ನನ್ನು ಕಂಡಳು.

ಪ್ರಣಮ್ಯ ಸ್ಥಾವರಂ ಲಿಂಗಂ ಕೌತೂಹಲಸಮನ್ವಿತಾ ।
ಸಿದ್ಧಾನಾಂ ಯೋಗಿನಾಂ ಸಾರ್ಧಮೃಷೀಣಾಂ ಚಾನ್ವವೈಕ್ಷತ ॥ ೫೮ ॥
ಅತ್ರಿರ್ಭೃಗುರ್ಭರದ್ವಾಜಃ ಕಶ್ಯಪಶ್ಚಾಂಗಿರಾಸ್ತಥಾ ।
ಕುತ್ಸಶ್ಚ ಗೌತಮಶ್ಚಾನ್ಯೇ ಸಿದ್ಧವಿದ್ಯಾಧರಾಮರಾಃ ॥ ೫೯ ॥
ತಪಃ ಕುರ್ವಂತಿ ಸತತಮುಪೇಕ್ಷಿತವರಾಪ್ತಯೇ ।
ಗಂಗಾದ್ಯಾಸ್ಸರಿತಶ್ಚಾನ್ಯಾಃ ಪರಿತಃ ಪರ್ಯುಪಾಸತೇ ॥ ೬೦ ॥
ದಿವ್ಯಲಿಂಗಮಿದಂ ಪೂಜ್ಯಮರುಣಾದ್ರಿರಿತಿ ಸ್ಮೃತಂ ।
ವಂದಸ್ವೇತಿ ಸುರೈಃ ಪ್ರೋಕ್ತಾ ಪ್ರಣನಾಮ ಪುನಃ ಪುನಃ ॥ ೬೧ ॥
ಅಭ್ಯರ್ಥಿತಾ ಪುನಃ ಸರ್ವೈರಾತಿಥ್ಯಾರ್ಥೇ ಮಹರ್ಷಿಭಿಃ ।
ಶಿವಾಜ್ಞಯಾ ಗೌತಮೋ ಮೇ ದ್ರಷ್ಟವ್ಯ ಇತಿ ಸಾ ವದತ್ ॥ ೬೨ ॥
ಅಯಮತ್ರರ್ಷಿಭಿರ್ಭಕ್ತೈರ್ನಿರ್ದಿಷ್ಟಂ ತಮುಥಾಭ್ಯಗಾತ್ ।
ಸ ಮುನಿಃ ಶಿವಭಕ್ತಾನಾಂ ಪ್ರಥಮಸ್ತಪಸಾಂ ನಿಧಿಃ ॥ ೬೩ ॥
ವನಾಂತರಂ ಗತಃ ಪ್ರಾತಃ ಸಮಿತ್ಕುಶಫಲಾಹೃತೇಃ ।
ಅತಿಥೀನಾಶ್ರಮಂ ಪ್ರಾಪ್ತಾನರ್ಚಥೇತಿ ದೃಢವ್ರತಾನ್ ।
ಶಿಷ್ಯಾನಾದಿಶ್ಯ ಧರ್ಮಾತ್ಮಾ ಗತಶ್ಚ ವಿಪಿನಾಂತರಂ ॥ ೬೪ ॥

---

೫೮–೬೦. ಬಳಿಕ ಆಕೆಯು ತನ್ನನ್ನು ಅನುಸರಿಸಿದ ಸಿದ್ಧರು ಮತ್ತು ಯೋಗಿಗಳೊಡನೆ ಆ ಸ್ಥಾವರಲಿಂಗಕ್ಕೆ ಕುತೂಹಲದಿಂದ ನಮಸ್ಕಾರವನ್ನು ಮಾಡಿ ಅಲ್ಲಿಯೇ ನಿಂತಳು. ಅತ್ರಿಮಹರ್ಷಿ, ಭೃಗು, ಭರದ್ವಾಜ, ಕಾಶ್ಯಪ, ಆಂಗಿರಸ, ಕುತ್ಸ, ಗೌತಮ ಮೊದಲಾದ ಋಷಿಗಳೂ, ಸಿದ್ಧರೂ, ವಿದ್ಯಾಧರರೂ, ದೇವತೆಗಳೂ. ತಮ್ಮ ಇಷ್ಟಾರ್ಥಗಳ ಸಿದ್ಧಿಗಾಗಿ ಅಲ್ಲಿ ತಪಸ್ಸನ್ನು ಮಾಡುವರು. ಗಂಗಾದಿ ಸಕಲ ತೀರ್ಥಗಳೂ ಅಲ್ಲಿಯೇ ನೆಲಸಿರುವುವು.

೬೧. "ಎಲೌ ದೇವಿಯೆ! ಇದೇ ಅರುಣಾಚಲವೆಂಬ ಹೆಸರಿನ ದಿವ್ಯ ಲಿಂಗವು. ಇದಕ್ಕೆ ನಮಸ್ಕರಿಸು" ಎಂದು ದೇವತೆಗಳಿಂದ ಆಜ್ಞಪ್ತಳಾಗಿ ಪಾರ್ವತಿಯು ಮತ್ತೆ ಮತ್ತೆ ಆ ಲಿಂಗಕ್ಕೆ ನಮಸ್ಕಾರವನ್ನು ಮಾಡಿದಳು.

೬೨. ಬಳಿಕ ಅಲ್ಲಿ ನೆರೆದಿದ್ದ ಋಷಿಗಳೆಲ್ಲರೂ ಆಕೆಗೆ ಆತಿಥ್ಯವನ್ನು ಮಾಡ ಲೆಳಸಿದರು. ಆದರೆ ಗಿರಿಜೆಯು "ಶಿವಾಜ್ಞಾನುಸಾರವಾಗಿ ನಾನು ಈಗ ಗೌತಮನನ್ನು ನೋಡಲೆಳಸುತ್ತೇನೆ" ಎಂದು ಹೇಳಿದಳು.

೬೩. ಇಂತು ನುಡಿದು ಆಕೆಯು ಭಕ್ತರಾದ ಋಷಿವರ್ಯರಿಂದ ಆತನ ಸ್ಥಳವನ್ನು ತಿಳಿದುಕೊಂಡು ಅಲ್ಲಿಗೆ ಬಂದಳು. ಗೌತಮಮುನಿಯು ಶಿವಭಕ್ತರಲ್ಲಿ ಅಗ್ರೇಸರನೂ ತಪಸ್ಸಿನ ಆಕಾರವೂ ಆಗಿರುವನು.

೬೪. ಸಮಿತ್ಕುಶಗಳನ್ನೂ, ಫಲಮೂಲಗಳನ್ನೂ ಸಂಗ್ರಹಿಸುವ ಆವಶ್ಯಕತೆ

ಅಥ ಸಾ ಗೌತಮಂ ದ್ರಷ್ಟುಮಾಗತಾ ಪರ್ಣಶಾಲಿಕಾಂ ।
ಕ್ವ ಗತೋ ಮುನಿರಿತ್ಯುಕ್ತೈರಿತ ಆಯಾಸ್ಯತಿ ಕ್ಷಣಾತ್ ॥ ೬೫ ॥
ಶಿಷ್ಯೈರಭ್ಯರ್ಥಿತೇತ್ಯುಕ್ತ್ವಾ ಫಲಮೂಲೈಸ್ಸುಗಂಧಿಭಿಃ ।
ಅಭ್ಯುತ್ಥಾನೇನಾಸನೇನ ಪಾದ್ಯೇನಾರ್ಘ್ಯೇಣ ಸೂನೃತೈಃ ॥ ೬೬ ॥
ವಚನೈಃ ಫಲಮೂಲೇನ ಸಾರ್ಚಿತಾ ಶಿಷ್ಯಸಂಪದಾ ।
ಕ್ಷಣಂ ಕ್ಷಮಸ್ವೇತ್ಯೂಚುಸ್ತಾಮನ್ಯೇ ಜಗ್ಮುಸ್ತದಂತಿಕಂ ॥ ೬೭ ॥
ದೇವ್ಯಾಂ ಪ್ರವಿಷ್ಟಮಾತ್ರಾಯಾಂ ಮಹರ್ಷೇರಾಶ್ರಮೋ ಮಹಾನ್ ।
ಅಭವತ್ಕಲ್ಪಬಹುಳೋ ಮಣಿಪ್ರಾಸಾದಸಂಕುಲಃ ॥ ೬೮ ॥
ವನಾಂತರಾದುಪಾವೃತ್ಯ ಸಮಿತ್ಕುಶಫಲಾಹರಃ ।
ಅಪಶ್ಯತ್ಸ್ವಾಶ್ರಮಂ ದೂರೇ ವಿಮಾನಶತಶೋಭಿತಂ ॥ ೬೯ ॥
ಕಿಮೇತದಿತಿ ಸಾಶ್ಚರ್ಯಂ ಚಿಂತಯನ್ಮುನಿಪುಂಗವಃ ।
ಗೌರ್ಯಾಃ ಸಮಾಗಮಃ ಸರ್ವಮಪಶ್ಯತ್ ಜ್ಞಾನಚಕ್ಷುಷಾ ॥ ೭೦ ॥

---

ಯಿಂದ ಗೌತಮಮಹರ್ಷಿಯು ಒಂದು ದಿನ ವ್ರತೋಪವಾಸಗಳಲ್ಲಿ ನಿರತರಾದ ತಮ್ಮ ಶಿಷ್ಯರನ್ನು ಕರೆದು ಆಶ್ರಮಕ್ಕೆ ಬಂದ ಅತಿಥಿ ಅಭ್ಯಾಗತರನ್ನು ಆದರದಿಂದ ಸತ್ಕರಿಸುವಂತೆ ನಿಯಮನಮಾಡಿ ವನಾಂತರಕ್ಕೆ ಹೊರಟು ಹೋಗಿದ್ದನು.

೬೫. ಆ ಕಾಲದಲ್ಲಿಯೇ ಗಿರಿಜೆಯು ಗೌತಮರ ಪರ್ಣಶಾಲೆಗೆ ಬಂದು ಅಲ್ಲಿದ್ದ ಮುನಿಗಳನ್ನು ಕುರಿತು 'ಗೌತಮನು ಎಲ್ಲಿರುವನು?' ಎಂದು ಕೇಳಲು ಅವರು 'ಇಷ್ಟರಲ್ಲಿಯೇ ಇಲ್ಲಿಗೇ ದಯಮಾಡಿಸುವರು' ಎಂದರು.

೬೬–೬೭. ಬಳಿಕ ಪ್ರತ್ಯುತ್ಥಾನ, ಆಸನ, ಪಾದ್ಯ, ಅರ್ಘ್ಯ, ಸುಗಂಧಯುಕ್ತಗಳಾದ ಫಲಮೂಲಗಳು, ಇವೇ ಮೊದಲಾದ ಸತ್ಕ್ರಿಯೆಗಳಿಂದ ಆದರಿಸಲ್ಪಟ್ಟವಳಾಗಲು, ಕೆಲವರು ಆಕೆಯನ್ನು ಅಲ್ಲಿಯೇ ನಿಲ್ಲಹೇಳಿ ಗೌತಮರನ್ನು ಕರೆತರಲು ಹೊರಟರು.

೬೮. ಜಗದಂಬೆಯು ಪ್ರವೇಶಮಾಡಿದ ಮಾತ್ರದಿಂದಲೇ ವಿಶಾಲವಾದ ಗೌತಮರ ಆಶ್ರಮವು ಸಕಲ ಸಲಕರಣೆಗಳಿಂದ ಕೂಡಿದ ಮಣಿಮಂಟಪಗಳ ಸಮೂಹವಾಗಿ ಮಾರ್ಪಟ್ಟಿತು.

೬೯. ಗೌತಮನು ಸಮಿತ್ಕುಶಾದಿಗಳ ಸಂಗ್ರಹವನ್ನು ಮಾಡಿಕೊಂಡು ಹಿಂದಿರುಗಲು ತಮ್ಮ ಆಶ್ರಮವು ಅನೇಕ ಉಪ್ಪರಿಗೆಗಳಿಂದ ಶೋಭಿಸುತ್ತಿದ್ದುದನ್ನು ಕಂಡನು.

೭೦. ಆತನು ಈ ಆಶ್ಚರ್ಯವೇನೆಂದು ಚಿಂತಿಸಿ ತನ್ನ ಜ್ಞಾನದೃಷ್ಟಿಯಿಂದ ಗೌರೀದೇವಿಯು ತಮ್ಮ ಆಶ್ರಮಕ್ಕೆ ಬಂದಿರುವುದನ್ನು ತಿಳಿದನು.

ಶೀಘ್ರಂ ನಿವರ್ತಮಾನೋಽಸೌ ದ್ರಷ್ಟುಂ ತಾಂ ಲೋಕಮಾತರಂ ॥ ೭೧ ॥
ಶಿಷ್ಯೈಃ ಶೀಘ್ರಚರೈರ್ವೃತ್ತಮಾವೇದಿತಮಥಾಶೃಣೋತ್ ॥ ೭೨ ॥
ಅಥ ಮಹರ್ಷಿರುಪಾಗತಕೌತುಕೋ
ನಿಜತಪಃಫಲಮೇವ ತದಾಗಮಂ ।
ಶಿವದಯಾಕಲಿತಂ ಪರಿಚಿಂತಯ
ನ್ನಭಜದಾಶ್ರಮಮಾಶ್ರಿತವತ್ಸಲಃ ॥ ೭೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಪೂರ್ವಾರ್ಧೇ "ಪಾರ್ವತ್ಯಾ ಗೌತಮಾಶ್ರಮಾಗಮನವರ್ಣನಂ" ನಾಮ ಚತುರ್ಥೋಽಧ್ಯಾಯಃ

---

೭೧-೭೨. ಜಗನ್ಮಾತೆಯಾದ ಆಕೆಯನ್ನು ನೋಡುವ ತವಕದಿಂದ ಬರುತ್ತಿರುವ ಆತನು ಮಾರ್ಗಮಧ್ಯದಲ್ಲಿಯೇ ಶೀಘ್ರಗಾಮಿಗಳಾದ ಶಿಷ್ಯರನ್ನು ಸಂಧಿಸಿ ಅವರಿಂದ ಎಲ್ಲ ವೃತ್ತಾಂತವನ್ನು ತಿಳಿದನು.

೭೩. ಆಗಲಾ ಗೌತಮನು ಅತ್ಯಂತ ಕೌತುಕಯುಕ್ತನಾಗಿ ಶಿವನ ದಯೆಯಿಂದುಂಟಾದ ಪಾರ್ವತಿಯ ಆಗಮನವನ್ನು ತನ್ನ ತಪಸ್ಸಿನ ಫಲವೆಂದೇ ಭಾವಿಸುತ್ತ ಆಶ್ರಿತರಾದ ಶಿಷ್ಯರಿಂದೊಡಗೂಡಿ ಆಶ್ರಮವನ್ನು ಸೇರಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲಮಾಹಾತ್ಮ್ಯೆಯಲ್ಲಿ "ಪಾರ್ವತಿಯು ಗೌತಮಾಶ್ರಮಕ್ಕೆ ಬಂದುದು" ಎಂಬ ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಮೋಽಧ್ಯಾಯಃ

### ಬ್ರಹ್ಮಪುಷ್ಕರ ಮಾಹಾತ್ಮ್ಯವರ್ಣನಂ

ಬ್ರಹ್ಮೋವಾಚ:—

ಅರಣ್ಯಾದಾಗತಮುಂ ಶಾಂತಮುಟಜದ್ವಾರ ಆಗತಂ ।
ಪ್ರತ್ಯಾಥಾತುಂ ಪ್ರವವೃತೇ ಶಿವಭಕ್ತಿರ್ಜಗನ್ಮಯಿ ॥ ೧ ॥
ಆಲುಲೋಕೇ ಸಮಾಯಾತಂ ಗೌತಮುಂ ಶಿಷ್ಯಸೇವಿತಂ ।
ಲಂಬಮಾನಶಿರಶ್ಮಶ್ರುಸಂಪೂರ್ಣಮುಖಮಂಡಲಂ ॥ ೨ ॥
ಜಟಾಭಿರತಿತಾಮ್ರಾಭಿಸ್ತೀರ್ಥಸ್ನಾನವಿಶುದ್ಧಿಭಿಃ ।
ನ್ಯಸ್ತರುದ್ರಾಕ್ಷಮಣಿಭಿರ್ಜ್ವಾಲಾಭಿರಿವ ಪಾವಕಂ ॥ ೩ ॥
ಭಸ್ಮತ್ರಿಪುಂಡ್ರಕೋಪೇತವಿಶಾಲನಿಟಿಲೋಜ್ಜ್ವಲಂ ।
ಶುಕ್ಲಯಜ್ಞೋಪವೀತೇನ ಪೂರ್ಣಂ ರುದ್ರಾಕ್ಷದಾಮಭಿಃ ॥ ೪ ॥
ದಧಾನಂ ವಲ್ಕಲೇ ರಕ್ತೇ ತಪಃಕೃಶಿತವಿಗ್ರಹಂ ।
ಜಪಂತಂ ವೈದಿಕಾನ್ಮಂತ್ರಾನ್ರುದ್ರಪ್ರೀತಿಕರಾನ್ಬಹೂನ್ ॥ ೫ ॥

---

## ಕನ್ನಡದ ಅನುವಾದ

### ಬ್ರಹ್ಮಪುಷ್ಕರ ಮಾಹಾತ್ಮ್ಯ ವರ್ಣನವು

೧. ಬ್ರಹ್ಮನು ಹೇಳುತ್ತಾನೆ:—ಈ ಪ್ರಕಾರ ವನಾಂತರದಿಂದ ಹಿಂದುರಿಗಿದ ಶಾಂತಮೂರ್ತಿಯಾದ ಗೌತಮನನ್ನು ಕಂಡು ಶಿವಭಕ್ತಿಪರಾಯಣೆಯಾದ ಆ ಜಗನ್ಮಾತೆಯು ಆತನಿಗೆ ವಂದನವನ್ನು ಮಾಡಲು ಉದ್ಯುಕ್ತಳಾದಳು.

೨. ಆಗಲಾಕೆಯು ಉದ್ದವಾದ ತಲೆಗೂದಲುಗಳಿಂದಲೂ, ಗಡ್ಡ ಮೀಸೆಗಳಿಂದಲೂ ಆವೃತವಾದ ಮುಖಮಂಡಲವುಳ್ಳವನೂ, ಶಿಷ್ಯರಿಂದ ಪರಿವೃತನೂ ಆದ ಆ ಮುನಿಯನ್ನು ದೂರದಿಂದಲೇ ಕಂಡಳು.

೩–೪. ಆತನ ಜಟೆಗಳು ತೀರ್ಥಸ್ನಾನಗಳಿಂದ ಶುಭ್ರವಾಗಿ ತಾಮ್ರವರ್ಣದಿಂದ ಕೂಡಿದ್ದುವು. ಶರೀರದ ಎಲ್ಲೆಡೆಗಳಲ್ಲಿಯೂ ರುದ್ರಾಕ್ಷಮಾಲೆಗಳನ್ನು ಧರಿಸಿ ಜ್ವಾಲೆಗಳಿಂದ ಕೂಡಿದ ಬೆಂಕಿಯಂತೆ ಕಾಣುತ್ತಿದ್ದನು. ಭಸ್ಮತ್ರಿಪುಂಡ್ರಗಳಿಂದ ಶೋಭಿಸುವ ವಿಶಾಲವಾದ ಲಲಾಟದಿಂದಲೂ, ರುದ್ರಾಕ್ಷಿಗಳ ಸರಗಳಿಂದಲೂ ಶುದ್ಧವಾದ ಯಜ್ಞೋಪವೀತದಿಂದಲೂ ಕಂಗೊಳಿಸುತ್ತಿದ್ದನು;

೫. ರಕ್ತವರ್ಣ ವಿಶಿಷ್ಟಗಳಾದ ವಲ್ಕಲಗಳನ್ನು ಧರಿಸಿ, ತಪಸ್ಸಿನಿಂದ ದೇಹವನ್ನು ಕೃಶಮಾಡಿಕೊಂಡು ಪರಮೇಶ್ವರನಿಗೆ ಪ್ರೀತಿಕರಗಳಾದ ರುದ್ರಾಧ್ಯಾಯದ ವೈದಿಕ ಮಂತ್ರಗಳನ್ನು ನಿರಂತರದಲ್ಲಿಯೂ ಜಪಿಸುತ್ತಿದ್ದನು;

ಶಂಭುನಾವಸಿತೋದಾತ್ತಸಾರೂಪ್ಯಮಿವ ಭಾಷಿತಂ ।
ತೇಜೋನಿಧಿಂ ದಯಾಪೂರ್ಣಂ ಪ್ರತ್ಯಕ್ಷಮಿವ ಭಾಸ್ಕರಂ ॥ ೬ ॥
ಆಲೋಕ್ಯ ತಂ ಮಹಾತ್ಮಾನಂ ವೃದ್ಧಂ ಶಂಭುಪದಾಶ್ರಯಂ ।
ಕೃತಾಂಜಲಿಪುಟಾ ಗೌರೀ ಪ್ರಣಸ್ತುಮುಪಚಕ್ರಮೇ ॥ ೭ ॥
ಕೃತಾಂಜಲಿಂ ಮುನಿರ್ವೀಕ್ಷ್ಯ ಸಮಸ್ತಜಗದಂಬಿಕಾಂ ।
ಕಿಮೇತದಿತಿ ಸಾಶ್ಚರ್ಯಂ ವಾರಯನ್ಪ್ರಣನಾಮ ಸಃ ॥ ೮ ॥
ಸ್ವಾಗತಂ ಗೌರಿ ಸುಭಗೇ ಲೋಕಮಾತರ್ದಯಾನಿಧೇ ।
ವ್ಯಾಜೇನ ಭಕ್ತಸಂರಕ್ಷಾಂ ಕರ್ತುಮತ್ರಾಗತಾಸ್ಯಹೋ ॥ ೯ ॥
ಅಹೊ ಮಾನ್ಯೇ ಮಾನ್ಯಮರ್ಥಂ ವಿಜ್ಞಾಯೈವ ಪುರಾವಯಂ ।
ಪೃಥಗ್ಭಾವಮಿವಾಲಂಬ್ಯ ಶಿಷ್ಯಾದಿಭಿಃ ಸಮಾಗತಾ ॥ ೧೦ ॥
ಯದ್ದೇವಿ ತೇನ ಚೇತ್ಕಿಂಚಿನ್ಮಾಯಾ ವಿಲಸಿಸತಂ ನಿಜಂ ।
ತತಃ ಪ್ರಪಂಚ ಸಂಸಿದ್ಧಿಃ ಕಥಮೇವ ಭವಿಷ್ಯತಿ ॥ ೧೧ ॥

---

೬. ಪರಮೇಶ್ವರನ ಅನುಗ್ರಹದಿಂದ ಸಾರೂಪ್ಯಮೋಕ್ಷವನ್ನು ಪಡೆದವನಂತೆ ಮಾತನಾಡುತ್ತಿರುವವನೂ, ತೇಜೋಯುಕ್ತನೂ, ದಯಾನಿಧಿಯೂ, ಪ್ರತ್ಯಕ್ಷ ಸೂರ್ಯನಂತೆ ಕಾಂತಿಯುಕ್ತನೂ ಆಗಿದ್ದನು ;

೭. ಮಹಾತ್ಮನೂ, ವಯೋವೃದ್ಧನೂ, ಪರಮಾತ್ಮನ ಪಾದಗಳನ್ನೇ ನಂಬಿದವನೂ ಆದ ಆ ಮುನಿಯನ್ನು ಕಂಡು ಗೌರಿಯು ಅಂಜಲಿಬದ್ಧಳಾಗಿ ಆತನಿಗೆ ನಮಸ್ಕರಿಸಲು ಉಪಕ್ರಮಿಸಿದಳು.

೮. ಜನನ್ಮಾತೆಯಾದ ಆಕೆಯೇ ಅಂಜಲಿಬಂಧವನ್ನು ಮಾಡಿಕೊಂಡಿರಲು ಗೌತಮರು ಈ ಆಶ್ಚರ್ಯವೇನೆಂದು ಆಕೆಯನ್ನು ತಡೆದು ಆಕೆಗೆ ತಾವೇ ನಮಸ್ಕಾರ ಮಾಡಿದರು.

೯. ''ಎಲೌ ತಾಯಿ! ಲೋಕಮಾತೆಯೂ, ದಯಾಸಮುದ್ರಳೂ ಆದ ನಿನಗೆ ಸ್ವಾಗತವು! ಯಾವುದೋ ಒಂದು ನೆವದಿಂದ ನೀನು ಭಕ್ತರ ಸಂರಕ್ಷಣೆಯನ್ನು ಮಾಡುವವಳಾಗಿ ಈ ಲೋಕಕ್ಕೆ ಬಂದಿರುವೆಯಲ್ಲವೆ.

೧೦. ನಾವಾದರೋ ಪೂಜಾರ್ಹನಾದ ಪರಮಾತ್ಮನಲ್ಲಿಯೇ ತತ್ವನಿಶ್ಚಯವನ್ನು ತಿಳಿದರೂ ಸಹ ಅವನಿಂದ ನಾವು ಬೇರೆಯೆಂಬ ಭೇದಬುದ್ಧಿಯಿಂದ ಕೂಡಿದವರಾಗಿ ಶಿಷ್ಯಸಮೇತರಾಗಿ ಇಲ್ಲಿಗೆ ಬಂದೆವು.

೧೧. ಎಲೌ ದೇವಿಯೆ! ನಿಜವಾಗಿಯೂ ನಿನ್ನ ಮಾಯೆಯ ವಿಜೃಂಭಣೆಯೆಂಬುದೇ ಇಲ್ಲದಿದ್ದರೆ ಈ ಪ್ರಪಂಚದ ಸತ್ಯತ್ವಭ್ರಾಂತಿಯುತಾನೆ ಹೇಗೆ ಉಂಟಾಗುತ್ತಿದ್ದಿತು ?

ತಿಷ್ಠತ್ವಶೇಷಂ ಮೇ ವಕ್ತುಂ ಮಾಯಾವಿಲಸಿತಂ ತವ ।
ನ ಶಕ್ಯತೇ ಯನ್ನಿರ್ಣೇತುಂ ತ್ವದೀಯೈಶ್ಚ ಕದಾಚನ ॥ ೧೨ ॥
ಆಸ್ಯತಾಂ ಪಾವನೇ ಶುದ್ಧ ಆಸನೇ ಕುಶನಿರ್ಮಿತೇ ।
ಗೃಹ್ಯತಾಂ ಪಾದ್ಯಮರ್ಘ್ಯಂಚ ದತ್ತಂ ಚ ವಿಧಿವನ್ಮಯಾ ॥ ೧೩ ॥
ಇತಿ ಶಿಷ್ಯೈಃ ಸಮಾನೀತೇ ದರ್ಭಾಂಕೇ ಪರಮಾಸನೇ ।
ಆಸೀನಾಮಂಬಿಕಾಂ ವೃದ್ಧೋ ಮುನಿರಾನರ್ಚ ಭಕ್ತಿಮಾನ್ ॥ ೧೪ ॥
ನಿವೇದ್ಯ ಸಕಲಾಂ ಪೂಜಾಂ ಭಕ್ತಿಭಾವಸಮನ್ವಿತಃ ।
ಗೌರ್ಯಾ ಸಮಭ್ಯನುಜ್ಞಾತಃ ಸ್ವಯಮಪ್ಯಾಸನೇ ಸ್ಥಿತಃ ॥ ೧೫ ॥
ಉವಾಚ ದಶನಜ್ಯೋತ್ಸ್ನಾಪರಿಧೌತದಿಶಾಮುಖಃ ।
ಪುಲಕಾಂಚಿತಸರ್ವಾಂಗಃ ಸಾನಂದಾಶ್ರು ಸಗದ್ಗದಂ ॥ ೧೬ ॥
ಅಹೋ ದೇವಸ್ಯ ಮಹಾತ್ಮ್ಯಂ ಶಂಭೋರಮಿತತೇಜಸಃ ।
ಸದ್ಭಕ್ತರಕ್ಷಣಾಯ ತ್ವಾಮಾದಿಶದ್ಭಕ್ತವತ್ಸಲಃ ॥ ೧೭ ॥

---

೧೨. ನಿನ್ನ ಅಂತರಂಗ ಭಕ್ತರಿಂದಲೇ ನಿರ್ಣಯಿಸಲಸದಳವಾದ ಈ ಮಾಯೆಯ ವಿಲಾಸವನ್ನು ನಿಶ್ಶೇಷವಾಗಿ ವರ್ಣಿಸಲು ನನಗಾದರೂ ಸರ್ವಥಾ ಸಾಧ್ಯವಿಲ್ಲವು.

೧೩. ಪವಿತ್ರವೂ ಪರಿಶುದ್ಧವೂ ಆದ ಈ ಕುಶಾಸನದಲ್ಲಿ ಕುಳಿತುಕೊ. ನಾನು ವಿಧ್ಯುಕ್ತರೀತಿಯಾಗಿ ಅರ್ಪಿಸುವ ಅರ್ಘ್ಯಪಾದ್ಯಗಳನ್ನು ಸ್ವೀಕರಿಸುವವಳಾಗು.''

೧೪. ಈ ರೀತಿಯಾಗಿ ನುಡಿದ ಬಳಿಕ ಶಿಷ್ಯರಿಂದ ಸಜ್ಜುಗೊಳಿಸಲ್ಪಟ್ಟ ಉತ್ತಮವಾದ ದರ್ಭಾಸನದಲ್ಲಿ ಪಾರ್ವತೀದೇವಿಯನ್ನು ಕುಳ್ಳಿರಿಸಿ ವೃದ್ಧನಾದ ಆ ಗೌತಮಮುನಿಯು ಭಕ್ತಿಯುಕ್ತನಾಗಿ ಪೂಜಿಸಿದನು.

೧೫. ತಾನು ಶ್ರದ್ಧೆಯಿಂದ ಮಾಡಿದ ಪೂಜೆಯೆಲ್ಲವನ್ನೂ ಪರಮಾತ್ಮನಲ್ಲಿ ನಿವೇದನಮಾಡಿ, ಬಳಿಕ ಗೌರೀದೇವಿಯಿಂದ ಆಜ್ಞಪ್ತನಾಗಿ ತಾನೂ ಒಂದು ಆಸನವನ್ನಲಂಕರಿಸಿದನು.

೧೬. ತರುವಾಯ ಆತನು ಥಳಥಳಿಸುತ್ತಿರುವ ಹಲ್ಲುಗಳ ಕಾಂತಿಯಿಂದ ದಿಕ್ಕುಗಳನ್ನೆ ಬೆಳಗಿಸುತ್ತ ಮೈಯೆಲ್ಲವೂ ಪುಲಕಾಂಕಿತವಾಗಲು ಆನಂದಾಶ್ರುಗಳನ್ನು ತುಳುಕಿಸುತ್ತ ಗದ್ಗದಸ್ವರದಿಂದ ಹೀಗೆ ಹೇಳಿದನು.

೧೭. ''ಏನಾಶ್ಚರ್ಯ! ದೇವದೇವನಾದ ಪರಮೇಶ್ವರನು ಭಕ್ತರಲ್ಲಿ ಅನುಕಂಪವುಳ್ಳವನಾಗಿ ಅವರ ಸಂರಕ್ಷಣೆಗೋಸ್ಕರ ನಿನ್ನನ್ನೂ ಈ ರೀತಿ ಆಜ್ಞಾಪಿಸಿರುವನಲ್ಲವೆ!

ಅಸಿದ್ಧಮನ್ಯಲ್ಲಬ್ಧವ್ಯಂ ಕಿಂ ವಾನ್ಯತ್ತವ ವಿದ್ಯತೇ ।
ಅಂಬೈತದ್ಭಕ್ತಿಮಾಹಾತ್ಮ್ಯಂ ಸಂದರ್ಶಯಿತುಮೀಶ್ವರಃ ॥ ೧೮ ॥
ಕೈಲಾಸಶೈಲವೃತ್ತಾಂತಃ ಕಂಪಾತಟೇತಪಸ್ಸ್ಥಿತಿಃ ।
ಅರುಣಾದ್ರಿಸಮಾವೇಶಃ ಸರ್ವಂ ಜ್ಞಾತಮಿದಂ ಮಯಾ ॥ ೧೯ ॥
ಆಗತಾಸಿ ಮಹಾಭಾಗೇ ಭಕ್ತಾಶ್ರಮಮಿಮಂ ಸ್ವಯಂ ।
ಸ್ನೇಹೇನ ಕರುಣಾಮೂರ್ತೇ ಕರ್ತವ್ಯಮುಪದಿಶ್ಯತಾಂ ॥ ೨೦ ॥
ಇತಿ ತಸ್ಯ ವಚಃ ಶ್ರುತ್ವಾ ಮಹರ್ಷೇಃ ಸರ್ವವೇದಿನಃ ।
ಅಂಬಿಕಾ ಪ್ರಾಹ ಕುತುಕಾತ್ಸ್ತುವಂತೀ ತಂ ಮಹಾಮುನಿಂ ॥ ೨೧ ॥
ಮಹಾವೈಭವಮೇತತ್ತೇ ದೇವದೇವಃ ಸ್ವಯಂ ಶಿವಃ ।
ಮಧ್ಯೇ ತಪಸ್ವಿನಾಂ ತ್ವಂತು ದ್ರಷ್ಟವ್ಯ ಇತಿ ಚಾದಿಶತ್ ॥ ೨೨ ॥
ಆಗಮಾನಾಂ ಶಿವೋಕ್ತಾನಾಂ ವೇದಾನಾಮಪಿ ಪಾರಗಃ ।
ತಪಸಾ ಶಂಭುಭಕ್ತಾನಾಂ ತ್ವಮೇವ ಶಿವಸಮ್ಮತಃ ॥ ೨೩ ॥

---

೧೮. ಈ ವ್ಯಾಜದಿಂದ ಈಶ್ವರನು ಭಕ್ತಿಯ ಮಾಹಾತ್ಮ್ಯವನ್ನೇ ತೋರಿಸುವ ಇಚ್ಛೆಯುಳ್ಳವನೆಂದು ತಿಳಿಯಬೇಕು. ಅಲ್ಲದಿದ್ದರೆ ನಿನಗೆ ಸಾಧನದಿಂದ ಪ್ರಾಪ್ತವ್ಯವಸ್ತುವಾಗಲಿ, ಈಗ ಆ ಪ್ರಾಪ್ತವಾಗಿರುವುದಾಗಲಿ ಕಿಂಚಿನ್ಮಾತ್ರವೂ ಇರುವುದಿಲ್ಲವು.

೧೯. ಹಾಗೂ ಕೈಲಾಸದಲ್ಲಿ ನಡೆದ ವೃತ್ತಾಂತವನ್ನೂ, ಕಂಪಾನದಿಯ ದಡದಲ್ಲಿ ನೀನು ತಪಸ್ಸನ್ನು ಮಾಡಿದುದನ್ನೂ, ಅರುಣಾಚಲೇಶ್ವರನು ನಿನಗೆ ಇತ್ತ ಆಜ್ಞೆಯನ್ನೂ ತಿಳಿದೇ ಇರುವೆನು.

೨೦. ದಯಾಮಯಳಾದ ನೀನೂ ಸ್ನೇಹದಿಂದ ಪರಮಾತ್ಮನ ಭಕ್ತರಿಂದ ನಮ್ಮ ಈ ಆಶ್ರಮಕ್ಕೆ ಬಂದಿರುವೆ. ಈಗ ನಮ್ಮಿಂದಾಗಬೇಕಾಗಿರುವ ಕರ್ತವ್ಯವನ್ನು ತಿಳಿಸುವವಳಾಗು.''

೨೧. ಹೀಗೆ ನುಡಿದ ಸರ್ವಜ್ಞನಾದ ಮಹರ್ಷಿಯ ಮಾತುಗಳನ್ನು ಕೇಳಿ ಪಾರ್ವತಿಯು ಕೌತೂಹಲದಿಂದ ಆತನನ್ನು ಮನಸ್ಸಿನಲ್ಲಿಯೇ ಹೊಗಳುತ್ತ ಇಂತೆಂದಳು :—

೨೨. ''ದೇವೇಶ್ವರನಾದ ಶಿವನೇ ಸಕಲ ಋಷಿಗಳೆಲ್ಲರನ್ನೂ ಬಿಟ್ಟು ನಿನ್ನನ್ನೇ ನೋಡಬೇಕೆಂದು ನನಗೆ ಆಜ್ಞಾಪಿಸಿದುದು ನನ್ನ ಪುಣ್ಯಫಲವೇ ಎನ್ನಬೇಕು.

೨೩. ನೀನು ಶೈವಾಗಮಗಳಲ್ಲಿಯೂ, ಸಕಲ ವೇದಗಳಲ್ಲಿಯೂ ನಿಷ್ಣಾತನಾಗಿರುವೆ. ಅಲ್ಲದೆ ತಪಸ್ವಿಗಳಾದ ಶಿವಭಕ್ತರಲ್ಲೆಲ್ಲ ನೀನೇ ಶಿವನಿಗೆ ಪರಮಪ್ರಿಯನಾಗಿರುವೆ.





**ಅರುಣಾಚಲ ನಾಮ್ನಾಹಂ ತಿಷ್ಠಾಮೀತಿ ಸೋಽಬ್ರವೀಚ್ಛಿವಃ ।**
**ಅಸ್ಯಾಚಲಸ್ಯಮಾಹಾತ್ಮ್ಯಂ ಶ್ರೋತವ್ಯಂ ಚ ಭವನ್ಮುಖಾತ್ ॥ ೨೪ ॥**
**ಪ್ರಾಪ್ತಾಸ್ಮ್ಯಹಂ ತಪಃ ಕರ್ತುಮರುಣಾಚಲಸನ್ನಿಧೌ ।**
**ಭವತಾಂ ದರ್ಶನಾದೇವ ಸ್ವಯಮೀಶಃ ಪ್ರಸೀದತಿ ॥ ೨೫ ॥**
**ಶಿವಭಕ್ತೇನ ಸಂಭಾಷಾ ಶಿವಸಂಕೀರ್ತನಶ್ರವಃ ।**
**ಶಿವಲಿಂಗಾರ್ಚನಂ ಲೋಕೇ ವಪುರ್ಗ್ರಹಫಲೋದಯಃ ॥ ೨೬ ॥**
**ತಸ್ಮಾನ್ಮನ್ಯೇತನ್ಮಾಹಾತ್ಮ್ಯಂ ಶ್ರೋತವ್ಯಂ ಭವತೋ ಮುಖಾತ್ ।**
**ಸುವ್ಯಕ್ತಮುಪದೇಶೇನ ಜ್ಞಾನತೋಽಸಿ ಪಿತಾ ಮಮ ॥ ೨೭ ॥**
**ಇತಿ ತಸ್ಯಾ ವಚಃ ಶ್ರುತ್ವಾ ಗೌತಮಸ್ತಪಸಾಂ ನಿಧಿಃ ।**
**ಆಚಖ್ಯೌ ಗಿರಿಶಂ ಧ್ಯಾಯನ್ನರುಣಾಚಲವೈಭವಂ ॥ ೨೮ ॥**
**ಅಜ್ಞಾತಮಿವ ಯತ್ಕಿಂಚಿತ್ಪೃಚ್ಛ್ಯತೇ ಚ ಪುನಸ್ತ್ವಯಂ ।**
**ಅನ್ಯೈಮಿ ಸರ್ವವಿದ್ಯಾನಾಂ ಮಾಯಾ ಶೈವೀ ತ್ವಮೇವ ಸಾ ॥ ೨೯ ॥**

---

೨೪. ಶಿವನು ನನಗೆ ತಾನು ಅರುಣಾಚಲನೆಂಬ ಹೆಸರಿನಿಂದ ಭೂಮಿಯಲ್ಲಿ ನಿಲ್ಲುವೆನೆಂದು ತಿಳಿಸಿದನು. ಈ ಪರ್ವತದ ಮಾಹಾತ್ಮ್ಯವನ್ನು ನಿನ್ನ ಮುಖದಿಂದ ಕೇಳಲೆಳಸುವೆನು.

೨೫. ನಾನು ಈ ಅರುಣಾಚಲದಲ್ಲಿ ತಪಸ್ಸನ್ನು ಮಾಡಲು ಬಂದಿರುತ್ತೇನೆ. ನನ್ನಲ್ಲಿ ಖಂಡಿತವಾಗಿಯೂ ಪರಮೇಶ್ವರನು ಪ್ರಸನ್ನನಾಗುವನೆಂಬುವುದಕ್ಕೆ ನಿಮ್ಮಂತಹ ಮಹಾತ್ಮರ ದರ್ಶನವೇ ಶುಭಸೂಚಕವಾಗಿದೆ.

೨೬. ಭೂಲೋಕದಲ್ಲಿ ಶರೀರವನ್ನು ಧರಿಸಿದವರಿಗೆ ಶಿವಭಕ್ತರೊಡನೆ ಸಂಭಾಷಣವೂ, ಶಿವಸಂಕೀರ್ತನೆಗಳನ್ನು ಕೇಳುವುದೂ, ಶಿವಲಿಂಗಾರ್ಚನೆಯನ್ನು ಮಾಡುವುದೂ ಮುಖ್ಯವಾಗಿ ಫಲದಾಯಕವಾಗಿರುವುವು.

೨೭. ಆದುದರಿಂದ ಈ ಅರುಣಾಚಲದ ಮಾಹಾತ್ಮ್ಯವನ್ನು ವಿಶದವಾಗಿ ಉಪದೇಶರೂಪವಾಗಿ, ನಿನ್ನ ಮುಖದಿಂದ ಕೇಳಬಯಸುತ್ತೇನೆ. ಈಶ್ವರನ ಮಾಹಾತ್ಮ್ಯಜ್ಞಾನವುಳ್ಳವನಾದುದರಿಂದ ನೀನು ನನಗೆ ಪಿತೃಸಮಾನನಾಗಿರುವೆ."

೨೮. ಹೀಗೆಂದ ಪಾರ್ವತಿಯ ಮಾತುಗಳನ್ನು ಕೇಳಿ ತಪೋನಿಧಿಯಾದ ಗೌತಮನು ಮನಸ್ಸಿನಲ್ಲಿಯೇ ಪರಮಾತ್ಮನನ್ನು ಧ್ಯಾನಿಸುತ್ತ ಅರುಣಾಚಲ ವೈಭವವನ್ನು ವಿಸ್ತರಿಸತೊಡಗಿದನು.

೨೯. "ಎಲೌ ಪಾರ್ವತಿಯೆ! ನೀನು ನನ್ನಿಂದ ವಿಷಯಗಳನ್ನು ತಿಳಿದುಕೊಳ್ಳಬೇಕೆಂದು ಯಾವ ಅಜ್ಞಾನವನ್ನು ನಟಿಸುತ್ತಿರುವೆಯೋ ಆ ಅಜ್ಞಾನಕ್ಕೆ ಮೂಲಕಾರಣನಾದ ಸದಾಶಿವನ ಮಾಯೆಯೇ ನೀನೆಂಬುದನ್ನು ನಾನು ಚೆನ್ನಾಗಿಯೇ ಮನಗಂಡಿರುತ್ತೇನೆ."

ಅಥವಾ ಭಕ್ತವಕ್ತ್ರೇಣ ಶಿವವೈಭವಸಂಶ್ರವಃ ।
ಶಿಕ್ಷಣಂ ಶಾಂಭವಂ ತೇಷಾಂ ತವ ತುಷ್ಟ್ಯೇಶ್ಚ ಕಾರಣಂ ॥ ೩೦ ॥
ಪಠಿತಾನಾಂ ಚ ವೇದಾನಾಂ ಯದಾ ವೃತ್ತಫಲಾವಹಂ ।
ವದತಾಂ ಶೃಣ್ವತಾಂ ಲೋಕೇ ಶಿವಸಂಕೀರ್ತನಂ ತಥಾ ॥ ೩೧ ॥
ಸಫಲಾನ್ಯದ್ಯ ಸರ್ವಾಣಿ ತಪಾಂಸಿ ಚರಿತಾನಿ ಮೇ ।
ಯದಹಂ ಶಂಭುನಾದಿಷ್ಟಂ ಮಾಹಾತ್ಮ್ಯಂ ಕೀರ್ತಯೇ ಶ್ರುತಂ ॥ ೩೨ ॥
ಶಿವಾಶಿವಪ್ರಸಾದೇನ ಮಾಹಾತ್ಮ್ಯಮಿದಮದ್ಭುತಂ ॥ ೩೩ ॥
ಅರುಣಾಚಲ ಮಾಹಾತ್ಮ್ಯಂ ದುರಿತಕ್ಷಯಕಾರಣಂ ।
ಶ್ರೂಯತಾಮನವದ್ಯಾಂಗಿ ಪುರಾವೃತ್ತಮಿದಂ ಮಹತ್ ॥ ೩೪ ॥
ಅರುಣಾದ್ರಿಮಯಂ ಲಿಂಗಮಾವಿರ್ಭೂತಂ ಯಥಾಪುರಾ ।
ನಶಕ್ಯತೇ ಪುನರ್ವಕ್ತುಮಶೇಷಂ ವಕ್ತ್ರಕೋಟಿಭಿಃ ॥ ೩೫ ॥
ಅರುಣಾಚಲಮಾಹಾತ್ಮ್ಯಂ ಬ್ರಹ್ಮಣಾಮಪಿ ಕೋಟಿಭಿಃ ।
ಬ್ರಹ್ಮಣಾ ವಿಷ್ಣುನಾ ಪೂರ್ವಂ ಸೋಮಭಾಸ್ಕರವಹ್ನಿಭಿಃ ॥ ೩೬ ॥

---

೩೦–೩೧. ಅಥವಾ, ಭಕ್ತರಿಂದ ಶಿವನ ವೈಭವದ ಸಂಕೀರ್ತನವೂ, ಶಿವ ತತ್ತ್ವಜ್ಞಾನದಲ್ಲಿ ಅವರ ಶಿಕ್ಷಣವೂ ನಿನಗೆ ಪರಮ ಪ್ರೀತಿಯನ್ನುಂಟುಮಾಡುವವುಗಳಾಗಿವೆ. ಸಮಸ್ತ ವೇದಗಳನ್ನೂ ಪುನಃ ಪುನಃ ಪಠಿಸುವುದರಿಂದ ಯಾವ ಫಲವುಂಟಾಗುವುದೋ, ಅದಕ್ಕೆ ಸಮವಾದ ಫಲವೇ ಶಿವನ ಮಹಿಮೆಗಳನ್ನು ಹೇಳುವವರಿಗೂ, ಕೇಳುವವರಿಗೂ ಉಂಟಾಗುವುದು.

೩೨–೩೪. ಪೂರ್ವದಲ್ಲಿ ಕೇಳಿದ ಶಿವಮಾಹಾತ್ಮ್ಯವನ್ನು ಇಂದು ಶಿವಾಜ್ಞಾನುಸಾರವಾಗಿ ನಾನು ಅನುವಾದ ಮಾಡುವ ಸುಸಮಯವೊದಗಿದ್ದರಿಂದ ಇಂದೇ ನನ್ನ ತಪಸ್ಸೂ, ವ್ರತೋಪವಾಸಗಳೂ ಸಫಲವಾದುವು. ಪಾರ್ವತಿಯ ಮತ್ತು ಪರಮೇಶ್ವರನ ವರಪ್ರಸಾದದಿಂದ ಈ ಮಾಹಾತ್ಮ್ಯವು ಅದ್ಭುತವಾಗಿರುವುದು. ಅರುಣಾಚಲ ಮಾಹಾತ್ಮ್ಯವು ಸಕಲ ಪಾಪಗಳನ್ನೂ ನಾಶಗೊಳಿಸುವ ಸಾಮರ್ಥ್ಯವುಳ್ಳದ್ದು. ಎಲೌ ಮಂಗಳಾಂಗಿಯೆ! ಪೂರ್ವದಲ್ಲಿ ನಡೆದ ಒಂದು ಸಮಾಚಾರವನ್ನು ಹೇಳುತ್ತೇನೆ.

೩೫. ಪೂರ್ವಕಾಲದಲ್ಲಿ ಅರುಣಾಚಲರೂಪವಾದ ಲಿಂಗವು ಉದ್ಭವವಾದ ಚರಿತ್ರೆಯನ್ನು ನಿಶ್ಶೇಷವಾಗಿ ನಿರೂಪಿಸಲು ಕೋಟಿಮುಖಗಳಿಂದಲೂ ಸಾಧ್ಯವಾಗುವುದಿಲ್ಲ.

೩೬. ಈ ಅರುಣಾಚಲೇಶ್ವರನು ಅನೇಕ ಕಲ್ಪಗಳಿಂದಲೂ, ಬ್ರಹ್ಮ, ವಿಷ್ಣು, ಸೂರ್ಯಚಂದ್ರರು, ಅಗ್ನಿ, ಇಂದ್ರಾದಿ ಅಷ್ಟದಿಕ್ಪಾಲಕರು, ಇವರುಗಳಿಂದಲೂ ಸಕಲ ಸಿದ್ಧಿಗಳ ಪ್ರಾಪ್ತಿಗಾಗಿ ಪೂಜಿಸಲ್ಪಟ್ಟನು.

ಇಂದ್ರಾದಿಭಿಶ್ಚ ದಿಕ್ಪಾಲೈಃ ಪೂಜಿತಶ್ಚಾಷ್ಟ ಸಿದ್ಧಯೇ ।
ಸಿದ್ಧಚಾರಣ ಗಂಧರ್ವ ಯಕ್ಷವಿದ್ಯಾಧರೋರಗೈಃ ॥ ೩೭ ॥
ಖಗೈಶ್ಚ ಮುನಿಭಿರ್ದಿವ್ಯೈಃ ಸಿದ್ಧಯೋಗಿಭಿರರ್ಚಿತಃ ।
ತತ್ತತ್ತಾಪನಿವೃತ್ತ್ಯರ್ಥಂ ತತ್ತದೀಪ್ಸಿತ ಸಿದ್ಧಯೇ ॥ ೩೮ ॥
ಆರಾಧಿತೋಽಯಂ ಭಗವಾನರುಣಾದ್ರಿಪತಿಃ ಶಿವಃ ।
ದೃಷ್ಟೋ ಹರತಿ ಪಾಪಾನಿ ಸೇವಿತೋ ವಾಂಛಿತಪ್ರದಃ ॥ ೩೯ ॥
ಕೀರ್ತಿತೋಽಪಿ ಜನೈರ್ದೂರೈಃ ಶೋಣಾದ್ರಿರಿತಿ ಮುಕ್ತಿದಃ ।
ತೇಜಸ್ತಂಭಮಯಂ ರೂಪಮರುಣಾದ್ರಿರಿತಿ ಶ್ರುತಂ ।
ಧ್ಯಾಯಂತೋ ಯೋಗಿನಶ್ಚೇತೇ ಶಿವಸಾಯುಜ್ಯಮಾಪ್ನುಯುಃ ॥ ೪೦ ॥
ದತ್ತಂ ಹುತಂ ಚ ಯತ್ಕಿಂಚಿಜ್ಜಪ್ತಂ ಚಾನ್ಯತ್ತಪಃಕೃತಂ ।
ಅಕ್ಷಯ್ಯಂ ಭವತಿ ಪ್ರಾಪ್ತಮರುಣಾಚಲಸನ್ನಿಧೌ ॥ ೪೧ ॥
ಪುರಾ ಬ್ರಹ್ಮಾಚ ವಿಷ್ಣುಶ್ಚ ಶಿವತೇಜೋಽಂಶಸಂಭವೌ ।
ಸಾಹಂಕಾರೌ ಯುಯುಧತುಃ ಪರಸ್ಪರಜಿಗೀಷಯಾ ॥ ೪೨ ॥

---

೩೭. ಸಿದ್ಧರು, ಚಾರಣರು, ಗಂಧರ್ವರು, ಯಕ್ಷರು, ವಿದ್ಯಾಧರರು, ನಾಗರು, ಖೇಚರರು, ದೇವರ್ಷಿಗಳು, ಯೋಗಿವರ್ಯರು ಮುಂತಾದವರಿಂದ ಪೂಜೆಯನ್ನು ಕೈಕೊಳ್ಳುತ್ತಾನೆ.

೩೮. ತಮ್ಮ ತಮ್ಮ ಪಾಪಗಳನ್ನು ಕಳೆದುಕೊಳ್ಳುವುದಕ್ಕೂ, ತಮ್ಮ ಇಷ್ಟಾರ್ಥಗಳನ್ನು ಪ್ರಾಪ್ತಮಾಡಿಕೊಳ್ಳುವುದಕ್ಕೂ ಷಡ್ಗುಣೈಶ್ವರ್ಯವಂತನಾದ ಸದಾಶಿವನು ಅರುಣಾಚಲ ರೂಪದಿಂದ ಸಕಲರಿಂದಲೂ ಪೂಜಿಸಲ್ಪಡುವನು.

೩೯–೪೦. ದರ್ಶನಮಾತ್ರದಿಂದಲೇ ಪಾಪಗಳನ್ನು ನಾಶಗೊಳಿಸುವನು. ಸೇವೆಯನ್ನು ಕೈಕೊಂಡು ಸಮಸ್ತವಾಂಛಿತಗಳನ್ನೂ ಅನುಗ್ರಹಿಸುವನು. ದೂರದಿಂದಲೇ ನಾಮಸಂಕೀರ್ತನ ಮಾಡುವವರಿಗೂ ಸಹ ಮೋಕ್ಷವನ್ನು ಕೊಡುವನು. ಅರುಣಾದ್ರಿಯೆಂಬ ಹೆಸರುಳ್ಳ ತೇಜೋಲಿಂಗವಾದ ಶಿವನ ರೂಪವನ್ನು ಯಾವ ಯೋಗಿಗಳು ಮನಸ್ಸಿನಲ್ಲಿ ಧ್ಯಾನಮಾಡುವರೋ ಅವರು ಶಿವಸಾಯುಜ್ಯ ರೂಪವಾದ ಮುಕ್ತಿಯನ್ನು ಪಡೆಯುವರು.

೪೧. ಈ ಪರ್ವತಪ್ರದೇಶದಲ್ಲಿ ಮಾಡಿದ ದಾನಗಳು, ಹವನಹೋಮಗಳು, ಜಪಸ್ವಾಧ್ಯಾಯಗಳು, ಇತರ ವಿಧವಾದ ತಪಸ್ಸುಗಳು ಎಲ್ಲವೂ ಅಕ್ಷಯಫಲ ದಾಯಕಗಳಾಗುವುವು.

೪೨. ಪೂರ್ವದಲ್ಲಿ ಶಿವಾಂಶಸಂಭೂತರಾದ ಬ್ರಹ್ಮವಿಷ್ಣುಗಳು ಅಹಂಕಾರ ಮದದಿಂದ ಒಬ್ಬರನ್ನೊಬ್ಬರು ಜಯಿಸಬೇಕೆಂದು ಯುದ್ಧವನ್ನು ಮಾಡಿದರು.

ತಥಾ ತಯೋರ್ಗರ್ವಶಾಂತ್ಯೈ ಯೋಗಿಧ್ಯೇಯಃ ಸದಾಶಿವಃ ॥ ೪೩ ॥
ಅಗ್ನಿತೇಜೋಮಯಂ ರೂಪಮಾದಿಮಧ್ಯಾಂತವರ್ಜಿತಂ ।
ಸಂಪ್ರಾಪ್ಯ ತಸ್ಥೌ ತನ್ಮಧ್ಯೇ ದಿಶೋ ದಶ ವಿಭಾಸಯನ್ ॥ ೪೪ ॥
ತೇಜಸ್ಸ್ತಂಭಸ್ಯ ತಸ್ಯಾಥ ದ್ರಷ್ಟುಮಾದ್ಯಂತ ಭಾಗಯೋಃ ।
ಹಂಸಕ್ರೋಡತನೂ ಕೃತ್ವಾ ಜಗ್ಮತುರ್ದ್ಯಾಂ ರಸಾತಲಂ ॥ ೪೫ ॥
ತೌ ವಿಷಣ್ಣಮುಖೌ ದೃಷ್ಟ್ವಾ ಭಗವಾನ್ಕರುಣಾನಿಧಿಃ ।
ಆವಿರ್ಬಭೂವ ಚ ತಯೋರ್ವರಂ ಪ್ರಾದಾದಭೀಪ್ಸಿತಂ ॥ ೪೬ ॥
ತತ್ಪ್ರಾರ್ಥಿತಶ್ಚ ದೇವೇಶೋ ಯಾತಃ ಸ್ಥಾವರಲಿಂಗತಾಂ ।
ಅರುಣಾದ್ರಿರಿತಿ ಖ್ಯಾತಃ ಪ್ರಶಾಂತಃ ಸಂಪ್ರಕಾಶತೇ ॥ ೪೭ ॥
ದಿವ್ಯದುಂದುಭಿನಿರ್ಘೋಷೈರಪ್ಸರೋಗೀತನರ್ತನೈಃ ।
ಪೂಜ್ಯತೇ ತೈಜಸಂ ಲಿಂಗಂ ಪುಷ್ಪವೃಷ್ಟಿಶತೈಃ ಸದಾ ॥ ೪೮ ॥
ಬ್ರಹ್ಮಣಾಮಪ್ಯತೀತಾನಾಂ ಪುರಾ ಷಣ್ಣವತೇಃ ಪ್ರಭುಃ ।
ವಿಷ್ಣುನಾಭಿಸಮುದ್ಭೂತೋ ಬ್ರಹ್ಮಾ ಲೋಕಾನ್ಸಸರ್ಜಹಿ ॥ ೪೯ ॥

---

೪೩–೪೫. ಯೋಗಿಧ್ಯಾನಗಮ್ಯನಾದ ಸದಾಶಿವನು ಇವರಿಬ್ಬರ ಗರ್ವವನ್ನು ಮುರಿಯುವ ಉದ್ದಿಶ್ಯದಿಂದ ಆದಿಮಧ್ಯಾಂತರಹಿತವಾದ, ಅಗ್ನಿತೇಜೋಮಯವಾದ ಲಿಂಗದ ರೂಪವನ್ನು ಧರಿಸಿ ದಿಕ್ಕುಗಳನ್ನು ಬೆಳಗುತ್ತ ಅವರಿಬ್ಬರ ಮಧ್ಯದಲ್ಲಿ ಆವಿರ್ಭವಿಸಿದನು. ಆ ಲಿಂಗದ ತುದಿಮೊದಲನ್ನು ಹುಡುಕುವ ಇಚ್ಛೆಯುಳ್ಳವರಾಗಿ ಬ್ರಹ್ಮನು ಹಂಸರೂಪದಿಂದ ಆಕಾಶಕ್ಕೆ ಹಾರಿದನು. ವಿಷ್ಣುವು ವರಾಹಾವತಾರನಾಗಿ ಭೂಮಿಯನ್ನು ಬಗೆದನು.

೪೬–೪೭. ನಿಷ್ಫಲವಾದ ತಮ್ಮ ಪ್ರಯತ್ನವನ್ನು ಕುರಿತು ದುಃಖಿಸುತ್ತ ಇಬ್ಬರೂ ವಿಷಣ್ಣರಾಗಿರಲು ಕರುಣಾಸಮುದ್ರನಾದ ಪರಶಿವನು ಅವರ ಮುಂದೆ ಆವಿರ್ಭವಿಸಿ ಅವರ ಇಷ್ಟಾರ್ಥಗಳನ್ನು ನೆರವೇರಿಸಿದನು. ಅವರಿಂದ ಪ್ರಾರ್ಥಿತನಾಗಿ ದೇವದೇವನು ತನ್ನ ತೇಜಸ್ಸನ್ನು ಉಪಸಂಹಾರ ಮಾಡಿಕೊಂಡು ಅರುಣಾಚಲನೆಂಬ ಹೆಸರಿನಿಂದ ಸ್ಥಾವರಲಿಂಗವಾಗಿ ಇಲ್ಲಿ ನೆಲಸಿರುವನು.

೪೮. ಆ ಪರಮಾತ್ಮನ ಗೂಢವಾದ ತೇಜೋಲಿಂಗವು ಯಾವಾಗಲೂ ದೇವತೂರ್ಯವಾದ್ಯಗಳಿಂದಲೂ, ಅಪ್ಸರಸ್ತ್ರೀಯರ ನೃತ್ಯಗೀತಗಳಿಂದಲೂ, ಪುಷ್ಪವೃಷ್ಟಿಗಳಿಂದಲೂ ಸಂಸೇವ್ಯವಾಗಿರುವುದು.

೪೯. ಈಗಿನಿಂದ ತೊಂಬತ್ತಾರು ಬ್ರಹ್ಮಕಲ್ಪಗಳಿಗೆ ಪೂರ್ವದಲ್ಲಿ ಒಬ್ಬ ಬ್ರಹ್ಮನು ಮಹಾವಿಷ್ಣುವಿನ ನಾಭೀಕಮಲದಿಂದ ಉದ್ಭವಿಸಿ ಸಕಲ ಲೋಕಗಳನ್ನೂ ಸೃಷ್ಟಿಮಾಡಿದನು.

ಸ ಕದಾಚಿತ್ತಪೋವಿಘ್ನಂ ಕರ್ತುಕಾಮೇನ ಯೋಗಿನಾಂ ।
ಇಂದ್ರೇಣ ಪ್ರಾರ್ಥಿತೋ ಬ್ರಹ್ಮಾ ಸಸರ್ಜ ಲಲಿತಾಂ ಸ್ತ್ರಿಯಂ ॥ ೫೦ ॥
ಲಾವಣ್ಯಗುಣಸಂಪೂರ್ಣಾಮಾಲೋಕ್ಯ ಕಮಲೇಕ್ಷಣಾಂ ।
ಮುಮೋಹ ಕಂದರ್ಪಶರೈಃ ಸ ವಿದ್ಧಹೃದಯೋ ವಿಧಿಃ ॥ ೫೧ ॥
ಸ್ಪ್ರಷ್ಟುಕಾಮಂ ತಮಾಲೋಕ್ಯ ಬ್ರಹ್ಮಾಣಂ ಕಮಲಾಸನಂ ।
ನತ್ವಾ ಪ್ರದಕ್ಷಿಣವ್ಯಾಜಾದ್ಗಂತುಕಾಮೈಚ್ಛದಪ್ಸರಾ ॥ ೫೨ ॥
ಅಸ್ಯಾಂ ಪ್ರದಕ್ಷಿಣಾಂ ಭಕ್ತ್ಯಾ ಕುರ್ವಾಣಾಯಾಂ ಪ್ರಜಾಪತೇಃ ।
ಚತಸೃಭ್ಯೋಽಪಿ ದಿಗ್ಭ್ಯೋಽಸ್ಯ ಮುಖಾನ್ಯಥ ಭವನ್ ಕ್ಷಣಾತ್ ॥ ೫೩ ॥
ಸಾ ಬಾಲಾ ಪಕ್ಷಿಣೀ ಭೂತ್ವಾ ಗಗನಂ ಸಮಗಾಹತ ।
ಪುನಶ್ಚ ಖಗರೂಪೇಣ ಸಮಾಯಾಂತಂ ಸಮೀಕ್ಷ್ಯ ಸಾ ॥ ೫೪ ॥
ಶರಣಂ ಯಾಚಮಾನಾ ಸಾ ಶೋಣಾದ್ರಿಮಿದಮಾಶ್ರಯತ್ ।
ಬ್ರಹ್ಮಣಾ ವಿಷ್ಣುನಾ ಚ ತ್ವಮದೃಷ್ಟಪದಶೇಖರಃ ।
ರಕ್ಷ ಮಾಮರುಣಾದ್ರೀಶ ಶರಣ್ಯ ಶರಣಾಗತಾಂ ॥ ೫೫ ॥

---

೫೦. ಒಂದಾನೊಂದು ದಿನ ಮಹರ್ಷಿಗಳ ತಪಸ್ಸಿಗೆ ವಿಘ್ನವನ್ನು ಮಾಡಲೆಳಸಿದ ಇಂದ್ರನಿಂದ ಪ್ರಾರ್ಥಿತನಾಗಿ ಬ್ರಹ್ಮನು ಮನೋಹರಳಾದ ಸ್ತ್ರೀಯೊಬ್ಬಳನ್ನು ಸೃಷ್ಟಿಗೈದನು.

೫೧. ಲಾವಣ್ಯಾದಿ ಗುಣಗಳಿಂದ ಯುಕ್ತಳಾದ ಆ ಕಮಲಲೋಚನೆಯನ್ನು ನೋಡಿ ಬ್ರಹ್ಮನೇ ಮನ್ಮಥಾವಿಷ್ಟಹೃದಯನಾಗಿ ಆಕೆಯಲ್ಲಿ ಮೋಹಗೊಂಡನು.

೫೨. ತನ್ನನ್ನು ಕೂಡಲೆಳಸುವ ಕಮಲಾಸನನನ್ನು ಕಂಡು ಆ ಅಪ್ಸರೆಯು ನಮಸ್ಕಾರವಾಡಿ ಪ್ರದಕ್ಷಿಣೆಯನ್ನು ಮಾಡುವ ನೆವದಿಂದ ಹೊರಟುಹೋಗಲೆಳಸಿದಳು.

೫೩. ಪ್ರದಕ್ಷಿಣೆಯನ್ನು ಮಾಡುತ್ತಿದ್ದ ಆಕೆಯನ್ನು ಬ್ರಹ್ಮನು ತದೇಕದೃಷ್ಟಿಯಿಂದ ನೋಡುತ್ತಿರಲು ಆತನಿಗೆ ತಕ್ಷಣದಲ್ಲಿಯೇ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಮುಖಗಳಾದುವು.

೫೪. ಆಕೆಯು ಪಕ್ಷಿರೂಪದಿಂದ ಗಗನಕ್ಕೆ ಹಾರಿದಳು. ಬ್ರಹ್ಮನೂ ಸಹ ಮತ್ತೊಂದು ಪಕ್ಷಿಯಾಗಿ ಆಕೆಯನ್ನು ಹಿಂಬಾಲಿಸಿದನು. ಇದನ್ನು ಕಂಡು ಆಕೆಯು ಈ ಅರುಣಾಚಲವನ್ನು ಆಶ್ರಯಿಸುವವಳಾದಳು.

೫೫. 'ಎಲೈ ಅರುಣಾಚಲೇಶ್ವರನೆ! ನಿನ್ನ ಆದ್ಯಂತಗಳನ್ನು ಬ್ರಹ್ಮವಿಷ್ಣುಗಳೂ ತಿಳಿಯಲು ಸಾಧ್ಯವಾಗಲಿಲ್ಲ. ಆದುದರಿಂದ ನೀನೇ ಶರಣ್ಯನು. ಶರಣಾಗತಳಾದ ನನ್ನನ್ನು ರಕ್ಷಿಸು.'

ಇತಿ ತಸ್ಯಾಂ ಭಯಾರ್ತಾಯಾಂ ಕ್ರೋಶಂತ್ಯಾಮರುಣಾಚಲಾತ್ ॥೫೬॥
ಉದಭೂತ್ಸ್ಥಾವರಾಲ್ಲಿಂಗಾದ್ವ್ಯಾಧಃ ಕಶ್ಚಿದ್ಧನುರ್ಧರಃ ।
ಸಂಧಾಯ ಸಾಯಕಂ ಚಾಪೇ ಸಮೇಘಗಗನದ್ಯುತಿಃ ।
ನಿಷಾದೇ ಪುರತೋ ದೃಷ್ಟೇ ಮೋಹಸ್ತಸ್ಯ ನನಾಶಹಿ ॥ ೫೭ ॥
ತತಃ ಪ್ರಸನ್ನಹೃದಯೋಽತಿನಮ್ರಃ ಕಮಲೋದ್ಭವಃ ।
ನಮಶ್ಚಕ್ರೇ ಶರಣ್ಯಾಯ ಶೋಣಾದ್ರಿಪತಯೇ ತದಾ ॥ ೫೮ ॥
ಸರ್ವಪಾಪಕ್ಷಯಕೃತೇ ನಮಸ್ತುಭ್ಯಂ ಪಿನಾಕಿನೇ ।
ಅರುಣಾಚಲರೂಪಾಯ ಭಕ್ತವಶ್ಯಾಯ ಶಂಭವೇ ॥ ೫೯ ॥
ಅಜಾನತಾಂ ಸ್ವಭಕ್ತಾನಾಮಕರ್ಮವಿನಿವರ್ತನೇ ।
ತ್ವದನ್ಯಃ ಕಃ ಪ್ರಭುಃ ಕರ್ತುಮಶಕ್ಯಂಚಾಪಿ ದೇಹಿನಾಂ ॥ ೬೦ ॥
ಉಪಸಂಹರ ಮೇ ದೇಹಂ ತೇಜಸಾ ಪಾಪನಿಶ್ಚಯಂ ।
ಅನ್ಯಂ ವಾ ಸೃಜ ವಿಶ್ವಾತ್ಮನ್ಬ್ರಹ್ಮಾಣಂ ಲೋಕಸೃಷ್ಟಯೇ ॥ ೬೦ ॥
ಅಥ ತಸ್ಯ ವಚಃ ಶ್ರುತ್ವಾ ಶಿವೋ ದೀನಸ್ಯ ವೇಧಸಃ ।
ಉವಾಚ ಕರುಣಾಮೂರ್ತಿರ್ಭೂತ್ವಾ ಚಂದ್ರಾರ್ಧಶೇಖರಃ ॥ ೬೨ ॥

---

೫೬–೫೭. ಹೀಗೆ ಆಕೆಯು ಭಯಗೊಂಡವಳಾಗಿ ಕೂಗಿಕೊಳ್ಳುತ್ತಿರಲು ಸ್ಥಾವರಲಿಂಗವಾದ ಈ ಅರುಣಾಚಲದಿಂದ ಧನುರ್ಬಾಣಗಳನ್ನು ಧರಿಸಿದ ಒಬ್ಬ ವ್ಯಾಧನು ಉದ್ಭವಿಸಿದನು. ಬಿಲ್ಲಿನಲ್ಲಿ ಬಾಣವನ್ನು ಸೇರಿಸಿ ಆ ವ್ಯಾಧನು ಮೇಘದಿಂದ ಕೂಡಿದ ಆಕಾಶದಂತೆ ವಿರಾಜಮಾನನಾಗಿದ್ದನು. ಆತನನ್ನು ನೋಡಿದ ಮಾತ್ರದಿಂದಲೇ ಬ್ರಹ್ಮನ ಮೋಹವು ನಷ್ಟವಾಯಿತು.

೫೮–೫೯. ಬಳಿಕ ಪ್ರಸನ್ನವಾದ ಅಂತಃಕರಣದಿಂದೊಡಗೂಡಿದವನಾಗಿ ಅವನು ಅತ್ಯಂತ ವಿನೀತಭಾವದಿಂದ ಅರುಣಾಚಲೇಶ್ವರನಿಗೆ ನಮಸ್ಕಾರವನ್ನು ಮಾಡಿದನು. ''ಸಮಸ್ತಪಾಪಗಳನ್ನು ನಾಶಮಾಡುವವನೂ, ಭಕ್ತರಿಗೆ ಅನುವರ್ತಿಯಾಗಿರುವವನೂ, ಪಿನಾಕವನ್ನು ಧರಿಸಿದವನೂ ಆದ ಅರುಣಾಚಲರೂಪವಾದ ನಿನಗೆ ನಮಸ್ಕಾರವು.

೬೦–೬೧. ಭಕ್ತರು ಅಜ್ಞಾನದಿಂದ ಮಾಡಿದ ಅಕಾರ್ಯಗಳನ್ನು ನಿವರ್ತಿಗೊಳಿಸುವುದಕ್ಕೂ, ಜೀವರು ಮಾಡಲಶಕ್ಯವಾದ ಕಾರ್ಯಗಳನ್ನು ಆಗಗೊಳಿಸಲಿಕ್ಕೂ ನೀನಲ್ಲದೆ ಇತರರಾರೂ ಸಮರ್ಥರಲ್ಲವು. ಪಾಪಸಂಕಲ್ಪದಿಂದ ಕೂಡಿದ ಈ ದೇಹವನ್ನು ಈಗಲೇ ನಾಶಮಾಡು. ಅಥವ ವಿಶ್ವಾತ್ಮನಾದ ನೀನು ಪ್ರಪಂಚದ ಸೃಷ್ಟಿಕಾರ್ಯದಲ್ಲಿ ಮತ್ತೊಬ್ಬನನ್ನಾದರೂ ನೇಮಿಸು.''

೬೨. ಬ್ರಹ್ಮನು ದೀನನಾಗಿ ಮಾಡಿದ ಈ ಪ್ರಾರ್ಥನೆಯಿಂದ ಆ ವ್ಯಾಧನು ಚಂದ್ರಶೇಖರನಾಗಿ ಕರುಣೆಗೊಂಡು ಆತನನ್ನು ಕುರಿತು ಹೀಗೆಂದನು:—

ದತ್ತಃ ಕಾಲಸ್ತ್ವವ ಮಯಾ ಪುರೈವ ನ ನಿವರ್ತ್ಯತೇ ।
ಕಂ ವಾ ರಾಗಾದಯೋ ದೋಷಾ ನ ಬಾಧೇರನ್ಪ್ರಭುಸ್ಥಿತಂ ॥ ೬೩ ॥
ತಸ್ಮಾದ್ದೂರಸ್ಥಿತೋಽಪ್ಯೇತದರುಣಾಚಲಸಂಜ್ಞಿತಂ ।
ಭಜಸ್ವ ತೈಜಸಂ ಲಿಂಗಂ ಸರ್ವದೋಷನಿವೃತ್ತಯೇ ॥ ೬೪ ॥
ವಾಚಿಕಂ ಮಾನಸಂ ಪಾಪಂ ಕಾಯಿಕಂ ವಾ ಚ ಯದ್ಭವೇತ್ ।
ವಿನಶ್ಯತಿ ಕ್ಷಣಾತ್ಸರ್ವಮರುಣಾಚಲದರ್ಶನಾತ್ ॥ ೬೫ ॥
ಪ್ರದಕ್ಷಿಣ ನಮಸ್ಕಾರೈಃ ಸ್ಮರಣೈರರ್ಚನೈಃ ಸ್ತವೈಃ ।
ಅರುಣಾದ್ರಿರಯಂ ನೃಣಾಂ ಸರ್ವಕಲ್ಮಷನಾಶನಃ ॥ ೬೬ ॥
ಕೈಲಾಸೇ ಮೇರುಶೃಂಗೇ ವಾ ಸ್ವಸ್ಥಾನೇಷು ಕಲಾದ್ರಿಷು ।
ಸಂದೃಶ್ಯಃ ಕಶ್ಚಿದೇವಾಹಮರುಣಾದ್ರಿರಯಂ ಸ್ವಯಂ ॥ ೬೭ ॥
ಯಚ್ಛೃಂಗದರ್ಶನಾನ್ನೃಣಾಂ ಚಕ್ಷುರ್ಲಾಭೇನ ಕೇವಲಂ ।
ಭವೇತ್ಸರ್ವಾಘನಾಶಶ್ಚ ಲಾಭಶ್ಚ ಜ್ಞಾನಚಕ್ಷುಷಃ ॥ ೬೮ ॥

---

೬೩. "ಎಲೈ ಬ್ರಹ್ಮನೆ! ನಿನಗೆ ನಾನೇ ಕೊಟ್ಟಿರುವ ಆಯುಃಪರಿಮಾಣವನ್ನು ಹಿಂದೆಗೆದುಕೊಳ್ಳುವುದಿಲ್ಲ. ಅಧಿಕಾರದಲ್ಲಿದ್ದ ಯಾವನಿಗೆತಾನೆ ರಾಗಾದಿ ದೋಷಗಳು ಬಾಧಿಸುವುದಿಲ್ಲವು?

೬೪. ಆದುದರಿಂದ ನೀನು ನಿನ್ನ ಸ್ಥಾನದಲ್ಲಿಯೇ ಇದ್ದುಕೊಂಡು ನಿನ್ನ ದೋಷಗಳ ಪರಿಹಾರಕ್ಕಾಗಿ ಅರುಣಾಚಲನಾಮಕವಾದ ಈ ತೇಜೋಲಿಂಗವನ್ನು ಸ್ಮರಿಸುತ್ತಿರು.

೬೫. ಕಾಯಿಕ, ಮಾನಸಿಕ ಮತ್ತು ವಾಚಿಕವಾಗಿ ಮನುಷ್ಯರಲ್ಲಿ ಯಾವ ಪಾಪಗಳುದ್ಭವಿಸುವುವೊ ಅವುಗಳೆಲ್ಲವೂ ಆರುಣಾಚಲದ ದರ್ಶನದಿಂದ ನಿರ್ಮೂಲವಾಗುವುವು.

೬೬. ಪ್ರದಕ್ಷಿಣೆ, ನಮಸ್ಕಾರ, ನಾಮಸ್ಮರಣೆ, ಪೂಜಾಸಪರ್ಯೆಗಳು, ಸ್ತೋತ್ರಗಳು — ಇವುಗಳಿಂದ ಈ ಪರ್ವತವು ಜನರ ಸಕಲ ಕಲ್ಮಷಗಳನ್ನೂ ನಾಶಮಾಡುವುದು.

೬೭. ಕೈಲಾಸದಲ್ಲಿಯೂ, ಮೇರುಪರ್ವತದಲ್ಲಿಯೂ ನಾನು ಕೆಲವು ಕಲೆಗಳಿಂದೊಡಗೂಡಿ ಒಮ್ಮೊಮ್ಮೆ ಕಾಣಿಸುತ್ತಿರುವೆನು. ಆದರೆ ಅರುಣಾಚಲವು ಮಾತ್ರ ನನ್ನ ಪೂರ್ಣಸ್ವರೂಪದಿಂದೊಡಗೂಡಿರುವುದು.

೬೮. ಮನುಷ್ಯನಿಗೆ ನೇತ್ರಗಳಿರುವುದಕ್ಕೆ ಆ ಪರ್ವತದ ಶೃಂಗದ ದರ್ಶನವೇ ಸಾರ್ಥಕತೆಯನ್ನುಂಟುಮಾಡುವುದು. ಇದರಿಂದ ಸಕಲ ಪಾಪಗಳ ಕ್ಷಯವೂ ಜ್ಞಾನನೇತ್ರದ ಲಾಭವೂ ಉಂಟಾಗುವುವು.

ಮದಂಶಸಂಭವೋ ಬ್ರಹ್ಮಾ ಸ್ವನಾಮ್ನಾ ಬ್ರಹ್ಮಪುಷ್ಕರೇ ।
ಅತ್ರ ಸ್ನಾತಃ ಪುರಾ ಬ್ರಹ್ಮನ್ಮೋಹೋಽಗಾಜ್ಜಗತೀಪತೇಃ ॥ ೬೯ ॥
ಸ್ನಾತ್ವಾ ತ್ವಂ ಬ್ರಹ್ಮತೀರ್ಥೇ ಮಾಂ ಸಮಭ್ಯರ್ಚ್ಯ ಕೃತಾಂಜಲಿಃ ॥ ೭೦ ॥
ಮೌನೀ ಪ್ರದಕ್ಷಿಣಂ ಕೃತ್ವಾ ವಿಶ್ವಾತ್ಮನ್ನೈವ ವಿಜ್ವರಃ ॥ ೭೧ ॥

ಇತಿ ವಚನಮುದೀರ್ಯ ವಿಶ್ವನಾಥಂ
ಸ್ಥಿತಮರುಣಾಚಲರೂಪತೋ ಮಹೇಶಂ ।
ಅಥ ಸರಸಿ ನಿಮಜ್ಜ್ಯ ಪದ್ಮಜನ್ಮಾ
ದುರಿತಹರಂ ಸಮಪೂಜಯತ್ಕ್ರಮೇಣ ॥ ೭೨ ॥
ಇಮಮರುಣಗಿರೀಶಮೇಷ ವೇಧಾ
ಯಮನಿಯಮಾದಿ ವಿಶುದ್ಧ ಚಿತ್ತಯೋಗಃ ।
ಸ್ಫುಟತರಮಭಿಪೂಜ್ಯ ಸೋಪಚಾರಂ
ಗತದುರಿತೋಽಥ ಜಗಾಮ ಚಾಧಿಪತ್ಯಂ ॥ ೭೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಪೂರ್ವಾರ್ಧೇ
"ಬ್ರಹ್ಮಪುಷ್ಕರ ಮಾಹಾತ್ಮ್ಯವರ್ಣನಂ" ನಾಮ ಪಂಚಮೋಧ್ಯಾಯಃ

---

೬೯–೭೧. ಪೂರ್ವಕಲ್ಪದಲ್ಲಿ ಪ್ರಪಂಚಸೃಷ್ಟಿಯನ್ನು ಮಾಡಿದ ಬ್ರಹ್ಮನು ತನ್ನ ಹೆಸರಿನಿಂದ ಅಂಕಿತವಾದ ಬ್ರಹ್ಮಪುಷ್ಕರ ತೀರ್ಥದಲ್ಲಿ ಸ್ನಾನಮಾಡಿ ತನ್ನ ಮೋಹವನ್ನು ಕಳೆದುಕೊಂಡನು. ನೀನೂ ಸಹ ಆ ಬ್ರಹ್ಮತೀರ್ಥದಲ್ಲಿಯೇ ಸ್ನಾನಾಚಮನಾದಿಗಳನ್ನು ಮಾಡಿ ಬದ್ಧಾಂಜಲಿಪುಟನಾಗಿ ಪೂಜೆಯನ್ನು ಮಾಡಿ ಮೌನವ್ರತದಿಂದ ಪ್ರದಕ್ಷಿಣೆಯನ್ನು ಮಾಡಲು ನಿಷ್ಕಲ್ಮಷನಾಗುವೆ."

೭೨. ಹೀಗೆ ಹೇಳಿದ ಪರಶಿವನ ಮಾತುಗಳನ್ನು ಕೇಳಿ ಅರುಣಾಚಲರೂಪದಿಂದ ನೆಲಸಿರುವ ದೇವಾಧಿಪತಿಯಾದ ವಿಶ್ವನಾಥನನ್ನು ಬ್ರಹ್ಮನು ಪುಷ್ಕರ ತೀರ್ಥಸ್ನಾನ ಪೂರ್ವಕವಾಗಿ ವಿಧ್ಯುಕ್ತರೀತಿಯಿಂದ ಪೂಜೆಯನ್ನು ಮಾಡಿದನು.

೭೩. ಹೀಗೆ ಬ್ರಹ್ಮನು ಯಮನಿಯಮಾದಿ ಅಷ್ಟಾಂಗಯೋಗಸಾಧನದಿಂದ ಚಿತ್ತಶುದ್ಧಿಯನ್ನು ಮಾಡಿಕೊಂಡು, ಸರ್ವೋಪಚಾರಸಹಿತವಾದ ಈ ಅರುಣಾಚಲೇಶ್ವರನನ್ನು ಪೂಜಿಸಿ ಸಕಲ ಪಾಪಗಳಿಂದ ವಿಮುಕ್ತನಾಗಿ ತನ್ನ ಸ್ಥಾನವನ್ನು ಕುರಿತು ತೆರಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲಮಾಹಾತ್ಮ್ಯ
ದಲ್ಲಿ "ಬ್ರಹ್ಮಪುಷ್ಕರ ಮಾಹಾತ್ಮ್ಯವರ್ಣನ"ವೆಂಬ
ಐದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಷ್ಠೋಽಧ್ಯಾಯಃ

## ಅರುಣಾಚಲಸ್ಥ ವಿವಿಧತೀರ್ಥ ಮಾಹಾತ್ಮ್ಯವರ್ಣನಂ

ಗೌತಮ ಉವಾಚ :—

ಪುರಾ ನಾರಾಯಣಃ ಕಲ್ಪೇ ಶಯಾನಃ ಸಲಿಲಾರ್ಣವೇ ।
ಶೇಷಪರ್ಯಂಕಶಯನೇ ಕದಾಚಿನ್ನೈವ ಬುದ್ಧ್ಯತ ॥ ೧ ॥
ತಮಸಾ ಪೂರಿತಂ ವಿಶ್ವಮಪಜ್ಞಾತಮಲಕ್ಷಣಂ ।
ವೀಕ್ಷ್ಯ ಕಲ್ಪಾವಸಾನೇಽಪಿ ವಿಷೇದುರ್ನಿತ್ಯಸೂರಯಃ ॥ ೨ ॥
ಅಹೋ ಕಷ್ಟಮಿದಂ ರೂಪಂ ತಮಸಾ ವಿಶ್ವಮೋಹನಂ ।
ಯೇನ ಕಲ್ಪಾವಸಾನೇಽಪಿ ವಿಷ್ಣುರ್ನಾದ್ಯಾಪಿ ಬುದ್ಧ್ಯತೇ ॥ ೩ ॥
ಜ್ಯೋತಿಷಃ ಪುರುಷಂ ಪೂರ್ಣಮಪಶ್ಯಂತಂ ಸುರಾ ಅಪಿ ।
ಕಥಂ ವಾ ತಮಸಃ ಶಾಂತಿಂ ಲಭೇರನ್ಪರಿಭಾವಿನಃ ॥ ೪ ॥
ಇತಿ ನಿಶ್ಚಿತ್ಯ ಮನಸಾ ದೇವದೇವಮುಮಾಪತಿಂ ।
ಚಿಂತಯಾಮಾಸುರಾತ್ಮಸ್ಥಂ ತೇಜೋರಾಶಿಂ ನಿರಂಜನಂ ॥ ೫ ॥

---

### ಕನ್ನಡದ ಅನುವಾದ

#### ಅರುಣಾಚಲದಲ್ಲಿರುವ ವಿವಿಧ ತೀರ್ಥಗಳ ಮಾಹಾತ್ಮ್ಯವರ್ಣನ

೧. ಗೌತಮನು ಹೇಳುತ್ತಾನೆ:—"ಪೂರ್ವಕಾಲದಲ್ಲಿ ಒಮ್ಮೆ ಪ್ರಪಂಚದ ಸೃಷ್ಟಿಯ ಸಮಯವೊದಗಲು ಶ್ರೀಮನ್ನಾರಾಯಣನು ಕ್ಷೀರಸಮುದ್ರದಲ್ಲಿ ಶೇಷಪರ್ಯಂಕದಲ್ಲಿ ನಿದ್ರೆಮಾಡುವವನಾಗಿ ಎಚ್ಚರಗೊಳ್ಳಲೇ ಇಲ್ಲವು.

೨. ಪ್ರಳಯಕಾಲವು ಕಳೆದರೂ ಬ್ರಹ್ಮಾಂಡವು ತಮಸ್ಸಿನಿಂದ ಆವೃತವೂ, ಜ್ಞಾನಶೂನ್ಯವೂ, ಲಕ್ಷಣರಹಿತವೂ ಆಗಿರುವುದನ್ನು ನೋಡಿ ನಿತ್ಯಸೂರಿಗಳಾದವರು ವ್ಯಥೆಗೊಂಡರು.

೩–೪. "ಅಹೊ! ಕಲ್ಪಾವಸಾನ ಸಮಯವೊದಗಿದರೂ ಮಹಾವಿಷ್ಣುವು ಜಾಗ್ರತನಾಗದಿರಲು ತಮಸ್ಸಿನಿಂದಾವರಿಸಲ್ಪಟ್ಟ ಬ್ರಹ್ಮಾಂಡವೇ ಮೋಹದಿಂದಾವೃತವಾಗಿದೆ. ಜಗಜ್ಜ್ಯೋತಿಯಾದ ಪರಮಾತ್ಮನ ಪೂರ್ಣ ಸ್ವರೂಪವನ್ನು ಕಾಣದೆ ದೇವತೆಗಳುತಾನೆ ಆತನ ಅನುಯಾಯಿಗಳಾಗಿ ಈ ತಮಸ್ಸಿನ ನಿಯಮನವನ್ನು ಹೇಗೆ ಮಾಡಿಯಾರು?"

೫. ಹೀಗೆಂದು ನಿಶ್ಚಯಿಸಿ ಮಹರ್ಷಿಗಳೆಲ್ಲ ತಮ್ಮ ಆತ್ಮದಲ್ಲಿ ಜ್ಯೋತಿಯ ರೂಪದಿಂದ ನೆಲಸಿರುವ ನಿರಂಜನನಾದ ಉಮಾಪತಿಯನ್ನು ಮನಸ್ಸಿನಲ್ಲಿಯೇ ಧ್ಯಾನಿಸತೊಡಗಿದರು.

ತತಃ ಪ್ರಸನ್ನೋ ಭಗವಾಂಸ್ತೇಜೋರಾಶಿರ್ಮಹೇಶ್ವರಃ ।
ವಿಶ್ವಾವನಾಯ ವಿಜ್ಞಪ್ತಃ ಪ್ರಣತೈರ್ನಿತ್ಯಸೂರಿಭಿಃ ॥ ೬ ॥
ತತಸ್ತೇಜೋಮಯಾಚ್ಛಂಭೋಃ ಸ್ಫುಲಿಂಗಾಂಶುಸಮುದ್ಭವಾಃ ।
ಉದಸ್ತಂಭಂತ ದೇವಾನಾಂ ತ್ರಯಸ್ತ್ರಿಂಶಚ್ಚ ಕೋಟಯಃ ॥ ೭ ॥
ಬೋಧಿತಃ ಸಕಲೈರ್ದೇವೈಃ ಸಮುತ್ಥಾಯ ರಮಾಪತಿಃ ।
ಪ್ರಭಾತಂ ವೀಕ್ಷ್ಯ ಸಕಲಂ ಮನಸ್ಯೇವಮಚಿಂತಯತ್ ॥ ೮ ॥
ಮಯಾ ತಮಸ ಉದ್ರೇಕಾದಕಾಲೇ ಶಯನಂ ಕೃತಂ ।
ಪ್ರಬೋಧಾಯ ಪರಂ ಜ್ಯೋತಿಃ ಸ್ವಯಂ ದೃಷ್ಟಃ ಸದಾಶಿವಃ ॥ ೯ ॥
ಜಗದುತ್ಪತ್ತಿಕೃತ್ಯಾನಿ ಸ್ವಯಂ ಕರ್ತುಂ ವ್ಯವಸ್ಯತಿ ।
ಕಿಂ ಮಯಾತ್ರ ಪುನಃ ಕಾರ್ಯಂ ಬ್ರಹ್ಮಣಾ ವಾ ಸ್ವಯಂಭುವಾ ॥೧೦॥
ಧಿಙ್ಮಾಂ ಸ್ಥಿತಮನಾತ್ಮಜ್ಞಂ ನಿದ್ರಯಾ ಹೃತಚೇತಸಂ ।
ಅಥವಾ ಸರ್ವಕರ್ತಾರಂ ಶರಣಂ ಯಾಮಿ ಶಂಕರಂ ॥ ೧೧ ॥
ಸರ್ವದೋಷಪ್ರಶಮನಂ ಸರ್ವಾಭೀಷ್ಟಫಲಪ್ರದಂ ।
ಪವಿತ್ರಮಲ್ಪಪುಣ್ಯಾನಾಂ ದುರ್ಲಭಂ ಶಂಭುದರ್ಶನಂ ॥ ೧೨ ॥

---

೬. ಬಳಿಕ ಮಹೇಶ್ವರನು ತೇಜೋರೂಪನಾಗಿ ಅವರಿಗೆ ಪ್ರತ್ಯಕ್ಷನಾಗಲು ಮುನಿಗಳು ಆತನಿಗೆ ನಮಸ್ಕರಿಸಿ ಪ್ರಪಂಚದ ಸೃಷ್ಟಿಯನ್ನು ಮಾಡುವ ಕಾಲವು ಬಂದಿತೆಂದು ತಿಳಿಸಿದರು.

೭. ಆಗ ತೇಜೋರಾಶಿಯಾದ ಮಹಾದೇವನ ಶರೀರದಿಂದ ಕಿಡಿಗಳು ಹೊರಟು ಮುವ್ವತ್ತುಮೂರುಕೋಟಿ ದೇವತೆಗಳಾಗಿ ಪರಿಣಮಿಸಿದರು.

೮. ಆ ದೇವತೆಗಳು ಒಟ್ಟಾಗಿ ವಿಷ್ಣುವನ್ನು ಸ್ತೋತ್ರಮಾಡಲು ಆತನು ಎಚ್ಚತ್ತವನಾಗಿ ಪ್ರಪಂಚದ ಸೃಷ್ಟಿಯೆಲ್ಲವೂ ಮುಗಿದಿರುವುದನ್ನು ಕಂಡು ಮನಸ್ಸಿನಲ್ಲಿಯೇ ಯೋಚಿಸತೊಡಗಿದನು.

೯–೧೦. "ನನ್ನಲ್ಲಿನ ತಮೋಗುಣದ ಆಧಿಕ್ಯದಿಂದ ಸರ್ಗಕಾಲವಾದರೂ ಎಚ್ಚರಿಕೆಯಾಗಲಿಲ್ಲ. ಆದುದರಿಂದಲೇ ಪರಾತ್ಪರನಾದ ಪರಮೇಶ್ವರನು ತಾನೇ ಸೃಷ್ಟಿಯಲ್ಲಿ ಉದ್ಯುಕ್ತನಾದನು. ಜಗತ್ತಿನ ಉತ್ಪತ್ತಿಯೇ ಮೊದಲಾದ ಕಾರ್ಯಗಳನ್ನು ಶಂಭುವು ತಾನೇ ಮಾಡಲು ಸಮರ್ಥನಾಗಿದ್ದಾನೆ. ಆದುದರಿಂದ ನನಗಾಗಲಿ ಬ್ರಹ್ಮನಿಗಾಗಲಿ ಕಾರ್ಯಾಂತರವು ಏನೂ ಇರುವುದಿಲ್ಲ.

೧೧. ಕರ್ತವ್ಯಜ್ಞಾನವಿಲ್ಲದೆ ನಿದ್ರೆಯಿಂದ ಮೈಮರೆತಿದ್ದ ನನಗೆ ಧಿಕ್ಕಾರವು. ಈಗ ನಾನು ಜಗತ್ಕರ್ತೃವಾದ ಸದಾಶಿವನನ್ನೇ ಶರಣ್ಯನನ್ನಾಗಿ ಭಜಿಸುತ್ತೇನೆ.

೧೨. ಸರ್ವದೋಷನಿವಾರಕವೂ, ಸಕಲಾಭೀಷ್ಟಸಿದ್ಧಿಪ್ರದವೂ ಆದ ಶಿವದರ್ಶನವು ಕ್ಷೀಣಪುಣ್ಯರಾದ ಮಾನವರಿಗೆ ಅತ್ಯಂತ ದುರ್ಲಭವಾಗಿರುವುದು."

ಚಿಂತಯನ್ನೇವಮಾತ್ಮಸ್ಥಂ ಜ್ಯೋತಿರ್ಲಿಂಗಂ ಸದಾಶಿವಂ ।
ಪ್ರಣನಾಮ ಹರಿರ್ಭಕ್ತ್ಯಾ ದೇವಮಷ್ಟಾಂಗತೋ ಮುಹುಃ ॥ ೧೩ ॥
ವಿಶ್ವಸ್ರಷ್ಟಾರಮೀಶಾನಂ ತುಷ್ಟಾವ ದುರಿತಚ್ಛಿದಂ ।
ಅಥ ತೇಜೋಮಯಃ ಶಂಭುಃ ಶರಣ್ಯಶ್ಶರಣಾಗತಂ ॥ ೧೪ ॥
ಅನುಗೃಹ್ಯ ಕಟಾಕ್ಷೈಸ್ತಂ ಸಮುತ್ತಿಷ್ಠೇತ್ಯಭಾಷತ ।
ಉತ್ಥಾಯ ಕರುಣಾಪೂರ್ಣಂ ಶಂಭುಂ ಚಂದ್ರಾರ್ಧಶೇಖರಂ ॥ ೧೫ ॥
ನಮಸ್ತ್ರಿಭುವನೇಶಾಯ ತ್ರಿಮೂರ್ತಿಗುಣಧಾರಿಣೇ ।
ತ್ರಿದೇವವಪುಷೇ ತುಭ್ಯಂ ತ್ರಿದೃಶೇ ತ್ರಿಪುರದ್ರುಹೇ ॥ ೧೬ ॥
ತ್ವಮೇವ ಜಗತಾಮೀಶೋ ನಿಜಾಂಶೈರ್ದೇವತಾಮಯೈಃ ।
ಕಾರ್ಯಕಾರಣರೂಪೇಣ ಕರೋಷಿ ಸ್ವೇಚ್ಛಯಾ ಕ್ರಿಯಾಃ ॥ ೧೭ ॥
ಮಾಂ ನಿಯುಜ್ಯ ಜಗದ್ಗುಪ್ತೌ ಪರಿಮೋಹ್ಯ ಚ ಮಾಯಯಾ ।
ನ ದೋಷಮಂತ ಸಂಕಲ್ಪಂ ವಿಹಾತುಮಪಿ ನೇಚ್ಛಸಿ ॥ ೧೮ ॥

---

೧೩. ಈ ರೀತಿಯಾಗಿ ತನ್ನ ಆತ್ಮನಲ್ಲಿಯೇ ನೆಲಸಿರುವ ಜ್ಯೋತಿರ್ಲಿಂಗ ವನ್ನು ಧ್ಯಾನಿಸುತ್ತ ಮಹಾವಿಷ್ಣುವು ಭಕ್ತಿಯುಕ್ತನಾಗಿ ಸಾಷ್ಟಾಂಗ ನಮಸ್ಕಾರ ವನ್ನು ಮಾಡಿದನು.

೧೪. ಬಳಿಕಲಾತನು ಪಾಪನಿವಾರಕನೂ, ಜಗತ್ಸೃಷ್ಟಿಕರ್ತನೂ ಆದ ಶಂಭುವನ್ನು ಸ್ತೋತ್ರಮಾಡಿದನು. ಆಗಲಾ ಶರಣಾಗತರಕ್ಷಕನು ಪ್ರಪನ್ನನಾದ ಮಹಾವಿಷ್ಣುವನ್ನು ಕೃಪಾಕಟಾಕ್ಷದಿಂದವಲೋಕಿಸಿ ಏಳೆಂದು ಅಪ್ಪಣೆ ಮಾಡಿದನು.

೧೫. ಆಗ ಮಹಾವಿಷ್ಣುವು ದಯಾಮೂರ್ತಿಯಾದ ಚಂದ್ರಶೇಖರನನ್ನು ಈ ರೀತಿ ಸ್ತುತಿಸತೊಡಗಿದನು :—

೧೬. "ಮೂರುಲೋಕಗಳಿಗೆ ಒಡೆಯನೂ, ತ್ರಿಮೂರ್ತಿಗಳ ಕಾರ್ಯ ಗಳಾದ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡಲು ಸಮರ್ಥನೂ, ತ್ರಿಲೋಚನನೂ, ತ್ರಿಪುರಾಸುರಸಂಹಾರಕನೂ ಆದ ನಿನಗೆ ನಮಸ್ಕಾರವು!

೧೭. ನೀನೊಬ್ಬನೇ ಜಗತ್ತಿಗೆ ಸ್ವತಂತ್ರಪ್ರಭುವಾಗಿರುವೆ. ದೇವತಾಮಯ ಗಳಾದ ನಿನ್ನ ವಿಭೂತಿಗಳಿಂದ ಕಾರ್ಯಕಾರಣಭಾವವೆಂಬ ನಿನ್ನ ನಿಯಮದ ಅನುಸಾರವಾಗಿ ಸೃಷ್ಟ್ಯಾದಿ ಕ್ರಿಯೆಗಳನ್ನು ಮಾಡುತ್ತಿರುವೆ.

೧೮. ನನ್ನನ್ನು ಜಗದ್ರಕ್ಷಣಕಾರ್ಯದಲ್ಲಿ ನಿಯಮಿಸಿ ನಿನ್ನ ಮಾಯೆ ಯಿಂದ ನನ್ನನ್ನು ಮೋಹಗೊಳಿಸಿ ನನ್ನ ದೋಷವನ್ನಾಗಲಿ ಅವಿತಥಮಾಡಲು ನೀನು ಇಚ್ಛಿಸುವುದಿಲ್ಲ.

ಕಿಂ ಕರೋಮಿ ಜಗನ್ಮೂರ್ತೌ ನ್ಯಸ್ತಭಾರೋಽಸ್ಮ್ಯಹಂ ತ್ವಯಿ ।
ನ ದೋಷಮಿಹಸೇ ನೂನಮಕಾಲಶಯನೇನ ಮಾಂ ॥ ೧೯ ॥
ಹರ ಶಂಭೋ ಹರೇರಾರ್ತಿಮನುತಾಪಂ ಸಮೀಕ್ಷ್ಯ ಸಃ ।
ಆದಿದೇಶ ಹರಃ ಶ್ರೀಮಾನ್ಪ್ರಾಯಶ್ಚಿತ್ತಂ ಹರೇರಿದಂ ॥ ೨೦ ॥
ಅರುಣಾಚಲರೂಪೇಣ ತಿಷ್ಠಾಮಿ ವಸುಧಾತಲೇ ।
ತಸ್ಯ ದರ್ಶನಮಾತ್ರೇಣ ಭವಿತಾ ತೇ ತಮಃ ಕ್ಷಯಃ ॥ ೨೧ ॥
ಪೂರ್ವಸ್ಮೈ ವಿಷ್ಣವೇ ತತ್ರ ವರೋ ದತ್ತೋ ಮಯಾ ಪುರಾ ।
ತದೈವ ತೈಜಸಂ ಲಿಂಗಮರುಣಾಚಲ ಸಂಜ್ಞಿತಂ ॥ ೨೨ ॥
ತೇಜೋಮಯಮಿದಂ ರೂಪಂ ಪ್ರಶಾಂತಂ ಲೋಕರಕ್ಷಣಾತ್ ।
ಯದಗ್ನಿಮಯಮವ್ಯಕ್ತಮಪಾರಗುಣವೈಭವಂ ॥ ೨೩ ॥
ನದೀನಾಂ ನಿರ್ಝರಾಣಾಂ ಚ ಮೇಘಮುಕ್ತಾಂಭಸಾಮಪಿ ।
ಅಂತರ್ಜ್ಯೋತಿರ್ಮಯತ್ವೇನ ಲಯಸ್ತತ್ರೈವ ದೃಶ್ಯತೇ ॥ ೨೪ ॥

---

೧೯. ನಾನಾದರೋ ಏನುಮಾಡಲಿ? ಲೋಕನಾಯಕನಾದ ನಿನ್ನಲ್ಲಿಯೇ ನನ್ನ ಭಾರವೆಲ್ಲವನ್ನೂ ನಿಲ್ಲಿಸಿರುತ್ತೇನೆ. ಅಕಾಲದಲ್ಲಿ ಶಯನಮಾಡಿದ ನನ್ನ ದೋಷವನ್ನು ನೀನೇ ದೂರಮಾಡಬೇಕು."

೨೦. ಮಹಾವಿಷ್ಣುವಿನ ಪಶ್ಚಾತ್ತಾಪವನ್ನು ನೋಡಿ ದುಃಖಗೊಂಡ ಆತನನ್ನು ಕುರಿತು ಮಹೇಶ್ವರನು ಈ ಅಕಾರ್ಯದ ಪ್ರಾಯಶ್ಚಿತ್ತವನ್ನು ಆತನಿಗೆ ನಿರೂಪಿಸಿದನು.

೨೧. "ಎಲೈ ಹರಿಯೆ! ನಾನು ಭೂಲೋಕದಲ್ಲಿ ಅರುಣಾಚಲರೂಪದಿಂದ ನೆಲಸಿರುವೆನು. ಆ ಪರ್ವತವನ್ನು ದರ್ಶನಮಾಡಿದ ಮಾತ್ರದಿಂದಲೇ ನಿನ್ನ ದುರಿತವು ದೂರವಾಗುವುದು.

೨೨. ಪೂರ್ವದಲ್ಲಿ ನಾನು ತೈಜಸಲಿಂಗವಾಗಿ ಆ ಕಲ್ಪದ ವಿಷ್ಣುವಿಗೆ ವರಪ್ರದಾನವನ್ನು ಮಾಡಿದೆನು. ಆ ಲಿಂಗಕ್ಕೇ ಅರುಣಾಚಲವೆಂಬ ಹೆಸರು ಬಂದಿರುವುದು.

೨೩. ಪ್ರಕಾಶಮಯವೂ, ಅಗ್ನಿಮಯವೂ ಆದ ನನ್ನ ರೂಪವು ಅವ್ಯಕ್ತವೂ ಅಪಾರವೈಭವವೂ ಉಳ್ಳುದಾಗಿ ಲೋಕರಕ್ಷಣೆಯ ಹಿತದೃಷ್ಟಿಯಿಂದ ಇಲ್ಲಿ ಶಾಂತರೂಪದಿಂದಿರುವುದು.

೨೪. ಆ ಗಿರಿಯಲ್ಲಿರುವ ನದಿಗಳು, ಕಾಲುವೆಗಳು ಕಡೆಗೆ ಮಳೆಯನೀರು ಇವುಗಳೆಲ್ಲವೂ ಅದರಲ್ಲಿರುವ ಅಂತರ್ಜ್ಯೋತಿಯ ತೇಜಸ್ಸಿನಿಂದ ಅಲ್ಲಿಯೇ ಲಯವಾಗುವುವು.

ಅಂಧಾನಾಂ ದೃಷ್ಟಿಲಾಭೇನ ಪಂಗೂನಾಂ ಪಾದಸಂಚರೈಃ ।
ಅಪುತ್ರಾಣಾಂ ಚ ಪುತ್ರಾಪ್ತ್ಯಾ ಮೂಕಾನಾಂ ವಾಕ್ಪ್ರವೃತ್ತಿಭಿಃ ॥ ೨೫ ॥
ಸರ್ವಸಿದ್ಧಿಪ್ರದಾನೇನ ಸರ್ವವ್ಯಾಧಿವಿಮೋಚನೈಃ ।
ಸರ್ವಪಾಪಪ್ರಶಮನೈರ್ಯತ್ರ ಸರ್ವವರದಂ ಸ್ಥಿತಂ ॥ ೨೬ ॥
ಇತ್ಯುಕ್ತ್ವಾಂತರ್ದಧೇ ಶಂಭುರ್ಹರಿಶ್ಚೈವಾರುಣಾಚಲಂ ।
ಆಗತ್ಯ ತಪ ಆಸ್ಥಾಯ ಶೋಣಾಚಲಮುಪಾಸ್ಯ ಚ ॥ ೨೭ ॥
ತಮದ್ರಿಂ ಪರಿತೋ ದೃಷ್ಟ್ವಾ ಸುರಾನ್ಕಾನನಸಂಶ್ರಯಾನ್ ।
ಋಷೀಣಾಮಾಶ್ರಮಾನ್ಪುಣ್ಯಾನ್ಸ್ಥಾಪಯಾಮಾಸ ವೈ ಹರಿಃ ॥ ೨೮ ॥
ವೇದಾನ್ಸಾಂಗೋಪನಿಷದಾನ್ಸಮಂತ್ರಾನ್ಮೂರ್ತಿಧಾರಿಣಃ ।
ಸಸರ್ಜ ದಿವ್ಯರೂಪಾಣಾಂ ಶತಮಪ್ಸರಸಾಂ ಕುಲಂ ।
ನೃತ್ಯೈರ್ಗೀತೈಶ್ಚ ವಾದಿತ್ರೈಸ್ಸೇವಧ್ವಮಿತಿ ಚಾದಿಶತ್ ॥ ೨೯ ॥
ಸ್ನಾತ್ವಾ ಬ್ರಹ್ಮಸರಸ್ಯಸ್ಮಿನ್ವಿಷ್ಣುಃ ಕಮಲಲೋಚನಃ ।
ಪ್ರದಕ್ಷಿಣಂ ಚಕಾರಾಮುಮರುಣಾದ್ರಿಂ ಸಮರ್ಚಿತಂ ॥ ೩೦ ॥

---

೨೫–೨೬. ಜಾತ್ಯಂಧರಿಗೆ ದೃಷ್ಟಿಲಾಭದಿಂದಲೂ, ಕುಂಟರಿಗೆ ಅವಯವ ಲಾಭದಿಂದಲೂ, ಅಪುತ್ರರಿಗೆ ಪುತ್ರಲಾಭದಿಂದಲೂ, ಮೂಗರಿಗೆ ವಾಕ್ಸಾಮರ್ಥ್ಯ ದಿಂದಲೂ, ಸಕಲ ಭಕ್ತರ ಇಷ್ಟಾರ್ಥಸಿದ್ಧಿಲಾಭದಿಂದಲೂ, ಸಮಸ್ತ ರೋಗ ನಿವಾರಣೆಯಿಂದಲೂ, ಸರ್ವಪಾಪ ನಿರ್ಮೂಲದಿಂದಲೂ ನಾನು ಅಲ್ಲಿ ವರದೇಶ್ವರ ನಾಗಿ ಸ್ಥಿರವಾಗಿ ನೆಲಸಿರುವೆನು."

೨೭. ಹೀಗೆಂದು ಹೇಳಿ ಪರಮೇಶ್ವರನು ಅಂತರ್ಹಿತನಾದನು. ಶ್ರೀಮಹಾ ವಿಷ್ಣುವೂ ಅರುಣಾಚಲವನ್ನೈದಿ ಅಲ್ಲಿ ತೇಜೋಲಿಂಗವನ್ನು ಕುರಿತು ತಪಸ್ಸು ಮಾಡಲು ನಿಂತನು.

೨೮. ಆ ಪರ್ವತದ ಎಲ್ಲೆಡೆಗಳಲ್ಲೂ ವೇದವೇದಾಂಗಗಳೇ ಮೂರ್ತಿ ಗೊಂಡಂತೆ ತೇಜಸ್ಸಂಪನ್ನರಾದ ಭೂಸುರರು ಅರಣ್ಯವಾಸಿಗಳಾಗಿದ್ದುದನ್ನು ಕಂಡು ವಿಷ್ಣುವು ಆ ಬೆಟ್ಟದ ತಪ್ಪಲುಗಳಲ್ಲಿ ಪುಣ್ಯತಮಗಳಾದ ಋಷ್ಯಾಶ್ರಮ ಗಳನ್ನು ಕಲ್ಪಿಸಿದನು.

೨೯. ದಿವ್ಯರೂಪವಂತೆಯರಾದ ಅನೇಕ ಅಪ್ಸರಸ್ತ್ರೀಯರನ್ನು ಸೃಷ್ಟಿ ಮಾಡಿ ನೃತ್ಯ, ಗೀತ, ವಾದ್ಯಗಳಿಂದ ಅರುಣಾಚಲೇಶ್ವರನನ್ನು ಸೇವಿಸುವಂತೆ ಆಜ್ಞಾಪಿಸಿದನು.

೩೦. ಬಳಿಕ ಕಮಲನೇತ್ರನಾದ ವಿಷ್ಣುವು ಬ್ರಹ್ಮಪುಷ್ಕರದಲ್ಲಿ ಸ್ನಾನವನ್ನು ಮಾಡಿ ಪೂಜಾಪೂರ್ವಕವಾಗಿ ಆ ಅರುಣಾದ್ರಿಗೆ ಪ್ರದಕ್ಷಿಣೆಯನ್ನು ಮಾಡಿದನು.

ಅಪಾಪಃ ಸರ್ವಲೋಕಾನಾಮಾಧಿಪತ್ಯಂ ಚ ಲಬ್ಧವಾನ್ ।
ರಮಯಾ ಸಹಿತೋ ನಿತ್ಯಮಭಿರೂಪಸುರೂಪಯಾ ॥ ೩೦ ॥
ಭಾಸ್ಕರಸ್ತೇಜಸಾಂ ರಾಶಿರಸುರೈರಪಿ ಪೀಡಿತಃ ।
ಬ್ರಹ್ಮೋಪದೇಶಾದಾನರ್ಚ್ಯ ಭಕ್ತ್ಯಾಽರುಣಗಿರೀಶ್ವರಂ ॥ ೩೧ ॥
ನಿಮಜ್ಜ್ಯ ವಿಮಲೇ ತೀರ್ಥೇ ಪಾವನೇ ಬ್ರಹ್ಮನಿರ್ಮಿತೇ ।
ಪ್ರದಕ್ಷಿಣಂ ಚಕಾರೈನಮರುಣಾದ್ರಿಂ ಸ್ವಯಂಭುವಂ ॥ ೩೨ ॥
ಅಶೇಷದೈತ್ಯವಿಜಯಂ ಲಬ್ಧ್ವಾ ಮೇರುಪ್ರದಕ್ಷಿಣಂ ।
ಲೇಭೇ ಚ ಪರಮಂ ತೇಜಃ ಪರತೇಜಃಪ್ರಣಾಶನಂ ॥ ೩೪ ॥
ದಕ್ಷಶಾಪಾನಲಾಕ್ರಾಂತಸ್ಸೋಮಃ ಶಿವವಚೋಬಲಾತ್ ।
ಅರುಣಾಚಲಮಭ್ಯರ್ಚ್ಯಲಬ್ಧರೂಪೋಽಭವತ್ಪುನಃ ॥ ೩೫ ॥
ಅಗ್ನಿರ್ಬ್ರಹ್ಮರ್ಷಿಶಾಪೇನ ಯಕ್ಷ್ಮರೋಗಪ್ರಪೀಡಿತಃ ।
ಅಪೂತೋಽಪಿ ಪವಿತ್ರೋಽಭೂದರುಣಾಚಲಸೇವಯಾ ॥ ೩೬ ॥
ಶಕ್ರೋ ವೃತ್ರಂ ಬಲಂ ಪಾಕಂ ನಮುಚಿಂ ಜೃಂಭಮುದ್ಧೃತಂ ।
ಶಿವಲಬ್ಧವರಾದ್ದೈತ್ಯಾನ್ಪುರಾ ಹತ್ವಾ ಜಗತ್ಪತೀನ್ ।
ಪಾತಕೈಶ್ಚ ಪರಿಕ್ಷೀಣಸ್ತಥಾ ಲೋಕಾಂತಮಾಶ್ರಿತಃ ॥ ೩೭ ॥

---

೩೧. ಇದರಿಂದ ಆತನ ಪಾಪವು ತೊಲಗಿ ಸಕಲ ಲೋಕಗಳ ಆಧಿಪತ್ಯವು ಆತನಿಗೆ ಉಂಟಾಯಿತು. ಅಲ್ಲದೆ ಆತನು ತನಗೆ ಅನುರೂಪಳಾದ ಮಹಾ ಲಕ್ಷ್ಮಿಯೊಡಗೂಡಿದವನಾದನು.

೩೨. ಹಾಗೆಯೇ ಹದಿನಾಲ್ಕು ಲೋಕಗಳನ್ನೂ ಬೆಳಗುವ ಸೂರ್ಯನೂ ಸಹ ರಾಕ್ಷಸರಿಂದ ಪೀಡಿತನಾಗಿ ಬ್ರಹ್ಮನ ಆಜ್ಞಾನುಸಾರವಾಗಿ ಭಕ್ತಿಯಿಂದ ಅರುಣಾದ್ರೀಶನನ್ನು ಭಜಿಸಿದನು.

೩೩. ಪವಿತ್ರವಾದ ಬ್ರಹ್ಮಸರಸ್ಸಿನ ಶುದ್ಧತೀರ್ಥದಲ್ಲಿ ಮಿಂದು ಸ್ವಯಂಭು ಲಿಂಗವಾದ ಅರುಣಾಚಲವನ್ನು ಪ್ರದಕ್ಷಿಣೆ ಮಾಡಿದನು.

೩೪. ಅದರ ಪ್ರಭಾವದಿಂದ ಅವನು ಸಕಲ ದೈತ್ಯರನ್ನೂ ಜಯಿಸುವವನಾದ ನಲ್ಲದೆ ಮೇರುಪರ್ವತವನ್ನು ಪ್ರದಕ್ಷಿಣೆಮಾಡುವ ಮಹಿಮೆಯನ್ನೂ ಪಡೆದನು. ಹಾಗೂ ಪರತೇಜೋನಾಶಕವಾದ ದಿವ್ಯ ತೇಜಸ್ಸನ್ನೂ ಪಡೆಯುವವನಾದನು.

೩೫. ದಕ್ಷಶಾಪದಿಂದ ಸಂತಪ್ತನಾದ ಚಂದ್ರನಾದರೋ ಶಿವನ ಆಜ್ಞಾ ಧಾರಕನಾಗಿ ಈ ಅರುಣಾಚಲೇಶ್ವರನನ್ನು ಪೂಜಿಸಿ ಸ್ವಸ್ವರೂಪವನ್ನು ಪಡೆದನು.

೩೬–೩೭. ಬ್ರಹ್ಮರ್ಷಿಯ ಶಾಪದಿಂದ ಅಗ್ನಿದೇವನು ಯಕ್ಷ್ಮರೋಗಪೀಡಿ ತನಾಗಿ ಅತ್ಯಂತ ಪಾಪಿಷ್ಠನಾಗಿದ್ದರೂ ಅರುಣಾಚಲದ ಸಂಸೇವನೆಯಿಂದ ಪವಿತ್ರನಾದನು. ವೃತ್ರ, ಬಲಾಸುರ, ಪಾಕ, ನಮುಚಿ, ಜೃಂಭ ಮುಂತಾದ

ಶಂಭುಂ ಪ್ರಸಾದ್ಯ ತಪಸಾ ಶಿವೇನ ಪರಿಚೋದಿತಃ ।
ಅರುಣಾದ್ರಿಂ ಸಮಭ್ಯರ್ಚ್ಯ ವಿಪಾಪೋಽಭೂತ್ಸುರಾಧಿಪಃ ॥ ೩೮ ॥
ಇಷ್ಟ್ವಾಚ ಹಯಮೇಧೇನ ಪ್ರೀಣಯಾಮಾಸ ಶಂಕರಂ ॥ ೩೯ ॥
ಲಬ್ಧ್ವಾಚೇಂದ್ರಪದಂ ಶಕ್ರಃ ಶತಮಪ್ಸರಸಾಂ ಕುಲಂ ।
ಸೇವಾರ್ಥಮಾದಿಶಚ್ಛ್ರೀಮಾನ್ದಿವ್ಯದುಂದುಭಿಸೇವಯಾ ॥ ೪೦ ॥
ಪುಷ್ಪಮೇಘಾನ್ಸಮಾದಿಶ್ಯ ದಿವ್ಯಾಭಿಃ ಪುಷ್ಪವೃಷ್ಟಿಭಿಃ ।
ಸಮರ್ಚಯತಿ ಶೋಣಾದ್ರಿಂ ದಿವಿ ನಿತ್ಯಂ ಚ ವಂದತೇ ॥ ೪೧ ॥
ಶೇಷೋಽಪಿ ಶೋಣಶೈಲೇಶಂ ಸಮಭ್ಯರ್ಚ್ಯ ಶಿವಾಜ್ಞಯಾ ।
ಅಭಜತ್ಕಾಮರೂಪತ್ವಂ ಮಹೀಮಂಡಲಧಾರಕಃ ॥ ೪೨ ॥
ಅನ್ಯೇ ನಾಗಾಶ್ಚ ಗಂಧರ್ವಾಃ ಸಿದ್ಧಾಶ್ಚಾಪ್ಸರಸಾಂ ಗಣಾಃ ।
ದಿಕ್ಪಾಲಾಶ್ಚ ತಮಭ್ಯರ್ಚ್ಯ ಲೇಭಿರೇಽಪೇಕ್ಷಿತಾನ್ವರಾನ್ ॥ ೪೩ ॥
ದೇವೈರಶೇಷೈರ್ದೈತ್ಯಾದೀನ್ಜೇತುಕಾಮೈಃ ಸಮುದ್ಯತೈಃ ।
ಪ್ರಾರ್ಥಿತಃ ಸರ್ವತೋಭೀಷ್ಟವರದೋಽರುಣಭೂಧರಃ ॥ ೪೪ ॥

---

ಶಿವಪ್ರಸಾದ ಸಹಿತರಾದ ಉದ್ದಂಡ ದೈತ್ಯರನ್ನು ನಿಗ್ರಹಿಸಿ, ಆ ಪಾತಕದಿಂದ ಕ್ಷಯವನ್ನು ಹೊಂದಿದ ಇಂದ್ರನು ಲೋಕಾಂತರವನ್ನಾಶ್ರಯಿಸಿದನು.

೩೮. ಬಳಿಕ ಘೋರವಾದ ತಪಸ್ಸನ್ನು ಮಾಡಿ ಪರಮೇಶ್ವರನನ್ನು ಪ್ರಸನ್ನೀಕರಿಸಿಕೊಂಡು ಆತನಿಂದ ಚೋದಿಸಲ್ಪಟ್ಟವನಾಗಿ ಅರುಣಾಚಲವನ್ನು ಅರ್ಚನೆಮಾಡಿದುದರಿಂದ ಅವನು ಆ ಪಾತಕದಿಂದ ನಿರ್ಲಿಪ್ತನಾದನು ;

೩೯. ಅಶ್ವಮೇಧಯಜ್ಞವನ್ನು ಮಾಡಿ ಶಿವನನ್ನು ಸಂತೋಷಗೊಳಿಸಿದನು.

೪೦–೪೩. ಈ ರೀತಿ ಇಂದ್ರಪದವಿಯನ್ನು ಮತ್ತೆ ಸಂಪಾದಿಸಿದ ಬಳಿಕ ಶಕ್ರನು ದಿವ್ಯದುಂದುಭಿಗಳ ಸೇವೆಯನ್ನು ಮಾಡುವಂತೆ ಆಜ್ಞಾಪಿಸಿ ಅನೇಕ ಅಪ್ಸರಸ್ತ್ರೀಯರನ್ನು ಕಳುಹಿಸಿದನು. ಪುಷ್ಪಮೇಘಗಳಿಗೆ ನಿಯಮನಮಾಡಿ ದಿವ್ಯವಾದ ಪುಷ್ಪವರ್ಷದಿಂದ ಶೋಣಾಚಲೇಶ್ವರನನ್ನು ನಿತ್ಯವೂ ಸೇವಿಸುವನು. ನಿತ್ಯವೂ ದೇವಲೋಕದಲ್ಲಿ ಆ ಸ್ವಾಮಿಯನ್ನು ನಮಸ್ಕರಿಸುವನು. ಆದಿಶೇಷನೂ ಸಹ ಶಿವಾಜ್ಞೆಗನುಸಾರವಾಗಿ ಅರುಣಾಚಲವನ್ನು ಅರ್ಚಿಸಿ ಕಾಮರೂಪಿಯಾಗಿ ಭೂಮಂಡಲವನ್ನು ಧರಿಸುವವನಾದನು. ಅಂತೆಯೇ ಇತರ ನಾಗರೂ, ಗಂಧರ್ವರೂ, ಸಿದ್ಧರೂ, ಅಪ್ಸರಸೆಯರೂ, ಅಷ್ಟದಿಕ್ಪಾಲಕರೂ ಈ ತೇಜೋಲಿಂಗವನ್ನರ್ಚಿಸಿ ಅಭೀಪ್ಸಿತ ವರಗಳನ್ನು ಪಡೆದರು.

೪೪. ಹೀಗೆ ರಾಕ್ಷಸಾದಿ ವಿಘ್ನಕಾರಕರನ್ನು ಜಯಿಸಲೆಳಸಿದ ಸಕಲ ದೇವತೆಗಳಿಂದ ಪ್ರಾರ್ಥಿತನಾಗಿ ಅರುಣಾಚಲೇಶ್ವರನು ಅವರ ಇಷ್ಟಾರ್ಥಗಳನ್ನು ನೆರವೇರಿಸಿದನು.

ತ್ವಷ್ಟ್ರಾ ವಿರಚಿತಾಕಾರ ಆದಿತ್ಯಸ್ತೇಜಸಾ ತಪನ್ ।
ಗ್ರಹನಾಥಸ್ತು ಶೋಣಾದ್ರಿಂ ವಿಲಂಘಯಿತುಮುದ್ಯತಃ ॥ ೪೫ ॥
ರಥವಾಹಾಃ ಪುನಸ್ತಸ್ಯ ಶಕ್ತಿಹೀನಾಃ ಶ್ರಮಂಗತಾಃ ।
ಸೋಽಪಿ ಶ್ರಿಯಾ ವಿಹೀನಶ್ಚ ಜಾತಃ ಶೋಣಾದ್ರಿತೇಜಸಾ ॥ ೪೬ ॥
ನಾಶಕ್ನೋಚ್ಚ ದಿವಂ ಗಂತುಂ ಸರ್ವಗತ್ಯಂಶುಮಾಲಿನಃ ।
ಸ ತು ಬ್ರಹ್ಮೋಪದೇಶೇನ ಸಮಾರಾಧ್ಯಾರುಣಾಚಲಂ ।
ಪ್ರೀತ್ಯಾ ತಸ್ಮಾದ್ವಿಭೋರ್ಲೇಭೇ ಮಾರ್ಗಂ ವ್ಯೋಮ್ನೋ ಹಯಾನ್ಶುಭಾನ್
ತತಃಪ್ರಭೃತಿ ತಿಗ್ಮಾಂಶುಃ ಸಹಿ ಶೋಣಾಖ್ಯಪರ್ವತಂ ।
ನ ಲಂಘಯತಿ ಕಿಂತ್ವಸ್ಯ ಪ್ರದಕ್ಷಿಣಪರಿಕ್ರಮೈಃ ॥ ೪೮ ॥
ದಕ್ಷಯಾಗಪರಿಧ್ವಸ್ತಾ ಹೀನಾಂಗಾಸ್ತ್ರಿದಶಾಃ ಪುರಾ ।
ಅರುಣಾಚಲಮಾರಾಧ್ಯ ನವಾನ್ಯಂಗಾನಿ ಲೇಭಿರೇ ॥ ೪೯ ॥
ಪೂಷಾ ದಂತಂ ಶಿಖೀ ಹಸ್ತಂ ಭಗೋ ನೇತ್ರಂ ತ್ವಖಂಡಿತಂ ।
ಘ್ರಾಣಂ ವಾಣೀ ಚ ಲೇಭೇ ಸಾ ಶೋಣಾಚಲನಿಷೇವಣಾತ್ ॥ ೫೦ ॥

---

೪೫. ವಿಶ್ವಕರ್ಮವಿರಚಿತವಾದ ಆಕಾರವುಳ್ಳವನಾದ ಸೂರ್ಯದೇವನು ನವಗ್ರಹಗಳಲ್ಲಿ ಅಧಿಪತಿಯಾಗಿ ಲೋಕಗಳನ್ನು ಸುಡುತ್ತ ಅರುಣಾಚಲವನ್ನು ಉಲ್ಲಂಘನಮಾಡಲು ಯತ್ನಿಸಿದನು.

೪೬. ಆಗಲಾ ಲಿಂಗದ ತೇಜಸ್ಸಿನಿಂದ ಸೂರ್ಯನ ಅಶ್ವಗಳು ಶಕ್ತಿಹೀನ ಗಳಾದುವು. ಆತನೂ ಕೂಡ ತೇಜೋರೂಪವಾದ ಐಶ್ವರ್ಯದಿಂದ ವಿಹೀನ ನಾದನು.

೪೭. ಆದುದರಿಂದ ತನ್ನ ಆಕಾಶಮಾರ್ಗವನ್ನು ಅನುಸರಿಸಲಾರದೆ ಹೋದನು. ಆಗಲವನು ಬ್ರಹ್ಮದೇವನ ಉಪದೇಶಾನುಸಾರವಾಗಿ ಅರುಣಾ ಚಲೇಶ್ವರನನ್ನು ಭಕ್ತಿಯಿಂದ ಪೂಜಿಸಿ ಆತನ ಅನುಗ್ರಹದಿಂದ ಮಾರ್ಗಾನುಕೂಲ ವನ್ನೂ ಉತ್ತಮಗಳಾದ ಅಶ್ವಗಳನ್ನೂ ಹೊಂದಿದನು.

೪೮. ಅಂದಿನಿಂದ ಆ ಸೂರ್ಯನು ಅರುಣಾಚಲವನ್ನುಲ್ಲಂಘಿಸುವುದಿಲ್ಲ. ಅದಕ್ಕೆ ಪ್ರದಕ್ಷಿಣವಾಗಿಯೇ ನಡೆಯುತ್ತಾನೆ.

೪೯. ದಕ್ಷಯಜ್ಞದಲ್ಲಿ ವೀರಭದ್ರನ ಆಘಾತದಿಂದ ದೇವತೆಗಳು ತಮ್ಮ ಅವಯವಗಳನ್ನು ಕಳೆದುಕೊಂಡು ಅರುಣಾಚಲದ ಪೂಜನದಿಂದ ಪುನಃ ಸರ್ವಾಂಗಸುಂದರರಾದರು.

೫೦. ಇಂದ್ರನು ಹಲ್ಲುಗಳನ್ನೂ, ಅಗ್ನಿಯು ಹಸ್ತಗಳನ್ನೂ, ಸೂರ್ಯನು ಅಖಂಡವಾದ ನೇತ್ರಪಾಟವವನ್ನೂ, ಸರಸ್ವತಿಯು ನಾಸಿಕವನ್ನೂ ಅರುಣಾ ಚಲನ ಪ್ರಸಾದದಿಂದ ಹೊಂದಿದರು.

ಭಾರ್ಗವಃ ಕ್ಷೀಣನೇತ್ರಸ್ಸಃ ವಿಷ್ಣುಹಸ್ತಕುಶಾಗ್ರತಃ ।
ಬಲಿದತ್ತಾವನೀದಾನ ಜಲಧಾರಾನಿರೋಧತಃ ॥ ೫೧ ॥
ಸ ತು ಶೋಣಾಚಲಂ ಗತ್ವಾ ತಪಃಕೃತ್ವಾತಿದುಷ್ಕರಂ ।
ಲೇಭೇ ನೇತ್ರಂಚ ಪೂತಾತ್ಮಾ ಭಾಸ್ಕರಾಖ್ಯೇಂಗಿರಾ ಸ್ಥಿತಃ ॥ ೫೨ ॥
ಅರುಣಾಚಲನಾಥಸ್ಯ ಸೇವಯಾ ಸೂರ್ಯಸಾರಥಿಃ ॥ ೫೩ ॥
ಪ್ರತರ್ದನಾಖ್ಯೋ ನೃಪತಿರ್ಗೃಹೀತುಂ ದೇವಕನ್ಯಕಾಂ ।
ಅರುಣಾದ್ರಿಪತೇರ್ಗಾನಂ ಕುರ್ವಂತೀಂ ಸಾದರೋಽಭವತ್ ॥ ೫೪ ॥
ಕ್ಷಣಾತ್ಕಪಿಮುಖೋ ಜಾತೋ ಮಂತ್ರಿಭಿಶ್ಚೋದಿತೋ ನೃಪಃ ।
ಪ್ರತ್ಯರ್ಪ್ಯತಾಂ ಪುನಶ್ಚಾನ್ಯಾಃ ಸ್ರಾದಾದರುಣಭೂಭೃತೇ ॥ ೫೫ ॥
ತತಶ್ಚಾರುಮುಖೋ ಜಾತಃ ಪ್ರಸಾದಾದರುಣೇಶಿತುಃ ।
ಸಾಯುಜ್ಯಮಸ್ಮೈ ಸಕಲಂ ದತ್ತವಾನ್ಭಕ್ತಿಭಾವಿತಃ ॥ ೫೬ ॥
ಅರುಣಾಚಲ ನಾಥಸ್ಯ ಸನ್ನಿಧೌ ಜ್ಞಾನದುರ್ಬಲಃ ।
ಗಂಧರ್ವಃ ಪುಷ್ಪಕಾಖ್ಯಸ್ತು ಭಕ್ತಿಹೀನೋಹ್ಯಗಾತ್ಪುರಾ ॥ ೫೭ ॥
ತತೋ ವ್ಯಾಘ್ರಮುಖಂ ದೃಷ್ಟ್ವಾ ಗಂಧರ್ವಪರಿಚಾರಕಾಃ ।
ಕಿಮೇತದಿತಿ ಸಾಶ್ಚರ್ಯಂ ಪಪ್ರಚ್ಛುಸ್ತೇ ಪರಸ್ಪರಂ ॥ ೫೮ ॥

---

೫೧–೫೪. ಶುಕ್ರಾಚಾರ್ಯನು, ಬಲಿಚಕ್ರವರ್ತಿಯು ಮಹಾವಿಷ್ಣುವಿಗೆ ಮೂರಡಿ ಭೂಮಿಯನ್ನು ದಾನಮಾಡಿದಾಗ ಪಾತ್ರೆಯ ಧಾರೆಗೆ ಅಡ್ಡಬಂದನು. ಆಗ ಬಲಿಯು ತನ್ನ ಪವಿತ್ರದ ದರ್ಭೆಯಿಂದ ರಂಧ್ರವನ್ನು ಚುಚ್ಚಲು ಆತನ ಕಣ್ಣು ಕುರುಡಾಯಿತು. ಆಗ ಆತನು ಶೋಣಾಚಲ ಪರ್ವತದಲ್ಲಿ ಅತ್ಯುಗ್ರ ತಪಸ್ಸನ್ನು ಮಾಡಿ ಅರುಣಾಚಲೇಶ್ವರನ ಅನುಗ್ರಹದಿಂದ ಮತ್ತೆ ಆ ನೇತ್ರವನ್ನು ಪಡೆದನು. ಅರುಣಾಚಲನ ಅನುಗ್ರಹದಿಂದಲೇ ಅರುಣನು ಸೂರ್ಯನ ಸಾರಥಿಯಾದನು. ಒಮ್ಮೆ ಪ್ರತರ್ದನನೆಂಬ ರಾಜನು ಈ ಸ್ಥಳಕ್ಕೆ ಬಂದು ಅರುಣಾಚಲೇಶ್ವರನಿಗೆ ಗಾನಸೇವೆಯನ್ನು ಮಾಡುತ್ತಿದ್ದ ಒಬ್ಬಾನೊಬ್ಬ ದೇವ ಕನ್ಯಕೆಯನ್ನು ಕಂಡು ಮೋಹಗೊಂಡನು.

೫೫–೫೬. ಆ ಕ್ಷಣದಲ್ಲಿಯೇ ಆತನಿಗೆ ಕಪಿಮುಖವು ಪ್ರಾಪ್ತವಾಯಿತು. ಮಂತ್ರಿಗಳ ಮಾತನ್ನು ಲಾಲಿಸಿದವನಾಗಿ ಆಕೆಯನ್ನು ಪೂಜಿಸಲು ಅರುಣಾಚಲನ ಪ್ರಸಾದದಿಂದ ಸುಂದರ ರೂಪವು ಅವನಿಗೆ ಮತ್ತೆ ದೊರಕಿತು. ಆತನು ಅನೇಕ ಇತರ ಸ್ತ್ರೀಯರನ್ನು ಈಶ್ವರನ ಸೇವೆಗಾಗಿ ನಿಯೋಜಿಸಿದನು. ಈತನ ಭಕ್ತಿ ಭಾವಗಳಿಗೆ ಮೆಚ್ಚಿ ಶಿವನು ಈತನಿಗೆ ಸಾಯುಜ್ಯಮೋಕ್ಷವನ್ನು ಕೊಟ್ಟನು.

೫೭–೫೮. ಮತ್ತೊಮ್ಮೆ ಪುಷ್ಪಕನೆಂಬ ಮೂಢನಾದ ಗಂಧರ್ವನೋರ್ವನು ಭಕ್ತಿಹೀನನಾಗಿ ಈ ಪರ್ವತವನ್ನು ದಾಟಿಹೋಗಲೆಳಸಲು ಆತನಿಗೆ ಹುಲಿಯ

ಅಥ ನಾರದನಿರ್ದಿಷ್ಟಮವಜ್ಞಾಫಲಮಾತ್ಮನಃ ।
ಬುದ್ಧ್ವಾರುಣಾದ್ರಿಂ ಸಂಪೂಜ್ಯ ಪುನಶ್ಚ ಸುಮುಖೋಽಭವತ್ ॥ ೫೯ ॥
ಶಿವಭೂಮಿರಿಯಂ ಖ್ಯಾತಾ ಪರಿತೋ ಯೋಜನದ್ವಯಂ ।
ಮುಕ್ತಿಸ್ತತ್ರ ಪ್ರಮೀತಾನಾಂ ಕದಾಪಿ ವಿಲಯೋ ನಹಿ ॥ ೬೦ ॥
ಸಪ್ತರ್ಷಯಃ ಪುರಾ ಭೂಮೌ ಶಾಪದೋಷಸಮನ್ವಿತಾಃ ।
ಸಿಷೇವಿರೇಽರುಣಾದ್ರಿಂ ವೈ ನಾಥೋ ಜ್ಞಾತ್ವಾ ವಿನಿಶ್ಚಯಂ ॥ ೬೧ ॥
ಶಾಪಮೋಕ್ಷಂ ದದೌ ಶ್ರೀಮಾನ್ಸಪ್ತರ್ಷೀಣಾಂ ಮಹಾತ್ಮನಾಂ ।
ಸಪ್ತರ್ಷಿಭಿಃ ಕೃತಂ ತೀರ್ಥಂ ಸರ್ವಪಾಪವಿನಾಶನಂ ।
ಶೋಣಾಚಲಸ್ಯ ನಿಕಟೇ ದೃಶ್ಯತೇ ಪಾವನಂ ಶುಭಂ ॥ ೬೨ ॥
ಪಂಗುರ್ಮುನಿಃ ಶೋಣಶೈಲಾತ್ಪಾದೌ ಲಬ್ಧುಂ ಸಮಾಗತಃ ।
ಅಂತರ್ಹಿತಪ್ರಾರ್ಥಿತಾರ್ಥೋ ದಾರುಹಸ್ತಪುಟೇ ವಹನ್ ॥ ೬೩ ॥
ಜಾನುಚಂಕ್ರಮಣವ್ಯಗ್ರಃ ಶೋಣನದ್ಯಾಸ್ತಟಂ ಗತಃ ॥ ೬೪ ॥

---

ಮುಖವುಂಟಾಯಿತು. ಆಗ ಆತನ ಅನುಯಾಯಿಗಳು 'ಇದು ಏನು ವಿಪರೀತ' ವೆಂದು ತಮ್ಮತಮ್ಮಲ್ಲಿಯೇ ಆಶ್ಚರ್ಯಪಡುತ್ತಿದ್ದರು.

೫೯. ಆಗ ನಾರದರು ಅಲ್ಲಿಗೆ ಬಂದು ಅರುಣಾಚಲೇಶ್ವರನ ಅವಜ್ಞೆಯ ಫಲವನ್ನು ತಿಳಿಸಲು ಆತನು ಪಶ್ಚಾತ್ತಾಪಯುಕ್ತನಾಗಿ ಅರುಣಾದ್ರೀಶನನ್ನು ಪೂಜಿಸಿ ಪುನಃ ಸುಮುಖನಾದನು.

೬೦. ಈ ಪರ್ವತದ ಸುತ್ತಮುತ್ತಲಿನ ಪ್ರದೇಶವು ಎರಡು ಯೋಜನಗಳ ಪರ್ಯಂತವೂ ಶಿವನಿಗೆ ಪ್ರಿಯವಾಗಿರುವುದು. ಅಲ್ಲಿ ದೇಹವನ್ನು ತ್ಯಾಗ ಮಾಡುವವರಿಗೆ ಮುಕ್ತಿಲಾಭವಾಗುವುದೇ ಹೊರತು ಪ್ರಕೃತಿಲಯವಿಲ್ಲ.

೬೧. ಪೂರ್ವದಲ್ಲಿ ಶಾಪಾವಿಷ್ಟರಾದ ಸಪ್ತರ್ಷಿಗಳು ಅರುಣಾಚಲವನ್ನೇ ತಾರಕವನ್ನಾಗಿ ನಿಶ್ಚಯಿಸಿ ಅದರ ಸೇವೆಯನ್ನು ಮಾಡಿದರು.

೬೨. ಶಿವನು ಆ ಸಪ್ತರ್ಷಿಗಳ ಶಾಪವನ್ನು ಬಿಡುಗಡೆಮಾಡಿದನು. ಅವರಿಂದ ನಿರ್ಮಿಸಲ್ಪಟ್ಟ ತೀರ್ಥವು ಸರ್ವಪಾಪಗಳನ್ನೂ ನಾಶಗೊಳಿಸುವುದು. ಇಂದಿಗೂ ಸಹ ಆ ತೀರ್ಥವು ಅರುಣಾಚಲದ ಸಮೀಪದಲ್ಲಿ ಪಾವನವಾಗಿಯೂ ಮಂಗಳಪ್ರದವಾಗಿಯೂ ಶೋಭಿಸುತ್ತಿರುವುದು.

೬೩. ಕುಂಟನಾದ ಮಹರ್ಷಿಯೊಬ್ಬನು ಅರುಣಾಚಲೇಶ್ವರನ ಪೂಜೆಯಿಂದ ಪಾದಗಳನ್ನು ಹೊಂದಬೇಕೆಂಬ ಗೂಢಾಭಿಸಂಧಿಯುಳ್ಳವನಾಗಿ ತನ್ನ ಊರುಗೋಲುಗಳನ್ನು ತೆಗೆದುಕೊಂಡು ಅಲ್ಲಿಗೆ ಬಂದನು.

೬೪–೬೫. ಮೊಣಕಾಲುಗಳಿಂದಲೇ ತೆವಳಿಕೊಂಡು ಕಂಪಾನದಿಯ ದಡವನ್ನು ಸೇರಿ ಅತ್ಯಂತ ದಾಹದಿಂದ ಬಳಲಿದವನಾಗಿ ನೀರು ಕುಡಿಯಲೆಳಸಿರಲು

ದಾರುಹಸ್ತಪುಟೇ ತೀರ್ಥೇ ನಿಚಿಕ್ಷೇಪ ಪಿಪಾಸತಃ ।
ಜಾನುಚಂಕ್ರಮಣೇ ತಸ್ಮಿನ್ ಧೂರ್ತಸ್ತ್ವೋಽಯಂ ಪಿಪಾಸತಿ ॥ ೬೫ ॥
ಅಥ ಶೋಣಾಚಲಂ ಪ್ರಾಪ್ತಃ ಕಥಂ ವಾ ದಾರುಹಸ್ತಕಃ ।
ಕಿಮೇತದಿತಿ ತಂ ಪೃಚ್ಛನ್ನಾಧಾವತ್ಕಲಿತತ್ವರಃ ॥ ೬೬ ॥
ಲಬ್ಧಪಾದಶ್ಚ ಸಹಸಾ ಜಗಾಮ ಚ ನಿಜಾಲಯಂ ।
ನಾದ್ರಾಕ್ಷೀತ್ಪುರುಷಂ ತತ್ರ ದಾರುಹಸ್ತೌ ಪುರೋಗಮೌ ॥ ೬೭ ॥
ಸ್ವಯಂ ಗೃಹೀತ್ವಾಚಾಲೋಕ್ಯ ವವಂದೇಽರುಣಪರ್ವತಂ ।
ನನಂದ ಲಬ್ಧಚರಣೋ ಲಬ್ಧರೂಪೋ ಮಹಾಮುನಿಃ ॥ ೬೮ ॥
ವಿಸ್ಮಯೋತ್ಪುಲ್ಲನಯನೈಃ ಶಿವಭಕ್ತೈರ್ಮಹಾತ್ಮಭಿಃ ।
ಪೂಜಿತೋ ಲಬ್ಧಪಾದಃ ಸನ್ಜಗಾಮ ಚ ಯಥಾಗತಂ ॥ ೬೯ ॥
ವಾಲೀ ಶಕ್ರಸುತಃ ಶ್ರೀಮಾನ್ ಶೃಂಗಾದುದಯಭೂಭೃತಃ ।
ಅಸ್ತಾಚಲಸ್ಯ ಶಿಖರಂ ಪ್ರತಿಗಂತುಂ ಸಮುದ್ಯತಃ ॥ ೭೦ ॥
ಆಲುಲೋಕೇಽರುಣಗಿರಿಂ ಮಧ್ಯೇ ದೇವನಮಸ್ಕೃತಂ ।
ಊರ್ಧ್ವಂ ಗಂತುಂ ಸಮುದ್ಯುಕ್ತಃ ಕ್ಷೀಣವೀರ್ಯೋಽಪತದ್ಭುವಿ ॥೭೧॥

---

ಧೂರ್ತನೊಬ್ಬನು ಆತನ ಊರುಗೋಲುಗಳನ್ನು ನೀರಿನೊಳಕ್ಕೆ ಎಸೆದು ಬಿಟ್ಟನು.

೬೬. ಆಗ ಆ ಮುನಿಯು ಬಹಳ ಕಷ್ಟದಿಂದ ಅರುಣಾಚಲವನ್ನು ಹೊಂದಿ 'ಇದು ಯಾವ ಪರ್ವತ'ವೆಂದು ಕೇಳುತ್ತ ವೇಗವಾಗಿ ಬಂದನು.

೬೭. ಆ ಪರ್ವತದ ಸ್ಪರ್ಶದಿಂದಲೇ ಪಾದಗಳನ್ನು ಹೊಂದಿದವನಾಗಿ ಸಂಭ್ರಮದಿಂದ ತನ್ನ ಮನೆಗೆ ಹಿಂದಿರುಗಿದನು. ಮನೆಯಲ್ಲಿ ಯಾರೂ ಇಲ್ಲದಿದ್ದರೂ ತನ್ನ ಊರುಗೋಲುಗಳು ಮಾತ್ರ ಅಲ್ಲಿ ನಿಂತಿದ್ದುವು.

೬೮. ಅವುಗಳನ್ನು ನೋಡಿ ತನ್ನವುಗಳೆಂದೇ ಗುರ್ತಿಸಿ ಇದೆಲ್ಲವೂ ಅರುಣಾಚಲೇಶ್ವರನ ಮಹಿಮೆಯೆಂದು ತಿಳಿದನು. ಪಾದಗಳನ್ನೂ ಮುನ್ನಿನ ಸ್ವರೂಪವನ್ನೂ ಹೊಂದಿ ಆ ಮುನಿಯು ಆನಂದವನ್ನು ಹೊಂದುವವನಾದನು.

೬೯. ಆಶ್ಚರ್ಯದಿಂದ ಬಿಡುಗಣ್ಣುಳ್ಳ ಮಹಾತ್ಮರಾದ ಶಿವಭಕ್ತರಿಂದ ಸಪರ್ಯೆಯನ್ನು ಹೊಂದಿ ತನ್ನ ಸ್ವಸ್ಥಾನವನ್ನು ಸೇರಿದನು.

೭೦. ಪೂರ್ವದಲ್ಲಿ ಇಂದ್ರನ ಮಗನಾದ ವಾಲಿಯು ಸಂಧ್ಯಾವಂದನೆಯ ಸಮಯದಲ್ಲಿ ಉದಯಾಚಲದಿಂದ ಅಸ್ತಪರ್ವತಕ್ಕೆ ಹಾರಿಬರುತ್ತಿದ್ದನು.

೭೧. ಆಗಲವನು ದೇವವಂದ್ಯವಾದ ಅರುಣಾಚಲವನ್ನು ಕೆಳಗೆ ಕಂಡರೂ ಲಕ್ಷಿಸದೆ ಅದನ್ನು ದಾಟಲೆಳಸಲು ಶಕ್ತಿರಹಿತನಾಗಿ ನೆಲಕ್ಕೆ ಬಿದ್ದುಹೋದನು.

ಪಿತ್ರಾ ಶಕ್ರೇಣ ಸಂಗಮ್ಯ ಚೋದಿತಃ ಶೋಣಪರ್ವತಂ ।
ಲಿಂಗಂ ತೈಜಸಮಭ್ಯರ್ಚ್ಯ ಲಬ್ಧವೀರ್ಯೋಽಭವತ್ಪುನಃ ॥ ೭೨ ॥
ನಲಃ ಪೂರ್ವಂ ಸಮಭ್ಯರ್ಚ್ಯ ಸ್ವಸೃಷ್ಟ್ವಾ ಮಾನವಪ್ರಿಯಾಃ ।
ಪಾಲಯಾಮಾಸ ಧರ್ಮಾತ್ಮಾ ನೀತಿಸಾರಸಮನ್ವಿತಃ ॥ ೭೩ ॥
ಇಲಃಪ್ರವಿಶ್ಯ ಸಹಸಾ ಗೌರೀವನಮಖಂಡಿತಂ ।
ಸ್ತ್ರೀ ಭಾವಂ ಸಮನುಪ್ರಾಪ್ತಃ ಪಪ್ರಚ್ಛ ಸ್ವಂ ಪುರೋಹಿತಂ ॥ ೭೪ ॥
ವಶಿಷ್ಠೇನ ಸಮಾದಿಷ್ಟಃ ಶೋಣಾದ್ರಿಂ ಸಮಪೂಜಯತ್ ।
ತಪಸಾರಾಧ್ಯ ದೇವೇಶಂ ಪುನಃ ಪುಂಸ್ತ್ವಮುಪಾಗತಃ ॥ ೭೫ ॥
ಸೋಮೋಪದೇಶಾದ್ಭಕ್ತ್ಯಾಥ ಸಸ್ಮಾರಾರುಣ ಪರ್ವತಂ ।
ಈಶಾನುಗ್ರಹತೋ ಲೇಭೇ ಶಾಪಮೋಕ್ಷಂ ತಪೋಽಧಿಕಃ ॥ ೭೬ ॥
ಲೇಭೇ ಚ ಪರಮಂ ಸ್ಥಾನಮಪ್ರಾಪ್ಯಮಮರೈರಪಿ ।
ಭರತೋ ಮೃಗಶಾಬಸ್ಯ ಸ್ಮರಣಾದಾಯುಷೋಽತ್ಯಯೇ ।
ನ ಮುಕ್ತಿಂ ಪ್ರಾಪ ಯೋಗೇನ ಮೃಗಜನ್ಮನಿ ಸಂಗತಃ ॥ ೭೭ ॥

---

೭೨. ತರುವಾಯ ಅವನು ತಂದೆಯಾದ ಇಂದ್ರನ ಆಜ್ಞಾನುಸಾರವಾಗಿ ಅರುಣಾಚಲದಲ್ಲಿರುವ ತೈಜಸಲಿಂಗವನ್ನು ಪೂಜಿಸಿ ಪುನಃ ಪೂರ್ವ ಪ್ರತಾಪವನ್ನು ಪಡೆದನು.

೭೩–೭೪. ನಲಮಹಾರಾಜನೂ ಸಹ ಈ ಲಿಂಗವನ್ನು ಪೂಜಿಸಿದುದರಿಂದ ರಾಜ್ಯವನ್ನು ಹೊಂದಿ ಧರ್ಮದಿಂದಲೂ ನೀತಿಯಿಂದಲೂ ರಾಜ್ಯಭಾರವನ್ನು ಮಾಡಿದನು. ಇಲನೆಂಬುವನು ಗಂಡಸರಿಗೆ ಪ್ರವೇಶವಿಲ್ಲದ ಗೌರೀವನವನ್ನು ಅವಿವೇಕದಿಂದ ಪ್ರವೇಶಮಾಡಲು ಆತನಿಗೆ ಸ್ತ್ರೀತ್ವವು ಪ್ರಾಪ್ತವಾಯಿತು. ಅದರ ನಿವಾರಣೆಗಾಗಿ ಅವನು ತನ್ನ ಕುಲಗುರುಗಳಾದ ವಶಿಷ್ಠರನ್ನು ಕೇಳಿದನು.

೭೫–೭೬. ಬಳಿಕ ಅವರ ಆಜ್ಞಾನುಸಾರವಾಗಿ ಅವನು ಅರುಣಾಚಲವನ್ನು ಪೂಜಿಸಿ ತಪಸ್ಸಿನಿಂದ ಪರಮಶಿವನನ್ನು ಸಂತೋಷಗೊಳಿಸಿ ಪುನಃ ತನ್ನ ಪೂರ್ವ ಸ್ವರೂಪವನ್ನು ಹೊಂದಿದನು. ಬಳಿಕ ಆ ಇಲನು ಚಂದ್ರನ ಉಪದೇಶದಿಂದ ಭಕ್ತಿಯುಕ್ತನಾಗಿ ಅರುಣಾಚಲೇಶ್ವರನನ್ನು ಸ್ಮರಿಸಿ ತಪಸ್ಸಿನಿಂದುಂಟಾದ ಅಧಿಕ ಪುಣ್ಯದಿಂದ ಶಾಪ ಮೋಕ್ಷವನ್ನು ಹೊಂದಿದನು.

೭೭. ಜಡಭರತಮುನಿಯೂ ಸಹ ಜಿಂಕೆಯ ಮರಿಯಲ್ಲಿ ಅತ್ಯಂತಾಸಕ್ತಿಯನ್ನಿಟ್ಟು ಅದನ್ನೇ ಸ್ಮರಿಸುತ್ತ ಪ್ರಾಣತ್ಯಾಗಮಾಡಲು ಯೋಗಿಯಾದರೂ ಆತನಿಗೆ ಮುಕ್ತಿಯು ದೊರೆಯಲಿಲ್ಲ. ಮತ್ತೆ ಜಿಂಕೆಯ ಜನ್ಮವೇ ಬಂದಿತು. ಆ ತರುವಾಯ ಅರುಣಾಚಲೇಶ್ವರನ ಸತ್ಕಾರದಿಂದ ಆತನಿಗೆ ದೇವತೆಗಳಿಗೂ ಅಲಭ್ಯವಾದ ಪರಮಪದವಿಯೇ ಲಭಿಸಿತು.

ಪತ್ನೀವಿರಹಜಂ ದುಃಖಂ ಪ್ರಾಪ್ತವಾನನಿಮಿತಂ ಹರಿಃ ॥ ೭೮ ॥
ಪುನರ್ಭೃಗೂಪದೇಶೇನ ಶೋಣಾದ್ರಿಮಿಮಮರ್ಚಯನ್ ।
ಅವತಾರೇಷು ಸರ್ವೇಷು ಸರ್ವದುಃಖಾನ್ಯಪಾಕರೋತ್ ॥ ೭೯ ॥
ಸರಸ್ವತೀ ಚ ಸಾವಿತ್ರೀ ಶ್ರೀರ್ಭೂಮಿಃ ಸರಿತಸ್ತಥಾ ।
ಅಭ್ಯರ್ಚ್ಯ ಶೋಣಶೈಲೇಶಮಾಪದೋ ನಿರತಾರಿಷುಃ ॥ ೮೦ ॥
ಭಾಸ್ಕರಃ ಪೂರ್ವದಿಗ್ಭಾಗೇ ವಿಶ್ವಾಮಿತ್ರಸ್ತು ದಕ್ಷಿಣೇ ।
ಪಶ್ಚಿಮೇ ವರುಣೋ ಭಾಗೇ ತ್ರಿಶೂಲಂ ಚೋತ್ತರಾಶ್ರಯಂ ॥ ೮೧ ॥
ಯೋಜನದ್ವಯಪರ್ಯಂತೇ ಸೀಮಾಃ ಶೈಲೇಷು ಸಂಸ್ಥಿತಾಃ ।
ಚತಸ್ರೋ ದೇವತಾಸ್ತ್ವೇತಾಃ ಸೇವಂತೇ ಶೋಣಪರ್ವತಂ ॥ ೮೨ ॥
ಸ್ಥಿತಾಃ ಸೀಮಾವಸಾನೇಷು ಶೋಣಾದ್ರೀಶಮುಪಸ್ಥಿತಂ ।
ನಮಂತಿ ದೇವಾಶ್ಚತ್ವಾರಃ ಶಿವಂ ಶೋಣಾಚಲಾಕೃತಿಂ ॥ ೮೩ ॥
ಅಸ್ಯೋತ್ತರಸ್ಮಿನ್ ಶಿಖರೇ ದೃಶ್ಯತೇ ವಟಭೂರುಹಃ ।
ಸಿದ್ಧವೇಷಃ ಸದೈವಾಸ್ತೇ ಯಸ್ಯಮೂಲೇ ಮಹೇಶ್ವರಃ ॥ ೮೪ ॥

---

೭೮–೭೯. ಮಹಾವಿಷ್ಣುವೂ ಪತ್ನೀವಿರಹಿತನಾಗಿ ಅತ್ಯಂತ ದುಃಖಿತನಾಗಿರಲು ಭೃಗುಮಹರ್ಷಿಗಳ ಉಪದೇಶಾನುಸಾರವಾಗಿ ಅರುಣಾಚಲನನ್ನು ಅರ್ಚನೆಮಾಡಿ ಸಕಲ ಅವತಾರಗಳಲ್ಲಿಯೂ ಮಹಾಲಕ್ಷ್ಮಿಯು ಅನುಪಾಯಿನಿಯಾಗಿರುವಂತೆ ವರವನ್ನು ಪಡೆದು ಸಕಲದುಃಖಗಳನ್ನೂ ದೂರಮಾಡಿಕೊಂಡನು.

೮೦. ಅಂತೆಯೇ ಸರಸ್ವತಿ, ಸಾವಿತ್ರಿ, ಮಹಾಲಕ್ಷ್ಮಿ, ಭೂದೇವಿ, ನದ್ಯಭಿಮಾನಿದೇವತೆಗಳು ಇವರೆಲ್ಲರೂ ಶೋಣೇಶ್ವರನನ್ನು ಪೂಜಿಸಿ ತಮ್ಮ ಕಷ್ಟಗಳನ್ನು ಕಳೆದುಕೊಂಡರು.

೮೧. ಈ ಪರ್ವತಕ್ಕೆ ಪೂರ್ವದಿಕ್ಕಿನಲ್ಲಿ ಭಾಸ್ಕರನಿರುವನು. ದಕ್ಷಿಣದಲ್ಲಿ ವಿಶ್ವಾಮಿತ್ರನೂ, ಪಶ್ಚಿಮದಲ್ಲಿ ವರುಣನೂ, ಉತ್ತರದಲ್ಲಿ ಶಿವನ ತ್ರಿಶೂಲಾಭಿಮಾನಿದೇವತೆಯೂ ಇರುವರು.

೮೨. ಸುತ್ತಲೂ ಎರಡು ಯೋಜನ ದೂರದಲ್ಲಿರುವ ಬೆಟ್ಟಗಳಲ್ಲಿ ಪರ್ವತದ ಇದರ ಸೀಮಾರೇಖೆಯಿರುವುದು. ಮೇಲೆ ಹೇಳಿದ ನಾಲ್ಕುಮಂದಿ ದೇವತೆಗಳೂ ಅರುಣಾಚಲನನ್ನು ಸೇವಿಸುತ್ತಿರುವರು.

೮೩. ಈ ದೇವತೆಗಳು ತಮ್ಮ ಎಲ್ಲೆಗಳಲ್ಲಿ ನಿಂತು ಪರ್ವತರೂಪದಿಂದ ನಿಂತಿರುವ ಈಶ್ವರನನ್ನು ನಿರಂತರದಲ್ಲಿಯೂ ಪೂಜಿಸುತ್ತಿರುವರು.

೮೪. ಈ ಗಿರಿಯ ಉತ್ತರ ಶಿಖರದಲ್ಲಿ ಒಂದು ಆಲದಮರವಿರುವುದು.

ಯಸ್ಯ ಛಾಯಾತಿಮಹತೀ ಸರ್ವದಾ ಮಂಡಲಾಕೃತಿಃ ।
ಲಕ್ಷ್ಯತೇ ವಿಸ್ಮಯೋಪೇತೈಃ ಸರ್ವದಾ ದೇವಮಾನವೈಃ ॥ ೮೫ ॥
ಅಷ್ಟಭಿಃ ಪರಿತೋ ಲಿಂಗೈರಷ್ಟದಿಕ್ಪಾಲಪೂಜಿತೈಃ ।
ಅಷ್ಟಾಸು ಸಂಸ್ಥಿತೈರ್ದಿಕ್ಷು ಶೋಭತೇ ಹ್ಯುಪಸೇವಿತಃ ॥ ೮೬ ॥
ನೃಪಾಣಾಂ ಶಂಭುಭಕ್ತಾನಾಂ ಶಂಕರಾಜ್ಞಾನುಪಾಲಿನಾಂ ।
ಅತ್ರೈವ ಮಹದಾಸ್ಥಾನಮಾದಿದೇವೇನ ನಿರ್ಮಿತಂ ॥ ೮೭ ॥
ಬಕುಲಶ್ಚ ಮಹಾಂಸ್ತತ್ರ ಸದಾರ್ಥಿತಫಲಪ್ರದಃ ।
ಆಗಮಾರ್ಥವಿದಾ ಮೂಲೇ ವಾಮದೇವೇನ ಸೇವ್ಯತೇ ॥ ೮೮ ॥
ಅಗಸ್ತ್ಯಶ್ಚ ವಶಿಷ್ಠಶ್ಚ ಸಂಪೂಜ್ಯಾರುಣಭೂಧರಂ ।
ಸಂಸ್ಥಾಪ್ಯ ಲಿಂಗೇ ವಿಮಲೇ ತೇಪಾತೇ ತಾದೃಶಂ ತಪಃ ॥ ೮೯ ॥
ಹಿರಣ್ಯಗರ್ಭತನಯಃ ಪುರಾ ಶೋಣನದಃ ಪುಮಾನ್ ।
ಅತ್ರ ತೀವ್ರಂ ತಪಸ್ತಪ್ತ್ವಾ ಗಂಗಾಭಿಮುಖಗೋಽಭವತ್ ॥ ೯೦ ॥

---

ಅದರ ಮೂಲದಲ್ಲಿ ಸದಾಶಿವನು ಸಿದ್ಧವೇಷದಿಂದ ಯಾವಾಗಲೂ ನೆಲಸಿರುತ್ತಾನೆ.

೮೫. ಈ ಮರದ ನೆರಳು ಬಹಳ ಗಹನವಾದುದಾಗಿ ಮಂಡಲಾಕಾರವಾಗಿರುವುದು. ಮತ್ತು ವಿಸ್ಮಯಪೂರಿತವಾದ ನೇತ್ರಗಳಿಂದ ದೇವತೆಗಳೂ ಮಾನವರೂ ಇದನ್ನು ನೋಡುತ್ತಿರುವರು.

೮೬. ಈ ಈಶ್ವರಮೂರ್ತಿಯು ಎಂಟು ದಿಕ್ಕುಗಳಲ್ಲಿಯೂ ನೆಲಸಿರುವ ಅಷ್ಟದಿಕ್ಪಾಲಕರಿಂದ ಪೂಜಿತಗಳಾದ ಎಂಟು ಲಿಂಗಗಳಿಂದ ಸೇವ್ಯವಾಗಿರುವುದು.

೮೭. ಶಿವಭಕ್ತರಾಗಿ ಆತನ ಆಜ್ಞಾನುವರ್ತಿಗಳಾದ ಸಕಲ ರಾಜರಿಗೂ ಇಲ್ಲಿಯೇ ಬಿಡಾರಗಳು ಮಹಾದೇವನಿಂದ ನಿರ್ಮಿತವಾಗಿರುವುದು.

೮೮. ಇಲ್ಲಿಯೇ ದೊಡ್ಡದಾದ ಬಕುಳವೃಕ್ಷವಿರುವುದು. ಇದು ಯಾವಾಗಲೂ ಸಕಲಾರ್ಥಸಿದ್ಧಿದಾಯಕವಾಗಿರುವುದು. ಇದರ ಮೂಲದಲ್ಲಿ ವೇದವೇದಾಂಗಪಾರಗನಾದ ವಾಮದೇವಮಹರ್ಷಿಯು ಶಿವನನ್ನು ಸೇವೆಗೈಯುತ್ತಿರುವನು.

೮೯. ಅಗಸ್ತ್ಯನೂ, ವಶಿಷ್ಠನೂ ಅರುಣಾಚಲೇಶ್ವರನನ್ನು ಪೂಜಿಸಿ ಅಲ್ಲಿ ಎರಡು ಲಿಂಗಗಳನ್ನು ಸ್ಥಾಪಿಸಿ ದುಷ್ಕರವಾದ ತಪಸ್ಸನ್ನು ಮಾಡಿದರು.

೯೦. ಪೂರ್ವದಲ್ಲಿ ಚತುರ್ಮುಖಬ್ರಹ್ಮನ ಮಗನಾದ ಶೋಣನದನೆಂಬುವನು ಅತ್ಯುಗ್ರವಾದ ತಪಸ್ಸನ್ನು ಮಾಡಿ ಗಂಗೆಗೆ ಅಭಿಮುಖನಾಗಿ ನಡೆದನು.

**ಅತ್ರ ಶೋಣನದೀ ಪುಣ್ಯಾ ಪ್ರವಹತ್ಯಮಲೋದಕಾ ।**
**ವೇಣಾ ಚ ಪುಣ್ಯತಟಿನೀ ಪರಿತಃ ಸೇವತೇಽಚಲಂ ॥ ೯೧ ॥**
**ವಾಯವ್ಯಾಚ್ಚ ದಿಶೋ ಭಾಗೇ ವಾಯುತೀರ್ಥಂಚ ಶೋಭತೇ ।**
**ತತ್ರ ಸ್ನಾತ್ವಾ ಮರುತ್ಪೂರ್ವಂ ಜಗತ್ಪ್ರಾಣತ್ವಮಾಪ್ತವಾನ್ ॥ ೯೨ ॥**
**ಉತ್ತರೇಽಸ್ಯ ಗಿರೇಸ್ತೀರ್ಥಂ ಸುವರ್ಣಕಮಲೋಜ್ಜ್ವಲಂ ।**
**ದಿವ್ಯ ಸೌಗಂಧಿಕಾಕೀರ್ಣಂ ಹಂಸಭೃಂಗಮನೋಹರಂ ॥ ೯೩ ॥**
**ಕೌಬೇರಂ ತೀರ್ಥಮೈಶಾನ್ಯಾಮೈಶಾನ್ಯಂ ತೀರ್ಥಮುತ್ತಮಂ ॥ ೯೪ ॥**
**ತಸ್ಯೈವ ಪಶ್ಚಿಮೇ ಭಾಗೇ ವಿಷ್ಣುಃ ಕಮಲಲೋಚನಃ ।**
**ಸ್ನಾತ್ವಾ ವಿಷ್ಣುತ್ವಮಭಜತ್ಕಮಲಾಲಾಲಿತಾಕೃತಿಃ ॥ ೯೫ ॥**
**ನವಗ್ರಹಾಃ ಪುರಾ ತತ್ರ ಸ್ನಾತ್ವಾ ಗ್ರಹಪದಂ ಗತಾಃ ।**
**ನವಗ್ರಹಪ್ರಸಾದಶ್ಚ ಜಾಯತೇ ತತ್ರ ಮಜ್ಜನಾತ್ ॥ ೯೬ ॥**
**ದುರ್ಗಾ ವಿನಾಯಕಸ್ಕಂದೌ ಕ್ಷೇತ್ರಪಾಲಃ ಸರಸ್ವತೀ**
**ರಕ್ಷಂತಿ ಪರಿತಸ್ತೀರ್ಥಂ ಬ್ರಾಹ್ಮ್ಯಮೇತದನಂತರಂ ॥ ೯೭ ॥**

---

೯೧. ಆತನ ಹೆಸರಿನಿಂದ ಇಲ್ಲಿ ಶೋಣನದಿಯು ಶುಭ್ರಜಲಯುಕ್ತವಾಗಿ ಹರಿಯುತ್ತಿರುವುದು. ಮತ್ತು ಪುಣ್ಯಸ್ರೋತೆಯಾದ ವೇಣಾನದಿಯೂ ಈ ಪರ್ವತವನ್ನು ಸುತ್ತುಗಟ್ಟಿರುವುದು.

೯೨. ವಾಯುವ್ಯದಿಕ್ಕಿನಲ್ಲಿ ವಾಯುತೀರ್ಥವಿರುವುದು. ಅಲ್ಲಿಯೇ ವಾಯುದೇವನು ಪೂರ್ವದಲ್ಲಿ ಸ್ನಾನಮಾಡಿ ಜಗತ್ಪ್ರಾಣ ಪದವಿಯನ್ನು ಹೊಂದಿದನು.

೯೩. ಈ ಪರ್ವತದ ಉತ್ತರ ದಿಕ್ಕಿನಲ್ಲಿ ಸುವರ್ಣ ಕಮಲಗಳಿಂದಲೂ ಸೌಗಂಧಿಕಾ ಪುಷ್ಪಗಳಿಂದಲೂ ಯುಕ್ತವಾದ ಹಂಸಭೃಂಗ ಸಮೂಹಗಳಿಂದ ಕೂಡಿದ ಒಂದು ತೀರ್ಥವಿರುವುದು.

೯೪–೯೫. ಇದೇ ಕುಬೇರತೀರ್ಥವು. ಈಶಾನ್ಯದಲ್ಲಿ ಉತ್ತಮವಾದ ಈಶಾನತೀರ್ಥವಿರುವುದು. ಅದರ ಪಶ್ಚಿಮ ಭಾಗದಲ್ಲಿಯೇ ಲಕ್ಷ್ಮೀಸಮೇತನಾದ ಮಹಾವಿಷ್ಣುವು ಸ್ನಾನಮಾಡಿ ಜಗದ್ವ್ಯಾಪಕತ್ವವನ್ನೂ ರಕ್ಷಣಾಧಿಕಾರವನ್ನೂ ಪಡೆದನು.

೯೬. ಪೂರ್ವದಲ್ಲಿ ನವಗ್ರಹಾದಿ ದೇವತೆಗಳೂ ಅಲ್ಲಿ ಸ್ನಾನಮಾಡಿ ತಮ್ಮ ಸ್ಥಾನಗಳನ್ನು ಹೊಂದಿದರು. ಆದುದರಿಂದ ಆ ತೀರ್ಥದಲ್ಲಿ ಸ್ನಾನಮಾಡಿದವರಿಗೆ ನವಗ್ರಹಗಳ ಸುಮುಖತೆಯುಂಟಾಗುವುದರಲ್ಲಿ ಸಂದೇಹವಿಲ್ಲ.

೯೭. ಈ ತೀರ್ಥವನ್ನು ದುರ್ಗಾದೇವಿಯೂ, ವಿನಾಯಕನೂ, ಸ್ಕಂದನೂ, ಕ್ಷೇತ್ರಪಾಲಕನೂ, ಸರಸ್ವತಿಯೂ ರಕ್ಷಿಸುತ್ತಿರುವರು. ಅಲ್ಲಿಯೇ ಬ್ರಹ್ಮತೀರ್ಥವೆಂಬ ಮತ್ತೊಂದು ತೀರ್ಥವಿರುವುದು.

ಗಂಗಾ ಚ ಯಮುನಾ ಚೈವ ಗೋದಾವರೀ ಸರಸ್ವತೀ ।
ನರ್ಮದಾಸಿಂಧುಕಾವೇರ್ಯಃ ಶೋಣಃ ಶೋಣನದೀ ಚ ಸಾ ॥ ೯೮ ॥
ಏತಾ ಗೂಢಾ ನಿಷೇವಂತೇ ಪೂರ್ವಾದ್ಯಾಶಾಸು ಸಂತತಂ ।
ನಶ್ಯಂತ್ಯಃ ಸಕಲಂ ಪಾಪಮಾತ್ಮಕ್ಷೇತ್ರಸಮುದ್ಭವಂ ॥ ೯೯ ॥
ಅನ್ಯಾಶ್ಚ ಸರಿತೋ ದಿವ್ಯಾಃ ಪಾರ್ಥಿವ್ಯಶ್ಚ ಶುಭೋದಕಾಃ ।
ಉದಜೃಂಭಂತ ಸಹಸಾ ಶೋಣಾದ್ರೀಶಪ್ರಸಾದತಃ ॥೧೦೦ ॥
ಆಗಸ್ತ್ಯಂ ದಕ್ಷಿಣೇ ಭಾಗೇ ತೀರ್ಥಂ ಮಹದುದಾಹೃತಂ ।
ಸರ್ವಭಾಷಾರ್ಥಸಂಸಿದ್ಧಿರ್ಜಾಯತೇ ತತ್ರ ಮಜ್ಜನಾತ್ ॥ ೧೦೧ ॥
ಅತ್ರಾಗಸ್ತ್ಯಃ ಸಮಾಗತ್ಯ ಸ್ನಾತ್ವಾ ಮುನಿಗಣಾವೃತಃ ।
ಅಭ್ಯರ್ಚಯತಿ ಶೋಣಾದ್ರಿಂ ಮಾಸಿ ಭಾದ್ರಪದೇ ಸದಾ ॥ ೧೦೨ ॥
ವಾಸಿಷ್ಠಮುತ್ತರೇ ಭಾಗೇ ತೀರ್ಥಂ ದಿವ್ಯಂ ಶುಭೋದಯಂ ।
ಸರ್ವವೇದಾರ್ಥಸಂಸಿದ್ಧಿರ್ಜಾಯತೇ ತತ್ರ ಮಜ್ಜನಾತ್ ॥ ೧೦೩ ॥
ಅತ್ರ ಮೇರೋಃ ಸಮಾಗತ್ಯ ವಶಿಷ್ಠೋ ಭಗವಾನೃಷಿಃ ।
ಕರೋತ್ಯಾಶ್ವಯುಜೇ ಮಾಸಿ ಶೋಣಾದ್ರೀಶನಿಷೇವಣಂ ॥ ೧೦೪ ॥

---

೯೮–೯೯. ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದೆ, ಸಿಂಧು, ಕಾವೇರಿ, ಶೋಣನದಿ ಇವುಗಳೆಲ್ಲವೂ ಪ್ರಚ್ಛನ್ನಗಳಾಗಿ ಈ ತೀರ್ಥದ ಪೂರ್ವಾದಿ ದಿಕ್ಕುಗಳಲ್ಲಿ ನಿರಂತರದಲ್ಲಿಯೂ ಸೇವಿಸುತ್ತಿರುವುವಲ್ಲದೆ ತಮ್ಮಲ್ಲಿ ಸ್ನಾನಮಾಡುವವರ ಕಾಯಿಕ, ಮಾನಸಿಕ ವಾಚಿಕವಾದ ಪಾಪಗಳೆಲ್ಲವನ್ನೂ ಕಳೆಯುವುವು.

೧೦೦. ಹೀಗೆಯೇ ಅರುಣಾಚಲೇಶ್ವರನ ಪ್ರಸಾದದಿಂದ ಈ ಗಿರಿಯಲ್ಲಿ ಅನೇಕ ದಿವ್ಯನದಿಗಳೂ, ಭೂಲೋಕದಲ್ಲಿರುವ ತೀರ್ಥಗಳೂ ಎಲ್ಲವೂ ಇಲ್ಲಿ ಉಂಟಾದುವು.

೧೦೧. ಈ ಗಿರಿಯ ದಕ್ಷಿಣ ಪಾರ್ಶ್ವದಲ್ಲಿ ಅಗಸ್ತ್ಯತೀರ್ಥವೆಂಬ ಪುಣ್ಯತಮವಾದ ಉದಕವಿರುವುದು. ಅದರಲ್ಲಿ ಸ್ನಾನಮಾಡುವುದರಿಂದ ಜನರಿಗೆ ಸಕಲ ವೈಖರೀಭಾಷೆಗಳಲ್ಲಿಯೂ ಪೂರ್ಣಜ್ಞಾನವುಂಟಾಗುವುದು.

೧೦೨. ಈ ತೀರ್ಥದಲ್ಲಿಯೇ ಅಗಸ್ತ್ಯಮಹರ್ಷಿಯು ಅನೇಕ ಮುನಿಗಳಿಂದೊಡಗೂಡಿ ಬಂದು ಸ್ನಾನವನ್ನು ಮಾಡಿ ಪ್ರತಿ ಭಾದ್ರಪದ ಮಾಸದಲ್ಲಿಯೂ ಅರುಣಾಚಲೇಶ್ವರನನ್ನು ಪೂಜಿಸುವನು.

೧೦೩. ಉತ್ತರಪ್ರಾಂತ್ಯದಲ್ಲಿ ವಶಿಷ್ಠತೀರ್ಥವೆಂಬ ದಿವ್ಯೋದಕವಿರುವುದು. ಅಲ್ಲಿ ಮಜ್ಜನಮಾಡುವುದರಿಂದ ಸಕಲ ವೇದವೇದಾಂಗಗಳ ಸಂಪೂರ್ಣಜ್ಞಾನವುಂಟಾಗುವುದು.

೧೦೪. ಇಲ್ಲಿಯೇ ಮಹರ್ಷಿಯಾದ ವಶಿಷ್ಠನು ಮೇರುಪರ್ವತದಿಂದ

ಗಂಗಾನಾಮ ಮಹತ್ತೀರ್ಥಂ ಪೂರ್ವೋತ್ತರ ದಿಶಿ ಸ್ಥಿತಂ ।
ತತ್ರ ಸ್ನಾನಾದ್ಭವೇನ್ನೃಣಾಂ ಸರ್ವಪಾತಕನಾಶನಂ ॥ ೧೦೫ ॥
ಗಂಗಾದ್ಯಾಃ ಸರಿತಃ ಸರ್ವಾಃ ಕಾರ್ತಿಕೇ ಮಾಸಿ ಸಂಗತಾಃ ।
ಅತ್ರಾರುಣಾದ್ರಿನಾಥಸ್ಯ ಸೇವಾಂ ಕುರ್ವಂತಿ ಸಾದರಂ ॥ ೧೦೬ ॥
ಬ್ರಾಹ್ಮ್ಯಂ ನಾಮ ಮಹಾತೀರ್ಥಮರುಣಾದ್ರೀಶಸನ್ನಿಧೌ ।
ತಸ್ಯೋಪಸಂಗಮಾತ್ಸದ್ಯೋ ಬ್ರಹ್ಮಹತ್ಯಾದಿ ನಶ್ಯತಿ ॥ ೧೦೭ ॥
ಮಾರ್ಗೇ ಮಾಸಿ ಸಮಾಗತ್ಯ ಬ್ರಹ್ಮಲೋಕಾತ್ಪಿತಾಮಹಃ ।
ಸ್ನಾತ್ವಾ ತತ್ರಾತ್ಯಹಂ ದೇವಮರ್ಚಯತ್ಯರುಣಾಚಲಂ ॥ ೧೦೮ ॥
ಪೌಷೇಮಾಸಿ ಸಮಾಗತ್ಯ ಸ್ನಾತ್ವಾ ತೀರ್ಥೇ ನಿಜೈಃ ಸುರೈಃ ।
ಮಹೇಂದ್ರಃ ಶೋಣಶೈಲೇಶಮಭ್ಯರ್ಚಯತಿ ಶಂಕರಂ ॥ ೧೦೯ ॥
ಶೈವಂ ನಾಮ ಮಹಾತೀರ್ಥಂ ಸನ್ನಿಧೌ ತತ್ರ ವರ್ತತೇ ।
ರುದ್ರೋ ಬ್ರಹ್ಮಕಪಾಲೇನ ಸಹ ತತ್ರ ನ್ಯಮಜ್ಜತ ॥ ೧೧೦ ॥

---

ಬಂದು ಪ್ರತಿ ಆಶ್ವಯುಜ ಮಾಸದಲ್ಲಿಯೂ ಈ ತೀರ್ಥಸ್ನಾನವನ್ನು ಮಾಡಿ ಅರುಣಾಚಲನನ್ನು ಸೇವಿಸುವನು.

೧೦೫. ಈಶಾನ್ಯದಿಕ್ಕಿನಲ್ಲಿ ಗಂಗಾತೀರ್ಥವೆಂಬ ಪುಣ್ಯೋದಕವಿರುವುದು. ಅದರಲ್ಲಿ ಮಿಾಯುವುದರಿಂದ ಸರ್ವಪಾತಕಗಳೂ ನಾಶವನ್ನೈದುವುವು.

೧೦೬. ಪ್ರತಿ ಕಾರ್ತಿಕಮಾಸದಲ್ಲಿಯೂ ಗಂಗಾದಿ ಸಕಲ ತೀರ್ಥಗಳೂ ಈ ತೀರ್ಥದಲ್ಲಿ ಸನ್ನಿಹಿತಗಳಾಗಿ ಭಕ್ತ್ಯಾದರದಿಂದ ಅರುಣಾದ್ರೀಶನ ಸೇವೆಯನ್ನು ಮಾಡುತ್ತವೆ.

೧೦೭. ಅರುಣಾಚಲೇಶ್ವರನ ಸನ್ನಿಧಾನದಲ್ಲಿಯೇ ಬ್ರಹ್ಮತೀರ್ಥವಿರುತ್ತದೆ. ಅದರ ಸ್ನಾನಪಾನಾದಿಗಳಿಂದ ಬ್ರಹ್ಮಹತ್ಯಾದಿ ಮಹಾಪಾತಕಗಳು ದೂರ ವಾಗುತ್ತವೆ.

೧೦೮. ಮಾರ್ಗಶೀರ್ಷಮಾಸದಲ್ಲಿ ಲೋಕಪಿತಾಮಹನಾದ ಬ್ರಹ್ಮನು ಅಲ್ಲಿಗೈತಂದು ನಿತ್ಯದಲ್ಲಿಯೂ ಈ ತೀರ್ಥದಲ್ಲಿ ಸ್ನಾನಮಾಡಿ ಅರುಣಾಚಲೇಶ್ವರ ನನ್ನು ಸೇವಿಸುತ್ತಿರುವನು.

೧೦೯. ಮಹೇಂದ್ರನೂ ಸಹ ಇತರ ದೇವತೆಗಳಿಂದೊಡಗೂಡಿ ಪ್ರತಿ ಪುಷ್ಯ ಮಾಸದಲ್ಲಿಯೂ ಇಲ್ಲಿಗೆ ಬಂದು ಈ ತೀರ್ಥದಲ್ಲಿಯೇ ಮಿಂದು ಅರುಣಾಚಲ ವಾಸಿಯಾದ ಮಹಾದೇವನನ್ನು ಅರ್ಚನೆಯಿಂದ ಸಂತೋಷಗೊಳಿಸುವನು.

೧೧೦. ಅದರ ಸಮಿಾಪದಲ್ಲಿಯೇ ಪರಮಪವಿತ್ರವಾದ ಶಿವತೀರ್ಥವಿರು ವುದು. ಪೂರ್ವದಲ್ಲಿ ಬ್ರಹ್ಮನ ಶಿರಸ್ಸನ್ನು ಛೇದನಮಾಡಿ ರುದ್ರನು ಆ ಕಪಾಲ ದೊಡನೆಯೆ ಇಲ್ಲಿ ಸ್ನಾನಮಾಡಿದನು.

ಅತ್ರ ಶಂಭುರ್ಗಣೈಃ ಸಾರ್ಧಂ ಮಾಘೇ ಮಾಸಿ ಪ್ರಸೀದತಿ ।
ಪ್ರಾಯಶ್ಚಿತ್ತಾನಿ ಸರ್ವಾಣಿ ನೄಣಾಂ ಸಫಲಯನ್ಭುವಿ ॥ ೧೧೧ ॥
ಆಗ್ನೇಯಮಗ್ನಿದಿಗ್ಭಾಗೇ ತೀರ್ಥಂ ಸೌಭಾಗ್ಯದಾಯಕಂ ।
ಅಗ್ನಿರತ್ರ ಪುರಾ ಸ್ನಾತ್ವಾ ಸ್ವಾಹಯಾ ಸಂಗತಃ ಸುಖೀ ॥ ೧೧೨ ॥
ಅನಂಗೋಽಪಿ ಸ್ಮರಃ ಸ್ನಾತ್ವಾ ಫಾಲ್ಗುನೇ ಮಾಸಿ ಸಂಗತಃ ।
ಅಭ್ಯರ್ಚ್ಯ ಶೋಣಶೈಲೇಶಮಭೂತ್ಸರ್ವಸುಖಾಧಿಪಃ ॥ ೧೧೩ ॥
ದಿಶಿ ದಕ್ಷಿಣ ಪೂರ್ವಸ್ಯಾಂ ವೈಷ್ಣವಂ ತೀರ್ಥಮದ್ಭುತಂ ।
ಬ್ರಹ್ಮರ್ಷಯಃ ಸದಾ ತತ್ರ ವಸಂತಿ ಕೃತಕೌತುಕಾಃ ॥ ೧೧೪ ॥
ಚೈತ್ರೇ ಮಾಸಿ ಸಮಾಗತ್ಯ ವಿಷ್ಣುಸ್ತತ್ರ ರಮಾಪತಿಃ ।
ಸ್ನಾತ್ವಾಭ್ಯರ್ಚ್ಯಾರುಣಾದ್ರೀಶಮಭವಲ್ಲೋಕನಾಯಕಃ ॥ ೧೧೫ ॥
ಸೌರಂ ನಾಮ ಮಹಾತೀರ್ಥಂ ಕೌಬೇರದಿಶಿ ಜೃಂಭಿತಂ ।
ಸರ್ವರೋಗೋಪಶಾಂತಿಶ್ಚ ಜಾಯತೇ ತತ್ರ ಮಜ್ಜನಾತ್ ॥ ೧೧೬ ॥

---

೧೧೧. ಇಲ್ಲಿಯೇ ಪರಮೇಶ್ವರನು ತನ್ನ ಪರಿವಾರ ಗಣಗಳಿಂದ ಸೇವಿತನಾಗಿ ಮಾಘಮಾಸದಲ್ಲಿ ಸನ್ನಿಹಿತನಾಗಿರುವನು. ಆ ಕಾಲದಲ್ಲಿ ಮಾಡಿದ ತೀರ್ಥಸ್ನಾನದಿಂದ ಮನುಷ್ಯರು ಮಾಡಿದ ಸಕಲ ವಿಧಗಳಾದ ಪ್ರಾಯಶ್ಚಿತ್ತ ಕಾರ್ಯಗಳೂ ಫಲಪ್ರದಗಳಾಗುತ್ತವೆ.

೧೧೨. ಆಗ್ನೇಯದಿಕ್ಕಿನಲ್ಲಿ ಅಗ್ನಿತೀರ್ಥವಿರುವುದು. ಅದು ಸಕಲೈಶ್ವರ್ಯಗಳನ್ನೂ ಕೊಡುವ ಮಹಿಮೆಯುಳ್ಳದ್ದಾಗಿದೆ. ಅಗ್ನಿದೇವನು ಅಲ್ಲಿ ಸ್ನಾನ ಮಾಡಿದ ಪುಣ್ಯಫಲರೂಪವಾಗಿ ಸ್ವಾಹಾದೇವಿಯನ್ನು ಹೆಂಡತಿಯಾಗಿ ಪಡೆದನು.

೧೧೩. ಅಶರೀರಿಯಾದ ಮನ್ಮಥನು ಪ್ರತಿ ಫಾಲ್ಗುನಮಾಸದಲ್ಲಿಯೂ ಇಲ್ಲಿ ಸ್ನಾನಮಾಡಿ ಈಶ್ವರನನ್ನು ಅರ್ಚಿಸುವುದರಿಂದ ಸಕಲ ಸೌಖ್ಯಗಳಿಗೂ ಅಧಿಪತಿಯಾಗಿರುವನು.

೧೧೪. ಅಲ್ಲಿಯೇ ಅದ್ಭುತವಾದ ವಿಷ್ಣುತೀರ್ಥವಿರುವುದು. ಅದರ ಸಮೀಪದಲ್ಲೇ ಭಕ್ತಿಯುಕ್ತರಾದ ಬ್ರಹ್ಮರ್ಷಿಗಳು ಯಾವಾಗಲೂ ವಾಸಮಾಡುತ್ತಿರುವರು.

೧೧೫. ಲಕ್ಷ್ಮೀಸಮೇತನಾಗಿ ಮಹಾವಿಷ್ಣುವು ಪ್ರತಿ ಚೈತ್ರಮಾಸದಲ್ಲಿಯೂ ಈ ತೀರ್ಥದಲ್ಲಿ ಮಜ್ಜನಮಾಡಿ ಮಹಾದೇವನನ್ನು ಪೂಜೆಮಾಡಿದುದರಿಂದ ಲೋಕನಾಯಕನಾದನು.

೧೧೬. ಉತ್ತರದಲ್ಲಿ ಸೂರ್ಯತೀರ್ಥವೆಂಬುದು ವಿಖ್ಯಾತವಾಗಿರುವುದು. ಅದರಲ್ಲಿ ಸ್ನಾನಮಾಡುವುದರಿಂದ ಸಕಲ ದೈಹಿಕರೋಗಗಳೂ ನಿರ್ಮೂಲವಾಗುವುವು.

ವೈಶಾಖೇ ಮಾಸಿ ದಿನಕೃತ್ಸ್ನಾತ್ವಾತ್ರೇಶಂ ನಿಷೇವತೇ ।
ವಾಲಖಿಲ್ಯೈಃ ಸಮಂ ಶ್ರೀಮಾನ್ವೇದೈಶ್ಚ ಸಹ ಸಂಗತಃ ॥ ೧೧೭ ॥
ಆಶ್ವಿನಂ ಪಾವನಂ ತೀರ್ಥಮೀಶಬ್ರಹ್ಮೋತ್ತರೇ ಸ್ಥಿತಂ ।
ಆಪ್ಲುತೌ ಭಿಷಜೌ ದಸ್ರಾ ಪೂತಾವತ್ರ ನಿಮಜ್ಜನಾತ್ ॥ ೧೧೮ ॥
ಅತ್ರಾಶ್ವಿನೌ ಸಮಾಗತ್ಯ ಸ್ನಾತ್ವಾಭ್ಯರ್ಚ್ಯ ಚ ಶಂಕರಂ ।
ದಕ್ಷಿಣೇ ಶೋಣಶೈಲಸ್ಯ ನಿಕಟೇ ವರ್ತತೇ ಶುಭಂ ॥ ೧೧೯ ॥
ಕಾಮದಂ ಮೋಕ್ಷದಂ ಚೈವ ತೀರ್ಥಂ ಪಾಂಡವಸಂಜ್ಞಿತಂ ।
ಪುರಾಹಿ ಪಾಂಡವಾಸ್ತತ್ರ ಮಜ್ಜನಾತ್ ಕ್ಷಿತಿನಾಯಕಾಃ ॥ ೧೨೦ ॥
ಅತ್ರ ಧಾತ್ರೀ ಸಮಾಗತ್ಯ ಸರ್ವೌಷಧಿಫಲಾನ್ವಿತಾ ।
ಜ್ಯೇಷ್ಠೇ ಮಾಸಿ ಸಮಂ ದೇವೈರರ್ಚಯಚ್ಚಾರುಣಾಚಲಂ ॥ ೧೨೧ ॥
ಆಷಾಢೇ ಮಾಸಿ ಸಂತ್ಯಕ್ತಾ ವಿಶ್ವೇದೇವಾ ಮಹಾಬಲಾಃ ।
ಅಭ್ಯರ್ಚ್ಯ ಶೋಣಶೈಲೇಶಮಾಗಚ್ಛನ್ಮಖರಾಧ್ಯತಾಂ ॥ ೧೨೨ ॥
ವೈಶ್ವದೇವಂ ಮಹಾತೀರ್ಥಂ ಸೋಮಸೂರ್ಯೋತ್ತರಾಶ್ರಯಂ ।
ವಿಶ್ವಾಧಿಪತ್ಯಮತುಲಂ ಲಭ್ಯತೇ ತತ್ರ ಮಜ್ಜನಾತ್ ॥ ೧೨೩ ॥

---

೧೧೭–೧೧೮. ವೈಶಾಖಮಾಸದಲ್ಲಿ ಸೂರ್ಯದೇವನು ವಾಲಖಿಲ್ಯರಿಂದಲೂ ವೇದಾಭಿಮಾನಿ ದೇವತೆಗಳಿಂದಲೂ ಸೇರಿ ಈ ತೀರ್ಥದಲ್ಲಿ ಸ್ನಾನಮಾಡಿ ಮಹೇಶ್ವರನನ್ನು ಸೇವಿಸುತ್ತಾರೆ. ಈಶಾನ ಬ್ರಹ್ಮತೀರ್ಥಗಳಿಗೆ ಉತ್ತರದಲ್ಲಿ ಅಶ್ವಿನೀತೀರ್ಥವಿರುವುದು. ದೇವಭಿಷಜರಾದ ಅಶ್ವಿನೀದೇವತೆಗಳು ಅಲ್ಲಿ ಸ್ನಾನ ಮಾಡಿದುದರಿಂದ ನಿಷ್ಕಲ್ಮಷರಾದರು.

೧೧೯–೧೨೧. ಇಲ್ಲಿ ಸ್ನಾನಮಾಡಿಕೊಂಡು ಆ ಅಶ್ವಿನೀದೇವತೆಗಳು ಶಂಕರನನ್ನು ಅರ್ಚಿಸುವರು. ಪರ್ವತದ ದಕ್ಷಿಣದಿಕ್ಕಿನ ತಪ್ಪಲಿನಲ್ಲಿ ಪಾಂಡವತೀರ್ಥವೆಂಬುದಿರುವುದು. ವನವಾಸ ಕಾಲದಲ್ಲಿ ಪಾಂಡವರು ಈ ತೀರ್ಥದಲ್ಲಿ ಸ್ನಾನ ಮಾಡಿದುದರಿಂದ ಪುನಃ ರಾಜ್ಯವನ್ನು ಹೊಂದಿದರು. ಈ ತೀರ್ಥವು ಜನರಿಗೆ ಕಾಮ್ಯಾರ್ಥಗಳನ್ನೂ, ಮೋಕ್ಷವನ್ನೂ ಕೊಡುವುದು. ಈ ತೀರ್ಥದಲ್ಲಿಯೇ ಜ್ಯೇಷ್ಠಮಾಸದಲ್ಲಿ ಭೂದೇವಿಯು ಸರ್ವೌಷಧಿವನಸ್ಪತಿಗಳಿಂದೊಡಗೂಡಿ ಬಂದು ದೇವತೆಗಳ ಸಹಾಯದಿಂದ ಅರುಣಾಚಲೇಶ್ವರನನ್ನು ಅರ್ಚಿಸುವಳು.

೧೨೨. ಮಹಾಬಲಶಾಲಿಗಳಾದ ವಿಶ್ವೇದೇವರುಗಳು ಆಷಾಢಮಾಸದಲ್ಲಿ ಅರುಣಾಚಲನನ್ನು ಪೂಜಿಸಿ ಯಜ್ಞಗಳಲ್ಲಿ ಉತ್ತಮಸ್ಥಾನವನ್ನು ಪಡೆದರು.

೧೨೩. ಈ ವಿಶ್ವೇದೇವತೀರ್ಥವೆಂಬುದು ಸೋಮ, ಸೂರ್ಯತೀರ್ಥಗಳೆರಡಕ್ಕೂ ಉತ್ತರದಲ್ಲಿರುವುದು. ಅದರಲ್ಲಿ ಸ್ನಾನಮಾಡುವುದರಿಂದ ಅತುಲವಾದ ಭೂಲೋಕಾಧಿಪತ್ಯವು ಲಭಿಸುತ್ತದೆ.

ಪರಿತೋ ಲಕ್ಷ್ಯತೇ ತೀರ್ಥಂ ಪೂರ್ವಸ್ಯಾಂ ದಿಶಿ ಶೋಭನೇ ।
ಅತ್ರಲಕ್ಷ್ಮೀಃ ಪುರಾ ಸ್ನಾತ್ವಾ ಲೇಭೇ ಪುರುಷಮುತ್ತಮಂ ॥ ೧೨೪ ॥
ಉತ್ತರಸ್ಯಾಂ ದಿಶಿ ಪುರಾ ಪುಣ್ಯಾ ಸ್ಕಂದನದೀ ಸ್ಥಿತಾ ।
ಅತ್ರ ಸ್ನಾತ್ವಾ ಪುರಾ ಸ್ಕಂದಃ ಸಂಪ್ರಾಪ್ತೋ ವಿಪುಲಂ ಬಲಂ ॥ ೧೨೫ ॥
ಪಶ್ಚಿಮಸ್ಯಾಂ ದಿಶಿ ಖ್ಯಾತಾ ಪರಾ ಕುಂಭನದೀ ಶುಭಾ ।
ಅಗಸ್ತ್ಯಃ ಕುಂಭಕಃ ಕುಂಭಸ್ತತ್ರ ನಿತ್ಯಂ ವ್ಯವಸ್ಥಿತಃ ॥ ೧೨೬ ॥
ಗಂಗಾಚ ಮೂಲಭಾಗಸ್ಥಾ ಯಮುನಾ ಗಗನೇ ಸ್ಥಿತಾ ।
ಸೋಮೋದ್ಭವಾ ಶಿರೋಭಾಗೇ ಸೇವಂತೇ ಶೋಣಪರ್ವತಂ ॥ ೧೨೭ ॥
ಬಹೂನ್ಯಪಿಚ ತೀರ್ಥಾನಿ ಸಂಭೂತಾನಿ ಸಮಂತತಃ ।
ತೇಷಾಂ ಭೇದಾನ್ಪುರಾ ವೇತ್ತುಂ ಮಾರ್ಕಂಡೇಯಸ್ತು ನಾಶಕತ್ ॥
ತಪೋಭಿರ್ಬಹುಭಿಸ್ಸೋಽಯಂ ಶೋಣಾದ್ರೀಶಮತೋಷಯತ್ ।
ಪ್ರಾರ್ಥಯಾಮಾಸ ಚ ವರಂ ಪ್ರೀತಾತ್ಮಾಸ್ಯಾನ್ಮುನೀಶ್ವರಃ ॥ ೧೨೯ ॥

ಮಾರ್ಕಂಡೇಯ ಉವಾಚ:—

ಭಗವನ್ನರುಣಾದ್ರೀಶ ತೀರ್ಥಭೇದಾಸ್ಸಹಸ್ರಶಃ ।
ಪ್ರಖ್ಯಾತಾಶ್ಚ ಪ್ರಕಾಶಂತೇ ದುರ್ಬೋಧಾಸ್ತ್ವಲ್ಪಚೇತಸಾಂ ॥ ೧೩೦ ॥

---

೧೨೪. ಪೂರ್ವದಿಕ್ಕಿನಲ್ಲಿ ಅತ್ಯುತ್ತಮವಾದ ತೀರ್ಥವೊಂದಿರುವುದು. ಅಲ್ಲಿ ಮಹಾಲಕ್ಷ್ಮಿಯು ಸ್ನಾನಮಾಡಿದ ಪುಣ್ಯದಿಂದ ವಿಷ್ಣುವನ್ನು ಪಡೆದಳು.

೧೨೫. ಉತ್ತರದಿಕ್ಕಿನಲ್ಲಿ ಸ್ಕಂದನದಿಯೆಂಬುದಿರುವುದು. ಅದರ ಪುಣ್ಯ ಜಲದಲ್ಲಿ ಸ್ನಾನಮಾಡಿದುದರಿಂದ ಸ್ಕಂದನಿಗೆ ಅಮಿತಪರಾಕ್ರಮವುಂಟಾಯಿತು.

೧೨೬. ಪಶ್ಚಿಮದಲ್ಲಿ ಮಂಗಳಪ್ರದವಾದ ಕುಂಭನದಿಯಿರುವುದು. ಕುಂಭ ಸಂಭವನಾದ ಅಗಸ್ತ್ಯಮಹರ್ಷಿಯು ಕುಂಭಕಯೋಗಾಸಕ್ತನಾಗಿ ಅಲ್ಲಿ ಶಾಶ್ವತ ವಾಗಿ ನೆಲಸಿರುವನು.

೧೨೭–೧೨೮. ಅರುಣಾಚಲದ ಮೂಲದಲ್ಲಿ ಗಂಗೆಯೂ, ಮಧ್ಯದಲ್ಲಿ ಯಮುನೆಯೂ, ಶಿಖರದಲ್ಲಿ ನರ್ಮದೆಯೂ ಸೇವೆಯನ್ನು ಮಾಡುತ್ತಿರುವರು. ಆ ಪರ್ವತದ ಆದ್ಯಂತದಲ್ಲಿಯೂ ಅನೇಕ ತೀರ್ಥಗಳು ಸಂಭವಿಸಿರುತ್ತವೆ. ಅವುಗಳ ಸಂಖ್ಯೆಯನ್ನು ತಿಳಿಯಲು ಮಾರ್ಕಂಡೇಯನಿಗೂ ಶಕ್ಯವಾಗಲಿಲ್ಲ.

೧೨೯. ಆತನಾದರೋ ಅನೇಕ ವಿಧಗಳಾದ ತಪಸ್ಸುಗಳಿಂದ ಅರುಣಾ ಚಲೇಶ್ವರನನ್ನು ಸಂತೋಷಗೊಳಿಸಿ ಈ ರೀತಿಯಾದ ವರವನ್ನು ಬೇಡಿಕೊಂಡನು.

೧೩೦. "ಎಲೈ ಅರುಣಾಚಲೇಶ್ವರನೆ! ಈ ನಿನ್ನ ಪರ್ವತದಲ್ಲಿ ಸಹಸ್ರ ಸಂಖ್ಯಾಕಗಳಾದ ತೀರ್ಥಗಳಿರುವುವು. ಅವುಗಳ ಮಹಿಮೆಗಳನ್ನು ತಿಳಿಯಲು ಮಂದಮತಿಗಳಾದ ಮನುಜರಿಗೆ ಅಸಾಧ್ಯವು.

ಕಥಮೇಕತ್ರ ಸಾನ್ನಿಧ್ಯಂ ಲಭೇರನ್ಭುವಿ ಮಾನವಾಃ ।
ಅಪರ್ಯಾಪ್ತಶ್ಚ ಭವತಿ ಪೃಥಗೇಷಾಂ ನಿಷೇವಣೇ ॥ ೧೩೧ ॥
ಅಂತರ್ನಿಗೂಢತೇಜಾಸ್ತ್ವಂ ಗತ್ವಾಯಸ್ಸಕಲೈಃ ಸುರೈಃ ।
ಆರಾಧ್ಯಸೇ ಕುರು ತಥಾ ಶೋಣಾದ್ರಿಸ್ಪರ್ಶಭೀರುಭಿಃ ॥ ೧೩೨ ॥

ಗೌತಮ ಉವಾಚಃ—

ಅಹಂಚ ಶಂಭುಮಭ್ಯರ್ಚ್ಯ ತಪಸಾರುಣಪರ್ವತಂ ।
ಸರ್ವಲೋಕೋಪಕಾರಾರ್ಥಂ ಸೂಕ್ಷ್ಮಲಿಂಗಮಪೂಜಯಂ ॥ ೧೩೩ ॥
ವಿಶ್ವಕರ್ಮಕೃತಂ ದಿವ್ಯಂ ವಿಮಾನಂ ವಿವಿಧೋತ್ಸವಂ ।
ಸಂಕಲ್ಪ್ಯ ಸಕಲಾನ್ಭೋಗಾನ್ನಿತ್ಯಾನ್ಜನಯುತಪ್ಸನಃ ॥ ೧೩೪ ॥
ಧರ್ಮಶಾಸ್ತ್ರಾಣಿ ವಿವಿಧಾನ್ಯವಾಪುರ್ಮುನಿಪುಂಗವಾಃ ।
ಶಿವಕಾರ್ಯಾಣಿಸರ್ವಾಣಿ ಚಕ್ರುರ್ಭಕ್ತಿಸಮನ್ವಿತಾಃ ॥ ೧೩೫ ॥
ಮಯಾಚ ಶಂಭುಮಭ್ಯರ್ಚ್ಯ ಕೃತಾಗ್ನ್ಯಾಹುತಿಸಂಭವಾಃ ।
ಸಪ್ತ ಕನ್ಯಾ ವರಾರೋಹಾಃ ಪೂಜಾರ್ಥಂ ವಿನಿಯೋಜಿತಾಃ ॥ ೧೩೬ ॥

---

೧೩೧. ಈ ಎಲ್ಲ ತೀರ್ಥಗಳ ಸಾನ್ನಿಧ್ಯವನ್ನೂ ಒಂದು ಸ್ಥಳದಲ್ಲಿಯೇ ಮನುಷ್ಯರು ಹೇಗೆ ಹೊಂದಿಯಾರು? ಬೇರೆಬೇರೆಯಾಗಿ ಈ ಎಲ್ಲ ತೀರ್ಥಗಳಲ್ಲಿಯೂ ಸೇವೆಮಾಡುವುದು ಸಾಧ್ಯವಿಲ್ಲ.

೧೩೨. ಆದುದರಿಂದ ನೀನು ನಿನ್ನ ತೇಜಸ್ಸನ್ನುಪಸಂಹರಿಸಿಕೊಂಡು ಸಕಲ ತೀರ್ಥಾಭಿಮಾನಿ ದೇವತೆಗಳಿಂದ ಸಹಿತನಾಗಿ ಭಯಭಕ್ತಿಯುಉತರಾದವರಿಂದ ಆರಾಧನೆಯನ್ನು ಕೈಕೊಂಡು ಈ ಅರುಣಾಚಲದಲ್ಲಿಯೇ ನೆಲಸಿರು.''

೧೩೩. ಗೌತಮನು ಹೇಳುತ್ತಾನೆ:—''ಎಲೌ ಪಾರ್ವತೀದೇವಿಯೇ! ನಾನೂ ಸಹ ಈ ಗಿರೀಶ್ವರನನ್ನು ತಪಸ್ಸಿನಿಂದ ಪೂಜಿಸಿ ಸಮಸ್ತ ಲೋಕಗಳ ಕಲ್ಯಾಣದ ದೃಷ್ಟಿಯಿಂದ ಸೂಕ್ಷ್ಮವಾದ ತೇಜೋಲಿಂಗವನ್ನು ಅರ್ಚಿಸಿದೆನು.

೧೩೪. ನಾನಾ ವಿಧವಾದ ಅಲಂಕಾರಗಳಿಂದ ಯುಕ್ತವಾದ ವಿಶ್ವಕರ್ಮನಿಂದ ನಿರ್ಮಿತವಾದ ಒಂದು ವಿಮಾನವನ್ನೂ ಇತರ ಭೋಗಗಳು ನಿತ್ಯದಲ್ಲಿಯೂ ನಡೆಯುವ ಸಂಕಲ್ಪವನ್ನೂ ನಾನು ಮಾಡಿದೆನು.

೧೩೫–೧೩೬. ಹೀಗೆಯೇ ಅನೇಕ ಋಷಿಶ್ರೇಷ್ಠರು ವಿವಿಧ ಧರ್ಮಶಾಸ್ತ್ರಗಳಲ್ಲಿ ನಿಷ್ಣಾತರಾಗಿ ಈಶ್ವರಪೂಜಾಕಾರ್ಯಗಳನ್ನು ಭಕ್ತಿಯುಕ್ತರಾಗಿ ನೆರವೇರಿಸಿದರು. ನಾನೂ ಸಹ ಅರುಣಾದ್ರೀಶನನ್ನು ಪೂಜಿಸಿ ಯಥಾವಿಧಿಯಾಗಿ ಅಗ್ನ್ಯಾಹುತಿಗಳನ್ನು ಮಾಡಲು ಆ ಅಗ್ನಿಯೊಳಗಿನಿಂದ ಸರ್ವಲಕ್ಷಣಸಂಪನ್ನೆಯರಾದ ಏಳು ಜನ ಕನ್ಯೆಯರು ಹುಟ್ಟಿದರು. ಅವರನ್ನೇ ಈಶ್ವರನ ಪೂಜೆಯಲ್ಲಿ ನಿಯೋಜನೆ ಮಾಡಿದೆನು.

ಹತಶತ್ರುಗಣೈರ್ಭೂಪೈರ್ಲಬ್ಧರಾಜ್ಯೈಃ ಪುರಾ ನೃಪೈಃ ।
ಪ್ರತ್ಯೇಕಂ ವಿವಿಧೈರ್ಭೋಗೈಃ ಶೋಣಶೈಲಾಧಿಪೋಽರ್ಚಿತಃ ॥ ೧೩೭ ॥

ಇದಮನುಭವವೈಭವಂ ವಿಚಿತ್ರಂ
ದುರಿತಹರಂ ಶಿವಲಿಂಗಮದ್ರಿರೂಪಂ ।
ಅಮಲಮನಭಿಗಮ್ಯ ನಾಮಧೇಯಂ
ವರಮರುಣಾಚಲನಾಯಕಂ ಭಜಸ್ವ ॥ ೧೩೮ ॥

ಅವನತಜನರಕ್ಷಣೋಚಿತಸ್ಯ
ಸ್ಮರಣನಿರಾಕೃತವಿಶ್ವಕಲ್ಮಷಸ್ಯ ।
ಭಜನಮಮಿತಪುಣ್ಯರಾಶಿಯೋಗಾ
ದರುಣ ಗಿರೇಃ ಕೃತಿನಃ ಪರಂ ಲಭಸ್ವ ॥ ೧೩೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಪೂರ್ವಾರ್ಧೇ
"ಅರುಣಾಚಲಸ್ಥ ವಿವಿಧತೀರ್ಥ ಮಾಹಾತ್ಮ್ಯವರ್ಣನಂ"ನಾಮ
ಷಷ್ಠೋಽಧ್ಯಾಯಃ

---

೧೩೭. ಇದೇ ರೀತಿಯಲ್ಲಿಯೇ ಪೂರ್ವದಲ್ಲಿ ಅನೇಕ ರಾಜರುಗಳು ಈ ಲಿಂಗವನ್ನು ಪೂಜಿಸಿದುದರ ಫಲವಾಗಿ ಶತ್ರುಸಂಹಾರವನ್ನು ಮಾಡಿ ರಾಜ್ಯಾಧಿಷ್ಠಿತರಾದರು. ಆದುದರಿಂದ ಅವರೆಲ್ಲರೂ ನಾನಾ ವಿಧಗಳಾದ ಸೇವೆಗಳನ್ನು ಅರುಣಾಚಲೇಶ್ವರನಿಗೆ ನಡೆಸಿದರು.

೧೩೮. ಪರ್ವತರೂಪವಾದ ಈ ಶಿವಲಿಂಗವು ವೈಭವಯುಕ್ತವೂ, ವಿಚಿತ್ರವೂ, ಪಾಪಹರವೂ ಆಗಿರುವುದು. ಪರಿಶುದ್ಧವಾದ ಇದರ ನಾಮರೂಪಗಳನ್ನು ತಿಳಿಯುವುದೇ ಅಶಕ್ಯವು. ಉತ್ತಮನಾದ ಈ ಅರುಣಾಚಲೇಶ್ವರನನ್ನೇ ನೀನು ಭಜನೆಮಾಡು.

೧೩೯. ಈತನೇ ಶರಣಾಗತ ಜನರನ್ನು ರಕ್ಷಿಸುವವನು. ಈತನ ಸ್ಮರಣದಿಂದಲೇ ಸಕಲ ದುರಿತಗಳೂ ನಿರ್ಮೂಲವಾಗುವುವು. ಅನಂತ ಪುಣ್ಯರಾಶಿಯ ಫಲದಿಂದ ಲಭಿಸುವ ಅರುಣಾಚಲೇಶ್ವರನ ಮುಕ್ತಿದಾಯಕವಾದ ಭಜನೆಯನ್ನು ನೀನು ಮಾಡುವವಳಾಗು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ
ಮಾಹಾತ್ಮ್ಯದ ಪೂರ್ವಾರ್ಧದಲ್ಲಿ "ವಿವಿಧ ತೀರ್ಥಗಳ ಮಾಹಾತ್ಮ್ಯವರ್ಣನ"ವೆಂಬ
ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಮೋಽಧ್ಯಾಯಃ

### ವಿವಿಧ ತೀರ್ಥ ಮಾಹಾತ್ಮ್ಯವರ್ಣನಂ

ಪಾರ್ವತ್ಯುವಾಚ :—

ಕಥಮಗ್ನಿಮಯಂ ಲಿಂಗಮಭಿಗಮ್ಯಮಭೂದ್ಭುವಿ ।
ಪ್ರಾಣಿನಾಮಪಿ ಸರ್ವೇಷಾಮುಪಶಾಂತಿಂ ಕಥಂಗತಃ ॥ ೧ ॥
ತೀರ್ಥಾನಾಮುದ್ಭವಃ ಪುಣ್ಯಾತ್ಕಥಂ ಚಾರುಣಪರ್ವತಾತ್ ।
ಉಪಸಂಹೃತಸರ್ವಾಂಗಃ ಕಥಂ ವಾ ವದ ಮೇಽಚಲಃ ॥ ೨ ॥

ಗೌತಮ ಉವಾಚ :—

ಕೃತೇ ತ್ವಗ್ನಿಮಯಃ ಶೈಲಸ್ತ್ರೇತಾಯಾಂ ಮಣಿಪರ್ವತಃ ।
ದ್ವಾಪರೇ ಹಾಟಕಗಿರಿಃ ಕಲೌ ಮರಕತಾಚಲಃ ॥ ೩ ॥
ಬಹುಯೋಜನಪರ್ಯಂತಂ ಕೃತೇ ವಹ್ನಿಮಯೇಸ್ಥಿತೇ ।
ಬಹಿಃಪ್ರದಕ್ಷಿಣಂ ಚಕ್ರುಃ ಪ್ರಶಾಮ್ಯತಿ ಮಹರ್ಷಯಃ ॥ ೪ ॥
ಶನೈಶ್ಶಾಂತೋಽರುಣಾದ್ರೀಶಃ ಶ್ರೀಮಾನಭ್ಯರ್ಥಿತಃ ಸುರೈಃ ।
ಲೋಕಗುಪ್ತ್ಯರ್ಥಮತ್ಯರ್ಥಮುಪಶಾಂತೋಽರುಣಾಚಲಃ ॥ ೫ ॥

---

## ಕನ್ನಡದ ಅನುವಾದ

### ವಿವಿಧ ತೀರ್ಥಗಳ ವರ್ಣನ

೧. ಪಾರ್ವತಿಯು ಕೇಳುತ್ತಾಳೆ:—"ಅಗ್ನಿಮಯವಾದ ಲಿಂಗವು ಸಕಲ ಪ್ರಾಣಿಗಳಿಗೂ ಹೇಗೆ ಪ್ರಾಪ್ಯವಾಯಿತು? ಅದು ಉಪಶಮವನ್ನು ಹೊಂದಿದ ಬಗೆ ಹೇಗೆ?

೨. ಅರುಣಾಚಲದಿಂದ ತೀರ್ಥಗಳು ಹೇಗೆ ಉದ್ಭವವಾದುವು? ಅರುಣಾಚಲವು ಸರ್ವಾಂಗಗಳನ್ನು ಉಪಸಂಹಾರಮಾಡಿದುದು ಹೇಗೆಂಬುದನ್ನು ಹೇಳು?"

೩. ಗೌತಮನು ಹೇಳುತ್ತಾನೆ:—"ಈ ಅರುಣಾಚಲವು ಕೃತಯುಗದಲ್ಲಿ ಅಗ್ನಿಮಯವೂ, ತ್ರೇತಾಯುಗದಲ್ಲಿ ಮಣಿಮಯವೂ, ದ್ವಾಪರಯುಗದಲ್ಲಿ ಕನಕಮಯವೂ, ಕಲಿಯುಗದಲ್ಲಿ ಮರಕತಮಯವೂ ಆಗಿರುವುದು.

೪. ಅನೇಕ ಯೋಜನಗಳ ಅಳತೆಯಿಂದ ಅಗ್ನಿಮಯವಾಗಿ ಅರುಣಾಚಲೇಶ್ವರನು ನಿಲ್ಲಲು, ಮಹರ್ಷಿಗಳೆಲ್ಲರೂ ಬಹಿಃಪ್ರಶಮನವಾದ ಮೇಲೆ ಪ್ರದಕ್ಷಿಣಾದಿಗಳನ್ನು ಮಾಡಿದರು.

೫. ಬಹಳ ಕಾಲವಾದ ಮೇಲೆ ಆತನು ದೇವತೆಗಳಿಂದ ಪ್ರಾರ್ಥಿತನಾಗಿ ಲೋಕರಕ್ಷಣಾರ್ಥವಾಗಿ ಪ್ರಶಾಂತನಾದನು."

ಅಥ ಗೌರೀ ಮುನಿಂ ಪ್ರಾಹ ಕಥಂ ಶಾಂತೋಽರುಣಾಚಲಃ ।
ಕಥಂ ವಾ ಪ್ರಾರ್ಥಯಾಮಾಸುರ್ದೇವೇತಂ ತ್ರಿದಶಾ ಇಮಂ ॥ ೬ ॥
ಇತಿ ತಸ್ಯಾ ವಚಃ ಶ್ರುತ್ವಾ ಗೌತಮಸ್ತ್ವಭ್ಯಭಾಷತ ।
ಪ್ರಶಸ್ಯ ಭಕ್ತಿಮತುಲಾಂ ತಸ್ಯಾಸ್ತತ್ವಾರ್ಥವೇದಿನೀಂ ॥ ೭ ॥
ಗೌತಮ ಉವಾಚ :—
ಅಗ್ನಿರೂಪಂ ಪುರಾ ಶೈಲಮಾಸಾದಯಿತುಮಕ್ಷಮಾಃ ।
ಪುರಾ ಸುರಾಃ ಸ್ತುತಿಂ ಚಕ್ರುರಭ್ಯರ್ಚ್ಯ ಕ್ರತುಸಂಭವೈಃ ॥ ೮ ॥
ಭಗವನ್ನರುಣಾದ್ರೀಶ ಸರ್ವಲೋಕಹಿತಾವಹ ।
ಅಗ್ನಿರೂಪೋಽಪಿ ಸಂಶಾಂತಃ ಪ್ರಕಾಶಸ್ವ ಮಹೀತಲೇ ॥ ೯ ॥
ಅಸೌ ಯಸ್ತಾಮ್ರೋ ಅರುಣ ಉತ ಬಭ್ರುಃ ಸುಮಂಗಳಃ ।
ಇತಿ ತ್ವಾಂ ಸಕಲಾ ವೇದಾಃ ಸ್ತುವಂತಿ ಶಿವವಿಗ್ರಹಂ ॥ ೧೦ ॥
ನಮಸ್ತಾಮ್ರಾಯಾರುಣಾಯ ಶಿವಾಯ ಪರಮಾತ್ಮನೇ ।
ವೇದವೇದ್ಯಸ್ವರೂಪಾಯ ಸೋಮಾಯ ಸುಖರೂಪಿಣೇ ॥ ೧೧ ॥
ತದ್ರೂಪಮಖಿಲಂ ದೇವ ಜಗದೇತಚ್ಚರಾಚರಂ ।
ನಿಧಾನಮಿಮತೇ ರೂಪಂ ದೇವಾನಾಮಿದಮೀಕ್ಷ್ಯತೇ ॥ ೧೨ ॥

---

೬–೭. ಆಗ ಗೌರಿಯು ಗೌತಮನನ್ನು ಕೇಳುತ್ತಾಳೆ:—"ಈಶ್ವರನು ಹೇಗೆ ಪ್ರಶಾಂತನಾದನು? ದೇವತೆಗಳು ಪರಮೇಶ್ವರನನ್ನು ಸ್ತೋತ್ರಮಾಡಿದುದೆಂತು?" ಹೀಗೆಂದ ಪಾರ್ವತಿಯ ವಚನವನ್ನು ಕೇಳಿ ಗೌತಮನು ಆಕೆಯ ಭಕ್ತಿಯನ್ನೂ ತತ್ತ್ವಾನ್ವೇಷಣಬುದ್ಧಿಯನ್ನೂ ಶ್ಲಾಘಿಸಿ ನಿರೂಪಣೆಮಾಡಿದನು.

೮. ಗೌತಮನು ಹೇಳುತ್ತಾನೆ:— "ಪೂರ್ವದಲ್ಲಿ ಅಗ್ನಿರೂಪನಾದ ಶಿವನನ್ನು ಸಮೀಪಿಸಲು ಅಶಕ್ತರಾಗಿ ದೇವತೆಗಳು ಯಜ್ಞಗಳಿಂದ ಆತನನ್ನು ಪೂಜಿಸಿ ಸ್ತೋತ್ರಮಾಡಿದರು.

೯. 'ಎಲೈ ಅರುಣಾಚಲೇಶ್ವರನೆ! ಅಗ್ನಿರೂಪನಾದರೂ ನೀನು ಸಕಲ ಲೋಕಗಳ ಹಿತದೃಷ್ಟಿಯಿಂದ ಪ್ರಶಾಂತನಾಗಿ ಭೂಮಿಯಲ್ಲಿ ನೆಲಸುವವನಾಗು.

೧೦. ತಾಮ್ರ, ಅರುಣ, ಬಭ್ರ ವರ್ಣಗಳುಳ್ಳವನೆಂದು ಶಿವವಿಗ್ರಹನಾದ ನಿನ್ನನ್ನು ಸಕಲ ವೇದಗಳೂ ಹೊಗಳುತ್ತಿರುವುವು.

೧೧. ಎಲೈ ಅರುಣಾಚಲನೇ! ತಾಮ್ರ ಮತ್ತು ಅರುಣವರ್ಣವಿಶಿಷ್ಟನಾದ ನಿನಗೆ ನಮಸ್ಕಾರವು. ನಿನ್ನ ಸ್ವರೂಪವನ್ನು ವೇದಗಳಿಂದಲೇ ತಿಳಿಯಬೇಕಾಗಿರುವುದು. ನೀನು ಗಿರಿಜಾಸಹಿತನೂ, ಆನಂದಸ್ವರೂಪನೂ ಆಗಿರುತ್ತೀಯೆ.

೧೨. ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ನಿನ್ನ ರೂಪವೇ ಆಗಿರುವುದು. ಈ ನಿನ್ನ ರೂಪವು ದೇವತೆಗಳ ಮನೋನಿಧಾನದಂತೆ ಕಾಣುತ್ತಿರುವುದು.

ವರ್ಷತಾಂ ಚ ಪಯೋದಾನಾಂ ನಿರ್ಝರಾಣಾಂ ಚ ಭೂಯಸಾಂ ।
ಸಲಿಲೋಪಾಯಸಂಹಾರೋ ಯುಕ್ತಸ್ತೇ ಯುಗಸಂಕ್ಷಯೇ ॥ ೧೩ ॥
ಅಗ್ನೇರಾಪಸ್ಸಮುದ್ಭೂತಾಸ್ತ್ವತ್ತೋ ಹಿ ಪರಮಾತ್ಮನಃ ।
ವಿಶ್ವಸೃಷ್ಟಿಂ ವಿತನ್ವಂತಿ ವಿಚಿತ್ರಗುಣವೈಭವಾತ್ ॥ ೧೪ ॥
ಶೀತೋ ಭವ ಮಹಾದೇವ ಶೋಣಾಚಲ ಕೃಪಾನಿಧೇ ।
ಸರ್ವೇಷಾಮಪಿ ಜೀವಾನಾಮಭಿಗಮ್ಯೋ ಭವ ಪ್ರಭೋ ॥ ೧೫ ॥
ಇತಿ ಸ್ತುತಃ ಸುರೈಃ ಸರ್ವೈರಾನತೈರ್ಭಕ್ತವತ್ಸಲಃ ।
ಸದ್ಯಃ ಶೀತಲತಾಂ ಗಚ್ಛನ್ನಭಿಗಮ್ಯೋಽಭವತ್ಪ್ರಭುಃ ॥ ೧೬ ॥
ಪ್ರಾವರ್ತಂತ ಪುನರ್ನದ್ಯೋ ನಿರ್ಝರಾಶ್ಚ ಬಹೂದಕಾಃ ।
ವರ್ಷತಾಮಪಿ ಮೇಘಾನಾಂ ನಜಗ್ರಾಹ ಜಲಂ ಬಹು ॥ ೧೭ ॥
ತಥಾಪಿ ತರುಣಾರ್ಕೋದ್ಯತ್ಕಾಲಾಗ್ನಿಶತಕೋಟಿಭಿಃ ।
ಸಮಾನದೀಪ್ತಿರಭಜಜ್ಜೀವಾನಾಮಭಿಗಮ್ಯತಾಂ ॥ ೧೮ ॥

---

೧೩. ಮೇಘಗಳಿಂದ ಸುರಿಯುವ ಮಳೆಯ ನೀರು ಮತ್ತು ಝುರಿಗಳ ನೀರುಗಳನ್ನು ಸೃಷ್ಟಿ ವಿಪರೀತಕ್ರಮದಿಂದ ಅಗ್ನಿಯಲ್ಲಿ ಲಯಗೊಳಿಸುವುದು ಪ್ರಳಯಕಾಲಕ್ಕೆ ಯೋಗ್ಯವಾದ ಕಾರ್ಯವಾಗಿದೆ.

೧೪. ಪರಮಾತ್ಮನಾದ ನಿನ್ನ ಅಗ್ನಿರೂಪದಿಂದಲೇ ಜಲವು ಉತ್ಪನ್ನವಾಯಿತು. ಅದೇ ವಿಚಿತ್ರಗುಣಗಳಿಂದ ಕೂಡಿದ ಆ ಜಲವು ಪ್ರಪಂಚಸೃಷ್ಟಿಯನ್ನು ಪ್ರಸರಿಸಿತು.

೧೫. ಅರುಣಾಚಲರೂಪಿಯಾದ ಮಹಾದೇವನೆ! ನೀನು ದಯಾಮಯನಾಗಿ ಶಾಂತಿಯನ್ನು ಹೊಂದು. ಸಕಲ ಜೀವರಿಗೂ ಸುಲಭಸಾಧ್ಯನಾಗು.'

೧೬. ಹೀಗೆ ದೇವತೆಗಳಿಂದ ಸ್ತುತಿಸಲ್ಪಟ್ಟವನಾಗಿ ಪ್ರಣತರಾದ ಅವರಲ್ಲಿ ವಾತ್ಸಲ್ಯವನ್ನು ತೋರಿಸುತ್ತ ತಕ್ಷಣದಲ್ಲಿಯೇ ಆ ಸ್ವಾಮಿಯು ಶೀತಲತೆಯನ್ನು ಹೊಂದಿ ಭಕ್ತರಿಗೆ ಸೇವಾಸುಲಭನಾದನು.

೧೭. ಪುನಃ ನದಿಗಳು ಹರಿಯತೊಡಗಿದವು. ಝುರಿಗಳೂ ನೀರಿನಿಂದ ತುಂಬಿದುವು. ಮೇಘಗಳಿಂದ ಬೀಳುವ ಮಳೆಯ ನೀರನ್ನೂ ಸಹ ಪರ್ವತವು ಹೆಚ್ಚಾಗಿ ಹೀರಿಕೊಳ್ಳಲಿಲ್ಲ.

೧೮. ಹಾಗಾದರೂ ಉದಯಸೂರ್ಯನ ಅಥವ ಪ್ರಳಯಾಗ್ನಿಯ ನೂರು ಕೋಟಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದುದಾಗಿ ಅರುಣಾಚಲವು ಜೀವರಿಗೆ ಸೇವಾಯೋಗ್ಯವಾಯಿತು.

ವಿಸೃಜ್ಯ ವಿಶ್ವಸಲಿಲಂ ನದೀಶ್ಚ ರಸವಿಸ್ಫುರೈಃ ।
ಸಂಪೂರ್ಯ ಸಕಲೈರ್ದೇವಃ ಸರ್ವದಾ ಸಂಪ್ರಕಾಶತೇ ॥ ೧೯ ॥
ತೀರ್ಥಾನಿ ತಾನಿ ತಾನ್ಯಾಸನ್ಸ್ಫುರಿತಃ ಪ್ರಾರ್ಥನಾವಶಾತ್ ।
ದಿಕ್ಪಾಲಾನಾಂ ಸುರಾಣಾಂಚ ಮಹರ್ಷೀಣಾಂ ಮಹಾತ್ಮನಾಂ ॥ ೨೦ ॥

ಬ್ರಹ್ಮೋವಾಚ :—

ಇತಿ ತಸ್ಯ ವಚಃ ಶ್ರುತ್ವಾ ಗೌರೀ ಕುತುಕಸಂಯುತಾ ।
ತೀರ್ಥಾನಾಮುದ್ಭವಂ ಸರ್ವಂ ಶ್ರೋತುಂ ಸಮುಪಚಕ್ರಮೇ ॥ ೨೧ ॥

ಪಾರ್ವತ್ಯುವಾಚ :—

ಕಾನಿ ತೀರ್ಥಾನಿ ಜಾತಾನಿ ಶೋಣಾದ್ರೇರ್ಲೋಕಗುಪ್ತಯೇ ।
ಭಗವನ್ಬ್ರೂಹಿ ಸಕಲಂ ತೀರ್ಥಾನಾಮುದ್ಭವಂ ಮಮ ॥ ೨೨ ॥
ಇತಿ ತಸ್ಯಾ ವಚಃ ಶ್ರುಣ್ವನ್ಗಿರೀಶಾತ್ಸಂಶ್ರುತಂ ಪುರಾ ।
ತೀರ್ಥಾನಾಮುದ್ಭವಂ ಸರ್ವಂ ವ್ಯಾಖ್ಯಾತುಮುಪಚಕ್ರಮೇ ॥ ೨೩ ॥

ಗೌತಮ ಉವಾಚ :—

ಇಂದ್ರಂ ನಾಮ ಮಹಾತೀರ್ಥಮಿಂದ್ರಭಾಗೇ ಸಮುತ್ಥಿತಂ ।
ತತ್ರಸ್ನಾತ್ವಾ ಪುರಾಶಕ್ರೋ ಬ್ರಹ್ಮಹತ್ಯಾಂ ವ್ಯಪೋಹಯತ್ ॥ ೨೪ ॥

---

೧೯. ಸಕಲ ಉದಕವನ್ನೂ, ನದಿಗಳನ್ನೂ ಬಿಟ್ಟುಕೊಟ್ಟು ಅನೇಕ ಜಲಪಾತಗಳಿಂದ ಕೂಡಿದವನಾಗಿ ಅರುಣಾಚಲನು ಸದಾ ಪ್ರಕಾಶಿಸುತ್ತಿರುವನು.

೨೦. ಹಾಗೆಯೇ ಅಷ್ಟದಿಕ್ಪಾಲಕರೂ, ದೇವತೆಗಳೂ, ಮಹರ್ಷಿಗಳೂ, ಮಹಾತ್ಮರೂ ಪ್ರಾರ್ಥನೆ ಮಾಡಿದಂತೆ ಪರ್ವತದ ಆದ್ಯಂತವೂ ಅನೇಕ ತೀರ್ಥಗಳು ಉದ್ಭವಿಸಿದುವು.''

೨೧. ಬ್ರಹ್ಮನು ಹೇಳುತ್ತಾನೆ:—ಹೀಗೆಂದ ಗೌತಮನ ಮಾತನ್ನು ಕೇಳಿ ಪಾರ್ವತಿಯು ತೀರ್ಥಗಳ ಉದ್ಭವಪ್ರಕಾರವನ್ನು ತಿಳಿಯಲು ಈ ರೀತಿ ಕೇಳಿದಳು.

೨೨. ಪಾರ್ವತಿಯು ಕೇಳುತ್ತಾಳೆ:—''ಭಗವನ್! ಈ ಅರುಣಾಚಲದಿಂದ ಲೋಕರಕ್ಷಣಾರ್ಥವಾಗಿ ಯಾವ ಯಾವ ತೀರ್ಥಗಳುಂಟಾದುವು? ಈ ತೀರ್ಥೋದ್ಭವದ ಕಥೆಯನ್ನು ನನಗೆ ಸಾದ್ಯಂತವಾಗಿ ಹೇಳುವವರಾಗಿರಿ.''

೨೩. ಆಕೆಯ ಮಾತುಗಳನ್ನು ಕೇಳಿ ಗೌತಮನು ತಾನು ಪೂರ್ವದಲ್ಲಿ ಮಹೇಶ್ವರನಿಂದಲೇ ಕೇಳಿದ ತೀರ್ಥೋದ್ಭವ ಪ್ರಕರಣವನ್ನು ನಿರೂಪಿಸಲುಪಕ್ರಮಿಸಿದನು.

೨೪. ಗೌತಮನು ಹೇಳುತ್ತಾನೆ:—''ಪೂರ್ವದಿಕ್ಕಿನಲ್ಲಿ ಇಂದ್ರತೀರ್ಥವಿರುವುದು. ಅಲ್ಲಿ ಸ್ನಾನಮಾಡಿದ ಮಾತ್ರದಿಂದ ಮಹೇಂದ್ರನ ಬ್ರಹ್ಮಹತ್ಯಾದೋಷವು ತೊಲಗಿತು.

ಬ್ರಹ್ಮತೀರ್ಥಂ ಪುನರ್ದಿವ್ಯಂ ವಹ್ನಿಕೋಣೇ ಸಮುತ್ಥಿತಂ ।
ಪರಸ್ತ್ರೀಸಂಗಮಾತ್ಪಾಪಂ ವಹ್ನಿಃ ಸ್ನಾತ್ವಾತ್ರಚಾತ್ಯಜತ್ ॥ ೨೫ ॥
ಯಾಮ್ಯಂ ನಾಮ ಮಹಾತೀರ್ಥಂ ಯಮಭಾಗೇ ವಿಜೃಂಭತೇ ।
ಅತ್ರಸ್ನಾತ್ವಾ ಯಮೋಽತ್ಯಾಕ್ಷೀದ್ಭಯಂ ಬ್ರಹ್ಮಾಸ್ತ್ರಸಂಭವಂ ॥ ೨೬ ॥
ನೈಋತಂ ತು ಮಹಾತೀರ್ಥಂ ನೈಋತ್ಯಾಂ ದಿಶಿ ಶೋಭತೇ ।
ಭೂತವೇತಾಲವಿಜಯಂ ತತ್ರ ಸ್ನಾತ್ವಾರ್ಷಯೋ ಗತಾಃ ॥ ೨೭ ॥
ಪಶ್ಚಿಮೇ ವಾರುಣಂ ತೀರ್ಥಂ ದಿಗ್ಭಾಗೇ ಚ ಪ್ರಕಾಶತೇ ।
ಶಲ್ಯಕೋಶಂ ಪುರಾ ಲೇಭೇ ಸ್ನಾತ್ವಾತ್ರ ವರುಣೋ ನಿಜಂ ॥ ೨೮ ॥
ವಾಯವ್ಯೇ ವಾಯವೀಯಂಚ ತೀರ್ಥಮತ್ರ ಪ್ರಕಾಶತೇ ।
ತತ್ರ ಸ್ನಾತ್ವಾ ಯಯೌ ವಾಯುರ್ಜಗತ್ಪ್ರಾಣತ್ವವೈಭವಂ ॥ ೨೯ ॥
ಉತ್ತರೇ ಚಾತ್ರ ದಿಗ್ಭಾಗೇ ಸೋಮತೀರ್ಥಮಿತಿ ಸ್ಮೃತಂ ।
ತತ್ರಸ್ನಾತ್ವಾ ಪುರಾ ಸೋಮೋ ಯಕ್ಷ್ಮರೋಗಾದಮುಂಚತ ॥ ೩೦ ॥
ಐಶಾನೇ ಚಾತ್ರ ದಿಗ್ಭಾಗೇ ವಿಷ್ಣುತೀರ್ಥಮಿತಿ ಸ್ಮೃತಂ ।
ತತ್ರ ಸ್ನಾತ್ವಾ ಪುರಾ ವಿಷ್ಣುಃ ಶ್ರಿಯಾಚ ಸಹ ಸಂಗತಃ ॥ ೩೧ ॥

---

೨೫. ಆಗ್ನೇಯ ಮೂಲೆಯಲ್ಲಿ ಬ್ರಹ್ಮತೀರ್ಥವಿರುವುದು. ಅಗ್ನಿದೇವನು ಅದರಲ್ಲಿ ಮಿಂದು ಪರಸ್ತ್ರೀಗಮನ ಪಾಪದಿಂದ ನಿರ್ಮುಕ್ತನಾದನು.

೨೬. ದಕ್ಷಿಣದಿಕ್ಕಿನಲ್ಲಿ ಯಮತೀರ್ಥವಿರುವುದು. ಅದರ ಸ್ನಾನಫಲವಾಗಿ ಯಮನು ಬ್ರಹ್ಮಾಸ್ತ್ರದಿಂದುಂಟಾದ ಭಯದಿಂದ ತಪ್ಪಿಸಿಕೊಂಡನು.

೨೭. ನೈರುತ್ಯದಲ್ಲಿ ನಿರ್ಋತಿತೀರ್ಥವಿರುವುದು. ಅದರಲ್ಲಿ ಸ್ನಾನಮಾಡಿದುದರಿಂದ ಅನೇಕ ಮಹರ್ಷಿಗಳು ಭೂತಭೇತಾಳಾದಿಗಳ ಜಯವನ್ನು ಸಂಪಾದಿಸಿದರು.

೨೮. ಪಶ್ಚಿಮದಲ್ಲಿ ವರುಣತೀರ್ಥವು ಕಂಗೊಳಿಸುತ್ತಿರುವುದು. ಅಲ್ಲಿ ಸ್ನಾನಮಾಡಿದುದರಿಂದ ವರುಣನಿಗೆ ಪಾಶವೇ ಮೊದಲಾದ ಆಯುಧಸಂಗ್ರಹವು ಪ್ರಾಪ್ತವಾಯಿತು.

೨೯. ವಾಯುವ್ಯದಲ್ಲಿ ವಾಯುತೀರ್ಥವಿರುವುದು. ಅದರ ಸ್ನಾನದಿಂದ ವಾಯುವು ಜಗತ್ಪ್ರಾಣ ಪದವಿಯನ್ನು ಪಡೆದನು.

೩೦. ಉತ್ತರದಿಕ್ಕಿನಲ್ಲಿಯೇ ಸೋಮತೀರ್ಥವಿರುವುದು. ಅಲ್ಲಿ ಸ್ನಾನಮಾಡಿದುದರಿಂದ ಚಂದ್ರನ ಯಕ್ಷ್ಮರೋಗವು ನಿವಾರಿತವಾಯಿತು.

೩೧. ಈಶಾನ್ಯಭಾಗದಲ್ಲಿ ವಿಷ್ಣುತೀರ್ಥವಿರುವುದು. ಅದರ ಸ್ನಾನ ಫಲದಿಂದ ಮಹಾವಿಷ್ಣುವು ಲಕ್ಷ್ಮೀಸಮೇತನಾದನು.

ಮಾರ್ಕಂಡೇಯಃ ಪುರಾ ದೇವಿ ಪ್ರಾರ್ಥಯಾಮಾಸ ಶಂಕರಂ ।
ಸದಾಶಿವ ಮಹಾದೇವ ದೇವದೇವ ಜಗತ್ಪತೇ ॥ ೩೨ ॥
ಬಹೂನಾಮಿಹ ತೀರ್ಥಾನಾಮೇಕತ್ರ ಸ್ಯಾತ್ಸಮಾಗಮಃ ।
ಕೇನೋಪಾಯೇನ ಭಗವನ್ಕೃಪಯಾ ವದ ಶಂಕರ ॥ ೩೩ ॥
ಇತಿ ತಸ್ಯ ವಚಃ ಶ್ರುತ್ವಾ ದೇವದೇವ ಉಮಾಪತಿಃ ।
ಉಪಾಯಂ ದರ್ಶಯಾಮಾಸ ಮುನಯೇ ಪ್ರೀತಮಾನಸಃ ॥ ೩೪ ॥

ಮಹೇಶ್ವರ ಉವಾಚ:—

ಸದೋಪಹಾರವೇಳಾಯಂ ಸರ್ವತೀರ್ಥಸಮುಚ್ಚಯಃ ।
ಸನ್ನಿಧಿಂ ಮಮ ಸಂಪ್ರಾಪ್ತಃ ಸೇವತೇ ಗೂಢರೂಪತಃ ॥ ೩೫ ॥
ನಾನ್ಯದನ್ವೇಷಣೀಯಂ ತೇ ತೀರ್ಥಮತ್ರ ಮಹಾಮುನೇ ।
ಮಮೋಪಹಾರವೇಳಾಯಾಂ ದೃಶ್ಯತೇ ತೀರ್ಥಸಂಚಯಃ ॥ ೩೬ ॥
ತಸ್ಮಾದ್ಭಕ್ತಿಯುತೈರ್ನಿತ್ಯಂ ಸರ್ವತೀರ್ಥಸಮಾಗಮಃ ।
ಮುನಿಭಿಶ್ಚ ಸುರೈಃ ಸರ್ವೈರನ್ಯೈರ್ವೇದ್ಯಾಂತೇ ವಿಲೋಕ್ಯತಾಂ ॥ ೩೭ ॥

---

೩೨. ಮಾರ್ಕಂಡೇಯಮುನಿಯು ಪೂರ್ವದಲ್ಲಿ ಶಿವನನ್ನು ಕೇಳಿಕೊಂಡನೆಂತೆನೆ:—'ಎಲೈ ಸದಾಶಿವನೆ! ದೇವೇಶ್ವರನೆ! ಜಗನ್ನಾಯಕನೆ! ಮಹಾದೇವನೆ!

೩೩. ಇಲ್ಲಿ ಅನೇಕ ತೀರ್ಥಗಳು ಯಾವ ಉಪಾಯದಿಂದ ಒಂದೇ ಸ್ಥಳದಲ್ಲಿ ಸೇರುವುವೆಂಬುದನ್ನು ಕೃಪೆಮಾಡಿ ಹೇಳಬೇಕು.'

೩೪. ಹೀಗೆಂದು ಮುನಿಯು ಕೇಳಿದುದನ್ನು ತಿಳಿದು ಸಂತುಷ್ಟಾಂತರಂಗನಾಗಿ ಉಮಾಪತಿಯಾದ ಮಹೇಶ್ವರನು ಒಂದು ಉಪಾಯವನ್ನು ತಿಳಿಸಿದನು.

೩೫. ಮಹೇಶ್ವರನು ಹೇಳುತ್ತಾನೆ:—'ನನ್ನ ನೈವೇದ್ಯಕಾಲದಲ್ಲಿ ನಿತ್ಯದಲ್ಲಿಯೂ ಸಕಲ ತೀರ್ಥಬೃಂದವೂ ಗೂಢರೂಪದಿಂದ ನನ್ನನ್ನು ಸೇವಿಸುತ್ತದೆ.

೩೬. ಎಲೈ ಮಾರ್ಕಂಡೇಯನೆ! ನೀನು ಇತರ ಯಾವ ತೀರ್ಥವನ್ನೂ ಅನ್ವೇಷಣೆ ಮಾಡಬೇಕಾಗಿಲ್ಲ. ನನ್ನ ಉಪಾಹಾರ ಸಮದಲ್ಲಿಯೇ ಸಕಲ ತೀರ್ಥಗಳ ಸಂಚಯವು ಕಾಣುವುದು.

೩೭. ಆದುದರಿಂದ ಭಕ್ತಿಯುಕ್ತರಾದ ಮುನಿಗಳೂ, ದೇವತೆಗಳೂ, ಇತರರೂ ನಿತ್ಯದಲ್ಲಿಯೂ ನೈವೇದ್ಯಸಮಯದಲ್ಲಿ ಸರ್ವತೀರ್ಥಸಮಾಗಮವನ್ನು ನೋಡಲಿ.'

ಇತಿ ದೇವೀ ಪುರಾ ದೇವೋ ಮಾರ್ಕಂಡೇಯಾಯ ಶಂಕರಃ ।
ಉಪಾದಿಶದಮೇಯಾತ್ಮಾ ತೀರ್ಥಸಂದರ್ಶನಕ್ರಮಂ ॥ ೩೮ ॥

ಗೌತಮ ಉವಾಚ :—

ಸರ್ವಾಣ್ಯಪಿ ಚ ಪುಣ್ಯಾನಿ ತೀರ್ಥಾನಿ ಶಿವಸನ್ನಿಧೌ ।
ಸದೋಪಹಾರವೇಳಾಯಾಂ ದೃಶ್ಯಾನಿ ಕಿಲ ಮಾನವೈಃ ॥ ೩೯ ॥
ವ್ರತಂ ತೀರ್ಥಂ ತಪೋ ವೇದಾ ಯಜ್ಞಾಶ್ಚ ನಿಯಮಾದಯಃ ।
ಯೋಗಾಶ್ಚ ಶೋಣಶೈಲೇಶದರ್ಶನಾದ್ದೃಷ್ಟಸಂಚರಾಃ ॥ ೪೦ ॥

ನಿಶಮ್ಯ ವಾಕ್ಯಂ ಮುನಿಪುಂಗವಸ್ಯ
ಪ್ರಸೇದುಷೀಪರ್ವತರಾಜಪುತ್ರೀ ।
ಅವೋಚದತ್ಯದ್ಭುತಮೇತದತ್ರ
ತ್ವಯೋಪದಿಷ್ಟಂ ಭುವಿ ತೀರ್ಥಜಾಲಂ ॥ ೪೧ ॥
ಅಹಂ ಕೃತಾರ್ಥಾ ತಪತಾಂ ವರಿಷ್ಠ
ತ್ವತ್ಸಂಗಮಾತ್ಸಂಪ್ರತಿ ತೀರ್ಥಜಾಲಂ ।
ಪ್ರಾಪ್ತಾ ನಮಸ್ತೇಽಸ್ತುತಪೋವಿಶೇಷಂ
ಶಿವೋಽಪಿಮೇಽತ್ರಾದಿಶ ದೇವಕರ್ತುಂ ॥ ೪೨ ॥

---

೩೮. ಎಲೌ ದೇವಿಯೇ! ಈ ರೀತಿಯಾಗಿ ಅಪ್ರಮೇಯನಾದ ಶಂಕರನು ಮಾರ್ಕಂಡೇಯನಿಗೆ ತೀರ್ಥಸಂದರ್ಶನದ ಕ್ರಮವನ್ನು ನಿರೂಪಣೆಮಾಡಿದನು.

೩೯. ಪರಮಾತ್ಮನ ಉಪಾಹಾರ ವೇಳೆಯಲ್ಲಿ ನಿತ್ಯವೂ ಸಕಲ ಪುಣ್ಯ ತೀರ್ಥಗಳೂ ಶಿವಸನ್ನಿಧಿಯಲ್ಲಿರುವುದರಿಂದ ಮಾನವರಿಗೆ ದರ್ಶನಸಾಧ್ಯವಾಗುತ್ತವೆ.

೪೦. ಈ ಅರುಣಾಚಲೇಶ್ವರನ ದರ್ಶನದಿಂದ ಸಕಲ ವ್ರತಗಳು, ತೀರ್ಥಯಾತ್ರೆಗಳು, ತಪಸ್ಸುಗಳು, ವೇದಾಧ್ಯಯನಗಳು, ಯಜ್ಞಗಳು, ನಿಯಮಾದಿಗಳು ಇವೆಲ್ಲವೂ ದೃಷ್ಟಫಲಗಳಾಗುತ್ತವೆ.''

೪೧. ಮುನಿಪುಂಗವನಾದ ಗೌತಮನ ಈ ವಾಕ್ಯಗಳನ್ನು ಕೇಳಿ ಪಾರ್ವತೀ ದೇವಿಯು ಆತನನ್ನು ಪ್ರಸನ್ನನಾಗಿ ಮಾಡಲೆಳಸುವವಳಾಗಿ ಹೀಗೆಂದಳು:— "ನೀನು ಉಪದೇಶ ಮಾಡಿದ ತೀರ್ಥಸಮೂಹವೆಂಬುದು ಪ್ರಪಂಚದಲ್ಲಿ ಅತ್ಯದ್ಭುತವಾಗಿರುವುದು.

೪೨. ಎಲೈ ತಪೋಧನನೆ! ನಿನ್ನ ಸಂದರ್ಶನದಿಂದ ನಾನು ಕೃತಾರ್ಥಳಾದೆನು. ಈಗ ತೀರ್ಥಜಾಲವನ್ನು ಹೊಂದಿದೆನು. ನಿನಗೆ ನಮಸ್ಕಾರವು. ಶಿವನೇ ನನಗೆ ನನ್ನ ತಪಶ್ಶೇಷವನ್ನು ಇಲ್ಲಿ ನಡೆಸುವಂತೆ ಆಜ್ಞಾಪಿಸಿರುವನು.

ಕಥಂ ಗಿರೀಶಃ ಪುನರತ್ರ ದೇವಃ
ಸ್ಫುರನ್ಮಹಾವಹ್ನಿವಪುರ್ಧರೋಽಪಿ ।
ಪ್ರಶಾಂತರೂಪಃ ಪರಮೇಶ್ವರೋಽಯ
ಮಭ್ಯರ್ಚನೀಯೋ ಭುವಿ ಮರ್ತ್ಯವರ್ಗೈಃ ॥ ೪೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಪೂರ್ವಾರ್ಧೇ "ಅರುಣಾಚಲಸ್ಥ ವಿವಿಧ ತೀರ್ಥವರ್ಣನಂ" ನಾಮ ಸಪ್ತಮೋಽಧ್ಯಾಯಃ

---

೪೩. ಶಿವನು, ತಾನೆ ತೇಜೋಯುಕ್ತವಾದ ಅಗ್ನಿಶರೀರಯುಕ್ತನಾದರೂ, ಹೊರಗೆ ಶಾಂತರೂಪದಿಂದಿರುವವನಲ್ಲವೆ! ಈ ಪ್ರಪಂಚದಲ್ಲಿ ಮನುಷ್ಯರು ಹೇಗೆ ತಾನೇ ಆತನನ್ನು ಪೂಜೆಮಾಡಲು ಸಮರ್ಥರಾಗುವರು ?"

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಪೂರ್ವಾರ್ಧದಲ್ಲಿ "ವಿವಿಧ ತೀರ್ಥಗಳ ಮಾಹಾತ್ಮ್ಯವರ್ಣನ"ವೆಂಬ ಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಅಷ್ಟಮೋಽಧ್ಯಾಯಃ

### ಅರುಣಾಚಲೇಶ್ವರಾರಾಧನ ಮಾಹಾತ್ಮ್ಯವರ್ಣನಂ

ಗೌತಮ ಉವಾಚ:—

ಶೃಣು ದೇವಿ ಪುರಾವೃತ್ತಂ ಕೈಲಾಸೇ ಮೇರುಧನ್ವಿನಾ ।
ಆದಿಷ್ಟಸ್ತೀರ್ಥಯಾತ್ರಾರ್ಥಮಹಂ ಲಿಂಗಾನಿ ವೀಕ್ಷಿತುಂ ॥ ೧ ॥
ರುದ್ರಕ್ಷೇತ್ರೇ ಚ ಕೇದಾರೇ ತಥಾ ಬದರಿಕಾಶ್ರಮೇ ।
ಕಾಶ್ಯಾಂ ಪುಣ್ಯೇಷು ದೇಶೇಷು ತಥಾ ಶ್ರೀಪರ್ವತೇ ಶಿವೇ ॥ ೨ ॥
ಕಾಂಚೀಮುಖ್ಯಾಸು ಪುಣ್ಯಾಸು ಪುರೀಷ್ವಪ್ಯಗಮಂ ತದಾ ।
ಋಷಿಭಿರ್ವಿಬುಧೈಃ ಸಾರ್ಧೈರ್ಗಣೈರ್ಯೋಗಿಭಿರುತ್ತಮೈಃ ॥ ೩ ॥
ಸ್ಥಾಪಿತಾನಿ ಚ ಲಿಂಗಾನಿ ಸ್ವಯಂಭೂನಿ ಚ ದೃಷ್ಟವಾನ್ ।
ತತ್ರ ತತ್ರ ಮಹಾಭಾಗೇ ತೀರ್ಥಾನಿ ಶಿವಸನ್ನಿಧೌ ॥ ೪ ॥
ಸೇವಮಾನಃ ಸಶಿಷ್ಯೋಽಹಂ ಪರ್ಯಟನ್ಪೃಥಿವೀಮಿಮಾಂ ।
ಏವಂ ತೀರ್ಥಾನಿ ಸರ್ವಾಣಿ ಗಾಹಮಾನೋ ವ್ರತಾನ್ವಿತಃ ॥ ೫ ॥

---

### ಕನ್ನಡದ ಅನುವಾದ

#### ಅರುಣಾಚಲೇಶ್ವರಾರಾಧನ ಮಾಹಾತ್ಮ್ಯವರ್ಣನ

೧. ಗೌತಮನು ಹೇಳುತ್ತಾನೆ:—ಎಲೌ ದೇವಿಯೆ! ಪೂರ್ವದಲ್ಲಿ ಒಮ್ಮೆ ಕೈಲಾಸಕ್ಕೆ ಹೋಗಿದ್ದಾಗ ಶಿವನು ನನ್ನನ್ನು ಕುರಿತು ಸಕಲ ತೀರ್ಥಗಳ ಯಾತ್ರೆಯನ್ನು ಮಾಡಿ ಅಲ್ಲಿನ ಲಿಂಗಗಳನ್ನು ದರ್ಶನಮಾಡುವಂತೆ ಆಜ್ಞಾಪಿಸಿದನು.

೨-೩. ರುದ್ರಕ್ಷೇತ್ರವಾದ ಕೈಲಾಸದಲ್ಲಿಯೂ, ಕೇದಾರಕ್ಷೇತ್ರದಲ್ಲಿಯೂ, ಬದರಿಕಾಶ್ರಮದಲ್ಲಿಯೂ, ಕಾಶಿಯೇ ಮೊದಲಾದ ಪುಣ್ಯದೇಶಗಳಲ್ಲಿಯೂ, ಶ್ರೀಗಿರಿಯೆಂಬ ಮಂಗಳಕ್ಷೇತ್ರದಲ್ಲಿಯೂ, ಕಾಂಚಿಯೇ ಮೊದಲಾದ ಪುಣ್ಯ ಪಟ್ಟಣಗಳಲ್ಲಿಯೂ ನಾನು ಸಂಚರಿಸಿದೆನು. ಅನೇಕ ಋಷಿಗಳಿಂದಲೂ, ಜ್ಞಾನಿಗಳಿಂದಲೂ, ಸಪರಿವಾರರಾದ ಪಾರ್ಷದ ಗಣಗಳಿಂದಲೂ, ಉತ್ತಮರಾದ ಯೋಗಿಗಳಿಂದಲೂ ಸ್ಥಾಪಿಸಲ್ಪಟ್ಟ ಲಿಂಗಗಳನ್ನೂ, ಅಂತೆಯೇ ಅನೇಕ ಸ್ವಯಂಭು ಲಿಂಗಗಳನ್ನೂ ನೋಡುವವನಾದೆನು.

೪-೬. ಎಲೌ ಪುಣ್ಯಶಾಲಿನಿಯೆ! ಅಲ್ಲಲ್ಲಿಯೇ ಶಿವಸಾನ್ನಿಧ್ಯವಿರತಕ್ಕ ತೀರ್ಥಗಳನ್ನು ನೋಡುತ್ತ, ಶಿಷ್ಯಸಹಿತನಾಗಿ ಸೇವೆಯನ್ನು ಮಾಡಿಕೊಂಡು ಭೂಮಿಯನ್ನೆಲ್ಲ ಸುತ್ತುವವನಾಗಿ ಸಕಲ ತೀರ್ಥಗಳಲ್ಲಿಯೂ ವ್ರತೋಪವಾಸ ಪೂರ್ವಕವಾಗಿ ಸ್ನಾನವನ್ನು ಮಾಡಿಕೊಂಡು ತಪಸ್ಸನ್ನೂ ಯಜ್ಞಾದಿ ಕರ್ಮ

ತಪಾಂಸಿ ಯಜ್ಞಕರ್ಮಾಣಿ ಕುರ್ವನ್ಭೂಮಿಂ ಸಮಾಚರನ್ ।
ಶಿವಸ್ಮರಣಸಂಯುಕ್ತಃ ಶಿವಲಿಂಗಾನಿ ಸನ್ನಮನ್ ।
ಸರ್ವಾಣಿ ಭುವಿ ಪುಣ್ಯಾನಿ ದೇಶಮೇತಮುಪಾಶ್ರಯಂ ॥ ೭ ॥
ಅತ್ರ ದೇವಂ ಮಹಾದೇವಮವಿಕೇಶಂ ತ್ರಿಯಂಬಕಂ ।
ಅರುಣಾದ್ರಿರಿತಿ ಖ್ಯಾತಂ ಪರ್ವತಂ ಲಿಂಗಮೈಕ್ಷಿಷಿ ॥ ೭ ॥
ಅತ್ರ ಸಿದ್ಧಾ ಮಹಾತ್ಮಾನೋ ಮುನಯಶ್ಚ ದೃಢವ್ರತಾಃ ।
ಕಂದಮೂಲಫಲಾಹಾರಾಃ ದೃಷ್ಟಾಃ ಶೋಣಾದ್ರಿಸೇವಕಾಃ ॥ ೮ ॥
ಅಸ್ತೌಷಮಾದಿಮಂ ಲಿಂಗಮರುಣಾದ್ರಿಮಯಂ ಮಹತ್ ।
ಆದ್ಯೇನ ಬ್ರಹ್ಮಣಾ ಪೂರ್ವಮರ್ಚಿತಂ ದಿವ್ಯಚಕ್ಷುಷಾ ॥ ೯ ॥
ಅಸೌ ಯಸ್ತಾಮ್ರೋ ಅರುಣ ಉತ ಬಭ್ರುಃ ಸುಮಂಗಳಃ ।
ಇತಿ ವೇದಾಃ ಸ್ತುವಂತಿ ತ್ವಾಮರುಣಾದ್ರೀಶ ಸಂತತಂ ॥ ೧೦ ॥
ನಮಸ್ತಾಮ್ರಾಯಾರುಣಾಯ ಶಿವಾಯ ಪರಮಾತ್ಮನೇ ।
ಸರ್ವವೇದ ಸ್ವರೂಪಾಯ ನಿತ್ಯಾಯಾನಂತಮೂರ್ತಯೇ ॥ ೧೧ ॥
ಕಾಲಾಯ ಕರುಣಾದ್ರಾಯ ದೃಷ್ಟಿಪೇಯಾಮೃತಾಬ್ಧಯೇ ।
ಭಕ್ತವಾತ್ಸಲ್ಯಪೂರ್ಣಾಯ ಪುಣ್ಯಾಯ ಪುರಭೇದಿನೇ ॥ ೧೨ ॥

---

ಗಳನ್ನೂ ಮಾಡಿ ಸಂಚರಿಸುತ್ತ ಶಿವಸ್ಮರಣೆಯನ್ನೇ ಮನಸ್ಸಿನಲ್ಲಿ ಮಾಡುವವನಾಗಿ ಬಹು ವಿಧಗಳಾದ ಪುಣ್ಯದಾಯಕಗಳಾದ ಲಿಂಗಗಳನ್ನು ನೋಡಿಕೊಂಡು ಕಡೆಗೆ ಈ ದೇಶವನ್ನು ಆಶ್ರಯಿಸಿದೆನು.

೭. ಇಲ್ಲಿ ದೇವದೇವನೂ, ವ್ಯೋಮಕೇಶನೂ, ತ್ರಿನೇತ್ರನೂ ಆಗಿ ಅರುಣಾಚಲನಾಮದಿಂದ ಬೆಳಗುತ್ತಿರುವ ಲಿಂಗಾಕಾರವಾದ ಪರ್ವತವನ್ನು ಕಂಡೆನು.

೮. ಅರುಣಗಿರಿಯಲ್ಲಿ ಅನೇಕ ಸಿದ್ಧರೂ, ಮಹಾತ್ಮರೂ, ವ್ರತನಿರತರಾದ ಮುನಿಗಳೂ ಕಂದಮೂಲಗಳನ್ನೇ ಆಹಾರವನ್ನಾಗಿ ಮಾಡಿಕೊಂಡು ಸೇವಿಸುತ್ತಿರುವುದನ್ನು ನೋಡುವವನಾದೆನು.

೯. ಪೂರ್ವದಲ್ಲಿ ದಿವ್ಯಚಕ್ಷುಸ್ಸಿನಿಂದ ಕೂಡಿದ ಬ್ರಹ್ಮನಿಂದ ಪೂಜಿಸಲ್ಪಟ್ಟ ಈ ಆದಿಲಿಂಗವನ್ನು ಅರುಣಾಚಲ ರೂಪದಿಂದ ಸ್ತೋತ್ರಮಾಡಿದೆನು.

೧೦. "ಎಲೈ ಅರುಣಾದ್ರೀಶನೆ! ನಿನ್ನನ್ನು ವೇದಗಳು ತಾಮ್ರನೆಂದೂ, ಅರುಣನೆಂದೂ, ಬಭ್ರುವರ್ಣದವನೆಂದೂ, ಮಂಗಳರೂಪನೆಂದೂ ವರ್ಣಿಸುವುವು.

೧೧–೧೨. ತಾಮ್ರವರ್ಣದವನೂ, ಅರುಣನೂ, ಸಮಸ್ತ ಶುಭಗಳನ್ನು ಕೊಡುವ ಪರಮಾತ್ಮನೂ ಆದ ನಿನಗೆ ನಮಸ್ಕಾರವು! ನೀನು ವೇದಸ್ವರೂಪನೂ, ನಿತ್ಯನೂ, ಅನಂತಮೂರ್ತಿಯೂ ಆಗಿರುವೆ! ನೀನೇ ಕಾಲನೂ, ಕರುಣಾಸಮುದ್ರನೂ, ಭಕ್ತರಲೋಚನಗಳಿಂದ ಪೀಯಮಾನವಾದ ಅಮೃತಾಬ್ಧಿ

**ದರ್ಶನಂ ತವ ದೇವೇಶ ಸರ್ವಧರ್ಮಫಲಪ್ರದಂ ।**
**ಭುವಿ ಲಬ್ಧವತಾಂ ಭೂಯೋ ನಾನ್ಯತ್ಕಾರ್ಯಂ ತಪಃ ಕ್ವಚಿತ್ ॥ ೧೩ ॥**
**ಭವತಾ ಕರ್ಮಭೂರೇಷಾ ವರ್ತತೇಽದ್ಯ ನಿರೋಧಿತಾ ।**
**ಪ್ರಾರ್ಥಯಂತೇ ಸ್ವಯಂ ವಾಸಾನ್ದೇವಾಶ್ಚಾತ್ರ ತ್ವದಾಶ್ರಯೇ ॥ ೧೪ ॥**
**ಕಾಲಸಂಗ್ರಹಸಂಜಾತಂ ಫಲಂ ಲಬ್ಧಂ ಮಯಾಧುನಾ ।**
**ಅನ್ಯತ್ಕೃತಂ ತಪಃ ಸರ್ವಂ ತ್ವದ್ದರ್ಶನಫಲಂ ಮಮ ॥ ೧೫ ॥**
**ಈದೃಶಂ ತವ ದೇವೇಶ ರೂಪಮತ್ಯದ್ಭುತೋದಯಂ ।**
**ಏಕಮದ್ರಿಮಯಂ ಲಿಂಗಂ ನಕ್ವಚಿದ್ದೃಷ್ಟವಾನ್ಭುವಿ ॥ ೧೬ ॥**
**ಸೂರ್ಯೇಂದ್ವಗ್ನಿ ಸುಸಂಯುಕ್ತ ಕೋಣತ್ರಯ ಮನೋಹರಂ ।**
**ತ್ರಿಮೂರ್ತಿರೂಪಂ ದೇವೇಶ ದೃಶ್ಯತೇ ತೇ ವಪುರ್ಮಹತ್ ॥ ೧೭ ॥**
**ಶಕ್ತಿತ್ರಯಸ್ವರೂಪೇಣ ಕಾಲತ್ರಯವಿಧಾನಕಂ ।**
**ತ್ರಿವೇದಾತ್ಮಂ ತ್ರಿಕೋಣಾಂಗಂ ಲಿಂಗಂ ತೇ ದೃಷ್ಟಮದ್ಭುತಂ ॥ ೧೮ ॥**

---

ಸ್ವರೂಪನೂ ಆಗಿರುವೆ. ಭಕ್ತರಲ್ಲಿ ಸಂಪೂರ್ಣ ವಾತ್ಸಲ್ಯವುಳ್ಳವನೂ, ಮಂಗಳ ಸ್ವರೂಪನೂ, ತ್ರಿಪುರಧ್ವಂಸಕನೂ ಆದ ನಿನಗೆ ವಂದನೆಗಳು!

೧೩. ಎಲೈ ದೇವದೇವನೆ! ಸರ್ವಧರ್ಮಾಚರಣೆಯ ಫಲವನ್ನೂ ಕೊಡುವಂತಹ ನಿನ್ನ ದರ್ಶನವನ್ನು ಮಾಡಿದವರಿಗೆ ಈ ಲೋಕದಲ್ಲಿ ಇತರ ವಿಧಗಳಾದ ಯಾವ ತಪಸ್ಸುಗಳೂ ಬೇಕಾಗಿಲ್ಲವು.

೧೪. ಈ ಕರ್ಮಭೂಮಿಯು ನಿನ್ನಿಂದ ವ್ಯಾಪ್ತವಾಗಿ ಶೋಭಿಸುತ್ತಿರುವುದು. ದೇವತೆಗಳೂ ಕೂಡ ನಿನ್ನ ಆಶ್ರಯದಲ್ಲಿ ಈ ಪ್ರದೇಶದ ವಾಸವನ್ನು ಪ್ರಾರ್ಥಿಸುತ್ತಿರುವರು.

೧೫. ಬಹುಕಾಲದಿಂದ ಸಂಗ್ರಹಿಸಿದ ಕರ್ಮಫಲವು ಈಗ ನನಗೆ ಲಭಿಸಿತು. ನಾನು ಮಾಡಿದ ಇತರ ತಪಸ್ಸುಗಳ ಫಲರೂಪವಾಗಿಯೇ ಈಗ ನೀನು ದರ್ಶನವನ್ನು ಕೊಡುತ್ತಿರುವೆ.

೧೬. ಅತ್ಯದ್ಭುತವಾದ ಮಹಿಮೆಯುಳ್ಳ ಪರ್ವತರೂಪವಾದ ಇಂತಹ ಲಿಂಗವನ್ನು ನಾನು ಮುನ್ನು ಎಲ್ಲಿಯೂ ನೋಡಲಿಲ್ಲ.

೧೭–೧೮. ತ್ರಿಕೋಣಗಳಲ್ಲಿಯೂ ಸೂರ್ಯ, ಚಂದ್ರ ಮತ್ತು ಅಗ್ನಿಗಳಿಂದ ಯುಕ್ತವಾಗಿ ಮನೋಹರವಾದ ತ್ರಿಮೂರ್ತಿರೂಪದಿಂದ ನಿನ್ನ ಮಹದಾಕಾರವು ಕಾಣುತ್ತಿರುವುದು! ಶಕ್ತಿತ್ರಯರೂಪದಿಂದ ಸೃಷ್ಟಿ ಸ್ಥಿತಿ ಲಯಕಾಲಗಳನ್ನು ವಿಧಾಯಕ ಮಾಡುವ ವೇದಾತ್ಮಕವೂ, ತ್ರಿಕೋಣಾಕಾರವೂ ಆದ ಈ ನಿನ್ನ ಅದ್ಭುತಲಿಂಗವನ್ನು ನೋಡಿದೆನು!

ತ್ರೈಲೋಕ್ಯರಕ್ಷಣಾರ್ಥಾಯ ವಿತತಂ ರೂಪಮಾಸ್ಥಿತಃ ।
ದೃಶ್ಯಸೇ ವಸುಧಾಭಾಗೇ ಶೋಣಾದ್ರಿರಿತಿ ವಿಶ್ರುತಃ ॥ ೧೯ ॥
ಅಜಾನತಾಂ ಚ ಮರ್ತ್ಯಾನಾಂ ಸಮಾಲೋಕನಮಾತ್ರತಃ ।
ವಿತರಸ್ಯಖಿಲಾನ್ಭೋಗಾನವ್ಯಾಜಕರುಣಾನಿಧಿಃ ॥ ೨೦ ॥
ಅರ್ಚಯಾ ರಹಿತಂ ಲಿಂಗಮನ್ಯಂ ಶೂನ್ಯಮುದಾಹೃತಂ ।
ಇದಂ ತು ಪೂಜಿತಂ ದೇವೈಃ ಸದಾ ಸರ್ವವರಪ್ರದಂ ॥ ೨೧ ॥
ಪ್ರಸೀದ ಕರುಣಾಪೂರ್ಣ ಶೋಣಾಚಲ ಮಹೇಶ್ವರ ।
ತ್ರಾಯಸ್ವ ಭವಭೀತಂ ಮಾಂ ಪ್ರಪನ್ನಂ ಭಕ್ತವತ್ಸಲ ॥ ೨೨ ॥
ದ್ರಷ್ಟವ್ಯಂ ದೃಷ್ಟಮೇತತ್ತೇ ರೂಪಮತ್ಯದ್ಭುತಂ ಮಹತ್ ।
ಕೃತಾರ್ಥಯ ಕೃಪಾಸಿಂಧೋ ಶರಣ್ಯ ಶರಣಾಗತಂ ॥ ೨೩ ॥
ಇತಿ ಸಂಸ್ತೂಯಮಾನೋ ಮೇ ದೇವಃ ಶೋಣಾಚಲೇಶ್ವರಃ ।
ಅದರ್ಶಯತ್ಪರಂ ರೂಪಂ ದಿವ್ಯಮೇಹೀತ್ಯುವಾಚ ಮಾಂ ॥ ೨೪ ॥

---

೧೯. ತ್ರಿಲೋಕಗಳ ರಕ್ಷಣಾರ್ಥವಾಗಿ ಮಹಾರೂಪವನ್ನು ತಳೆದು ಅರುಣಾದ್ರಿಯೆಂಬ ಹೆಸರಿನಿಂದ ಭೂಲೋಕದಲ್ಲಿ ಪ್ರಖ್ಯಾತನಾಗಿರುವೆ.

೨೦. ನಿರ್ವ್ಯಾಜ ಕರುಣಾಸಮುದ್ರನಾದ ನೀನು ಅಜ್ಞಾನಿಗಳಾದ ಮನುಷ್ಯರಿಗೂ ದರ್ಶನಮಾತ್ರದಿಂದಲೇ ಸಕಲ ಭೋಗಭಾಗ್ಯಗಳನ್ನೂ ನೀಡುವವನಾಗಿರುವೆ.

೨೧. ಇತರ ಲಿಂಗಗಳು ಪೂಜಾರಹಿತಗಳಾಗಿ ಶೂನ್ಯಲಿಂಗಗಳೆಂದೆಣಿಸಲ್ಪಟ್ಟವೆ. ಆದರೆ ಈ ಲಿಂಗವು ನಿರಂತರದಲ್ಲಿಯೂ ದೇವತೆಗಳಿಂದ ಪೂಜಿತವಾಗಿ ಅಭೀಷ್ಟದಾಯಕವಾಗಿರುವುದು.

೨೨. ಎಲೈ ಕರುಣಾಸಿಂಧುವಾದ ಮಹಾದೇವನೆ! ಅರುಣಾಚಲೇಶ್ವರನೆ! ನನ್ನಲ್ಲಿ ಪ್ರಸನ್ನನಾಗು. ಭಕ್ತವತ್ಸಲನಾದ ನೀನು ಸಂಸಾರಭಯದಿಂದ ಬಳಲುತ್ತಿರುವ ಶರಣಾಗತನಾದ ನನ್ನನ್ನು ರಕ್ಷಣೆಮಾಡುವವನಾಗು.

೨೩. ಸಕಲರೂ ಅವಶ್ಯವಾಗಿ ನೋಡಬೇಕಾದ ನಿನ್ನ ಮಹತ್ತರವಾದ ಅತ್ಯದ್ಭುತರೂಪವನ್ನು ನಾನಿಂದು ನೋಡಿದೆನು. ಎಲೈ ಕೃಪಾಸಾಗರನೆ! ಶರಣಾಗತನಾದ ನನ್ನನ್ನು ಲೋಕಶರಣ್ಯನಾದ ನೀನು ಕೃತಾರ್ಥನನ್ನಾಗಿ ಮಾಡು.

೨೪. ಹೀಗೆಂದು ನಾನು ಸ್ತೋತ್ರಮಾಡಲು ಅರುಣಾಚಲೇಶ್ವರನು ತನ್ನ ಪರಾತ್ಪರವಾದ ದಿವ್ಯರೂಪವನ್ನು ಕೃಪೆಮಾಡಿ ಹೀಗೆಂದನು:—" ಎಲೈ ಮುನಿಯೆ! ಇಲ್ಲಿ ಬಾ.

ಪ್ರೀತೋಽಸ್ಮಿ ಭವತಃ ಸ್ತೋತ್ರೈರ್ಭಕ್ತ್ಯಾಚ ಪರಯಾ ಭೃಶಂ ।
ಅತ್ರೈವ ಭವತೋ ವಾಸೋ ನಿತ್ಯಮಸ್ತು ಮಮಾಂತಿಕೇ ॥ ೨೫ ॥
ಸಂಪೂಜಯ ಚ ಮಾಂ ನಿತ್ಯಂ ಭುವಿ ಭೋಗ್ಯೈಃ ಸನಾತನೈಃ ।
ತಪಸಾ ತವ ಸರ್ವೇಷಾಂ ಮಹತ್ವಮಿಹ ದರ್ಶಯ ॥ ೨೬ ॥
ಪೂರ್ವಂ ಕೈಲಾಸಶಿಖರೇ ವಸಂತಂ ತ್ವಾಂ ತಪೋಽನ್ವಿತಂ ।
ಆದಿಶಂ ಪೃಥಿವೀಭಾಗೇ ಶೋಣಾದ್ರೌ ಪೂಜಯೇತಿ ಮಾಂ ॥ ೨೭ ॥
ಸಪ್ತರ್ಷಿಪೂಜಿತಾ ಪೂಜಾ ದಿವಿ ಮೇ ಸಂಪ್ರಕಾಶತೇ ।
ತಥಾ ನಿತ್ಯಾರ್ಚನಾಯುಕ್ತಂ ಪ್ರಕಾಶಯ ಧರಾತಲೇ ॥ ೨೮ ॥
ಸರ್ವೇಷಾಮೇವ ಜಂತೂನಾಂ ಹಿತಾಯ ತ್ವಂ ತಪೋಧಿಕಃ ।
ಭುವಿ ಮಾಂ ಪೂಜಯಾರ್ಚಾಭಿರಾಗಮೋಕ್ತಾಭಿರಾದರಾತ್ ॥ ೨೯ ॥
ದಿವ್ಯಾ ಮಮ ಮಹಾಪೂಜಾ ದೃಶ್ಯಾ ಹಿ ದಿವಿ ದೈವತೈಃ ।
ಪ್ರಕಾಶನೀಯಾ ಭವತಾ ಪಾರ್ಥಿವೀ ವಸುಧಾತಲೇ ॥ ೩೦ ॥

---

೨೫. ನಿನ್ನ ಸ್ತೋತ್ರಗಳಿಂದಲೂ, ಉತ್ಕೃಷ್ಟವಾದ ನಿನ್ನ ಭಕ್ತಿಯಿಂದಲೂ ಬಹಳವಾಗಿ ಸಂತೋಷಗೊಂಡಿರುವೆನು. ಇನ್ನುಮೇಲೆ ನನ್ನ ಸಮೀಪದಲ್ಲಿಯೇ ನೀನು ವಾಸಮಾಡುತ್ತಿರು.

೨೬. ನಿತ್ಯದಲ್ಲಿಯೂ ನಾನಾ ವಿಧಗಳಾದ ಭೋಗಗಳಿಂದ ನನ್ನ ಸೇವೆಯನ್ನು ಮಾಡು. ತಪಸ್ಸನ್ನಾಚರಿಸಿ ಎಲ್ಲರಿಗೂ ಮಹತ್ವವನ್ನು ತೋರಿಸುವವನಾಗು.

೨೭. ಎಲೈ ಗೌತಮನೆ! ಪೂರ್ವದಲ್ಲಿಯೇ ಕೈಲಾಸಶಿಖರದಲ್ಲಿ ತಪಸ್ಸನ್ನು ಮಾಡುತ್ತಿದ್ದ ನಿನ್ನನ್ನು ಕುರಿತು ನಾನು ಭೂಲೋಕಕ್ಕೆ ಹೋಗಿ, ಅರುಣಾಚಲದಲ್ಲಿ ನೆಲಸಿರುವ ನನ್ನನ್ನು ಪೂಜಿಸುವಂತೆ ಆಜ್ಞಾಪಿಸಿದ್ದೆನು.

೨೮. ಆಕಾಶದಲ್ಲಿ ನನಗೆ ಸಪ್ತರ್ಷಿಗಳಿಂದ ನಡೆಯುವ ಪೂಜೆಯು ಅಮೋಘವಾಗಿರುವುದು. ಹಾಗೆಯೇ ಭೂಮಿಯಲ್ಲಿ ನನ್ನನ್ನು ನಿತ್ಯಾರ್ಚನಾಯುಕ್ತನನ್ನಾಗಿ ಪ್ರಕಟಗೊಳಿಸು.

೨೯. ನೀನು ಉಗ್ರವಾದ ತಪಸ್ಸನ್ನು ಮಾಡಿ ಸರ್ವಪ್ರಾಣಿಗಳ ಹಿತದೃಷ್ಟಿಯಿಂದ ಭೂಲೋಕದಲ್ಲಿರುವ ನನ್ನನ್ನು ಶೈವಾಗಮೋಕ್ತಕ್ರಮದಿಂದ ಶ್ರದ್ಧಾಳುವಾಗಿ ಪೂಜೆಯನ್ನು ಮಾಡು.

೩೦. ನನ್ನ ಮಹಾಪೂಜೆಯು ಸ್ವರ್ಗದಲ್ಲಿ ದೇವತೆಗಳಿಂದ ಕಾಣಲ್ಪಡುವುದು. ಹಾಗೆಯೇ ಭೂಮಿಯಲ್ಲಿ ಪಾರ್ಥಿವಪೂಜೆಯು ನಿನ್ನಿಂದ ಪ್ರಕಾಶಿಸಲ್ಪಡಬೇಕಾಗಿರುವುದು.

ಮಹಾತ್ಮ್ಯಂ ಪೂರ್ವಮೇವೋಕ್ತಂ ಯಥಾಹಮರುಣಾಚಲಃ ।
ಸ್ಥಿತೋ ವಸುಂಧರಾಭಾಗೇ ಮಯಾ ಪ್ರೀತಂ ತು ತೇ ಭೃಶಂ ॥ ೩೧ ॥
ಯೇ ವಾ ಸಂಪೂಜಯಂತಿ ಸ್ಮ ಪೂರ್ವಂ ಮಾಂ ಸುಕೃತಾಧಿಕಾಃ ।
ತೇಭ್ಯಸ್ತ್ವಮಧಿಕೋ ಭೂಮೌ ಪ್ರಕಾಶಸ್ವ ಶಿವಾರ್ಚನಂ ॥ ೩೨ ॥
ಇತ್ಯಾದಿಷ್ಟೋ ಹಿ ದೇವೇಶಂ ಪ್ರಣಮ್ಯ ಭವಭಕ್ತಿಮಾನ್ ।
ಅನ್ವಪೃಚ್ಛಂ ದಯಾಪೂರ್ಣಮರುಣಾದ್ರೀಶಮಾನಮನ್ ॥ ೩೩ ॥
ಅನಾಸಾದ್ಯಮಿದಂ ರೂಪಮಗ್ನಿರೂಪಂ ಮಹೇಶ್ವರಂ ।
ಕಥಮದ್ಯಾರ್ಚಯಾಮ್ಯೇನಂ ಮರ್ತ್ಯಲೋಕೋಚಿತಾರ್ಚನೈಃ ॥ ೩೪ ॥
ಆದೇಶಮಿಮಮನ್ವರ್ಥಂ ಕಥಂ ವಾ ಕಲ್ಪಯಾಮ್ಯಹಂ ।
ಉಪಾಯಮಾದಿಶ ಶ್ರೀಮನ್ನಭಿಗಮ್ಯೋ ಯಥಾ ಭವಾನ್ ॥ ೩೫ ॥
ಇತಿ ವಿಜ್ಞಾಪಿತೋ ದೇವಃ ಶ್ರೀಮಾನ್ಶೋಣಾಚಲೇಶ್ವರಃ ।
ಅನ್ವಗ್ರಹೀದಶೇಷಾತ್ಮಾ ಪ್ರಣತಂ ಮಾಂ ದಯಾನಿಧಿಃ ॥ ೩೬ ॥
ಅಹಂತು ಸೂಕ್ಷ್ಮಲಿಂಗಾನಿ ಪ್ರಕಾಶಿಷ್ಯೇ ಮಹೀತಲೇ ।
ಆಗಮೋಕ್ತಕ್ರಿಯಾಭೇದೈಃ ಪೂಜಾಂ ಮೇ ಪ್ರತಿಪಾದಯ ॥ ೩೭ ॥

---

೩೧–೩೨. ನಾನು ಅರುಣಾಚಲನಾಗಿ ಹೇಗೆ ಭೂಲೋಕದಲ್ಲಿದ್ದೇನೆಂಬ ಮಾಹಾತ್ಮ್ಯವನ್ನು ಮೊದಲಲ್ಲಿಯೇ ನಿನಗೆ ತಿಳಿಸಿದ್ದೇನೆ. ನೀನು ನನಗೆ ಪರಮ ಪ್ರಿಯನಾಗಿರುವೆ. ಯಾರು ಪೂರ್ವಜನ್ಮಸುಕೃತದಿಂದ ಮೊದಮೊದಲೇ ನನ್ನನ್ನು ಪೂಜಿಸುತ್ತಾರೆಯೊ, ಅವರಲ್ಲೆಲ್ಲ ನೀನು ಉತ್ತಮೋತ್ತಮನಾಗಿ ಶಿವಪೂಜೆಯನ್ನು ಭೂಮಿಯಲ್ಲಿ ಹರಡು."

೩೩. ಹೀಗೆ ಅನುಜ್ಞೆಮಾಡಿದ ಶಿವನಿಗೆ ಭಕ್ತಿಯಿಂದ ಸಾಷ್ಟಾಂಗವನ್ನು ಮಾಡಿ, ದಯಾಸಾಗರನಾದ ಅರುಣಾಚಲೇಶ್ವರನನ್ನು ಕಂಡು ಹೀಗೆ ಕೇಳಿದೆನು.

೩೪–೩೫. "ಎಲೈ ಪರಮೇಶ್ವರನೇ! ನಿನ್ನ ಈ ಅಗ್ನಿಮಯವಾದ ರೂಪವು ನಮ್ಮನ್ನು ಹತ್ತಿರಕ್ಕೆ ಬರಗೊಡುವುದಿಲ್ಲ. ಇದನ್ನು ಹೇಗೆತಾನೆ ಮರ್ತ್ಯಲೋಕದ ಪೂಜೆಗಳಿಂದ ಅರ್ಚನೆಮಾಡಲಿ? ಈ ನಿನ್ನ ಆದೇಶವನ್ನು ಸಪ್ರಯೋಜನವನ್ನಾಗಿ ಹೇಗೆ ತಿಳಿದುಕೊಳ್ಳಲಿ? ನಿನ್ನನ್ನು ಹೇಗೆ ಸಮೀಪಿಸಬಹುದೆಂಬ ಉಪಾಯವನ್ನು ಅನುಗ್ರಹಿಸಬೇಕು."

೩೬. ಹೀಗೆ ವಿಜ್ಞಾಪನೆಯನ್ನು ಮಾಡಲು ಕರುಣಾಸಮುದ್ರನಾದ ಅಪ್ರಮೇಯನಾದ ಅರುಣೇಶ್ವರನು ನನ್ನಲ್ಲಿ ಅನುಗ್ರಹವನ್ನು ಮಾಡಿದನು.

೩೭. "ಅಯ್ಯಾ ಭಕ್ತಶ್ರೇಷ್ಠನೆ! ನಾನು ಈ ಭೂಮಿಯಲ್ಲಿ ಅನೇಕ ಸೂಕ್ಷ್ಮಲಿಂಗಗಳನ್ನು ಪ್ರಕಾಶಗೊಳಿಸುತ್ತೇನೆ. ನೀನು ಆಗಮೋಕ್ತ ಪೂಜೆಗಳಿಂದ ನನ್ನನ್ನು ಪ್ರಕಟಗೊಳಿಸುತ್ತಿರು.

ಪಂಚಾವರಣಸಂಯುಕ್ತಂ ಲಿಂಗಂ ಮೇ ಸೂಕ್ಷ್ಮಮುದ್ಭುತಂ ।
ಅರುಣಾದ್ರೀಶ್ವರಾಭಿಖ್ಯಂ ಸಂಪೂಜಯ ತಪೋಬಲೈಃ ॥ ೩೮ ॥
ಇತ್ಯಾದಿಶ್ಯ ಮಹಾದೇವಃ ಸ್ವಯಂಭು ವಿಮಲಂ ಮಹತ್ ।
ರೂಪಂ ಮೇ ದರ್ಶಯಾಮಾಸ ಸೂಕ್ಷ್ಮಲಿಂಗಾತ್ಮನಾ ಶಿವಃ ॥ ೩೯ ॥
ಆಲೋಕ್ಯ ವಿಮಲಂ ಲಿಂಗಂ ಸೂಕ್ಷ್ಮಂ ತತ್ಸ್ವಯಮುಚ್ಛ್ರಿತಂ ।
ಅಶೇಷಾವರಣೋಪೇತಂ ಕೃತಾರ್ಥಹೃದಯೋಽಭವಂ ॥ ೪೦ ॥
ಪುನರ್ವ್ಯಜ್ಞಾಪಯಂ ದೇವಂ ಶಂಭುಮಾಶ್ರಿತವತ್ಸಲಂ ।
ಆಗಮೋಕ್ತಪ್ರಕಾರಾಣಾಮನಿರೀಕ್ಷ್ಯತ್ವಮಾಗತಂ ॥ ೪೧ ॥
ಕಥಂ ತು ತವ ರೂಪಾಣಾಂ ನಾಮಭೇದಾನ್ವಿಯೋಜಿತಾನ್ ।
ಜಾನೀಯಾಂ ಕರುಣಾಮೂರ್ತೇ ಸ್ವಯಮೀಶ್ವರ ಮತ್ಪ್ರಭೋ ॥ ೪೨ ॥
ಪೂಜಕಾಸ್ತವ ಕೇವಾ ಸ್ಯುರ್ಮಂದಿರಂ ವಾತ್ರ ಕೀದೃಶಂ ।
ಕಥಂ ಸ್ತೋತ್ರಂ ಕಥಂ ಪೂಜಾ ಕೇ ವಾತ್ರ ಪರಿಚಾರಕಾಃ ॥ ೪೩ ॥
ಸ್ಥಾನರಕ್ಷಾ ಕಥಂ ವಾ ಸ್ಯಾತ್ಕೇ ವಾತ್ಮಪರಿರಕ್ಷಕಾಃ ।
ಕಥಂ ವಾ ಮಾನುಷೀ ಪೂಜಾ ನಿತ್ಯಾ ಸಂವರ್ಧತೇ ತವ ॥ ೪೪ ॥

---

೩೮. ಅರುಣಾಚಲೇಶ್ವರನೆಂಬ ಅದ್ಭುತವಾದ, ಪಂಚಾವರಣಯುಕ್ತವಾದ ಈ ಸೂಕ್ಷ್ಮಲಿಂಗವನ್ನು ನಿನ್ನ ಸರ್ವ ತಪೋಬಲದಿಂದಲೂ ಪೂಜಿಸು.''

೩೯. ಹೀಗೆಂದು ನನಗೆ ಆಜ್ಞೆಮಾಡಿ ದೇವದೇವೋತ್ತಮನಾದ ಶಿವನು ಸೂಕ್ಷ್ಮಲಿಂಗ ವ್ಯಾಜದಿಂದ ಸ್ವಯಂಭುವೂ, ಪರಿಶುದ್ಧವೂ ಆದ ತನ್ನ ಮಹದ್ರೂಪವನ್ನು ತೋರಿಸಿದನು.

೪೦. ಶುದ್ಧವಾದ ಆ ಸ್ವಯಂಭುಲಿಂಗವನ್ನು ನೋಡಿ ಪಂಚಾವರಣ ಸಂಯುಕ್ತವಾದ ಅದರ ಆಲೋಕನದಿಂದಲೇ ಕೃತಾರ್ಥತೆಯನ್ನು ಹೊಂದಿದೆನು.

೪೧. ವೇದಾಗಮಾದಿಗಳಿಗೆ ನಿಲುಕದ ರೂಪವುಳ್ಳ ಭಕ್ತವತ್ಸಲನಾದ ಶಂಭುವನ್ನು ಕುರಿತು ಮತ್ತೆ ನಾನಿಂತು ವಿಜ್ಞಾಪಿಸಿಕೊಂಡೆನು.

೪೨. " ಕರುಣಾಮೂರ್ತಿಯಾದ ಸ್ವಾಮಿಯೆ! ನಾಮಭೇದರಹಿತಗಳಾದ ನಿನ್ನ ರೂಪಗಳನ್ನು ತಿಳಿಯುವ ವಿಧಾನವು ಯಾವುದು?

೪೩. ನಿನ್ನನ್ನು ಇಲ್ಲಿ ಪೂಜಿಸುವವರು ಯಾರು? ಇಲ್ಲಿ ನಿನ್ನ ಮಂದಿರವು ಯಾವ ವಿಧವಾಗಿರುವುದು? ನಿನ್ನ ಸ್ತೋತ್ರವೂ ಪೂಜಾಕ್ರಮವೂ ಹೇಗೆ ನಡೆಯಬೇಕು? ನಿನ್ನ ಪರಿಚಾರಕರು ಯಾರು?

೪೪. ನಿನ್ನ ಈ ಸ್ಥಳದ ರಕ್ಷಣವು ಹೇಗೆ ಆಗುವುದು? ನಿನ್ನ ರೂಪವನ್ನು ರಕ್ಷಿಸುವವರು ಯಾರು? ನಿತ್ಯದಲ್ಲಿಯೂ ನಿನಗೆ ಮನುಷ್ಯರ ಪೂಜೆಯು ಹೇಗೆ ಸಲ್ಲುವುದು?

ಆಗತಾ ಬಹವೋ ದೇವಾಃ ಶ್ರದ್ಧೇಯಂ ಮನುಜೈಃ ಕಥಂ ।
ಪ್ರಸೀದ ಪರಮೇಶಾನ ಸ್ವಯಮಾಜ್ಞಾಪಯಾಖಿಲಂ ॥ ೪೫ ॥
ಏವಂ ವಿಜ್ಞಾಪಿತೋ ದೇವಃ ಶೋಣಾದ್ರೀಶಃ ಸ್ವಯಂ ಪ್ರಭುಃ ।
ಆಜ್ಞಾಪಯತ್ತದಾ ದೇವೋ ವಿಶ್ವಕರ್ಮಾಣಮಾಗತಂ ॥ ೪೬ ॥
ಸೃಜ ತ್ವಂ ನಗರಂ ದಿವ್ಯಮರುಣಾಖ್ಯಂ ಗುಣಾಧಿಕಂ ।
ಮಂದಿರಂ ಮಮ ದಿವ್ಯಂ ಚ ಮಹಾಮಣಿಗಣೋಜ್ಜ್ವಲಂ ॥ ೪೭ ॥
ತೌರ್ಯತ್ರಿಕಂ ಸಪರ್ಯಾಂಗಂ ತನ್ಮೇ ಸರ್ವಂ ಪ್ರಕಲ್ಪಯ ।
ಆಬಭಾಷೇ ಶಿವಃ ಶ್ರೀಮಾನ್ನಾಮಭೇದಾರ್ಚನಕ್ರಮಂ ॥ ೪೮ ॥
ವ್ರತಂ ಚ ಕರುಣಾಮೂರ್ತಿರರುಣಾದ್ರೀಶ್ವರಃ ಶಿವಃ ।
ಶೃಣು ತನ್ಮೇ ಚ ಯೇ ಸೃಷ್ಟಾ ಪೂಜಾರ್ಥಂ ಪರಿಚಾರಕಾಃ ॥ ೪೯ ॥
ಶೃಣು ಗೌತಮ ಸರ್ವಂ ಮೇ ಮಾನುಷಂ ಪೂಜನಕ್ರಮಂ ।
ಯ ಏಷ ಸರ್ವಲೋಕಾನಾಂ ಕ್ಷೇಮಾಯ ಪ್ರಥತೇ ಭುವಿ ॥ ೫೦ ॥

---

೪೫. ಅನೇಕ ದೇವತೆಗಳು ಇಲ್ಲಿಗೆ ಬರುವರೆಂಬುದು ಮನುಷ್ಯರಿಗೆ ಹೇಗೆ ಶ್ರದ್ಧೆಯನ್ನುಂಟುಮಾಡುವುದು? ನೀನು ಪ್ರಸನ್ನನಾಗಿ ವಿಶದವಾಗಿ ನನಗೆ ತಿಳಿಯಹೇಳು."

೪೬. ಹೀಗೆ ಪ್ರಾರ್ಥಿಸಲ್ಪಟ್ಟವನಾಗಿ ಸ್ವಯಂಪ್ರಕಾಶರೂಪನಾದ ಅರುಣಾಚಲೇಶ್ವರನು ಅಲ್ಲಿಗೆ ಬಂದಿದ್ದ ವಿಶ್ವಕರ್ಮನನ್ನು ಕುರಿತು ಇರೀತಿ ಆಜ್ಞಾಪಿಸಿದನು.

೪೭. "ನೀನು ಅರುಣಾಖ್ಯವಾದ ಸಕಲಗುಣಯುಕ್ತವಾದ ನಗರವನ್ನು ನಿರ್ಮಾಣಮಾಡು. ಮತ್ತು ಮಹಾಮಣಿಗಣಗಳಿಂದಲಂಕೃತವಾದ ದಿವ್ಯ ಮಂದಿರವನ್ನು ನನಗೆ ನಿರ್ಮಿಸು.

೪೮. ಮಂಗಳವಾದ್ಯಗಳನ್ನೂ ಪೂಜೆಗೆ ಬೇಕಾದ ಸಕಲ ಪದಾರ್ಥಗಳನ್ನೂ ನನಗಾಗಿ ಮಾಡು." ಹೀಗೆ ವಿಜ್ಞಾಪಿಸಿದ ತರುವಾಯ ಆತನು ನನ್ನನ್ನು ಕುರಿತು ನಾಮಭೇದಗಳಿಂದ ತನ್ನನ್ನು ಪೂಜಿಸುವ ಕ್ರಮವನ್ನು ಹೇಳಿದನು.

೪೯. ತನ್ನ ವ್ರತದ ಕ್ರಮವನ್ನೂ ದಯಾಸಮುದ್ರನಾದ ಅರುಣಾಚಲೇಶ್ವರನು ತಿಳಿಸಿದನು. "ಎಲೈ ಗೌತಮನೆ! ನನ್ನ ಪರಿಚರ್ಯೆಗಾಗಿ ಸೃಷ್ಟರಾಗಿರತಕ್ಕವರುಗಳನ್ನು ಹೇಳುವೆನು ಕೇಳು.

೫೦. ನನ್ನ ಪೂಜೆಯನ್ನು ಮನುಷ್ಯರು ಹೇಗೆ ಮಾಡಬೇಕೆಂಬುದನ್ನೂ ಕೇಳು. ಈ ರೂಪವೇ ಭೂಲೋಕದಲ್ಲಿ ಸಕಲ ಲೋಕಗಳ ಕ್ಷೇಮಕ್ಕೋಸ್ಕರವಾಗಿ ನೆಲಸಿರುವುದು.

ಇದಂ ತೇಜೋಮಯಂ ಲಿಂಗಮತುಲಂ ದೃಶ್ಯತೇ ಮಹತ್ ।
ಅರುಣಾದ್ರೀಶ್ವರಾಭಿಖ್ಯಂ ಪೂಜ್ಯತಾಂ ಸತತಂ ತ್ವಯಾ ॥ ೫೧ ॥
ಶಕ್ತಿರ್ಮಮೋತ್ತರೇ ಭಾಗೇ ಪೂಜ್ಯಾ ನಿತ್ಯೋದಯಾ ಮುದಾ ।
ದಧತೀ ಸ್ಥಾನಮಾಹಾತ್ಮ್ಯಮಪೀತಕುಚನಾಮಿಕಾ ॥ ೫೨ ॥
ಅರುಣಾಚಲರಾಜೋಽಯಮವಿಭಾಗಃ ಪ್ರಿಯಾನ್ವಿತಃ ।
ಉತ್ಸವಾರ್ಥೇ ಮಹಾದೇವಃ ಪೂಜ್ಯೋ ಭೋಗಸುತಾವೃತಃ ॥ ೫೩ ॥
ಬೋಧದೋ ಭಕ್ತಲೋಕಸ್ಯ ದತ್ತಾಭಯಕರಃ ಶಿವಃ ।
ಸಾರಂಗಂ ಪರಶುಂ ಬಿಭ್ರತ್ಪ್ರಸನ್ನವದನಃ ಸದಾ ॥ ೫೪ ॥
ಉಮಾಸ್ಕಂದೇಶ್ವರಃ ಶಂಭುರ್ದಿವ್ಯರತ್ನವಿಭೂಷಣಃ ।
ಅಭಯಾ ಭಾಸಯಂಲ್ಲೋಕಾನವಿಕುಂಠಶ್ರೀಯಾನ್ವಿತಃ ॥ ೫೫ ॥
ಶಕ್ತೇರುತ್ಸವ ಭದ್ರೇ ಚ ಸಂಪೂಜ್ಯಾ ಸುಂದರೇಶ್ವರೀ ।
ಸರ್ವಭೂಷಣಸಂಯುಕ್ತಾ ಶೃಂಗಾರರಸವರ್ಧಿನೀ ॥ ೫೬ ॥
ಬಾಲೋ ಗಣಪತಿಃ ಪೂಜ್ಯಃ ಪುರಸ್ತಾದ್ಭೂತಿನಂದನಃ ।
ಮದಂತಿಕಮಲಂಕುರ್ವನ್ಭಕ್ಷ್ಯೈರ್ಭೋಜ್ಯೈರ್ಬಹೂದಯೈಃ ॥ ೫೭ ॥

---

೫೧. ಅರುಣಾದ್ರೀಶನೆಂಬ ನಾಮದಿಂದ ಕಾಣುತ್ತಿರುವ ಅದ್ಭುತವಾದ ಅಪ್ರಮೇಯವಾದ ಈ ಲಿಂಗವನ್ನು ಸರ್ವಕಾಲದಲ್ಲಿಯೂ ಪೂಜಿಸುವವನಾಗು.

೫೨–೫೩. ನನ್ನ ಉತ್ತರಭಾಗದಲ್ಲಿ ನೆಲಸಿ ಸ್ಥಾನಮಾಹಾತ್ಮ್ಯವನ್ನು ಪಡೆದು ನಿತ್ಯೋತ್ಸವಯುಕ್ತಳಾದ ಶಕ್ತಿಯನ್ನು ಅಪೀತಕುಚೆಯೆಂಬ ಹೆಸರಿನಿಂದ ಸಂತೋಷದಿಂದ ಪೂಜಿಸಬೇಕು. ಅರುಣಾಚಲೇಶ್ವರನು ಯಾವಾಗಲೂ ಪ್ರಿಯೆಯಿಂದೊಡಗೂಡಿದವನು. ಆದುದರಿಂದ ಉತ್ಸವಕಾಲದಲ್ಲಿ ಆತನನ್ನು ಭೋಗಸುತಾವೃತನನ್ನಾಗಿ ಪೂಜಿಸಬೇಕು.

೫೪–೫೫. ಆತನೇ ಸಕಲ ಜ್ಞಾನವನ್ನೂ ಕೊಡುವನು. ಭಕ್ತರಿಗೆ ಅಭಯಹಸ್ತವನ್ನು ನೀಡಿರುವನು. ಶಿವನು ಜಿಂಕೆಯನ್ನೂ ಪರಶುವನ್ನೂ ಧರಿಸಿ ಯಾವಾಗಲೂ ಪ್ರಸನ್ನಮುಖನಾಗಿರುವನು. ಸದಾಶಿವನು ಪಾರ್ವತೀ ಷಣ್ಮುಖಸಮೇತನಾಗಿ, ದಿವ್ಯಾಭರಣಭೂಷಿತನಾಗಿ ತನ್ನ ಜ್ಯೋತಿಯಿಂದ ಸಕಲ ಲೋಕಗಳನ್ನೂ ಬೆಳಗುತ್ತ ನಿತ್ಯೈಶ್ವರ್ಯಸಮನ್ವಿತನಾಗಿರುವನು.

೫೬. ಶಕ್ತಿಯ ಉತ್ಸವ ಮಂಗಳದಲ್ಲಿಯೇ ಸಕಲ ಭೂಷಣಭೂಷಿತೆಯೂ ಶೃಂಗಾರರಸವರ್ಧಿನಿಯೂ ಆದ ಸುಂದರೇಶ್ವರಿಯನ್ನು ಪೂಜೆಮಾಡಬೇಕು.

೫೭. ನನ್ನ ಸಮೀಪ ಸ್ಥಾನವನ್ನಲಂಕರಿಸುತ್ತ ಭಕ್ಷ್ಯಭೋಜ್ಯಾದಿ ವೈಭವಗಳಿಂದ ಐಶ್ವರ್ಯದಾತನೂ, ಬಾಲಕನೂ ಆದ ಗಣಪತಿಯೂ ಅಂತೆಯೇ ಪೂಜಿಸಲ್ಪಡಬೇಕು.

ಮತ್ಪಾರ್ಶ್ವಮವಿಮುಂಚಂತೀ ಶೋಣರೇಖಾಂಚಿತೇಕ್ಷಣಾ ।
ಉತ್ಸವಾರ್ಥಾ ಪರಾಶಕ್ತಿರಂತಿಕಸ್ಥೈವ ಪೂಜ್ಯತಾಂ ॥ ೫೮ ॥
ಮುಖರಾಂಘ್ರಿಪತಿಃ ಶ್ರೀಮಾನ್ನೃತ್ಯಂಸ್ತಾಂಡವಪಂಡಿತಃ ।
ಉತ್ಸವಾರ್ಥಂ ಸಮಭ್ಯರ್ಚ್ಯಶ್ಚಕ್ಷ್ವುರಗ್ರೇಽಮೃತೇಶ್ವರಃ ॥ ೫೯ ॥
ಶಕ್ತಿಶ್ಚಾನ್ಯಾ ಮಹಾಭಾಗಾ ಸಂಪೂಜ್ಯಾ ಭೂವಿನಾಯಕಾ ।
ದ್ವಾರೇ ನಂದೀ ಮಹಾಕಾಲಃ ಪುರಸ್ತಾತ್ಸೂರ್ಯಸನ್ನಿಭಃ ॥ ೬೦ ॥
ಭಕ್ತಾನಾಂ ಮಮ ಸರ್ವೇಷಾಂ ಪೂಜನಂ ಚಾಪಿ ಕಲ್ಪ್ಯತಾಂ ।
ದಕ್ಷಿಣೇ ಮಾತರಃ ಪೂಜ್ಯಾ ವಿಘ್ನಶಾಸ್ತ್ರಾ ಸಮನ್ವಿತಾಃ ॥ ೬೧ ॥
ಸಂಪೂಜ್ಯೋ ನೈಋತೇ ಕೋಣೇ ವಿಘ್ನನಾಥೋ ವಿನಾಯಕಃ ।
ಸ್ಕಂದಃ ಶಕ್ತಿಧರ ಶ್ಚೈವೈಶಾನಕೋಣೇ ಸಮರ್ಚ್ಯತಾಂ ॥ ೬೨ ॥
ಲಿಂಗಾನಿ ಚ ಮನೋಜ್ಞಾನಿ ಪೂಜನೀಯಾನ್ಯನಂತರಂ ।
ಮಂದಿರಂ ಮಮ ಸಂಪೂಜ್ಯ ದಕ್ಷಿಣಾಮೂರ್ತಿದಕ್ಷಿಣಂ ॥ ೬೩ ॥
ಪಶ್ಚಿಮೇ ವಿಷ್ಣುರೂಪಾಂಕಮಗ್ನಿರೂಪಾನ್ವಿತಂ ತಥಾ ।
ಉತ್ತರೇ ಬ್ರಹ್ಮರೂಪಾಂಕಂ ಪೂರ್ವೇ ಸಾರಂಗಭೂಯುತಂ ॥ ೬೪ ॥

---

೫೮–೫೯. ನನ್ನನ್ನು ಎಡೆಬಿಡದಿರುವವಳೂ ಕೆಂಪುಕಾಡಿಗೆಯಿಂದೊಪ್ಪುವ ಕಣ್ಣುಗಳುಳ್ಳವಳೂ ಆದ ಪರಾಶಕ್ತಿಯು ಉತ್ಸವಕಾರ್ಯದಲ್ಲಿ ನನ್ನ ಸಮೀಪದಲ್ಲಿಯೇ ಪೂಜೆಗೊಳ್ಳಲಿ. ನನ್ನ ಎದುರಿನಲ್ಲಿಯೇ ಮುಖ್ಯನೂ ಅಪ್ರತಿಷೇಧ್ಯನೂ ತಾಂಡವಪಂಡಿತನೂ ಆದ ಅಮೃತೇಶ್ವರನು ಷಡ್ಗುಣೈಶ್ವರ್ಯಸಮೇತನಾಗಿ ನರ್ತಕಭಾವದಲ್ಲಿರುವವನನ್ನಾಗಿ ಭಾವಿಸಿ ಪೂಜಿಸಲ್ಪಡಬೇಕು.

೬೦. ಹಾಗೆಯೇ ಭೂವಿನಾಯಕೆಯೆಂಬ ಮಹಾಮಹಿಮಳಾದ ಮತ್ತೊಬ್ಬ ಶಕ್ತಿಯು ಪೂಜನೀಯಳು. ಮುಂಭಾಗದಲ್ಲಿ ದ್ವಾರಪ್ರದೇಶದಲ್ಲಿಯೇ ಕಾಲಕಾಲನಾದ ನಂದಿಯೂ ಪೂಜೆಗೊಳ್ಳಬೇಕು.

೬೧. ನನ್ನ ಭಕ್ತರಿಗೆಲ್ಲ ಯಥಾವಿಧಿಯಾದ ಪೂಜೆಯು ನಡೆಯಲಿ. ವಿಘ್ನೇಶ್ವರ ಸಹಿತರಾದ ಸಪ್ತಮಾತೃಕೆಯರನ್ನು ಪೂಜಿಸು.

೬೨. ಸಕಲ ವಿಘ್ನಗಳನ್ನೂ ನಾಶಮಾಡುವ ವಿನಾಯಕನು ನೈಋತ್ಯ ಮೂಲೆಯಲ್ಲಿ ಪೂಜನೀಯನು. ಶಕ್ತ್ಯಾಯುಧಸಹಿತನಾದ ಸ್ಕಂದನು ಈಶಾನ್ಯದಲ್ಲಿ ಪೂಜೆಗೊಳ್ಳುವನು.

೬೩–೬೪. ಅನಂತರದಲ್ಲಿ ನನ್ನ ಮನೋಹರಗಳಾದ ಲಿಂಗಗಳ ಪೂಜೆಯು ನಡೆಯಬೇಕು. ಬಳಿಕ ನನ್ನ ಮಂದಿರವು ಪೂಜಿಸಲ್ಪಡಲಿ. ಅದರ ದಕ್ಷಿಣದಲ್ಲಿ ದಕ್ಷಿಣಾಮೂರ್ತಿಯೂ, ಪಶ್ಚಿಮದಲ್ಲಿ ವಿಷ್ಣು ಮತ್ತು ಅಗ್ನಿದೇವತೆಗಳೂ, ಉತ್ತರದಲ್ಲಿ ಬ್ರಹ್ಮನೂ, ಪೂರ್ವದಲ್ಲಿ ಷಣ್ಮುಖನೂ ಆವಾಹಿತರಾಗಲಿ.

ಸರ್ವದೇವಗಣೋಪೇತಂ ಸರ್ವಶಕ್ತಿ ಸಮನ್ವಿತಂ ।
ಅಪೀತಕುಚನಾಥಾಯಾಃ ಸರ್ವಶಕ್ತಿ ಸಮನ್ವಿತಂ ॥ ೬೫ ॥
ಮಂದಿರಂ ಗುರು ಸಂಪೂಜ್ಯ ದಿಕ್ಪಾಲಕ ವಧೂವೃತಂ ॥ ೬೬ ॥
ಮಂದಿರಸ್ಯಾವನಾರ್ಥಯ ದೇವೀರ್ವೈಭವನಾಯಕಾಃ ।
ಕ್ಷೇತ್ರಪಾಲಂ ತು ಸಂಪೂಜ್ಯ ಸರ್ವಾವರಣಸಂಯುತಃ ॥ ೬೭ ॥
ಪುತ್ರಸ್ಯ ತ್ರಾಣಮಾಯಾತಾ ಪೂಜ್ಯಾರುಣಗಿರೀಶ್ವರೀ ।
ಕಾಲೀ ಬಹುವಿಧಾಶ್ಚಾನ್ಯಾ ದೇವತಾ ವಿಧಿಪಾಲಕಾಃ ॥ ೬೮ ॥
ಉತ್ಸವಾ ವಿವಿಧಾಃ ಕಲ್ಪ್ಯಾಃ ಪ್ರತಿಮಾಸಮಹೋದಯಾಃ ।
ಸೃಜಸ್ವ ಕನ್ಯಕಾ ದಿವ್ಯಾಃ ಶಿವದೇವಾರ್ಹಣೇ ರತಾಃ ॥ ೬೯ ॥
ನೃತ್ಯಗೀತಕಲಾಭಿಜ್ಞಾ ರೂಪಸೌಭಾಗ್ಯಸಂಯುತಾಃ ।
ಚಾರುವಿಭ್ರಮಸಂಯುಕ್ತಾಃ ಕಾಮದಾ ನಿತ್ಯಪಾವನಾಃ ॥ ೭೦ ॥
ಶಿಷ್ಯಾನಾದಿಶ ವೇದಜ್ಞಾನ್ಸದಾಚಾರಸಮುಜ್ಜ್ವಲಾನ್ ।
ದಿವ್ಯೋಪಚಾರಸಂಸಿದ್ಧ್ಯೈ ಸುಭಗಾನ್ಶುದ್ಧಚೇತಸಃ ॥ ೭೧ ॥

---

೬೫. ಈ ಮಂದಿರವು ಸರ್ವದೇವತೆಗಳಿಂದಲೂ, ಸರ್ವಶಕ್ತಿಗಳಿಂದಲೂ ಸಮನ್ವಿತವಾಗಿರಲಿ. ಹಾಗೂ ಅಪೀತಕುಚೆಯ ಸಕಲ ಸಾಮರ್ಥ್ಯದಿಂದ ಕೂಡಿದುದಾಗಲಿ.

೬೬–೬೮. ಈ ರೀತಿ ಸಕಲ ದಿಕ್ಪಾಲಕರಿಂದಲೂ ಅವರ ಪತ್ನಿಯರಿಂದಲೂ ಭವ್ಯವಾದ ಈ ಮಂದಿರವನ್ನು ಪೂಜಿಸಿದ ಬಳಿಕ ರಕ್ಷಣಾರ್ಥವಾಗಿ ವೈಭವನಾಯಕೆಯರೆಂಬ ದೇವತೆಗಳನ್ನೂ ಸಕಲ ಆವರಣಸಹಿತನಾದ ಕ್ಷೇತ್ರಪಾಲಕ ಮೂರ್ತಿಯನ್ನೂ ಪೂಜಿಸಬೇಕು. ಪುತ್ರರಕ್ಷಣಕ್ಕಾಗಿ ಅರುಣಾಚಲದ ಅಭಿಮಾನಿ ದೇವತೆಯು ಪೂಜ್ಯಳು. ಈಕೆಯೇ ಮಹಾಕಾಳಿಯು. ಹೀಗೆಯೇ ಅನೇಕ ಇತರ ದೇವತೆಗಳು ಆಜ್ಞಾಧಾರಕರಾಗಿರಲಿ.

೬೯. ಪ್ರತಿಮಾಸದಲ್ಲಿಯೂ ವೈಭವಾತಿಶಯದಿಂದ ನಾನಾವಿಧಗಳಾದ ಉತ್ಸವಗಳನ್ನು ಮಾಡಬೇಕು. ಎಲೈ ಅಗಸ್ತ್ಯನೇ! ನೀನು ಶಿವಪೂಜೆಯಲ್ಲಿ ನಿರತರಾಗಿರುವಂತಹ ದಿವ್ಯ ಕನ್ಯಕೆಯರನ್ನು ಸೃಷ್ಟಿಮಾಡು.

೭೦–೭೧. ಅವರು ನೃತ್ಯಗೀತಾದಿ ಶಾಸ್ತ್ರಗಳಲ್ಲಿ ನಿಷ್ಣಾತರಾಗಿರಲಿ. ಸ್ವರೂಪದಿಂದಲೂ ಸೌಭಾಗ್ಯಲಕ್ಷಣಗಳಿಂದಲೂ ನಾನಾವಿಧಗಳಾದ ವಿಲಾಸವಿಭ್ರಮಗಳಿಂದಲೂ ಕೂಡಿದವರಾಗಿ ಸಂತೋಷದಾಯಕಿಯರೂ, ನಿತ್ಯಶುದ್ಧರೂ ಆಗಿರಬೇಕು. ನನ್ನ ಸಪರ್ಯೆಯು ದಿವ್ಯವಾಗಿ ನಡೆಯುವಂತೆ ವೇದಗಳನ್ನು ತಿಳಿದವರೂ, ಸದಾಚಾರಸಂಪನ್ನರೂ, ಸೌಭಾಗ್ಯಶಾಲಿಗಳೂ, ಶುದ್ಧಮನಸ್ಕರೂ ಆಗಿರುವ ನಿನ್ನ ಶಿಷ್ಯರಿಗೆ ಆಜ್ಞಾಪಿಸು.

ದೀಕ್ಷಿತಾನ್ನಿಮಲಾನ್ಶುದ್ಧಾನ್ಶೈವಾಗಮವಿಶಾರದಾನ್ ।
ಶೈವಾಚಾರಪ್ರಸಿದ್ಧ್ಯರ್ಥಮಾದಿಶಾಭ್ಯರ್ಚನೇ ಮಮ ॥ ೭೨ ॥
ಮಾರ್ದಲಾನ್ಶಾಂಖಿಕಾನ್ವೈಣಾನ್ತಾಲಿಕಾನ್ವೇಣುವಾದಕಾನ್ ।
ಶೌಲ್ಪಿಕಾನ್ಸೃಜ ಸದ್ವಿದ್ಯಾನ್ಚತುರ್ವಿದ್ಯಾವಿಶಾರದಾನ್ ॥ ೭೩ ॥
ಕ್ಷತ್ರಿಯಾನ್ವಿವಿಧಾನ್ವೈಶ್ಯಾನ್ಶೂದ್ರಾಂಶ್ಚ ಶಿವಸಮ್ಮತಾನ್ ।
ಚತ್ವಾರಶ್ಚ ಮಠಾಃ ಕಲ್ಪ್ಯಾಶ್ಚತುರ್ದಿಕ್ತೀರ್ಥವಾಸಿನಾಂ ॥ ೭೪ ॥
ಮುನೀನಾಂ ಶಿವಭಕ್ತಾನಾಂ ನಿರಾಶಾನಾಂ ನಿವಾಸತಃ ।
ತೇಷು ಸ್ಥಿತಾ ಮುನೀಂದ್ರಾ ಮೇ ರಕ್ಷಂತು ಶಿವಪೂಜನಂ ॥ ೭೫ ॥
ಭಿಕ್ಷಮಾಣಾಃ ಪುನಃ ಶೈವಾ ಭಕ್ತಾಃ ಪಾಶುಪತಾ ಅಪಿ ।
ಪಾಲಯಂತು ಸದಾನ್ಯೇಚ ಯುಕ್ತಾಃ ಕಾಪಾಲಿಕಾ ಅಪಿ ॥ ೭೬ ॥
ಸರ್ವೇಷಾಂ ಜಾಯಮಾನಾನಾಂ ಜಾತಾನಾಂ ಸಂಭವಿಷ್ಯತಾಂ ।
ಅವ್ಯಾಹತಾಜ್ಞಮಾರಕ್ಷ್ಯಮಿದಂ ಸ್ಥಾನಂ ಮಹೀಭೃತಾಂ ॥ ೭೭ ॥

---

೭೨. ಅವರೆಲ್ಲರೂ ದೀಕ್ಷಾಬದ್ಧರೂ, ಅಂತಃಶುದ್ಧಿ ಬಹಿಃಶುದ್ಧಿಗಳಿಂದ ಕೂಡಿದವರೂ, ಶೈವಾಗಮಗಳಲ್ಲಿ ಸಂಪೂರ್ಣ ಜ್ಞಾನವುಳ್ಳವರೂ ಆಗಿರಲಿ. ಅವರನ್ನು ಶಿವಪೂಜಾಮಹಿಮೆಯ ಪ್ರಚಾರದೃಷ್ಟಿಯಿಂದ ನನ್ನ ಪೂಜೆಯಲ್ಲಿ ನಿಯೋಜಿಸು.

೭೩. ಮೃದಂಗ, ಶಂಖ, ವೀಣಾ, ತಾಲ, ವೇಣು ಮುಂತಾದ ವಾದ್ಯ ಗಳನ್ನುಪಯೋಗಿಸುವ ವಾದಕರನ್ನೂ, ನಾಲ್ಕು ವೇದಗಳಲ್ಲಿಯೂ ಪಾರಂಗತ ರಾದ ಯಾಜ್ಞಿಕರನ್ನೂ ಸೃಜಿಸುವವನಾಗು.

೭೪–೭೫. ಶಿವಾಚಾರತತ್ಪರರಾದ ಕ್ಷತ್ರಿಯ, ವೈಶ್ಯ, ಶೂದ್ರರೇ ಮೊದಲಾದವರನ್ನು ಸೇರಿಸು. ಶಿವಭಕ್ತರಾಗಿ ಉಪವಾಸಾದಿಗಳನ್ನು ಮಾಡುವ ಮುನಿಗಳ ನಿವಾಸಕ್ಕಾಗಿ, ನಾಲ್ಕು ದಿಕ್ಕುಗಳಿಂದಲೂ ಬರುವ ತೀರ್ಥಯಾತ್ರಿಕರಿ ಗೋಸ್ಕರ, ನಾಲ್ಕು ಮಠಗಳನ್ನು ಕಟ್ಟಬೇಕು.

೭೬. ಆ ಮುನಿಶ್ರೇಷ್ಠರೇ ಶೈವರೂ ಪಾಶುಪತರೂ ಆಗಿ ಭಿಕ್ಷಾಟನದಿಂದ ದೇಹಯಾತ್ರೆಯನ್ನು ಸಾಗಿಸುತ್ತ ಆ ಮಠಗಳಲ್ಲಿ ವಾಸಮಾಡಿಕೊಂಡು ನನ್ನ ಪೂಜೆಯನ್ನು ಮಾಡಿಕೊಂಡು ಬರಲಿ.

೭೭. ಇತರ ಶಿವಭಕ್ತರೂ ಸಹ ಯಾವಾಗಲೂ ಇದನ್ನು ರಕ್ಷಿಸಲಿ. ಮುಂದೆ ಹುಟ್ಟಲಿರುವ ಅಥವ ಈಗ ಹುಟ್ಟಿ ಮುಂದೆ ಅಧಿಕಾರಕ್ಕೆ ಬರಲಿರುವ ಸಕಲ ರಾಜರಿಗೂ ಈ ಸ್ಥಳವು ಅವ್ಯಾಹತವಾಗಿ ರಕ್ಷಣಾಯೋಗ್ಯವಾಗಿರ ಬೇಕು.

ಬಕುಲಶ್ಚ ಮಹಾನತ್ರ ದೃಶ್ಯತೇ ದಿವ್ಯಭೂರುಹಃ ।
ಅತ್ರ ಭಕ್ತಾ ವಿತನ್ವನ್ತು ಶಿವಕಾರ್ಯವಿನಿಶ್ಚಯಂ ॥ ೭೮ ॥
ಅತ್ರ ಮೇ ದೀಯತೇ ದಿವ್ಯಮಪ್ರೇಕ್ಷಿತಪರಾಪ್ತಯೇ ।
ಯತ್ತದಕ್ಷಯ್ಯಫಲದಮಾರಕ್ಷ್ಯಂ ಶಿವಸೇವಕೈಃ ॥ ೭೯ ॥
ಭಕ್ತೈರ್ವಿಜ್ಞಾಪಿತಂ ಚಾರ್ಥಂ ಶ್ರೋಷ್ಯಾಮಿ ಪುರತಃ ಸ್ಥಿತೈಃ ।
ಸರ್ವಂ ಸಂಪಾದಯಿಷ್ಯಾಮಿ ತೇಷಾಂ ಚಿತ್ತಾನುಕೂಲಕಂ ॥ ೮೦ ॥
ಅಪರಾಧಸಹಸ್ರಾಣಿ ಕ್ಷಂಸ್ಯೇ ಮಾಂ ಸ್ವರ್ಚತಾಮಹಂ ।
ಆಗಮೋಕ್ತಾ ಚ ಪೂಜೇಯಂ ಮಾನುಷೀ ನಿರ್ಮಿತಾ ಯತಃ ॥ ೮೧ ॥
ಗ್ರಹೀಷ್ಯೇ ತಾಮಹಂ ಸರ್ವಾಮರ್ಚಾಂ ಸರ್ವಾಗಮೋದಿತಾಂ ।
ಸಂಕಲ್ಪಿತಂ ಭವೇತ್ಕರ್ಮ ಪ್ರೀತಿಕೃನ್ಮಮ ಸೇವಕೈಃ ॥ ೮೨ ॥
ಆಗಮಾರ್ಥಾನಶೇಷಾಂಸ್ತ್ವಮವಲೋಕ್ಯ ಸಮಯೋಚಿತಾನ್ ।
ವಿಧಾಯಾಭ್ಯರ್ಚನಾಭೇದಾನ್ಲೋಕರಕ್ಷಾಕೃತೇ ಮುನೇ ॥ ೮೩ ॥
ಕರ್ತವ್ಯಾ ಮಹತೀ ಪೂಜಾ ಪೌರ್ಣಮಾಸ್ಯಾಂ ತು ಸಾದರಂ ॥ ೮೪ ॥

---

೭೮. ಇಲ್ಲಿಯೇ ದಿವ್ಯವಾದ ಬಕುಳವೃಕ್ಷವು ಕಾಣುತ್ತಿರುವುದು. ಅದರಡಿಯಲ್ಲಿ ಭಕ್ತರೆಲ್ಲರೂ ಸೇರಿ ಅರ್ಚನಾಕಾರ್ಯಕ್ರಮಗಳನ್ನು ನಿಶ್ಚಯಮಾಡಿಕೊಳ್ಳಲಿ.

೭೯. ಇತರರಿಗೆ ಕಾಣದೆ ಪುಣ್ಯಪ್ರಾಪ್ತಿಯ ಇಚ್ಛೆಯಿಂದ ಕೊಡಲ್ಪಡುವ ಗುಪ್ತ ಧನದಾನವು ಈ ಸ್ಥಳದಲ್ಲಿ ಅಕ್ಷಯ ಫಲದಾಯಕವಾಗುವುದು. ಆದುದರಿಂದ ಶಿವಭಕ್ತರು ಅದನ್ನು ಸರ್ವಥಾ ರಕ್ಷಿಸಬೇಕು.

೮೦. ಮುಂದೆ ನಿಂತು ಬಿನ್ನವಿಸಿಕೊಳ್ಳುವ ಭಕ್ತರ ಇಷ್ಟಾರ್ಥಗಳನ್ನು ನಾನು ನಿಂತು ಕೇಳುತ್ತೇನೆ. ಅಲ್ಲದೆ ಅವರ ಮನಸ್ಸಿಗೆ ಅನುಕೂಲವಾಗುವಂತೆ ಸಕಲವನ್ನೂ ಅನುಗ್ರಹಿಸುವೆನು.

೮೧. ನನ್ನನ್ನು ನಿರ್ಮಲಭಕ್ತಿಯಿಂದ ಪೂಜೆಮಾಡುವ ಭಕ್ತರ ಸಾವಿರ ಅಪರಾಧಗಳನ್ನಾದರೂ ನಾನು ಕ್ಷಮಿಸುತ್ತೇನೆ. ಆದುದರಿಂದಲೇ ಆಗಮೋಕ್ತವಾದ ಈ ಪೂಜೆಯು ಮನುಷ್ಯರಿಗಾಗಿ ಮಾಡಲ್ಪಟ್ಟಿದೆ.

೮೨. ಸಕಲಾಗಮಗಳಿಂದಲೂ ಮಾಡಿದ ನಾನಾವಿಧ ಪೂಜೆಗಳನ್ನೂ ನಾನೇ ಸ್ವೀಕರಿಸುತ್ತೇನೆ. ಭಕ್ತರಿಂದ ಮನಃಪೂರ್ವಕವಾಗಿ ಮಾಡಲ್ಪಟ್ಟ ಯಾವ ಕರ್ಮವಾದರೂ ನನಗೆ ಪ್ರೀತಿಕರವು.

೮೩–೮೪. ಸಕಲ ಆಗಮಗಳ ಅರ್ಥಗಳನ್ನೂ ನೀನು ನಿಶ್ಶೇಷವಾಗಿ ವಿಚಾರಿಸಿ ಲೋಕರಕ್ಷಣೆಯ ಕಾರ್ಯಾರ್ಥವಾಗಿ ಸಮಯಾನುಕೂಲಗಳಾದ

ಸತ್ರಾಣಿ ವಿವಿಧಾನ್ಯತ್ರ ಕರ್ತವ್ಯಾನಿ ಸಹಸ್ರಶಃ ।
ವಿವಿಧಾನಿ ಚ ದಾನಾನಿ ಶಕ್ತ್ಯಾ ಚೈವಾಸ್ಯ ಸನ್ನಿಧೌ ॥ ೮೫ ॥
ಅವ್ಯುಚ್ಛಿನ್ನಪ್ರದೀಪಸ್ಯ ದಾತಾರೋ ಮಮ ಸನ್ನಿಧೌ ।
ತೇಜೋಮಯಮಿದಂ ರೂಪಂ ಮಮ ಯಾಂತಿ ನ ಸಂಶಯಃ ॥ ೮೬ ॥
ಜಲಜಂ ತರುಜಂ ಪುಷ್ಪಂ ಕಕ್ಷಜಂ ಚ ಲತೋದ್ಭವಂ ।
ದದತೇ ಯೇ ಚ ಭಕ್ತ್ಯಾ ಮೇ ತೇ ಭವಿಷ್ಯಂತಿ ಭೂಭೃತಃ ॥ ೮೭ ॥
ತೇಷಾಂ ಪುರೋ ಗತಃ ಸಾಕ್ಷಾದಹಂ ಜೇಷ್ಯಾಮಿ ವಿದ್ವಿಷಃ ।
ಯಸ್ಯ ಯಸ್ಯ ತು ದೇಶಸ್ಯ ಯೋ ಯೋ ರಾಜಾ ತಪೋಽಧಿಕಃ ।
ತತ್ತತ್ಸಮರ್ಥಿತಂ ರಮ್ಯಂ ಸಂಭವಂ ದದತೇಽತ್ರ ಮೇ ॥ ೮೮ ॥
ಮತ್ಸನ್ನಿಧಿಮುಪಾಗತ್ಯ ದುರಾತ್ಮಾನೋಽಪಿ ಭೂಮಿಪಾಃ ॥ ೮೯ ॥
ಶಿವಭಕ್ತಾ ಭೃಶಂ ಪೂರ್ಣಾ ಭವಿಷ್ಯಂತಿ ನ ಸಂಶಯಃ ॥ ೯೦ ॥

---

ಪೂಜಾಭೇದಗಳನ್ನು ವಿಧಾಯಕಮಾಡಿ ಪೂರ್ಣಿಮಾ ತಿಥಿಯಲ್ಲಿ ವಿಶೇಷ ಪೂಜೆಯನ್ನು ಶ್ರದ್ಧೆಯಿಂದ ಮಾಡುವವನಾಗು.

೮೫. ಈ ಲಿಂಗದ ಸನ್ನಿಧಿಯಲ್ಲಿಯೇ ವಿಧ ವಿಧಗಳಾದ ಸಾವಿರಾರು ಯಜ್ಞಗಳು ನಡೆಯಲಿ. ಸಕಲ ವಿಧಗಳಾದ ದಾನಗಳೂ ಯಥಾಶಕ್ತಿಯಾಗಿ ಕೊಡಲ್ಪಡಲಿ.

೮೬. ನನ್ನ ಸನ್ನಿಧಿಯಲ್ಲಿ ಅಖಂಡ ದೀಪದ ಸೇವೆಯನ್ನು ಮಾಡಿಸುವವರು ನನ್ನ ಈ ತೇಜೋಮಯವಾದ ರೂಪವನ್ನೇ ಹೊಂದುವರು. ಇದರಲ್ಲಿ ಸಂಶಯವಿಲ್ಲವು.

೮೭. ನೀರಿನಲ್ಲಾಗಲಿ, ವೃಕ್ಷಗಳಲ್ಲಾಗಲಿ, ಗುಲ್ಮಲತೆಗಳಲ್ಲಾಗಲಿ ದೊರೆತ ಹೂವುಗಳನ್ನು ಭಕ್ತಿಯಿಂದ ಅರ್ಪಿಸುವ ಭಕ್ತರು ಮಹಾರಾಜರಾಗುತ್ತಾರೆ.

೮೮. ಅವರಿಗೆ ಮುಂದಾಳಾಗಿಯೇ ಹೋಗಿ ನಾನು ಅವರ ಶತ್ರುಗಳನ್ನು ಜಯಿಸುವೆನು. ಯಾವ ಯಾವ ದೇಶದ ಉತ್ಪನ್ನ ಪದಾರ್ಥಗಳನ್ನು ಯಾವ ಯಾವ ರಾಜನು ಇಲ್ಲಿ ನನಗೆ ಅರ್ಪಣೆಮಾಡುತ್ತಾನೆಯೋ ಅವನ ರಾಜ್ಯವು ಸಮೃದ್ಧಿ ಸಹಿತವೂ, ಮನೋಹರವೂ ಆಗಿರುವುದು.

೮೯–೯೦. ನನ್ನ ಸನ್ನಿಧಿಗೆ ಬಂದವರು ದುರಾತ್ಮರಾಗಿದ್ದರೂ ಸಹ ಅವರು ರಾಜರೂ, ಶಿವಭಕ್ತರೂ ಸರ್ವಸಂಪದ್ಯುಕ್ತರೂ ಆಗುತ್ತಾರೆ. ಇದರಲ್ಲಿ ಸಂಶಯವೇ ಇಲ್ಲವು.

ಇತಿ ಶಂಭುಮುಖೋತ್ಥಿತಂ ವಚಃ
ಸಮುಪಶ್ರುತ್ಯ ವಿಧೂತ ಕಲ್ಮಷಃ ।
ಅಹಮಾನತವಾನ್ವ್ಯಜಿಜ್ಞಪಂ
ಕುತುಕಾಚ್ಛೋಣಗಿರೀಶ್ವರಂ ಶಿವಂ ॥ ೯೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಪೂರ್ವಾರ್ಧೇ "ಅರುಣಾಚಲೇಶ್ವರಾರಾಧನ ಮಾಹಾತ್ಮ್ಯವರ್ಣನಂ" ನಾಮ ಅಷ್ಟಮೋಽಧ್ಯಾಯಃ

---

೯೧. ಈ ರೀತಿಯಾದ ಪರಮೇಶ್ವರನ ಮುಖದಿಂದ ಹೊರಟ ಮಾತುಗಳನ್ನು ಕೇಳಿ ಪಾಪರಹಿತನಾಗಿ ನಾನು ಕೌತುಕದಿಂದ ನಮಸ್ಕಾರಮಾಡಿ ಅರುಣಾಚಲೇಶ್ವರನಲ್ಲಿ ಈ ರೀತಿ ವಿಜ್ಞಾಪಿಸಿದೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಪೂರ್ವಾರ್ಧದಲ್ಲಿ "ಅರುಣಾಚಲೇಶ್ವರಾರಾಧನ ಮಾಹಾತ್ಮ್ಯವರ್ಣನ" ವೆಂಬ ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ನವಮೋಽಧ್ಯಾಯಃ

### ಅರುಣಾಚಲೇಶ್ವರ ಪ್ರದಕ್ಷಿಣಮಾಹಾತ್ಮ್ಯವರ್ಣನಂ

ಗೌತಮ ಉವಾಚ :—

ಭಗವನ್ನರುಣಾದ್ರೀಶ ನಾಮಧೇಯಾನಿ ತೇ ಭೃಶಂ ।
ವಿಶೇಷಾಚ್ಛ್ರೋತುಮಿಚ್ಛಾಮಿ ಸ್ಥಾನೇಽಸ್ಮಿನ್ಸುರಪೂಜಿತೇ ॥ ೧ ॥

ಮಹೇಶ್ವರ ಉವಾಚ :—

ನಾಮಾನಿ ಶೃಣು ಮೇ ಬ್ರಹನ್ಮುಖ್ಯಾನಿ ದ್ವಿಜಸತ್ತಮ ।
ದುರ್ಲಭಾನ್ಯಲ್ಪಪುಣ್ಯಾನಾಂ ಕಾಮದಾನಿ ಸದಾ ಭುವಿ ॥ ೨ ॥
ಶೋಣಾದ್ರೀಶೋಽರುಣಾದ್ರೀಶೋ ದೇವಾಧೀಶೋ ಜನಪ್ರಿಯಃ ।
ಪ್ರಪನ್ನರಕ್ಷಕೋ ಧೀರಃ ಶಿವಸೇವಕವರ್ಧಕಃ ॥ ೩ ॥
ಅಕ್ಷಿಪೇಯಾಮೃತೇಶಾನಃ ಸ್ತ್ರೀಪುಂಭಾವಪ್ರದಾಯಕಃ ।
ಭಕ್ತವಿಜ್ಞಪ್ತಿಸಂಧಾತಾ ದೀನಬಂದಿವಿಮೋಚಕಃ ॥ ೪ ॥
ಮುಖರಾಂಘ್ರಿಪತಿಃ ಶ್ರೀಮಾನ್ಮುಂಡೋ ಮೃಗಮದೇಶ್ವರಃ ।
ಭಕ್ತಪ್ರೇಕ್ಷಣಕೃತ್ಸಾಕ್ಷೀ ಭಕ್ತದೋಷನಿವರ್ತಕಃ ॥ ೫ ॥

---

### ಕನ್ನಡದ ಅನುವಾದ

### ಅರುಣಾಚಲೇಶ್ವರ ಪ್ರದಕ್ಷಿಣೆಯ ಮಾಹಾತ್ಮ್ಯವರ್ಣನ

೧. ಗೌತಮನು ಹೇಳುತ್ತಾನೆ:—'ಎಲೈ ಅರುಣಾಚಲೇಶ್ವರನೆ! ದೇವಪೂಜಿತವಾದ ಈ ಕ್ಷೇತ್ರವನ್ನಲಂಕರಿಸಿರುವ ನಿನ್ನ ನಾಮಭೇದಗಳನ್ನು ವಿಶೇಷವಾಗಿ ತಿಳಿದುಕೊಳ್ಳಲು ಕುತೂಹಲವುಳ್ಳವನಾಗಿದ್ದೇನೆ. ಅಪ್ಪಣೆಯಾಗಬೇಕು.'

೨. ಮಹೇಶ್ವರನು ಹೇಳುತ್ತಾನೆ:— "ಎಲೈ ಬ್ರಾಹ್ಮಣೋತ್ತಮನೆ! ಮುಖ್ಯವಾದ ಕೆಲವು ನಾಮಗಳನ್ನು ಹೇಳುವೆನು ಕೇಳು. ಪುಣ್ಯಹೀನರಿಗೆ ಈ ನಾಮಗಳು ದುರ್ಲಭಗಳಾಗಿವೆ. ಇವು ಭಕ್ತರಿಗೆ ಇಷ್ಟಾರ್ಥದಾಯಕಗಳಾದುವು.

೩-೧೫. ಶೋಣಾದ್ರೀಶ, ಅರುಣಾದ್ರೀಶ, ದೇವಾಧೀಶ, ಜನಪ್ರಿಯ, ಪ್ರಪನ್ನರಕ್ಷಕ, ಧೀರ, ಶಿವಸೇವಕವರ್ಧಕ, ಅಕ್ಷಿಪೇಯ, ಅಮೃತೇಶಾನ, ಹೆಣ್ಣು ಗಂಡು ಭಾವನೆಗಳನ್ನು ದಯೆಗೈಯುವವನು, ಭಕ್ತಿಯಿಂದ ಅರಿಕೆಮಾಡಿಕೊಂಡುದನ್ನು ಕೊಡುವವನು, ದೀನರ ಬಂಧನವನ್ನು ಬಿಡುಗಡೆಮಾಡುವವನು, ಮುಖರಾಂಘ್ರೀದೇವಿಯ ಪತಿ, ಶ್ರೀಮಂತ, ಮುಂಡ, ಮೃಗಮದೇಶ್ವರ, ಭಕ್ತರಿಗೆ ಮೈದೋರುವವನು, ಲೋಕಸಾಕ್ಷಿ, ಭಕ್ತರ ದೋಷಗಳನ್ನು ಕಳೆಯು

ಜ್ಞಾನಸಂಬಂಧನಾಥಶ್ಚ ಶ್ರೀಹಲಾಹಲಸುಂದರಃ ।
ಆಹವೈಶ್ವರ್ಯದಾತಾ ಚ ಸ್ಮರ್ತೃಸರ್ವಾಘನಾಶನಃ ॥ ೬ ॥
ವ್ಯತ್ಯಸ್ತನೃತ್ಯಧ್ವಜಧೃಕ್ಸಕಾಂತಿನಟನೇಶ್ವರಃ ।
ಸಾಮಪ್ರಿಯಃ ಕಲಿಧ್ವಂಸೀ ವೇದಮೂರ್ತಿರ್ನಿರಂಜನಃ ॥ ೭ ॥
ಜಗನ್ನಾಥೋ ಮಹಾದೇವಸ್ತ್ರಿನೇತ್ರಸ್ತ್ರಿಪುರಾಂತಕಃ ।
ಭಕ್ತಾಪರಾಧಸೋಢಾ ಚ ಯೋಗೀಶೋ ಭೋಗನಾಯಕಃ ॥ ೮ ॥
ಬಾಲಮೂರ್ತಿಃ ಕ್ಷಮಾರೂಪೀ ಧರ್ಮರಕ್ಷೋ ವೃಷಧ್ವಜಃ ।
ಹರೋ ಗಿರೀಶ್ವರೋ ಭರ್ಗಶ್ಚಂದ್ರರೇಖಾವತಂಸಕಃ ॥ ೯ ॥
ಸ್ಮರಾಂತಕೋಽಂಧಕರಿಪುಃ ಸಿದ್ಧರಾಜೋ ದಿಗಂಬರಃ ।
ಆಗಮಪ್ರಿಯ ಈಶಾನೋ ಭಸ್ಮರುದ್ರಾಕ್ಷಲಾಂಛನಃ ॥ ೧೦ ॥
ಶ್ರೀಪತಿಃ ಶಂಕರಃ ಸ್ರಷ್ಟಾ ಸರ್ವವಿದ್ಯೇಶ್ವರೋಽನಘಃ ।
ಗಂಗಾಧರಃ ಕ್ರತುಧ್ವಂಸೋ ವಿಮಲೋ ನಾಗಭೂಷಣಃ ॥ ೧೧ ॥
ಅರುಣೋ ಬಹುರೂಪಶ್ಚ ವಿರೂಪಾಕ್ಷೋಽಕ್ಷರಾಕೃತಿಃ ।
ಅನಾದಿರಂತರಹಿತಃ ಶಿವಕಾಮಃ ಸ್ವಯಂಪ್ರಭುಃ ॥ ೧೨ ॥
ಸಚ್ಚಿದಾನಂದರೂಪಶ್ಚ ಸರ್ವಾತ್ಮಾ ಜೀವಧಾರಕಃ ।
ಸ್ತ್ರೀಸಂಗವಾಮಸುಭಗೋ ವಿಧಿರ್ವಿಹಿತಸುಂದರಃ ॥ ೧೩ ॥
ಜ್ಞಾನಪ್ರದೋ ಮುಕ್ತಿದಶ್ಚ ಭಕ್ತವಾಂಛಿತದಾಯಕಃ ।
ಆಶ್ಚರ್ಯವೈಭವಃ ಕಾಮೀ ನಿರವದ್ಯೋ ನಿಧಿಪ್ರದಃ ॥ ೧೪ ॥

---

ವವನು, ಜ್ಞಾನಸಂಬಂಧಕ್ಕೊಡೆಯನು, ಹಾಲಾಹಲವನ್ನು ಸವಿದವನು, ವ್ಯತ್ಯಸ್ತ ನರ್ತಕನಾಗಿ ಧ್ವಜವನ್ನು ಧರಿಸಿ ಮಹಾಕಾಂತಿಯುಕ್ತನಾಗಿರುವ ನಟನೇಶ್ವರನು, ಸಾಮವೇದಪ್ರಿಯನು, ಕಲಿಯನ್ನು ಧ್ವಂಸಗೊಳಿಸುವವನು, ವೇದಮೂರ್ತಿಯು, ನಿರಂಜನನು, ಜಗನ್ನಾಥನು, ಮಹಾದೇವನು, ಮುಕ್ಕಣ್ಣನು, ತ್ರಿಪುರಾಂತಕ, ಭಕ್ತರ ಅಪರಾಧಗಳನ್ನು ಸಹಿಸುವವನು, ಯೋಗೀಶನು, ಭೋಗನಾಯಕನು, ಬಾಲಮೂರ್ತಿಯು, ಕ್ಷಮೆಯೇ ರೂಪಾಗಿರುವವನು, ಧರ್ಮರಕ್ಷಕನು, ವೃಷಭ ವಾಹನನು, ಹರ, ಗಿರೀಶ್ವರ, ಭರ್ಗ, ಚಂದ್ರಶೇಖರ, ಮದನಾರಿ, ಅಂಧಕರಿಪು, ಸಿದ್ಧರಾಜ, ದಿಗಂಬರ, ಆಗಮಪ್ರಿಯ, ಈಶಾನ, ಭಸ್ಮರುದ್ರಾಕ್ಷಲಾಂಛನ, ಶ್ರೀಪತಿ, ಶಂಕರ, ಸ್ರಷ್ಟೃ, ಸರ್ವವಿದ್ಯೇಶ್ವರ, ಅನಘ, ಗಂಗಾಧರ, ದಕ್ಷ ಯಾಗಧ್ವಂಸಕ, ವಿಮಲ, ನಾಗಭೂಷಣ, ಅರುಣ, ಬಹುರೂಪ, ವಿರೂಪಾಕ್ಷ, ಅಕ್ಷರಾಕೃತಿ, ಅನಾದಿ, ಅಂತರಹಿತ, ಶಿವಕಾಮ, ಸ್ವಯಂಪ್ರಭು, ಸಚ್ಚಿದಾ ನಂದರೂಪ, ಸರ್ವಾತ್ಮ, ಜೀವಧಾರಕ, ಸ್ತ್ರೀಸಂಗಸುಂದರಸುಭಗ, ವಿಧಿ, ವಿಹಿತಸುಂದರ, ಜ್ಞಾನಪ್ರದ, ಮುಕ್ತಿಪ್ರದ, ಭಕ್ತವಾಂಛಾಪ್ರದ, ಆಶ್ಚರ್ಯ

ಶೂಲೀ ಪಶುಪತಿಃ ಶಂಭುಃ ಸ್ವಯಂಭುರ್ಗಿರಿಶೋ ಮೃಡಃ ।
ಏತಾನಿ ಮಮ ಮುಖ್ಯಾನಿ ನಾಮಾನ್ಯತ್ರಮಹಾಮುನೇ ॥ ೧೫ ॥
ಅನ್ಯಾನಿ ದಿವ್ಯನಾಮಾನಿ ಪುರಾಣೋಕ್ತಾನಿ ಸಂಸ್ಮರ ।
ಪ್ರದಕ್ಷಿಣೇನ ಮಾಂ ನಿತ್ಯಂ ವಿಶೇಷಾತ್ತ್ವಂ ಸಮರ್ಚಯ ॥ ೧೬ ॥
ಪ್ರದಕ್ಷಿಣಪ್ರಿಯೋ ಯಸ್ಮಾದಹಂ ಶೋಣಾಚಲಾಕೃತಿಃ ।
ಇತ್ಯಾಜ್ಞಪ್ತೋ ಮಹಾದೇವಮರ್ಚಯನ್ನರುಣಾಚಲಂ ।
ಅವಿಮುಂಚನ್ನಿಹಾವಾಸಂ ಕೃತವಾನಹಮದ್ರಿಜೇ ॥ ೧೭ ॥

ಗೌರ್ಯುವಾಚ :—

ಭಗವನ್ಸರ್ವಧರ್ಮಜ್ಞ ಗೌತಮಾರ್ಯಮುನೀಶ್ವರ ।
ಪ್ರದಕ್ಷಿಣಸ್ಯ ಮಾಹಾತ್ಮ್ಯಂ ಬ್ರೂಹಿ ಮೇ ಶೋಣಭೂಭೃತಃ ॥ ೧೮ ॥
ಕಸ್ಮಿನ್‍ಕಾಲೇ ಕಥಂ ಕಾರ್ಯಂ ಕೈರ್ವಾ ಪೂರ್ವಂ ಪ್ರದಕ್ಷಿಣಂ ।
ಕೃತಂ ಶೋಣಾದ್ರಿನಾಥಸ್ಯ ಪ್ರಾಪ್ತಮಿಷ್ಟಂ ಪರಂ ಪದಂ ॥ ೧೯ ॥

---

ವೈಭವ, ಕಾಮಿನಿ, ರವದ್ಯ, ನಿಧಿಪ್ರದ, ಶೂಲಿ, ಪಶುಪತಿ, ಶಂಭು, ಸ್ವಯಂಭು, ಗಿರೀಶ, ಮೃಡ—ಇವುಗಳೇ ನನಗೆ ಈ ಕ್ಷೇತ್ರದಲ್ಲಿ ಮುಖ್ಯಗಳಾದ ನಾಮುಗಳಾಗಿರುವುವು.

೧೬. ಪುರಾಣಗಳಲ್ಲಿ ಹೇಳಿರತಕ್ಕ ಇತರ ಅನೇಕ ದಿವ್ಯನಾಮುಗಳನ್ನೂ ಸ್ಮರಿಸಿಕೊಂಡು ನಿತ್ಯದಲ್ಲಿಯೂ ನನ್ನನ್ನು ವಿಶೇಷ ರೀತಿಯ ಪ್ರದಕ್ಷಿಣೆಯಿಂದ ಸೇವೆಯನ್ನು ಮಾಡು.

೧೭. ಅರುಣಾಚಲಾಕಾರನಾದ ನನಗೆ ಪ್ರದಕ್ಷಿಣೆಯಲ್ಲಿಯೇ ವಿಶೇಷ ಪ್ರೀತಿಯು.'' ಹೀಗೆ ಮಹಾದೇವನಿಂದ ಆಜ್ಞಪ್ತನಾಗಿ ಇಲ್ಲಿಯೇ ಅರುಣಾಚಲೇಶ್ವರನನ್ನು ಸೇವಿಸುತ್ತ ನಿರಂತರದಲ್ಲಿಯೂ ವಾಸಮಾಡುವವನಾಗಿದ್ದೇನೆ.

೧೮. ಗೌರಿಯು ಕೇಳುತ್ತಾಳೆ :—ಗೌತಮನೇ! ನೀನು ಷಡ್ಗುಣೈಶ್ವರ್ಯವಂತನೂ, ಸಕಲ ಧರ್ಮಗಳನ್ನು ತಿಳಿದವನೂ, ವೃದ್ಧನೂ, ಮುನಿಶ್ರೇಷ್ಠನೂ ಆಗಿರುವೆ. ಈ ಅರುಣಾಚಲದ ಪ್ರದಕ್ಷಿಣೆಯ ಮಾಹಾತ್ಮ್ಯವನ್ನು ಹೇಳುವವನಾಗು.

೧೯. 'ಯಾವ ಕಾಲದಲ್ಲಿ ಹೇಗೆ ಪ್ರದಕ್ಷಿಣೆಯನ್ನು ಮಾಡಬೇಕು? ಪೂರ್ವದಲ್ಲಿ ಅರುಣಗಿರಿನಾಥನ ಪ್ರದಕ್ಷಿಣೆಯನ್ನು ಯಾರು ಮಾಡಿ ಇಷ್ಟಾರ್ಥಗಳನ್ನೂ ಮೋಕ್ಷವನ್ನೂ ಪಡೆದರು?'

ಬ್ರಹ್ಮೋವಾಚ :—

ಇತಿ ಪೃಷ್ಟೋ ಮುನಿಃ ಪ್ರಾಹ ಗೌತಮಃ ಶೈಲಕನ್ಯಕಾಂ ।
ಶ್ರೂಯತಾಂ ದೇವಿ ಮಾಹಾತ್ಮ್ಯಮಾದಿಶನ್ಮೇ ಮಹೇಶ್ವರಃ ॥ ೨೦ ॥

ಮಹಾದೇವ ಉವಾಚ :—

ಅಹಂ ಹಿ ಶೋಣಶೈಲಾತ್ಮಾ ಪ್ರಕಾಶೋ ವಸುಧಾತಲೇ ॥ ೨೧ ॥
ಪರಿತೋ ಮಾಂ ಸುರಾಃ ಸರ್ವೇ ವರ್ತಂತೇ ಮುನಿಭಿಸ್ಸಹ ॥ ೨೨ ॥
ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ।
ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣಪದೇ ಪದೇ ॥ ೨೩ ॥
ಅಶ್ವಮೇಧಸಹಸ್ರಾಣಿ ವಾಜಪೇಯಾಯುತಾನಿ ಚ ।
ಸಿದ್ಧ್ಯಂತಿ ಸರ್ವತೀರ್ಥಾನಿ ಪ್ರದಕ್ಷಿಣ ಪದೇ ಪದೇ ॥ ೨೪ ॥

ಅಪಿಪ್ರಹೀಣಸ್ಯ ಸಮಸ್ತಲಕ್ಷಣೈಃ
ಕ್ರಿಯಾವಿಹೀನಸ್ಯ ನಿಕೃಷ್ಟಜನ್ಮನಃ ।
ಪ್ರದಕ್ಷಿಣೀಕೃತ್ಯ ಶಶಾಂಕಶೇಖರಂ
ಪ್ರಯಾಸ್ಯತಃ ಕಸ್ಯ ನ ಸಿದ್ಧಿರಗ್ರತಃ ॥ ೨೫ ॥

---

೨೦. ಬ್ರಹ್ಮನು ಹೇಳುತ್ತಾನೆ:— ಇಂತೆಂದ ಗಿರಿಜೆಯನ್ನು ಕುರಿತು ಗೌತಮನು ಹೇಳುತ್ತಾನೆ:— ಎಲೌ ದೇವಿಯೆ! ಈ ಮಾಹಾತ್ಮ್ಯವನ್ನು ಮಹೇಶ್ವರನೇ ನನಗೆ ಹೇಳಿರುವನು; ಕೇಳು.

೨೧–೨೨. ಮಹೇಶ್ವರನು ಹೇಳಿದುದು:—"ನಾನು ಭೂಲೋಕದಲ್ಲಿ ಅರುಣಾಚಲೇಶ್ವರನಾಗಿ ನೆಲಸಿರುವೆನು. ನನ್ನ ಸುತ್ತಲೂ ಮಹರ್ಷಿಗಳೂ ದೇವತೆಗಳೂ ಸೇವಿಸುತ್ತಿರುವರು.

೨೩. ಮನುಷ್ಯನಿಂದ ಜನ್ಮಾಂತರಗಳಲ್ಲಿ ಯಾವ ಯಾವ ಪಾಪಗಳು ಮಾಡಲ್ಪಟ್ಟಿರುವುವೊ ಅವುಗಳೆಲ್ಲವೂ ಪ್ರದಕ್ಷಿಣೆಯ ಹೆಜ್ಜೆ ಹೆಜ್ಜೆಗೂ ನಾಶ ಹೊಂದುತ್ತವೆ.

೨೪. ಪ್ರದಕ್ಷಿಣೆಯನ್ನು ಮಾಡುವುದರಿಂದ ಸಾವಿರ ಅಶ್ವಮೇಧಗಳ ಫಲವೂ, ಹತ್ತುಸಾವಿರ ವಾಜಪೇಯಗಳ ಮತ್ತು ಸರ್ವತೀರ್ಥ ಸ್ನಾನಗಳ ಫಲವೂ ಒಮ್ಮೆಲೆ ಸಿದ್ಧಿಸುವುವು.

೨೫. ಸಕಲ ಶುಭಲಕ್ಷಣಹೀನನೂ, ವೈದಿಕಕ್ರಿಯಾವರ್ಜಿತನೂ, ನೀಚ ಜಾತಿಯಲ್ಲಿ ಹುಟ್ಟಿದವನೂ ಆದರೂ ಸಹ ಚಂದ್ರಶೇಖರನನ್ನು ಪ್ರದಕ್ಷಿಣೆಮಾಡಿ ಹೊರಡುವ ಮನುಷ್ಯನ ಮುಂದೆಯೇ ಸಕಲ ಸಿದ್ಧಿಗಳೂ ಇರುವುವು.

ಸಮಸ್ತತೀರ್ಥಾಭಿಗಮೇಷು ಪುಣ್ಯಂ
ಸಮಸ್ತಯಜ್ಞಾಗಮಧರ್ಮಜಾತಂ ।
ಅವಾಪ್ಯತೇ ಶೋಣಮಹೀಧರಸ್ಯ
ಪ್ರದಕ್ಷಿಣಾಪ್ರಕ್ರಮಣೇನ ಸತ್ಯಂ ॥ ೨೬ ॥
ಪದೇನೈಕೇನ ಭೂಲೋಕಂ ದ್ವಿತೀಯೇನಾಂತರಿಕ್ಷಕಂ ।
ತೃತೀಯೇನ ದಿವಂ ಮರ್ತ್ಯೋ ಜಯತ್ಯಸ್ಯ ಪ್ರದಕ್ಷಿಣೇ ॥ ೨೭ ॥
ಏಕೇನ ಮಾನಸಂ ಪಾಪಂ ದ್ವಿತೀಯೇನ ತು ವಾಚಿಕಂ ।
ಕಾಯಿಕಂ ತು ತೃತೀಯೇನ ಪದೇನ ಕ್ಷೀಯತೇ ನೃಣಾಂ ॥ ೨೮ ॥
ಪಾತಕಾನಿ ಚ ಸರ್ವಾಣಿ ಪದೇನೈಕೇನ ಮಾರ್ಜಯೇತ್ ।
ದ್ವಿತೀಯೇನ ತಪಃ ಸರ್ವಂ ಪ್ರಾಪ್ನೋತ್ಯಸ್ಯ ಪ್ರದಕ್ಷಿಣಾತ್ ॥ ೨೯ ॥
ಪರ್ಣಶಾಲಾ ಮಹರ್ಷೀಣಾಂ ಸಿದ್ಧಾನಾಂ ಚ ಸಹಸ್ರಶಃ ।
ಸುರಾಣಾಂ ಚ ತಥಾವಾಸಾ ವಿದ್ಯಂತೇಽತ್ರ ಸಹಸ್ರಶಃ ॥ ೩೦ ॥
ಅತ್ರ ಸಿದ್ಧಃ ಪುನರ್ನಿತ್ಯಂ ವಸಾಮ್ಯಗ್ರೇ ಸುರಾರ್ಚಿತಃ ।
ಮಮಾಂತರೇ ಗುಹಾ ದಿವ್ಯಾ ಧ್ಯಾತವ್ಯಾ ಭೋಗಸಂಯುತಾ ॥ ೩೧ ॥

---

೨೬. ಸಕಲ ತೀರ್ಥಗಳ ಸೇವೆಯಿಂದಾಗುವ ಪುಣ್ಯವೂ ಸರ್ವ ಯಜ್ಞಗಳನ್ನು ಮಾಡಿದ ಪುಣ್ಯವೂ ಈ ಅರುಣಾಚಲದ ಪ್ರದಕ್ಷಿಣೆಯಿಂದ ಮನುಷ್ಯನಿಗೆ ಲಭಿಸುವುವು. ಇದು ಸತ್ಯ.

೨೭. ಈ ಪ್ರದಕ್ಷಿಣ ಕ್ರಮದಲ್ಲಿ ಮೊದಲನೆಯ ಹೆಜ್ಜೆಯಿಂದ ಭೂಲೋಕವನ್ನೂ, ಎರಡನೆಯದರಿಂದ ಅಂತರಿಕ್ಷವನ್ನೂ, ಮೂರನೆ ಪಾದದಿಂದ ಸ್ವರ್ಗವನ್ನೂ ಮನುಷ್ಯನು ಜಯಿಸುವನು.

೨೮. ಒಂದು ಹೆಜ್ಜೆಯಿಂದ ಮಾನಸಿಕ ಪಾಪಗಳನ್ನೂ, ಎರಡನೆಯದರಿಂದ ವಾಚಿಕ ಪಾಪಗಳನ್ನೂ, ಮೂರನೆಯದರಿಂದ ಕಾಯಿಕ ಪಾಪಗಳನ್ನೂ ಮಾನವರು ಕಳೆದುಕೊಳ್ಳುವರು.

೨೯. ಈ ಅರುಣಾಚಲದ ಪ್ರದಕ್ಷಿಣೆಯಲ್ಲಿ ಮೊದಲನೆಯ ಹೆಜ್ಜೆಯಿಂದಲೇ ಸಕಲ ಪಾಪಗಳನ್ನೂ ಕಳೆದುಕೊಳ್ಳಬೇಕು. ಎರಡನೆಯ ಹೆಜ್ಜೆಯಿಂದ ಸಕಲ ತಪಸ್ಸುಗಳ ಫಲವನ್ನೂ ನರನು ಹೊಂದುತ್ತಾನೆ.

೩೦. ಈ ಶೈಲದಲ್ಲಿ ಸಾವಿರಾರು ಮಹರ್ಷಿಗಳ ಮತ್ತು ಸಿದ್ಧರ ಪರ್ಣಶಾಲೆಗಳೂ, ದೇವತೆಗಳ ನಿವಾಸಸ್ಥಾನಗಳೂ ನೆಲೆಗೊಂಡಿರುವುವು.

೩೧. ಈ ಪರ್ವತದ ತುದಿಯಲ್ಲಿ ನಾನು ಸಿದ್ಧನಾಗಿ ಸರ್ವಕಾಲದಲ್ಲಿಯೂ ದೇವತೆಗಳ ಪೂಜೆಯನ್ನು ಸ್ವೀಕರಿಸುತ್ತ ವಾಸಮಾಡುತ್ತೇನೆ. ನನ್ನ ಸಮೀಪದಲ್ಲಿ ದಿವ್ಯಭೋಗಗಳಿಂದೊಡಗೂಡಿದ ಗುಹೆಯನ್ನು ಧ್ಯಾನಿಸಬೇಕು.

ಅಗ್ನಿಸ್ತಂಭಮಯಂ ರೂಪಮರುಣಾದ್ರಿರಿತಿ ಶ್ರುತಂ ।
ಧ್ಯಾಯನ್ಲಿಂಗಂ ಮಮ ಬೃಹನ್ಮಂದಂ ಕುರ್ಯಾತ್ಪ್ರದಕ್ಷಿಣಂ ॥ ೩೨ ॥
ಅಷ್ಟಮೂರ್ತಿಮಯಂ ಲಿಂಗಮಿದಂ ಯ್ಯೈಸ್ತೈಜಸಂ ಭೃಶಂ ।
ಧ್ಯಾತ್ವಾ ಪ್ರದಕ್ಷಿಣಂ ಕುರ್ವನ್ಪಾತಕಾನಿ ವಿನಿರ್ದಹೇತ್ ॥ ೩೩ ॥
ನ ಪುನಃ ಸಂಭವಸ್ತಸ್ಯ ಯಃ ಕರೋತಿ ಪ್ರದಕ್ಷಿಣಾಂ ।
ಶೋಣಾಚಲಾಕೃತೇರ್ನಿತ್ಯಂ ನಿತ್ಯತ್ವಂ ಧ್ರುವಮಶ್ನುತೇ ॥ ೩೪ ॥
ಅಸ್ಯ ಪಾದರಜಃಸ್ಪರ್ಶಾತ್ಪೂಯತೇ ಸಕಲಾ ಮಹೀ ।
ಪದಮೇಕಂ ತು ಧತ್ತೇ ಯಃ ಶೋಣಾದ್ರೀಶಪ್ರದಕ್ಷಿಣೇ ॥ ೩೫ ॥
ನಮಸ್ಕುರ್ವನ್ಪ್ರತಿದಿಶಂ ಧ್ಯಾಯನ್ಸ್ತೌತಿ ಕೃತಾಂಜಲಿಃ ।
ಅಸಂಸ್ಪೃಷ್ಟಕರಃ ಕೈಶ್ಚಿನ್ಮಂದಂ ಕುರ್ಯಾತ್ಪ್ರದಕ್ಷಿಣಂ ॥ ೩೬ ॥
ಆಸನ್ನಪ್ರಸವಾ ನಾರೀ ಯಥಾ ಗಚ್ಛೇದನಾಕುಲಂ ।
ತಥಾ ಪ್ರದಕ್ಷಿಣಂ ಕುರ್ಯಾದಶೃಣ್ವನ್ಸ್ವ ಪದಧ್ವನಿಂ ॥ ೩೭ ॥

---

೩೨. ಅರುಣಾಚಲವೆಂದು ಪ್ರಖ್ಯಾತಿಯನ್ನು ಪಡೆದ ದೊಡ್ಡದಾದ ಅಗ್ನಿಸ್ತಂಭರೂಪವನ್ನು ಧ್ಯಾನಿಸುತ್ತ ನಿಧಾನವಾಗಿ ಗಿರಿಪ್ರದಕ್ಷಿಣೆಯನ್ನು ಮಾಡಬೇಕು.

೩೩. ಅಷ್ಟಮೂರ್ತಿ ಸಹಿತವಾದ ಈ ತೈಜಸಲಿಂಗವನ್ನು ವಿಶೇಷ ರೀತಿಯಿಂದ ಧ್ಯಾನಿಸುತ್ತ ಯಾವನು ಪ್ರದಕ್ಷಿಣೆಯನ್ನು ಮಾಡುತ್ತಾನೆಯೊ, ಅವನು ತನ್ನ ಸಕಲ ಪಾಪಗಳನ್ನೂ ನಾಶಮಾಡಿಕೊಳ್ಳುವನು.

೩೪. ಅರುಣಾಚಲೇಶ್ವರನಿಗೆ ನಿತ್ಯದಲ್ಲಿಯೂ ಪ್ರದಕ್ಷಿಣೆಯನ್ನು ಮಾಡುವ ಮನುಜನಿಗೆ ಪುನರ್ಜನ್ಮವಿಲ್ಲ. ಅವನು ಶಾಶ್ವತ ಮೋಕ್ಷವನ್ನು ಹೊಂದುತ್ತಾನೆ.

೩೫. ಯಾವ ಮನುಷ್ಯನು ಈ ಶೈಲಪ್ರದಕ್ಷಿಣೆಯನ್ನು ಮಾಡುವ ವ್ಯಾಜದಿಂದ ಒಂದು ಹೆಜ್ಜೆಯನ್ನಾದರೂ ಇಡುವನೊ, ಅವನ ಪಾದಧೂಳಿಯ ಸೋಂಕಿನಿಂದ ಭೂಮಿಯೆಲ್ಲವೂ ಪವಿತ್ರವಾಗುವುದು.

೩೬. ಸಕಲ ದಿಕ್ಕುಗಳಿಗೂ ನಮಸ್ಕರಿಸುತ್ತ ಧ್ಯಾನದಿಂದ ಅಂಜಲಿಬದ್ಧನಾಗಿ ಸ್ತುತಿಸುತ್ತ ಇತರರ ಕರಸಂಪರ್ಕವಿಲ್ಲದಂತೆ ಮಂದಗಮನದಿಂದ ಪ್ರದಕ್ಷಿಣೆಯನ್ನು ಮಾಡಬೇಕು.

೩೭. ಪೂರ್ಣಗರ್ಭಿಣಿಯಾದ ಸ್ತ್ರೀಯು ಹೇಗೆ ಜಾಗರೂಕತೆಯಿಂದ ನಡೆಯುವಳೊ ಹಾಗೆಯೇ ನಿಧಾನದಿಂದ ತನ್ನ ಹೆಜ್ಜೆಯ ಧ್ವನಿಯು ತನಗೂ ಸಹ ಕೇಳಿಸದಿರುವಂತೆ ನಡೆಯಬೇಕು.

ಸ್ನಾತೋ ವಿಶುದ್ಧವೇಷಃ ಸನ್ಭಸ್ಮರುದ್ರಾಕ್ಷಭೂಷಿತಃ ।
ಶಿವಸ್ಮರಣಸಂಸ್ಪೃಷ್ಟೋ ಮಂದಂ ದದ್ಯಾತ್ಪದಂ ಬುಧಃ ॥ ೩೮ ॥
ಮನೂನಾಂ ಚರತಾಮಗ್ರೇ ದೇವಾನಾಂ ಚ ಸಹಸ್ರಶಃ ।
ಅದೃಶ್ಯಾನಾಂ ಚ ಸಿದ್ಧಾನಾಂ ನಾನ್ಯೇಷಾಂ ವಾಯುರೂಪಿಣಾಂ ॥ ೩೯ ॥
ಸಂಘಟ್ಟಮತಿಸಮ್ಮರ್ದಂ ಮಾರ್ಗರೋಧಂ ವಿಚಿಂತಯನ್ ।
ಅನುಕೂಲೇನ ಭಕ್ತಃ ಸನ್ಪನ್ಯೈರ್ದದ್ಯಾತ್ಪದಂ ಬುಧಃ ॥ ೪೦ ॥
ಅಥವಾ ಶಿವನಾಮಾನಿ ಸಂಕೀರ್ತ್ಯ ವರಗೀತಿಭಿಃ ।
ಶಿವನೃತ್ಯಂ ಚ ರಚಯನ್ಭಕ್ತೈಃ ಸಾರ್ಧಂ ಪರಿಕ್ರಮೇತ್ ॥ ೪೧ ॥
ಮಾಹಾತ್ಮ್ಯಂ ಮಮ ವಾ ಶೃಣ್ವನ್ನನನ್ಯಮತಿರಾದರಾತ್ ।
ಶನೈಃ ಪ್ರದಕ್ಷಿಣಂ ಕುರ್ಯಾದಾನಂದರಸನಿರ್ಭರಃ ॥ ೪೨ ॥
ದಾನೈಶ್ಚ ವಿವಿಧೈಃ ಪುಣ್ಯೈರುಪಕಾರೈಸ್ತಥಾರ್ಥಿನಾಂ ।
ಯಥಾಮತಿ ದಯಾಪೂರ್ಣ ಆಸ್ತಿಕಃ ಪರಿತೋ ವ್ರಜೇತ್ ॥ ೪೩ ॥

---

೩೮. ಸ್ನಾನಮಾಡಿದ ಶುದ್ಧಶರೀರದಲ್ಲಿ ಭಸ್ಮರುದ್ರಾಕ್ಷಾದಿಗಳನ್ನು ಧರಿಸಿಕೊಂಡು ಮನಸ್ಸಿನಲ್ಲಿ ಶಿವಸ್ಮರಣವನ್ನೇ ಮಾಡುತ್ತ ವಿವೇಕಿಯಾದವನು ನಿಧಾನವಾಗಿ ಹೆಜ್ಜೆ ಹಾಕಬೇಕು.

೩೯–೪೦. ಮುಂದೆ ಅದೃಶ್ಯರಾಗಿ ಹೋಗುತ್ತಿರುವವರಾದ ಮನುಗಳೂ, ಅನೇಕ ದೇವತೆಗಳೂ, ಸಿದ್ಧರೂ, ವಾಯುರೂಪಿಗಳಾಗಿ ಹೋಗುವ ಇತರರೂ ಗುಂಪುಕೂಡಿಕೊಂಡು ಜನಸಮ್ಮರ್ದದಿಂದ ಮಾರ್ಗನಿರೋಧ ಮಾಡುತ್ತಿರುವರೆಂದು ಭಾವಿಸಿಕೊಂಡು ಅವರಿಗೆ ಅನುಕೂಲಮಾಡುವ ಇಚ್ಛೆಯಿಂದ ಭಕ್ತನಾದ ಬುದ್ಧಿವಂತನು ಮೆಲ್ಲಮೆಲ್ಲಗೆ ಹೆಜ್ಜೆಯನ್ನಿಡಬೇಕು.

೪೧. ಅಥವಾ ಶ್ರೇಷ್ಠವಾದ ಸಂಗೀತದಿಂದ ಶಿವನಾಮಗಳನ್ನು ಹಾಡುತ್ತ ಶಿವನಾಟ್ಯಗಳನ್ನು ನಡೆಸುತ್ತ ಭಕ್ತಸಮೂಹದಿಂದೊಡಗೂಡಿ ಪ್ರದಕ್ಷಿಣೆಯನ್ನು ಮಾಡಬೇಕು.

೪೨. ನನ್ನ ಮಾಹಾತ್ಮ್ಯಪೂರಿತಗಳಾದ ಕಥೆಗಳನ್ನು ಕೇಳುತ್ತ ಇತರ ಹವ್ಯಾಸಗಳಲ್ಲಿ ಮನಸ್ಸಿಡದೆ ಆದರವುಳ್ಳವನಾಗಿ ಆನಂದರಸವನ್ನನುಭವಿಸುತ್ತ ನಿಧಾನವಾಗಿ ಪ್ರದಕ್ಷಿಣೆಯನ್ನು ಮಾಡಬೇಕು.

೪೩. ನಾನಾವಿಧಗಳಾದ ದಾನಗಳನ್ನು ಮಾಡುತ್ತಲೂ, ಅರ್ಥಿಗಳಿಗೆ ಪುಣ್ಯಕಾರ್ಯಗಳಾದ ಉಪಕಾರಗಳನ್ನು ಮಾಡುತ್ತಲೂ, ಅನುಕೂಲವಿದ್ದಂತೆ ದಯಾಪೂರ್ಣನಾಗಿ ಆಸ್ತಿಕಬುದ್ಧಿಯಿಂದ ಕೂಡಿದವನಾಗಿ ಪರ್ವತವನ್ನು ಸುತ್ತುವರೆಯಬೇಕು.

ಕೃತೇ ತ್ವಗ್ನಿಮಯಂ ಲಿಂಗಂ ತ್ರೇತಾಯಾಂ ಮಣಿಪರ್ವತಂ ।
ದ್ವಾಪರೇ ಚಿಂತಯೇದ್ಧೈಮಂ ಕಲೌ ಮರಕತಾಚಲಂ ॥ ೪೪ ॥
ಅಥವಾ ಸ್ಫಾಟಿಕಂ ರೂಪಮರುಣಂ ತು ಸ್ವಯಂಪ್ರಭಂ ।
ಧ್ಯಾಯನ್ನಿಮುಕ್ತೈಃ ಸಕಲೈಃ ಪಾಪೈಃ ಶಿವಪುರಂ ವ್ರಜೇತ್ ॥ ೪೫ ॥
ಅವಾಙ್ಮನಸಗಮ್ಯತ್ವಾದಪ್ರಮೇಯತಯಾ ಸ್ವಯಂ ।
ಅಗ್ನಿತ್ವಾಚ್ಚ ಪರಂ ಲಿಂಗಮನಾಸಾದ್ಯಾಚಲಾಭಿಧಂ ॥ ೪೬ ॥
ಧ್ಯಾತ್ವಾ ಪ್ರದಕ್ಷಿಣಂ ಕರ್ತುರಭಿಗನ್ಯೋಽಹಮಂಜಸಾ ।
ತಸ್ಯ ಪಾದರಜೋ ನೄಣಾಮಜರಾಮರಕಾರಣಂ ॥ ೪೭ ॥
ರೂಪಮೇಕಂ ತು ಧತ್ತೇ ಯಃ ಶೋಣಾದ್ರೀಶಪ್ರದಕ್ಷಿಣೇ ।
ವಾಹನಾನಿ ಸುರೌಘಾಣಾಂ ಪ್ರಾರ್ಥಯಂತೇ ಪರಸ್ಪರಂ ॥ ೪೮ ॥
ಕುರ್ವತಾಂ ಚರಣಂ ವೋಢುಮರುಣಾದ್ರಿಪ್ರದಕ್ಷಿಣಾಂ ।
ಛಾಯಾಪ್ರದಾನಂ ಕುರ್ವಂತಿ ಕಲ್ಪಕಾದ್ಯಾಃ ಸುರದ್ರುಮಾಃ ॥ ೪೯ ॥

---

೪೪. ಈ ಪರ್ವತವು ಕೃತಯುಗದಲ್ಲಿ ಅಗ್ನಿಮಯವಾಗಿಯೂ, ತ್ರೇತಾಯುಗದಲ್ಲಿ ಮಣಿಮಯವಾಗಿಯೂ, ದ್ವಾಪರದಲ್ಲಿ ಹೇಮಮಯವಾಗಿಯೂ, ಕಲಿಯುಗದಲ್ಲಿ ಮರಕತಮಯವಾಗಿಯೂ ಇರುವುದು.

೪೫. ಅಲ್ಲದೆ ಸ್ವಯಂಜ್ಯೋತಿಯಿಂದ ಕೂಡಿದ ಅರುಣವರ್ಣದ ಸ್ಫಟಿಕ ಲಿಂಗವನ್ನು ಧ್ಯಾನಮಾಡಲು ಸಕಲ ಪಾಪಗಳಿಂದಲೂ ನಿರ್ವೃತನಾಗಿ ಕೈಲಾಸವನ್ನು ಭಕ್ತನು ಸೇರುವನು.

೪೬. ಈ ಅಚಲಲಿಂಗವು ವಾಙ್ಮನಸ್ಸುಗಳಿಗೆ ಅಗೋಚರವಾಗಿಯೂ, ಅಪ್ರಮೇಯಸ್ವರೂಪವುಳ್ಳದ್ದಾಗಿಯೂ, ಅಗ್ನಿಮಯವಾಗಿಯೂ ಇರುವುದರಿಂದ ಜನರಿಗೆ ಅಗಮ್ಯವಾಗಿರುವುದು.

೪೭. ನನ್ನ ಧ್ಯಾನದಲ್ಲಿಯೇ ಆಸಕ್ತನಾಗಿ ಗಿರಿಪ್ರದಕ್ಷಿಣೆಯನ್ನು ಮಾಡುವವನಿಗೆ ನಾನು ಕ್ಷಿಪ್ರದಲ್ಲಿಯೇ ಪ್ರಸನ್ನನಾಗುತ್ತೇನೆ. ಆತನ ಪಾದಧೂಳಿಯೇ ನರರಿಗೆ ಅಮೃತತ್ವಸಾಧನವು.

೪೮. ಯಾವನು ಅರುಣಾಚಲದ ಪ್ರದಕ್ಷಿಣೆಯನ್ನು ಮಾಡಲು ಉದ್ಯುಕ್ತನಾಗುವನೊ ಅವನಿಗೆ ಸಹಾಯಕಗಳಾಗಿ ದೇವತೆಗಳ ವಿಮಾನಗಳೂ ಸಹ ನಾನು ಮುಂದು ತಾನು ಮುಂದೆಂದು ಬರುವುವು.

೪೯. ಈ ಅರುಣಾಚಲಪರ್ವತದ ಪ್ರದಕ್ಷಿಣೆಯನ್ನು ಮಾಡುವವನ ಪಾದಗಳನ್ನು ಸುಖಪಡಿಸಲು ಕಲ್ಪವೃಕ್ಷವೇ ಮೊದಲಾದ ದೇವವೃಕ್ಷಗಳು ನೆರಳನ್ನುಂಟುಮಾಡುವುವು.

ಕುರ್ವತಾಂ ಭುವಿ ಮರ್ತ್ಯಾನಾಮರುಣಾದ್ರಿಪ್ರದಕ್ಷಿಣಾಂ ।
ದೇವಗಂಧರ್ವಕಾದ್ಯಾನಾಂ ಸಹಸ್ರೇಣ ಸಮಾವೃತಾಃ ।
ಸೇವಂತೇ ತೇ ಗಣಾಕೀರ್ಣಾ ವಿಮಾನಶತಕೋಟಯಃ ॥ ೫೦ ॥
ಮಮಪ್ರದಕ್ಷಿಣಂ ಭೂಮೌ ಕುರ್ವತಾಂ ಪಾದಪಾಂಸುಭಿಃ ।
ಪಾವಿತಾ ಮಹತೀ ವೀಥೀ ದೃಷ್ಟ್ವಾ ಶಿವಪದಪ್ರದಾ ॥ ೫೧ ॥
ಅಂಗಪ್ರದಕ್ಷಿಣಂ ಕುರ್ವನ್ಕ್ಷಣಾತ್ಸ್ವರ್ಗ್ಯತನುರ್ಭವೇತ್ ।
ಪ್ರಾಪ್ನೋತಿ ವಜ್ರಶರೀರತ್ವಂ ನ ಧೃಷ್ಯೇತ ಮಹೀತಲೇ ॥ ೫೨ ॥
ವ್ಯೋಮಯಾನೋತ್ಸುಕಾ ದೇವಾಃ ಸಿದ್ಧಾಶ್ಚ ಪರಮರ್ಷಯಃ ।
ಅದೃಶ್ಯಾಃ ಸಂಚರಂತ್ಯತ್ರ ಪಶ್ಯಂತೋ ಮಮ ಸನ್ನಿಧಿಂ ॥ ೫೩ ॥
ವಿನಯಂ ಮಮ ಭಕ್ತಿಂ ಚ ಪ್ರದಕ್ಷಿಣಪರಿಕ್ರಮೇ ।
ದೃಷ್ಟ್ವಾ ಹರ್ಷಸಮಾಯುಕ್ತಾ ಮರ್ತ್ಯೇಭ್ಯೋ ದದತೇ ವರಂ ॥ ೫೪ ॥
ಅತ್ರ ದೇವಾಸ್ತ್ರಯಸ್ತ್ರಿಂಶತ್ಪುರಾಕೃತ್ವಾ ಪ್ರದಕ್ಷಿಣಾಂ ।
ಪ್ರತ್ಯಹಂ ಮಾರ್ಗಮಾಸೀನಾಃ ಪ್ರತ್ಯೇಕಂ ಕೋಟಿತಾಂ ಗತಾಃ ॥ ೫೫ ॥

---

೫೦. ಅರುಣಾಚಲದ ಪ್ರದಕ್ಷಿಣೆಯನ್ನು ಮಾಡುವ ಮನುಷ್ಯರನ್ನು ದೇವತೆಗಳು, ಗಂಧರ್ವರು ಮುಂತಾದವರಿಂದೊಡಗೂಡಿದ ಅನೇಕ ವಿಮಾನಗಳು ಪಾರ್ಷದಗಣಸಹಿತಗಳಾಗಿ ಸೇವಿಸುತ್ತವೆ.

೫೧. ಭೂಮಿಯಲ್ಲಿ ಈ ನನ್ನ ಪ್ರದಕ್ಷಿಣೆಮಾಡುವವರ ಪಾದಧೂಳಿಗಳಿಂದ ನಗರಗಳ ಬೀದಿಗಳೆಲ್ಲ ಪಾವನವಾಗಿ ಎಲ್ಲರಿಗೂ ಕೈವಲ್ಯ ಸೌಖ್ಯವನ್ನು ಕೊಡುವುವು.

೫೨. ನನ್ನ ಪರ್ವತಾಕಾರದ ಪ್ರದಕ್ಷಿಣೆಯಿಂದ ನಿಮಿಷಾರ್ಧದಲ್ಲಿಯೇ ಸ್ವರ್ಗಯೋಗ್ಯವಾದ ಶರೀರವನ್ನು ಹೊಂದುವನು. ಮತ್ತು ವಜ್ರದಂತೆ ದೃಢಕಾಯನಾಗಿ ಲೋಕದಲ್ಲಿ ಯಾರಿಂದಲೂ ಪರಾಜಯವನ್ನು ಹೊಂದಲಾರನು.

೫೩. ವಿಮಾನಗಳಲ್ಲಿ ಸಂಚರಿಸುತ್ತ ದೇವತೆಗಳೂ, ಸಿದ್ಧರೂ, ಬ್ರಹ್ಮರ್ಷಿಗಳೂ ನನ್ನ ಸನ್ನಿಧಿಯಲ್ಲಿ ಅದೃಶ್ಯರಾಗಿ ಸಂಚರಿಸುತ್ತಿರುವರು.

೫೪. ನರರು ನನ್ನ ಪ್ರದಕ್ಷಿಣೆಯ ಕಾಲದಲ್ಲಿ ತೋರಿಸುವ ವಿನಯ, ಭಕ್ತಿಗಳನ್ನು ನೋಡಿ ಸಂತೋಷಗೊಂಡು ಅವರೆಲ್ಲರೂ ಮನುಷ್ಯರಿಗೆ ವರಗಳನ್ನು ಕೊಡುತ್ತಾರೆ.

೫೫. ಪೂರ್ವದಲ್ಲಿ ಮುವತ್ತುಮೂರು ದೇವತೆಗಳು ಇಲ್ಲಿ ಪ್ರದಕ್ಷಿಣೆಯನ್ನು ಮಾಡಿ ನಿತ್ಯದಲ್ಲಿಯೂ ಭೂಮಿಯನ್ನು ತುಳಿದುದರಿಂದ ಒಬ್ಬೊಬ್ಬರೂ ಒಂದೊಂದು ಕೋಟಿ ರೂಪಗಳನ್ನು ಹೊಂದಿದರು.

ಆದಿತ್ಯಾದ್ಯಾ ಗ್ರಹಾಃ ಸರ್ವೇ ಪುರಾ ಕೃತ್ವಾ ಪ್ರದಕ್ಷಿಣಾಂ ।
ಸಂಪೂರ್ಣಜಗತೀಭಾಗೇ ಸರ್ವೇ ಗ್ರಹಪತಾಂ ಗತಾಃ ॥ ೫೬ ॥
ಯಃ ಕರೋತಿ ನರೋ ಭೂಮೌ ಸೂರ್ಯವಾರೇ ಪ್ರದಕ್ಷಿಣಾಂ ।
ಸ ಸೂರ್ಯಮಂಡಲಂ ಭಿತ್ವಾ ಮುಕ್ತಃ ಶಿವಪುರಂ ವ್ರಜೇತ್ ॥ ೫೭ ॥
ಸೋಮವಾರೇ ನರಃ ಕುರ್ವನ್ನರುಣಾದ್ರಿಪ್ರದಕ್ಷಿಣಾಂ ।
ಅಜರಾಮರತಾಂ ಪ್ರಾಪ್ತೋ ನಾಸೌ ಮ್ಯೋ ಭವತಿ ಕ್ಷಿತೌ ॥ ೫೮ ॥
ಭೌಮವಾರೇ ನರಃ ಕುರ್ವನ್ನರುಣಾದ್ರಿಪ್ರದಕ್ಷಿಣಾಂ ।
ಆನೃಣ್ಯಮಖಿಲಂ ಪ್ರಾಪ್ಯ ಸಾರ್ವಭೌಮೋ ಭವೇದ್ಧ್ರುವಂ ॥ ೫೯ ॥
ಬುಧವಾರೇ ನರಃ ಕುರ್ವನ್ಶೋಣಾದ್ರೀಶಪ್ರದಕ್ಷಿಣಾಂ ।
ಸರ್ವಜ್ಞತಾಮನುಪ್ರಾಪ್ತಃ ಸ ವಾಚಾಂ ಪತಿತಾಮಿಯಾತ್ ॥ ೬೦ ॥
ಗುರುವಾರೇ ನರಃ ಕುರ್ವನ್ಸರ್ವದೇವನಮಸ್ಕೃತಃ ।
ಪ್ರದಕ್ಷಿಣೇನ ಶೋಣಾದ್ರೇಃ ಸ ತು ಲೋಕಗುರುರ್ಭವೇತ್ ॥ ೬೧ ॥

---

೫೬. ಆದಿತ್ಯಾದಿ ನವಗ್ರಹಗಳು ನನ್ನ ರೂಪಕ್ಕೆ ಪೂರ್ವದಲ್ಲಿ ಪ್ರದಕ್ಷಿಣೆಯನ್ನು ಮಾಡಿದ ಪುಣ್ಯದಿಂದ ಸಕಲ ಲೋಕಗಳಲ್ಲಿಯೂ ಗ್ರಹಾಧಿಪತಿಗಳಾದರು.

೫೭. ಭಾನುವಾರದ ದಿವಸ ಯಾವ ಮನುಷ್ಯನು ಪ್ರದಕ್ಷಿಣೆಯನ್ನು ಮಾಡುವನೊ ಅವನು ಸೂರ್ಯಮಂಡಲವನ್ನು ಭೇದಿಸಿಕೊಂಡು ಕೈಲಾಸ ರೂಪವಾದ ಮೋಕ್ಷವನ್ನು ಪಡೆಯುವನು.

೫೮. ಸೋಮವಾರದಲ್ಲಿ ಅರುಣಾಚಲದ ಪ್ರದಕ್ಷಿಣೆಯನ್ನು ಮಾಡುವವನು ಜರಾಮೃತ್ಯುಗಳೆಂಬ ಭಯಗಳಿಂದ ರಹಿತನಾಗಿ ಭೂಲೋಕದಲ್ಲಿ ಬ್ರಾಹ್ಮಣನಾಗಿ ಹುಟ್ಟುವನು.

೫೯. ಮಂಗಳವಾರದ ದಿನದಲ್ಲಿ ಪ್ರದಕ್ಷಿಣೆಯಿಂದ ಮಾನವನು ತ್ರಿವಿಧ ಋಣಗಳಿಂದ ಮುಕ್ತನಾಗಿ ಶಾಶ್ವತವಾದ ಸಾರ್ವಭೌಮ ಪದವಿಯನ್ನು ಪಡೆಯುವನು.

೬೦. ಬುಧವಾರದ ಪ್ರದಕ್ಷಿಣೆಯ ಫಲವಾಗಿ ಅರುಣಾಚಲೇಶ್ವರನ ಪ್ರಸಾದದಿಂದ ಮನುಷ್ಯನು ಸರ್ವಜ್ಞನಾಗಿ ಮಾತಿನಲ್ಲಿ ಬೃಹಸ್ಪತಿಸಮಾನನಾಗುವನು.

೬೧. ಗುರುವಾರದ ದಿನ ಅರುಣಾಚಲದ ಪ್ರದಕ್ಷಿಣೆಯನ್ನು ಮಾಡುವವನನ್ನು ಸಕಲ ದೇವತೆಗಳೂ ಸಹ ಲೋಕಗುರುವೆಂದು ತಿಳಿದು ನಮಸ್ಕರಿಸುವರು.

ಭೃಗುವಾರೇ ನರಃ ಕುರ್ವನ್ನರುಣಾದ್ರಿಪ್ರದಕ್ಷಿಣಾಂ ।
ಸಂಪ್ರಾಪ್ಯ ಮಹತೀಂ ಲಕ್ಷ್ಮೀಂ ಲಭತೇ ವೈಷ್ಣವಂ ಪದಂ ॥ ೬೨ ॥
ಮಂದವಾರೇ ನರಃ ಕೃತ್ವಾ ಶೋಣಾದ್ರೀಶಪ್ರದಕ್ಷಿಣಾಂ ।
ವಿಮುಕ್ತೋ ಗ್ರಹಪೀಡಾಭಿಃ ಸ ವಿಶ್ವವಿಜಯೀ ಭವೇತ್ ॥ ೬೩ ॥
ನಕ್ಷತ್ರಾಣಿ ಚ ಸರ್ವಾಣಿ ಪುರಾತದ್ದೇವತೈಃ ಸಹ ।
ಮಮ ಪ್ರದಕ್ಷಿಣಾಂ ಕರ್ತುಃ ಪುಣ್ಯಾನಿ ಸಹಸಾ ವ್ರಜೇತ್ ॥ ೬೪ ॥
ತಿಥಯಃ ಕರಣಾನೀಹ ಯೋಗಾಶ್ಚ ಮಮ ಸಮ್ಮತಾಃ ।
ಅಭೀಷ್ಟಫಲದಾ ಜಾತಾಃ ಕುರ್ವತಾಂ ಮತ್ಪ್ರದಕ್ಷಿಣಾಂ ॥ ೬೫ ॥
ಮುಹೂರ್ತಾ ವಿವಿಧಾ ಹೋರಾಃ ಸೌಮ್ಯಾಶ್ಚ ಸತತೋದಯಾಃ ।
ಮತ್ಪ್ರದಕ್ಷಿಣಕರ್ತೄಣಾಂ ಜಾಯಂತೇ ಸತತಂ ಶುಭಾಃ ॥ ೬೬ ॥
ಪ್ರಚ್ಛಿನತ್ತಿ ಪ್ರಕಾರೋಽಘಂ ದಕಾರೋ ವಾಂಛಿತಪ್ರದಃ ।
ಕ್ಷಿಕಾರಾತ್ಕ್ಷೀಯತೇ ಕರ್ಮ ಣಕಾರೋ ಮುಕ್ತಿದಾಯಕಃ ॥ ೬೭ ॥

---

೬೨. ಶುಕ್ರವಾರದ ದಿನದಲ್ಲಿ ಪ್ರದಕ್ಷಿಣೆಯನ್ನು ಮಾಡಲು ಮನುಷ್ಯನು ಇಹಲೋಕದಲ್ಲಿ ಅತುಲವಾದ ಐಶ್ವರ್ಯವನ್ನು ಪಡೆದು ಪರಲೋಕದಲ್ಲಿ ವೈಷ್ಣವ ಪದವನ್ನು ಹೊಂದುವನು.

೬೩. ಶನಿವಾರ ಅರುಣಾದ್ರಿಯ ಪ್ರದಕ್ಷಿಣೆಯನ್ನು ಮಾಡುವುದರಿಂದ ನರನು ಸಕಲ ಗ್ರಹಗಳ ಪೀಡೆಗಳಿಂದ ನಿವಾರಿತನಾಗಿ ತ್ರಿಲೋಕವಿಜಯಿಯಾಗುವನು.

೬೪. ಸಕಲ ನಕ್ಷತ್ರಗಳೂ ತಮ್ಮ ಅಧಿದೇವತೆಗಳಿಂದೊಡಗೂಡಿ ನನ್ನನ್ನು ಪ್ರದಕ್ಷಿಣೆಮಾಡುವ ಭಕ್ತನಿಗೆ ನಾನಾ ವಿಧಗಳಾದ ಪುಣ್ಯಗಳನ್ನುಂಟುಮಾಡುವುವು.

೬೫. ಅಂತೆಯೇ ಸಕಲ ತಿಥಿಗಳೂ, ಕರಣಗಳೂ, ಯೋಗಗಳೂ ಸಹ ನನ್ನ ಪ್ರದಕ್ಷಿಣೆ ಮಾಡುವ ಭಕ್ತನಿಗೆ ನನ್ನ ಇಷ್ಟಾನುಸಾರವಾಗಿ ಸಕಲ ಅಭೀಷ್ಟಗಳನ್ನೂ ನೆರವೇರಿಸುವುವು.

೬೬. ಮುಹೂರ್ತಗಳೂ, ಹೋರೆಗಳೂ, ನಿತ್ಯವೂ ಸೌಮ್ಯಗಳೂ, ಮಂಗಳಕರಗಳೂ ಆಗಿ ನನ್ನನ್ನು ಪ್ರದಕ್ಷಿಣೆ ಮಾಡುವವರಿಗೆ ಶುಭೋದಯ ಸಹಿತಗಳಾಗುವುವು.

೬೭. ಪ್ರ ಎಂಬಕ್ಷರವು ಪಾಪಗಳನ್ನು ಕಳೆಯುವುದು. ದಕಾರವು ಇಷ್ಟಾರ್ಥ ಪ್ರದವಾಗಿರುವುದು. ಕ್ಷಿ ಎಂಬಕ್ಷರದಿಂದ ಕರ್ಮಬಂಧವು ಕ್ಷಯಿಸುವುದು. ಣಕಾರದಿಂದ ಮುಕ್ತಿಯನ್ನು ಪಡೆಯಲು ಸಾಧ್ಯವಾಗುವುದು.

ದುರ್ಬಲಾಃ ಕಾರ್ಶ್ಯಸಂಯುಕ್ತಾ ಆಧಿವ್ಯಾಧಿವಿಜೃಂಭಿತಾಃ ।
ಮಮ ಪ್ರದಕ್ಷಿಣಂ ಕೃತ್ವಾ ಮುಚ್ಯಂತೇ ಸರ್ವದುಷ್ಕೃತೈಃ ॥ ೬೮ ॥
ಮಮ ಪ್ರದಕ್ಷಿಣಂ ಕರ್ತುರ್ಭಕ್ತ್ಯಾ ಪಾದೇನ ಸಂತತಂ ।
ಕ್ಷಣೇನ ಸಾಧ್ಯಾಂ ಪಶ್ಯಾಮಿ ತ್ರೈಲೋಕ್ಯಸ್ಯ ಪ್ರದಕ್ಷಿಣಾಂ ॥ ೬೯ ॥
ಲೋಕೇಶಾಶ್ಚ ದಿಗೀಶಾಶ್ಚ ಯೇ ಚಾನ್ಯೇ ಕಾರಣೇಶ್ವರಾಃ ।
ಮಮ ಪ್ರದಕ್ಷಿಣಾಂ ಕೃತ್ವಾ ಸ್ಥಿರಾ ರಾಜ್ಯೇ ಪುರಾಭವನ್ ॥ ೭೦ ॥
ಅಹಂ ಚ ಗಣಸಂಯುಕ್ತಃ ಸರ್ವದೇವರ್ಷಿಸಂಯುತಃ ।
ಉತ್ತರಾಯಣಸಂಯೋಗೇ ಕರೋಮಿ ಸ್ವಪ್ರದಕ್ಷಿಣಾಂ ॥ ೭೧ ॥
ಮದ್ರೂಪಂ ತೈಜಸಂ ಲಿಂಗಮರುಣಾದ್ರಿರಿತಿ ಶ್ರುತಂ ।
ತ್ರೈಲೋಕ್ಯಸ್ಯ ಹಿತಾರ್ಥಾಯ ಕರಿಷ್ಯಾಮಿ ಪ್ರದಕ್ಷಿಣಾಂ ॥ ೭೨ ॥
ಆಗತಾ ಚ ಪರಾಂತೇ ಚ ಗೌರೀ ತಪ ಇಹಾದ್ಭುತಂ ।
ಕರ್ತುಂ ಪ್ರದಕ್ಷಿಣಂ ಕೃತ್ವಾ ಮಾಮೇಷ್ಯತ್ಯನಘಾ ಪುನಃ ॥ ೭೩ ॥
ಕಾರ್ತಿಕೇ ಮಾಸಿ ನಕ್ಷತ್ರೇ ಕೃತ್ತಿಕಾಖ್ಯೇ ಮಹಾತಪಾ ।
ಮಮಪ್ರದಕ್ಷಿಣಾಂ ಗೌರೀ ಪ್ರದೋಷೇ ರಚಯಿಷ್ಯತಿ ॥ ೭೪ ॥

---

೬೮. ದುರ್ಬಲರಾದವರೂ, ಕೃಶವಾದ ಶರೀರವುಳ್ಳವರೂ, ಮಾನಸಿಕ ಮತ್ತು ದೈಹಿಕ ವ್ಯಥೆಗಳಿಂದ ಬಳಲುತ್ತಿರುವವರೂ ನನ್ನ ಪ್ರದಕ್ಷಿಣೆ ಮಾಡುವುದರಿಂದ ಸರ್ವ ಪಾಪಗಳಿಂದಲೂ ರಹಿತರಾಗುವರು.

೬೯. ಭಕ್ತಿಯಿಂದ ನಿತ್ಯವೂ ನನ್ನ ಪ್ರದಕ್ಷಿಣೆಯನ್ನು ಮಾಡುವುದರಿಂದ ಮೂರು ಲೋಕಗಳ ಪ್ರದಕ್ಷಿಣೆಯನ್ನೂ ಕ್ಷಣದಲ್ಲಿ ಮಾಡಿದಂತಾಗುವುದೆಂದು ತಿಳಿಯುತ್ತೇನೆ.

೭೦. ಸಕಲ ಲೋಕನಾಯಕರೂ, ದಿಕ್ಪಾಲಕರೂ ಪ್ರಪಂಚದ ಸೃಷ್ಟ್ಯಾದಿಗಳಿಗೆ ಕಾರಣರಾದ ಇತರರೂ ಸಹ ಮುನ್ನು ನನ್ನನ್ನು ಪ್ರದಕ್ಷಿಣೆಯನ್ನು ಮಾಡಿ ತಮ್ಮ ಅಧಿಕಾರಗಳಲ್ಲಿ ಸ್ಥಿರರಾದರು.

೭೧. ನಾನೂ ಸಹ ಉತ್ತರಾಯಣ ಪುಣ್ಯಕಾಲದಲ್ಲಿ ಸಕಲ ಗಣಗಳಿಂದೊಡಗೂಡಿ ನನ್ನ ಪ್ರದಕ್ಷಿಣೆಯನ್ನೇ ಮಾಡುತ್ತೇನೆ.

೭೨–೭೩. ಅರುಣಾಚಲವೆಂದು ಪ್ರಸಿದ್ಧವಾದ ನನ್ನ ತೈಜಸಲಿಂಗವನ್ನು ತ್ರಿಲೋಕಗಳ ಹಿತದೃಷ್ಟಿಯಿಂದ ನಾನೇ ಪ್ರದಕ್ಷಿಣೆ ಮಾಡುತ್ತೇನೆ. ಗೌರಿಯೂ ಸಹ ದೇಹಾವಸಾನ ಸಮಯದಲ್ಲಿ ಇಲ್ಲಿಗೆ ಬಂದು ಪ್ರದಕ್ಷಿಣೆಯನ್ನು ಮಾಡಿ ಅದ್ಭುತವಾದ ತಪಸ್ಸಂಪನ್ನಳಾಗಿ ಮರಳಿ ನನ್ನನ್ನೇ ಪಡೆಯುವಳು.

೭೪. ಕಾರ್ತಿಕಮಾಸದ ಕೃತ್ತಿಕಾ ನಕ್ಷತ್ರದ ದಿವಸ ಪ್ರದೋಷಕಾಲದಲ್ಲಿ ತಪಸ್ಸಂಪನ್ನಳಾದ ಪಾರ್ವತಿಯು ನನ್ನ ಪ್ರದಕ್ಷಿಣೆಯನ್ನು ಮಾಡುವಳು.

ನರಾಣಾಮಲ್ಪಪುಣ್ಯಾನಾಂ ದುರ್ಲಭಂ ತತ್ಪ್ರದಕ್ಷಿಣಂ ।
ಜ್ಯೋತಿರ್ಲಿಂಗಸ್ಯ ದೃಷ್ಟಸ್ಯ ದೇವೀ ಪ್ರಾರ್ಥನಯಾ ತಥಾ ॥ ೭೫ ॥
ಮಯಾ ಸಮೇತಾ ದೇವೀ ಸಾ ಪ್ರಾಪ್ತಾಪೀತಕುಚಾಭಿಧಾ ।
ಆಶ್ವಾಸ್ಯತಿ ಸುರಾನ್ಸರ್ವಾನುತ್ತರಾಯಣಸಂಗಮೇ ॥ ೭೬ ॥
ದೇವಗಂಧರ್ವಯಕ್ಷಾಣಾಂ ಸಿದ್ಧಾನಾಮಪಿ ರಕ್ಷಸಾಂ ।
ಸರ್ವೇಷಾಂ ದೇವಯೋನೀನಾಂ ಭವಿತಾ ತತ್ರ ಸಂಗಮಃ ॥ ೭೭ ॥
ಯೇ ತದಾ ಮಾಂ ಸಮಾಗತ್ಯ ಪೂಜಯಂತಿ ತಪೋಽಧಿಕಾಃ ।
ಸರ್ವಜನ್ಮಕೃತಾಘೌಘಪ್ರಾಯಶ್ಚಿತ್ತಂ ವ್ರಜಂತಿ ತೇ ॥ ೭೮ ॥
ದುರ್ಲಭಂ ತದ್ದಿನಂ ಪುಂಸಾಮುತ್ತರಾಯಣಸಂಗಮೇ ।
ತದಾ ಮದ್ರೂಪಮಭ್ಯರ್ಚ್ಯ ಕೃತಾರ್ಥಾಃ ಸಂತು ಮಾನವಾಃ ॥ ೭೯ ॥
ಪ್ರದಕ್ಷಿಣಂ ತು ಮೇ ದಿವ್ಯಂ ಕುರ್ವಂತಿ ಚ ಮಹೀಭುಜಃ ।
ತೇಷಾಂ ಪುರೋ ಗತಃ ಸಾಕ್ಷಾದಹಂ ಜೇಷ್ಯಾಮಿ ವಿದ್ವಿಷಃ ॥ ೮೦ ॥
ರಾಜಾ ಯಸ್ಯತು ದೇಶಸ್ಯ ಯೋ ಯೋ ರಾಜಾ ತಪೋಽಧಿಕಃ ।
ಸ ಕಾರಯೇದ್ವಿಪ್ರಮುಖ್ಯೈಃ ಶ್ರೋತ್ರಿಯೈರ್ಮೇ ಪ್ರದಕ್ಷಿಣಾಂ ॥ ೮೧ ॥

---

೭೫. ದೇವಿಯ ಪ್ರಾರ್ಥನೆಯಿಂದ ಕಾಣುವ ಜ್ಯೋತಿರ್ಲಿಂಗದ ಪ್ರದಕ್ಷಿಣವು ಕ್ಷೀಣಪುಣ್ಯರಾದ ಮನುಷ್ಯರಿಗೆ ಅತ್ಯಂತ ದುರ್ಲಭವಾಗಿರುವುದು.

೭೬. ಉತ್ತರಾಯಣ ಸಂಗಮಕಾಲದಲ್ಲಿ ಪಾರ್ವತಿಯು ಅಪೀತಕುಚೆಯೆಂಬ ನಾಮದಿಂದ ಬಂದು ನನ್ನೊಡಗೂಡಿದವಳಾಗಿ ಸಕಲ ದೇವತೆಗಳನ್ನೂ ಸಮಾಧಾನಗೊಳಿಸುವಳು.

೭೭. ಆ ಕಾಲದಲ್ಲಿ ಈ ಸ್ಥಳದಲ್ಲಿ ಸಮಸ್ತದೇವತೆಗಳೂ, ಗಂಧರ್ವರೂ, ಯಕ್ಷರೂ, ಸಿದ್ಧರೂ, ರಾಕ್ಷಸರೂ, ವಿದ್ಯಾಧರಾದಿ ಸಕಲ ದೇವಯೋನಿಗಳೂ ಸನ್ನಿಹಿತರಾಗುವರು.

೭೮–೭೯. ಆಗ ಯಾರು ನನ್ನನ್ನು ತಪೋಯುಕ್ತರಾಗಿ ಪೂಜಿಸುವರೊ, ಅವರು ಸಕಲ ಜನ್ಮಗಳಲ್ಲಿ ಮಾಡಿದ ಪಾಪಗಳಿಗೆಲ್ಲ ಪ್ರಾಯಶ್ಚಿತ್ತವನ್ನು ಮಾಡಿದಂತಾಗುವುದು. ಉತ್ತರಾಯಣಕಾಲವು ಜನರಿಗೆ ಬಹಳ ದುರ್ಲಭವಾಗಿರುವುದು. ಆ ಕಾಲದಲ್ಲಿ ನನ್ನ ರೂಪವನ್ನು ಅರ್ಚಿಸಿ ಮನುಷ್ಯರು ಕೃತಾರ್ಥರಾಗಲಿ.

೮೦–೮೧. ಯಾವ ರಾಜರು ಉತ್ತಮ ರೀತಿಯಿಂದ ನನ್ನ ಪ್ರದಕ್ಷಿಣೆಯನ್ನು ಮಾಡುತ್ತಾರೆಯೊ ಅವರಿಗೆ ಮುಂದಾಳಾಗಿ ನಾನೇ ಹೋಗಿ ಸಕಲ ಶತ್ರುಗಳನ್ನೂ ಗೆಲ್ಲುವೆನು. ಯಾವ ರಾಜನು ದೇಶಾಧಿಪತಿಯೊ, ಯಾವ ರಾಜನು ತಪಸ್ಸಂಪನ್ನನಾಗಿರುವನೊ ಅವನು ಶ್ರೋತ್ರಿಯರಾದ ಬ್ರಾಹ್ಮಣಶ್ರೇಷ್ಠರಿಂದ ನನ್ನ ಪ್ರದಕ್ಷಿಣೆಯನ್ನು ಮಾಡಿಸಬೇಕು.

ಮಂಡಲಂ ಮಂಡಲಾರ್ಧಂ ವಾ ಸಂಕಲ್ಪವಿಧಿಪೂರ್ವಕಂ ॥ ೮೨ ॥
ತಸ್ಯ ಸತ್ಯಸ್ಥಿರಂ ರಾಜ್ಯಂ ಶತ್ರೂಣಾಂ ಚ ಪರಾಹತಿಂ ।
ಕರಿಷ್ಯಾಮಿ ಮುನೇ ನಿತ್ಯಮಹಮೇವ ಪುರಃ ಸ್ಥಿತಃ ॥ ೮೩ ॥
ನ ವಾಹನೇನ ಕುರ್ವೀತ ಮಮ ಜಾತು ಪ್ರದಕ್ಷಿಣಾಂ ।
ಧರ್ಮಲುಬ್ಧಮನಾ ಜಾನನ್ಛಿವಾಚಾರಪರಿಪ್ಲುತಿಂ ॥ ೮೪ ॥
ಧರ್ಮಕೇತುಃ ಪುರಾ ರಾಜಾ ಯಮಲೋಕಾದುಪಾಗತಃ ।
ಮಮ ಪ್ರದಕ್ಷಿಣಾಂ ಕರ್ತುಂ ತುರಗೇಣಾಭ್ಯರೋಚಯತ್ ॥ ೮೫ ॥
ಕ್ಷಣೇನ ತುರಗೋ ಜಾತೋ ಗಣನಾಥಃ ಸುರಾರ್ಚಿತಃ ।
ಪ್ರತಿಪೇದೇ ಪದಂ ಶೈವಂ ವಿಮುಚ್ಯ ಧರಣೀಪತಿಂ ॥ ೮೬ ॥
ವೀಕ್ಷ್ಯ ತಂ ವಾಹನಂ ಭೂಯೋ ಗಣನಾಥವಪುರ್ಧರಂ ।
ಪಾದಪ್ರದಕ್ಷಿಣಾಂ ಕೃತ್ವಾ ಸ್ವಯಂ ಚ ಗಣಪೋಽಭವತ್ ॥ ೮೭ ॥
ತದಾ ಪ್ರಭೃತಿ ಶಕ್ರಾದ್ಯಾಃ ಸುರಾ ವಿಷ್ಣುಸಮನ್ವಿತಾಃ ।
ಪಾದಾಭ್ಯಾಮೇವ ಕುರ್ವಂತಿ ಮಮ ಸರ್ವೇ ಪ್ರದಕ್ಷಿಣಾಂ ॥ ೮೮ ॥

---

೮೨–೮೩. ಈ ರೀತಿಯಾಗಿ ಪ್ರದಕ್ಷಿಣ ನಮಸ್ಕಾರಗಳನ್ನು ಒಂದು ಮಂಡಲವಾಗಲಿ, ಮಂಡಲಾರ್ಧವಾಗಲಿ ಸಂಕಲ್ಪವಿಧಿಪೂರ್ವಕವಾಗಿ ಮಾಡಿಸಿದ ರಾಜನಿಗೆ ರಾಜ್ಯವು ಸ್ಥಿರವಾಗುವುದು. ನಾನು ಯಾವಾಗಲೂ ಆತನ ಮುಂದೆ ನಿಂತು ಶತ್ರುಗಳ ಪರಾಜಯವನ್ನುಂಟುಮಾಡುತ್ತಿರುವೆನು.

೮೪. ಭಕ್ತನು ಧರ್ಮಲೋಭವುಳ್ಳ ಮನಸ್ಸಿನಿಂದ ಶಿವಾಚಾರಕ್ಕೆ ವಿರುದ್ಧವಾಗಿ ವಾಹನಾದಿಗಳ ಸಹಾಯದಿಂದ ಪ್ರದಕ್ಷಿಣೆಯನ್ನು ಸರ್ವಥಾ ಮಾಡಬಾರದು.

೮೫. ಪೂರ್ವದಲ್ಲಿ ಧರ್ಮಕೇತುವೆಂಬ ರಾಜನು ಯಮಲೋಕದಿಂದ ಬಂದು ಅಶ್ವಾರೂಢನಾಗಿ ನನ್ನ ಪ್ರದಕ್ಷಿಣೆಯನ್ನು ಮಾಡಲೆಳಸಿದನು.

೮೬. ಕ್ಷಣಕಾಲದಲ್ಲಿಯೇ ಆ ಕುದುರೆಯು ಗಣನಾಯಕನ ರೂಪವನ್ನು ತಾಳಿ ದೇವತೆಗಳಿಂದ ಪೂಜೆಯನ್ನು ಹೊಂದಿ ರಾಜನನ್ನು ಭೂಮಿಯಲ್ಲಿಯೇ ಬಿಟ್ಟು ಕೈಲಾಸವನ್ನು ಸೇರಿತು.

೮೭. ಆಗ ಧರ್ಮಕೇತುವು ತನ್ನ ವಾಹನವು ಗಣಶರೀರವನ್ನು ಹೊಂದಿದುದನ್ನು ಕಂಡು ತಾನೂ ಸಹ ನಡೆದೇ ಪ್ರದಕ್ಷಿಣೆಯನ್ನು ಮಾಡಿ ಗಣಾಧಿನಾಥನಾದನು.

೮೮. ಅಂದು ಮೊದಲ್ಗೊಂಡು ಇಂದ್ರ, ವಿಷ್ಣು ಮೊದಲಾದ ದೇವತೆಗಳೆಲ್ಲರೂ ನನ್ನ ಪ್ರದಕ್ಷಿಣೆಯನ್ನು ಪಾದಸಂಚಾರದಿಂದಲೇ ಮಾಡುವರು.

ಸ್ವರ್ಗಾನ್ನಿಪಾತಿತಃ ಕೋಽಪಿ ಸಿದ್ಧಃ ಕಾಲೇ ತಪಃಕ್ಷಯಾತ್ ।
ಪ್ರದಕ್ಷಿಣಾಂ ತತಃ ಕೃತ್ವಾ ಪುನರ್ಲಬ್ಧಪದೋಽಭವತ್ ॥ ೮೯ ॥
ಸ್ಖಲಿತಂ ಪಾದಜಂ ರಕ್ತಂ ಮನುಃ ಕರ್ತುಃ ಪ್ರದಕ್ಷಿಣಂ ।
ಮಾರ್ಜ್ಯತೇ ತಸ್ಯ ದೇವೇಂದ್ರಮೌಳಿಮಂದಾರಕೇಸರೈಃ ॥ ೯೦ ॥
ಪ್ರದಕ್ಷಿಣಮಹಾವೀಥೀ ಶಿಲಾಶಕಲಘಟ್ಟಿತಂ ।
ಪದಂ ಸಂಧಾರ್ಯತೇ ಪುಂಸಾಂ ಶ್ರೀಪಯೋಧರಕುಂಕುಮೈಃ ॥ ೯೧ ॥
ಮಣಿಪರ್ವತ ಶೃಂಗೇಷು ಕಲ್ಪದ್ರುಮವನಾಂತರೇ ।
ಸಂಚರಂತಿ ಸದಾ ಮರ್ತ್ಯಾ ಮಮ ಕೃತ್ವಾ ಪ್ರದಕ್ಷಿಣಂ ॥ ೯೨ ॥

ಗೌರ್ಯುವಾಚ :—

ಉಪಚಾರಪ್ರವೃತ್ತಾನಾಂ ಫಲಂ ಮೇ ಶಂಸ ಸುವ್ರತ ।
ಯೈರ್ಯೈರ್ಜನಃ ಕೃತಾರ್ಥಃ ಸ್ಯಾದ್ಯಥಾಶಕ್ತಿ ಕೃತಾದರಃ ॥ ೯೩ ॥

ಮುನಿರುವಾಚ :—

ಉಪಚಾರಫಲಂ ದೇವಿ ಶೃಣು ವಕ್ಷ್ಯಾಮ್ಯಹಂ ತವ ।
ಯನ್ಮಹ್ಯಂ ಕೃಪಯಾ ಪೂರ್ವಮುಕ್ತವಾನ್ಪರಮೇಶ್ವರಃ ॥ ೯೪ ॥

---

೮೯. ಒಬ್ಬಾನೊಬ್ಬ ಸಿದ್ಧನು ತಪಃಫಲವು ಕ್ಷೀಣವಾದುದರಿಂದ ಸ್ವರ್ಗಚ್ಯುತನಾಗಿ ಭೂಲೋಕಕ್ಕೆಬಂದು ನನ್ನ ಪ್ರದಕ್ಷಿಣೆಯಿಂದ ಪುನಃ ತನ್ನ ಸ್ಥಾನವನ್ನು ಸೇರಿದನು.

೯೦. ನನ್ನ ಪ್ರದಕ್ಷಿಣೆಯನ್ನು ಮಾಡುವ ಭಕ್ತರು ತಡವರಿಸಿದಾಗ ಅವರ ಪಾದದಿಂದಬಿದ್ದ ರಕ್ತಬಿಂದುವು ದೇವೇಂದ್ರನ ಕಿರೀಟದಲ್ಲಿರುವ ಮಂದಾರ ಪುಷ್ಪಗಳಿಂದ ತೊಳೆಯಲ್ಪಡುತ್ತದೆ.

೯೧–೯೨. ಪ್ರದಕ್ಷಿಣೆಯ ಮಾರ್ಗದ ನೊರಜುಕಲ್ಲುಗಳಿಂದ ನೋವುಗೊಂಡ ಭಕ್ತನ ಪಾದವು ಮಹಾಲಕ್ಷ್ಮಿಯ ಕುಚಕುಂಕುಮ ಪ್ರದೇಶದಲ್ಲಿ ಧರಿಸಲ್ಪಡುತ್ತದೆ. ನನ್ನ ಪ್ರದಕ್ಷಿಣೆಯನ್ನು ಮಾಡುವ ಮನುಷ್ಯರು ಸ್ವರ್ಗಲೋಕದ ಮಣಿಪರ್ವತಾಗ್ರಗಳಲ್ಲಿಯೂ ಕಲ್ಪವೃಕ್ಷಗಳ ವನಗಳಲ್ಲಿಯೂ ವಿಹಾರ ಮಾಡುತ್ತಿರುವರು.''

೯೩. ಪಾರ್ವತಿಯು ಕೇಳುತ್ತಾಳೆ:—''ಎಲೈ ತಪೋಧನನೆ! ಮನುಷ್ಯನು ತನ್ನ ಶಕ್ತ್ಯನುಸಾರವಾಗಿ ಆದರದಿಂದ ಅರುಣಾಚಲೇಶ್ವರನ ಸೇವೆಯನ್ನು ಮಾಡುವುದರಿಂದಾಗುವ ಫಲವನ್ನು ಹೇಳು.''

೯೪. ಗೌತಮನು ಹೇಳುತ್ತಾನೆ:—''ಎಲೌ ದೇವಿಯೆ! ಪೂರ್ವದಲ್ಲಿ ಪರಮೇಶ್ವರನಿಂದಲೇ ಹೇಳಲ್ಪಟ್ಟ ಪ್ರಕಾರದಿಂದ ದೇವದೇವನ ಸೇವೆಯ ಫಲವನ್ನು ಹೇಳುವೆನು.

**ಲೂತೀ ತಂತುಕಜಾಲಾನಿ ಸಂಸೃಜ್ಯ ಕ್ವಚಿದೇವ ಮೇ ।**
**ಜಾತಿಸ್ಮರೋ ಮಹೀಧ್ರೇಽಸ್ಮಿನ್ಸೋಽಂಶುಕೈರ್ಮಾಂ ವ್ಯವೇಷ್ಟಯತ್ ॥**
**ಗಜಃ ಕಶ್ಚಿತ್ತೃಷಾಕ್ರಾಂತೋ ವಿಮುಚ್ಯ ಚ ಮಧು ಕ್ವಚಿತ್ ।**
**ವನಪಲ್ಲವಮುಕ್ತೀರ್ಯ ಮುಕ್ತೋಽಭೂದ್ಗಣನಾಯಕಃ ॥ ೯೬ ॥**
**ಕೃಮಯೋ ವಿಲುಠಂತೋ ಮೇ ಪಾರ್ಶ್ವೇ ದುರಿತವರ್ಜಿತಾಃ ।**
**ಸಿದ್ಧವೇಷಾಃ ಪುನಃ ಸರ್ವೇ ಮಮ ಲೋಕಂ ವ್ರಜಂತಿ ತೇ ॥ ೯೭ ॥**
**ಅವ್ಯುಚ್ಛಿನ್ನಪ್ರದೀಪಾರ್ಚಿಃ ಕ್ಷಣಮಪ್ಯಾದಧಾತಿ ಯಃ ।**
**ಸ್ವಯಂಪ್ರಕಾಶಃ ಸ ಭವನ್ಮಮ ಸಾರೂಪ್ಯಮಶ್ನುತೇ ॥ ೯೮ ॥**
**ಹಾರೀತಃ ಕೋಽಪಿ ಸಂಪ್ರಾಪ್ತಃ ಶಾಖಾನೀಡೋ ಮಮಾಂತಿಕೇ ।**
**ಖದ್ಯೋತೋ ದೀಪವನ್ಮುಕ್ತಿಂ ತಾವನ್ಮುಕ್ತಿಂ ಸಮಾಗತಃ ॥ ೯೯ ॥**
**ಗಾವಃ ಪ್ರಸ್ರವಣೈಃ ಸಿಕ್ತ್ವಾ ವತ್ಸಸ್ಮರಣಸಂಭವೈಃ ।**
**ಮತ್ಪಾರ್ಶ್ವೇ ಮುಕ್ತಿಮಾಪುಸ್ತಾ ಮಮ ಲೋಕಂ ಸಮಾಶ್ರಯನ್ ॥**

---

೯೫. ಒಂದು ಜೇಡರಹುಳುವು ಒಮ್ಮೆ ನನಗೆ ದಾರಗಳನ್ನು ಹೊದಿಸಿದ ಪುಣ್ಯದಿಂದ ಜನ್ಮಾಂತರದಲ್ಲಿ ಮನುಷ್ಯನಾಗಿ ನನ್ನನ್ನು ಉತ್ತಮ ವಸ್ತ್ರಗಳಿಂದ ಸೇವಿಸಿತು.

೯೬. ಒಂದಾನೊಂದು ಆನೆಯು ತೃಷೆಗೊಂಡು ಗಿಡಗಳ ಚಿಗುರುಗಳನ್ನು ತಿನ್ನುತ್ತ ಅಪ್ರಯತ್ನವಾಗಿ ನನ್ನಮೇಲೆ ಚಿಗುರಿನ ಜೇನುತುಪ್ಪದ ಒಂದು ಬಿಂದುವನ್ನು ಹಾಕಿದ್ದರಿಂದ ಮುಕ್ತವಾಗಿ ಗಣಾಧಿಪತ್ಯವನ್ನು ಪಡೆಯಿತು.

೯೭. ಕ್ರಿಮಿಕೀಟಗಳೂ ಕೂಡ ನನ್ನ ಪಾರ್ಶ್ವದಲ್ಲಿ ಹೊರಳಾಡುವುದರಿಂದ ನಿಷ್ಕಲ್ಮಷಗಳಾಗಿ ಉತ್ತಮ ರೂಪಗಳನ್ನು ಧರಿಸಿ ನನ್ನ ಲೋಕವನ್ನು ಸೇರುತ್ತವೆ.

೯೮. ಯಾವನು ಕ್ಷಣಕಾಲವಾದರೂ ಅಖಂಡದೀಪವನ್ನು ನನಗೆ ಬೆಳಗಿಸುವನೊ; ಅವನು ಸ್ವಯಂಜ್ಯೋತಿಸ್ವರೂಪನಾಗಿ ನನ್ನ ಸಾರೂಪ್ಯವನ್ನು ಹೊಂದುವನು.

೯೯. ಗಿಡಗಳಲ್ಲಿ ವಾಸಿಸುವ ಒಂದು ಪಾರಿವಾಳವು ಒಮ್ಮೆ ರಾತ್ರಿಯಲ್ಲಿ ಪತಂಗವು ದೀಪಕ್ಕೆರಗುವಂತೆ ನನ್ನ ಸಮೀಪಕ್ಕೆ ಬಂದಮಾತ್ರದಿಂದಲೇ ಮೋಕ್ಷವನ್ನು ಹೊಂದಿತು.

೧೦೦. ಕೆಲವು ಹಸುಗಳೂ ಕೂಡ ತಮ್ಮ ಕರುಗಳನ್ನು ನೆನೆದು ಕೆಚ್ಚಲಿನಿಂದ ಉಕ್ಕಿಬಂದ ಹಾಲನ್ನು ನನ್ನ ಪಾರ್ಶ್ವದಲ್ಲಿ ಸುರಿಸಲು ನನ್ನ ಲೋಕವನ್ನಾಶ್ರಯಿಸಿ ಮುಕ್ತಿಯನ್ನು ಪಡೆದುವು.

ಕಾಕಃ ಪಕ್ಷಜವಾತೇನ ಬಲಿಗ್ರಹಣಲೋಲುಪಃ ।
ಮಾರ್ಜಯನ್ಮತ್ಪುರೋಭಾಗಂ ಮುಕ್ತಿಂ ಪ್ರಾಪದ್ಯತ ಕ್ಷಣಾತ್ ॥ ೧೦೧ ॥
ಮೂಷಕೋ ಮದ್ಗುಹಾಭಾಗಂ ಮಣಿಸಂಘವಿಕರ್ಷಣೈಃ ।
ಪ್ರಕಾಶಯನ್ನಿಶಿತಿಮಿರಂ ಮಮ ರೂಪಮುಪದ್ಯತ ॥ ೧೦೨ ॥
ಛಾಯಾವೃಕ್ಷತ್ವಮಾಸ್ಥಾತುಂ ಮುನಯಸ್ತ್ರಿದಶಾ ಅಪಿ ।
ಪ್ರಾರ್ಥಯಂತ್ಯೇವ ಮತ್ಪಾರ್ಶ್ವೇ ನ ಪುನಃ ಸಂಭವೇಚ್ಛಯಾ ॥ ೧೦೩ ॥
ಗೋಪುರಂ ಶಿಖರಂ ಶಾಲಾಂ ಮಂಡಪಂ ವಾಪಿಕಾಮಪಿ ।
ಕುರ್ವತಾಂ ಮತ್ಪುರೋಭಾಗೇ ಸಿದ್ಧ್ಯಂತೀಷ್ಟಾರ್ಥಸಿದ್ಧಯಃ ॥ ೧೦೪ ॥
ಸದಾ ಮರ್ತ್ಯೈರನಾಸಾದ್ಯಮಗ್ನಿಲಿಂಗಮಿದಂ ಮಮ ।
ಅನಾಸಾದ್ಯಾಚಲೇಶಾಖ್ಯಂ ಪೂಜ್ಯತಾಂ ವಸುಧಾತಲೇ ॥ ೧೦೫ ॥
ವೀಕ್ಷಣಸ್ಪರ್ಶನಧ್ಯಾನೈಃ ಸ್ವಭೂತಂ ನಿಖಿಲಂ ಜಗತ್ ।
ಪೋಷಯಂತೀ ಪರಾಶಕ್ತಿಃ ಪೂಜ್ಯಾಪೀತಕುಚಾಭಿದಾ ॥ ೧೦೬ ॥
ಸರ್ವಲೋಕೈಕಜನನೀ ಸಂಪ್ರಾಪ್ತಾ ನಿತ್ಯಯೌವನಂ ।
ಯೌವನಪ್ರಾರ್ಥಿಭಿಃ ಸೇವ್ಯಾ ಸದಾಪೀತಕುಚಾಭಿದಾ ॥ ೧೦೭ ॥

---

೧೦೧. ಒಂದು ಕಾಗೆಯು ಆಹಾರಾಕಾಂಕ್ಷಿಯಾಗಿ ಹಾರುತ್ತ ತನ್ನ ರೆಕ್ಕೆಗಳ ಹೊಡೆತದಿಂದುಂಟಾದ ಗಾಳಿಯಿಂದ ನನ್ನ ಮುಖಪ್ರದೇಶವನ್ನು ಸೇವಿಸಲು ತಕ್ಷಣದಲ್ಲಿಯೇ ಮುಕ್ತಿಯನ್ನು ಹೊಂದಿತು.

೧೦೨. ಒಂದಾನೊಂದು ಮೂಷಕವು ಕೆಲವು ಮಣಿಗಳನ್ನು ಸೆಳೆದು ಕೊಂಡು ಬಂದು ನನ್ನ ಗರ್ಭಗುಡಿಯ ಅಂಧಕಾರವನ್ನು ದೂರಮಾಡಿದ ಪುಣ್ಯ ದಿಂದ ಸಾರೂಪ್ಯವನ್ನು ಹೊಂದಿತು.

೧೦೩. ಮಹರ್ಷಿಗಳೂ ದೇವತೆಗಳೂ ಜನ್ಮರಾಹಿತ್ಯವನ್ನು ಪಡೆಯುವುದ ಕ್ಕಾಗಿ ನನ್ನ ಸಮೀಪದಲ್ಲಿ ಛಾಯಾವೃಕ್ಷಗಳಾಗಿರಬೇಕೆಂದು ಪ್ರಾರ್ಥಿಸುತ್ತಾರೆ.

೧೦೪. ನನ್ನ ಇದುರಿನಲ್ಲಿ ಗೋಪುರ, ಶಿಖರ, ಶಾಲೆ, ಮಂಟಪ, ಕೊಳ ಮುಂತಾದುವುಗಳನ್ನು ನಿರ್ಮಾಣಮಾಡುವವರ ಸಕಲ ಇಷ್ಟಾರ್ಥಗಳೂ ನೆರವೇರುತ್ತವೆ.

೧೦೫. ನನ್ನ ಅಗ್ನಿಲಿಂಗಮಯರೂಪವು ಮನುಷ್ಯರಿಗೆ ಅಸಹ್ಯವಾದದ್ದು. ಆದುದರಿಂದ ಅಚಲೇಶ್ವರ ರೂಪವೇ ಭೂಲೋಕದಲ್ಲಿ ಪೂಜಿಸಲ್ಪಡಲಿ.

೧೦೬. ಆಲೋಕನ, ಸ್ಪರ್ಶನ, ಧ್ಯಾನಗಳಿಂದ ತನ್ನ ಜಗದ್ರೂಪವನ್ನೇ ಪೋಷಿಸುತ್ತಿರುವ ಪರಾಶಕ್ತಿಯು ಅಪೀತಕುಚೆಯೆಂಬ ಹೆಸರಿನಿಂದ ಇಲ್ಲಿ ಪೂಜೆ ಗೊಳ್ಳಲಿ.

೧೦೭. ಸಕಲ ಲೋಕಗಳಿಗೆ ಮಾತೆಯೂ, ನಿತ್ಯಯೌವನ ಸಮನ್ವಿತೆಯೂ

ಕ್ಷಣಾತ್ತಸ್ಯ ಪುರೋಭಾಗೇ ವಸತಾಂ ಪ್ರಾಣಿನಾಮಿಹ ।
ಪರತ್ರ ವಾತ್ರ ದುಷ್ಪ್ರಾಪ್ಯಮಿಷ್ಟವಸ್ತು ನ ವಿದ್ಯತೇ ॥ ೧೦೮ ॥
ಅಪ್ರಮೇಯಗುಣಾಧಾರಮಪೇಕ್ಷಿತವರಪ್ರದಂ ।
ಅಶೇಷಭೋಗನಿಲಯಂ ಶೋಣಾದ್ರೀಶಂ ಸಮರ್ಚಯ ॥ ೧೦೯ ॥
ಲಬ್ಧಕಾಮಾ ಪುನಃ ಶಂಭುಮಾಶ್ರಯಿಷ್ಯಸಿ ಸುವ್ರತೇ ।
ತಪಶ್ಚರಣಮಪ್ಯೇತತ್ತ್ವ ಲೋಕಹಿತಾವಹಂ ॥ ೧೧೦ ॥
ನ ಕೇವಲಂ ತವ ತಪಃ ಸ್ವವಾಂಛಿತಫಲಪ್ರದಂ ।
ತಪಸ್ಯತಾಮೃಷೀಣಾಂಚ ಕ್ಷೇಮಾಯೈವ ಭವಿಷ್ಯತಿ ॥ ೧೧೧ ॥
ಕಾರಣಾಂತರಮಾಶಂಕ್ಯ ತಪಃ ಕುರ್ವಂತಿ ದೇವತಾಃ ।
ರಹಸ್ಯಂ ದೇವತಾನಾಂತು ಫಲೇನೈವಾನುಮೀಯತೇ ॥ ೧೧೨ ॥
ವಯಂ ಚ ಸಹಸಂವಾಸಾತ್ತವ ವ್ರತನಿರೀಕ್ಷಣಾತ್ ।
ಕೃತಾರ್ಥಾಃ ಸ್ಮಾಮ ದೇವೇಶಿ ತಪಸಾ ನಃ ಕೃತಾರ್ಥತಾ ॥ ೧೧೩ ॥

---

ಆದ ಅಪೀತಕುಚಾದೇವಿಯು ಯೌವನವನ್ನು ಬಯಸುವ ಸಕಲರಿಂದಲೂ ಸೇವಾರ್ಹಳಾಗಿರುವಳು.

೧೦೮. ಎಲೌ ಪಾರ್ವತಿಯೆ! ಒಂದು ಕ್ಷಣಕಾಲವಾದರೂ ಆ ಅರುಣಾಚಲೇಶ್ವರನ ಸನ್ನಿಧಿಯಲ್ಲಿ ವಾಸಮಾಡುವ ಪ್ರಾಣಿಗಳಿಗೆ ಇಹಲೋಕದಲ್ಲಿಯೂ ಅಪ್ರಾಪ್ಯವಾದ ವಸ್ತುವೆಂಬುದು ಇಲ್ಲವೇ ಇಲ್ಲವು.

೧೦೯. ಅನಂತಗುಣಸಹಿತನೂ, ಅಭೀಪ್ಸಿತ ವರಗಳನ್ನು ಕೊಡುವವನೂ, ಅತುಲೈಶ್ವರ್ಯಯುಕ್ತನೂ ಆದ ಅರುಣಾಚಲೇಶ್ವರನನ್ನು ಪೂಜೆಮಾಡು.

೧೧೦. ನಿನ್ನ ಇಷ್ಟಾರ್ಥವು ನೆರವೇರಿ ನೀನು ವ್ರತಮಹಿಮೆಯಿಂದ ಪುನಃ ಪರಮೇಶ್ವರನನ್ನು ಸೇರುವೆ. ಈ ನಿನ್ನ ತಪಶ್ಚರಣವೂ ಲೋಕಹಿತಕ್ಕಾಗಿಯೇ ಆಗಿರುವುದು.

೧೧೧. ನಿನ್ನ ತಪಸ್ಸು ಕೇವಲ ನಿನ್ನ ಇಷ್ಟಾರ್ಥಸಿದ್ಧಿಗೆ ಮಾತ್ರವೇ ಅಲ್ಲ. ಇಲ್ಲಿ ತಪಸ್ಸುಮಾಡುತ್ತಿರುವ ಇತರ ಋಷಿಗಳ ಅಭ್ಯುದಯಕ್ಕೆ ಕಾರಣವೂ ಆಗಿರುವುದು.

೧೧೨. ದೇವತೆಗಳು ಯಾವುದೋ ವ್ಯಾಜಗಳಿಂದ ಇಲ್ಲಿ ತಪಸ್ಸನ್ನು ಮಾಡುತ್ತಾರೆ. ಇದರ ರಹಸ್ಯವು ಫಲದಿಂದಲೇ ತಿಳಿಯಬೇಕಾಗಿರುವುದು.

೧೧೩. ನಾವೂ ಸಹ ನಿನ್ನ ಸಹವಾಸದಿಂದಲೂ, ನಿನ್ನ ವ್ರತನಿಯಮಗಳನ್ನು ನೋಡುವುದರಿಂದಲೂ ಕೃತಾರ್ಥರಾಗುತ್ತೇವೆ. ದೇವನಾಯಕಿಯಾದ ನಿನ್ನ ತಪಸ್ಸಿನಿಂದ ನಮ್ಮ ಕೃತಾರ್ಥತೆಯಾಗುವುದು.''

ಇತಿ ತಸ್ಯ ಮುನೇರ್ವಾಕ್ಯಮರ್ಥಗರ್ಭಂ ನಿಶಮ್ಯ ಸಾ ।
ಗೌರೀ ಕೌತುಕಸಂಯುಕ್ತಾ ಪ್ರಶಶಂಸ ಮಹಾಮುನಿಂ ॥ ೧೧೪ ॥
ತಪಃ ಕಿಮನ್ಯತ್ಕರ್ತವ್ಯಂ ಲಬ್ಧಂ ತವ ತು ದರ್ಶನಂ ।
ಅರುಣಾದ್ರಿರಯಂ ದೃಷ್ಟಃ ಶ್ರುತಂ ಮಾಹಾತ್ಮ್ಯಮಸ್ಯ ಚ ॥ ೧೧೫ ॥
ಅಹೋ ಭೂಮೇಸ್ತು ವೈಚಿತ್ರ್ಯಂ ಯತೋ ದೃಷ್ಟಾ ದಿವೋಽಧಿಕಾ ।
ಯತ್ರೈವ ತೈಜಸಂ ಲಿಂಗಂ ದೇವತಾನಾಂ ವರಪ್ರದಃ ॥ ೧೧೬ ॥
ಶಿವಃ ಪ್ರಸಾದಸಿದ್ಧೋ ಮೇ ದರ್ಶಿತಂ ಸ್ಥಾನಮಾತ್ಮನಃ ।
ಅತ್ರೈವ ಶಿವಮಾರಾಧ್ಯ ವಶೀಕುರ್ಯಾಂ ಜಗದ್ಗುರುಂ ॥ ೧೧೭ ॥
ಅವಿನಾಭೂತಮೈಕ್ಯಂ ಮೇ ದೇವೇನ ಭವತಾತ್ಸದಾ ।
ತ್ವಯಾ ಕೃತೇನ ಸಾಹ್ಯೇನ ಭವೇಯಂ ಶಿವನಾಯಿಕಾ ॥ ೧೧೮ ॥
ಇತಿ ಗೌತಮಸನ್ನಿಧೌ ತದಾನೀಂ
ಕೃತಸಂವಿತ್ತಪ ಆದರೇಣ ಕರ್ತುಂ ।
ಅಭಜದ್ರುಚಿರಾಂ ಚ ಪರ್ಣಶಾಲಾಂ
ಮುನಿನಾ ಚಾನುಮತಾ ತಥೇತಿ ಭಕ್ತ್ಯಾ ॥ ೧೧೯ ॥

---

೧೧೪. ಹೀಗೆ ಹೇಳಿದ ಗೌತಮಮಹರ್ಷಿಯ ಅರ್ಥಗರ್ಭಿತಗಳಾದ ಮಾತುಗಳನ್ನು ಕೇಳಿ ಪಾರ್ವತಿಯು ಆಶ್ಚರ್ಯಯುಕ್ತಳಾಗಿ ಆತನನ್ನು ಬಹು ವಿಧವಾಗಿ ಹೊಗಳಿದಳು.

೧೧೫. "ಎಲೈ ಮುನಿವರ್ಯನೆ! ನಾನು ಇನ್ನು ಯಾವ ತಪಸ್ಸನ್ನು ಮಾಡಬೇಕು? ನಿನ್ನ ದರ್ಶನದ ಲಾಭವಾಯಿತು. ಈ ಅರುಣಾಚಲವನ್ನೂ ನೋಡಿದೆನು. ಇದರ ಮಾಹಾತ್ಮ್ಯವನ್ನೂ ಕೇಳಿದೆನು.

೧೧೬. ಈ ಭೂಲೋಕವು ಮಹಾ ವಿಚಿತ್ರವಾಗಿ ಸ್ವರ್ಗಕ್ಕಿಂತಲೂ ಅಧಿಕವಾಗಿರುವುದು. ಇಲ್ಲಿಯೇ ದೇವತೆಗಳಿಗೂ ಇಷ್ಟಪ್ರದವಾದ ತೈಜಸಲಿಂಗವು ನೆಲೆಗೊಂಡಿರುವುದು.

೧೧೭–೧೧೮. ಸದಾಶಿವನು ನನಗೆ ಪ್ರಸನ್ನನಾಗುವನು. ನನ್ನ ನಿವಾಸ ಸ್ಥಾನವೂ ನನಗೆ ತಿಳಿಯಿತು. ಇಲ್ಲಿಯೇ ಶಿವನನ್ನು ಪೂಜಿಸಿ ಆತನನ್ನು ವಶಮಾಡಿಕೊಳ್ಳುವೆನು. ನನಗೆ ಯಾವಾಗಲೂ ಪರಮೇಶ್ವರನಿಂದ ಅವಿನಾಭಾವವೇ ಉಂಟಾಗಲಿ. ನಿನ್ನಿಂದ ಮಾಡಲ್ಪಡುವ ಸಹಾಯದಿಂದ ನಾನು ಆ ಪರಮೇಶ್ವರನಿಗೆ ನಾಯಕಿಯಾಗುವೆನು."

೧೧೯. ಹೀಗೆಂದು ಹೇಳಿ ಪಾರ್ವತಿಯು ಗೌತಮರ ಸನ್ನಿಧಿಯಲ್ಲಿ ಜ್ಞಾನ ಸಹಿತವಾದ ತಪಸ್ಸನ್ನು ಆದರದಿಂದ ಮಾಡಲು ಆತನ ಅನುಜ್ಞೆಯನ್ನು ಪಡೆದು ಭಕ್ತಿಯಿಂದ ಮನೋಹರವಾದ ಪರ್ಣಶಾಲೆಯನ್ನು ಸೇರಿದವಳಾದಳು.

ಸುಕುಮಾರತನುಃ ಸರೋರುಹಾಕ್ಷೀ
ಘನತುಂಗಸ್ತನಕಲ್ಪಿತೋತ್ತರೀಯಾ ।
ಜಟಿಲಾ ಹರಿನೀಲರತ್ನಕಾಂತಿ
ಗಿರಿಜಾ ರಾಜತಿ ದೇಹವತ್ತಪಃ ಶ್ರೀಃ ॥ ೧೨೦ ॥
ನಿಯಮೈರ್ಬಹುಭಿಸ್ತಪೋ ವಿಶೇಷೈಃ
ಕ್ರತುಷು ಪ್ರಾಪ್ತವಿಚಿತ್ರಯೋಗಬಂಧೇ ।
ನಿಗಮಾಗಮದೃಷ್ಟಧರ್ಮಮಾರ್ಗಂ
ಸಕಲಂ ಸಾ ತು ಕೃತಾರ್ಥತಾಮನೈಷೀತ್ ॥ ೧೨೧ ॥
ತಪಸಾ ವಿವಿಧೇನ ತಪ್ಯಮಾನಾ
ನ ಕದಾಚಿತ್ಪರಿಖೇದಮಾಪ ತನ್ವೀ ।
ಹರಿರತ್ನಮಯೀವ ಕಾಪಿ ವಲ್ಲೀ
ನಿತರಾಂ ದೀಪ್ತಿಮತೀ ಬಭೂವ ಬಾಲಾ ॥ ೧೨೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಪೂರ್ವಾರ್ಧೇ "ಅರುಣಾಚಲೇಶ್ವರ ಪ್ರದಕ್ಷಿಣಮಾಹಾತ್ಮ್ಯವರ್ಣನಂ" ನಾಮ ನವಮೋಽಧ್ಯಾಯಃ

---

೧೨೦. ಮೃದುಶರೀರವುಳ್ಳವಳೂ, ಕಮಲದಂತೆ ನೇತ್ರಗಳುಳ್ಳವಳೂ, ಪೀನಸ್ತನಗಳ ಮೇಲೆ ಸೆರಗನ್ನು ಹೊದ್ದಿರುವಳೂ, ಜಟೆಗಳನ್ನು ಧರಿಸಿದವಳೂ, ಇಂದ್ರನೀಲ ರತ್ನದಂತೆ ದೇಹಕಾಂತಿಯುಳ್ಳವಳೂ ಆದ ಗಿರಿಜೆಯು ತಪೋಲಕ್ಷ್ಮಿಯೇ ಮೂರ್ತಿಗೊಂಡಂತೆ ಕಾಣುತ್ತಿದ್ದಳು.

೧೨೧. ಅನೇಕ ನಿಯಮಗಳಿಂದಲೂ, ತಪಸ್ಸುಗಳಿಂದಲೂ, ಯಜ್ಞಗಳಲ್ಲಿ ಪ್ರಾಪ್ತವಾಗುವ ಯೋಗಬಂಧಗಳಿಂದಲೂ ವೇದ ಮತ್ತು ಆಗಮಗಳಲ್ಲಿ ಹೇಳಿರುವ ಸಕಲ ಧರ್ಮಮಾರ್ಗಗಳನ್ನೂ ಆ ದೇವಿಯು ಸಾರ್ಥಕಗೊಳಿಸಿದಳು.

೧೨೨. ಬಹುವಿಧ ತಪಸ್ಸುಗಳನ್ನು ಮಾಡುತ್ತಿದ್ದರೂ ಆಕೆಯು ಯಾವಾಗಲೂ ಖಿನ್ನಳಾಗಲಿಲ್ಲ. ಇಂದ್ರನೀಲ ರತ್ನದ ಬಳ್ಳಿಯಂತೆ ಆಕೆಯು ಬಹಳ ಕಾಂತಿಯುಕ್ತಳೇ ಆದಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಪೂರ್ವಾರ್ಧದಲ್ಲಿ "ಅರುಣಾಚಲೇಶ್ವರ ಪ್ರದಕ್ಷಿಣೆಯ ಮಾಹಾತ್ಮ್ಯ ವರ್ಣನ"ವೆಂಬ ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದಶಮೋಽಧ್ಯಾಯಃ

### ದೇವ್ಯಾ ಮಹಿಷಾಸುರೇಣಕೃತ ಯುದ್ಧ ವರ್ಣನಂ

ಬ್ರಹ್ಮೋವಾಚ :—

ಅಥ ದೇವಾ ಮಹೀಂ ಹಿತ್ವಾ ಮಹಿಷಾಸುರಪೀಡಿತಾಃ ।
ನತ್ವಾ ಗೌರೀಂ ತಪಸ್ಯಂತೀಂ ಜಗ್ಮುಃ ಶರಣಮಾಕುಲಾಃ ॥ ೧ ॥
ಅಥ ತಾನಭಯಂ ದೇಹಿ ದೇವೀತಿ ಭಯವಿಹ್ವಲಾನ್ ।
ಅಮರಾನ್ವೀಕ್ಷ್ಯ ಸಾ ದೇವೀ ಕಿಂ ಕಾರ್ಯಮಿತಿಚಾಭ್ಯಧಾತ್ ॥ ೨ ॥
ತತೋ ವಿಜ್ಞಾಪಯಾಮಾಸುಃ ದೈತ್ಯೇಂದ್ರಾದ್ಭಯಮಾತ್ಮನಾಂ ।
ದೇವ್ಯೈ ಬದ್ಧಾಂಜಲಿಪುಟಾ ದೇವಾ ಇಂದ್ರಪುರೋಗಮಾಃ ॥ ೩ ॥

ದೇವಾ ಊಚುಃ :—

ಅಪ್ಸರೋಭಿಃ ಪರಿವೃತಃ ಸುಖಂ ಕ್ರೀಡತಿ ನಂದನೇ ।
ಐರಾವತಮುಖಾನ್ಸರ್ವಾನ್ದಿಙ್ನಾಗಾನ್ನಿಜಮಂದಿರೇ ॥ ೪ ॥
ಆವಾಸಯನ್ವಿನೋದಾರ್ಥಮಂಗನಾಭಿಃ ಸಹಾಗತಾನ್ ।
ಉಚ್ಚೈಃಶ್ರವಃಪುರೋಗಾನಾಮುಪಭೋಗಂ ಕರೋತ್ಯಸೌ ॥ ೫ ॥

---

### ಕನ್ನಡದ ಅನುವಾದ

#### ದೇವಿಯು ಮಹಿಷಾಸುರನೊಡನೆ ಯುದ್ಧ ಮಾಡಿದುದು

೧. ಬ್ರಹ್ಮನು ಹೇಳುತ್ತಾನೆ:—ಒಂದಾನೊಂದು ಕಾಲದಲ್ಲಿ ದೇವತೆಗಳು ಮಹಿಷಾಸುರನಿಂದ ಪರಾಜಿತರಾಗಿ ವ್ಯಾಕುಲವಾದ ಮನಸ್ಸಿನಿಂದ ತಪಸ್ಸಿನಲ್ಲಿ ನಿರತಳಾಗಿರುವ ಗೌರೀದೇವಿಯನ್ನು ಶರಣುಹೊಕ್ಕರು.

೨. "ಎಲಾ ದೇವಿಯೆ! ನಮಗೆ ಅಭಯವನ್ನೀಯಬೇಕು" ಎಂದು ಭಯಗೊಂಡು ನುಡಿದು ಬೇಡಿದ ದೇವತೆಗಳನ್ನು ಕಂಡು ದೇವಿಯು ಕಾರ್ಯ ಗೌರವವೇನೆಂದು ಕೇಳಿದಳು.

೩. ಆಗ ಇಂದ್ರನೇ ಮೊದಲಾದ ದೇವತೆಗಳು ಅಂಜಲಿಬದ್ಧರಾಗಿ ರಾಕ್ಷಸೇಂದ್ರನಾದ ಮಹಿಷಾಸುರನಿಂದ ತಮಗೆ ಉಂಟಾಗಿರುವ ಭಯವನ್ನು ಆಕೆಗೆ ವಿವರಿಸತೊಡಗಿದರು.

೪–೫. ದೇವತೆಗಳು ಹೇಳುತ್ತಾರೆ:—"ಆ ರಾಕ್ಷಸನು ಅಪ್ಸರಸ್ತ್ರೀಯರಿಂದ ಸಹಿತನಾಗಿ ನಂದನವನದಲ್ಲಿ ವಿಹರಿಸುತ್ತಾನೆ. ಹೆಣ್ಣಾನೆಗಳಿಂದದೊಡಗೂಡಿದ ಐರಾವತವೇ ಮೊದಲಾದ ಅಷ್ಟದಿಗ್ಗಜಗಳನ್ನು ತನ್ನ ವಿನೋದಕ್ಕಾಗಿ ತನ್ನ ಅರಮನೆಯಲ್ಲಿ ಕಟ್ಟಿ ಉಪಯೋಗಿಸುತ್ತಿರುವನು. ಉಚ್ಚೈಶ್ರವಸ್ಸೇ ಮೊದಲಾದ ದಿವ್ಯವಸ್ತುಗಳನ್ನು ಅನುಭವಿಸುತ್ತಿದ್ದಾನೆ.

ಮಂದುರಾಸ್ವಸ್ಯ ರಮ್ಯಾಸು ದೃಶ್ಯಂತೇ ಲಕ್ಷಕೋಟಿಯಃ ।
ಹುತಾಶವಾಹನಂ ಮೇಷಂ ಪುತ್ರಾರೋಹಾರ್ಥಮಿಚ್ಛತಿ ॥ ೬ ॥
ಯಾಮ್ಯಂ ಮಹಿಷಮಾನೀಯ ಶಕಟೇ ಸೋಽಭ್ಯವಾಹಯತ್ ।
ಸಿದ್ಧೀರಾಕೃಷ್ಯ ಸಕಲಾ ಗೃಹಕರ್ಮಣಿ ಚಾದಿಶತ್ ॥ ೭ ॥
ಅಪ್ಸರಃ ಸಂಘಮಖಿಲಮಾತ್ಮಸೇವಾರ್ಥಮಾನಯತ್ ।
ಅನ್ಯತ್ಕಿಮಪಿ ಯದ್ವಸ್ತು ರತ್ನಭೂತಂ ಜಗತ್ತ್ರಯೇ ॥ ೮ ॥
ಅನಾಹೃತಂ ಪುನರ್ಹರ್ತುಂ ನ ವಿಶ್ರಾಮ್ಯತಿ ಕೋಪವಾನ್ ।
ವಯಂ ಚ ಸೇವಕಾ ಭೂತ್ವಾ ನಿತ್ಯಭೀತಿಸಮನ್ವಿತಾಃ ॥ ೯ ॥
ಪೂಜಯಂತಶ್ಚ ತಸ್ಯಾಜ್ಞಾಂ ನಾನ್ಯಾಂ ವೀಕ್ಷಾಮಹೇ ಗತಿಂ ।
ಶರಣಾಗತಸಂತ್ರಾಣಂ ತಪಃಫಲಮುದಾಹೃತಂ ॥ ೧೦ ॥
ದುರ್ಜಯೋಽಯಂ ವರೋ ದೈತ್ಯಃ ಸರ್ವೇಷಾಂ ಬಲಿನಾಮಪಿ ।
ಸುರಾಣಾಮಪಿ ದೈತ್ಯಾನಾಂ ಶಿವಾಲ್ಲಬ್ಧವರೋದಯಃ ॥ ೧೧ ॥
ಅಸ್ಯ ಶೃಂಗಾಹತಃ ಸಿಂಧುರ್ವ್ಯಾನರ್ಜಿತಮಿತಿ ಬ್ರುವನ್ ।
ರತ್ನೋಪಹಾರದಾನೇನ ನಿತ್ಯಂ ತತ್ಪ್ರೀತಿಮಿಚ್ಛತಿ ॥ ೧೨ ॥

---

೬–೭. ಅವನ ಪಶುಶಾಲೆಗಳಲ್ಲಿ ಕೋಟಿಗಟ್ಟಲೆ ಇಂತಹ ದೇವಯೋಗ್ಯವಾದ ವಾಹನಗಳಿರುವುವು. ಅಗ್ನಿಯ ವಾಹನವಾದ ಮೇಷವನ್ನು ಮಗನ ಆರೋಹಾರ್ಥವಾಗಿ ಇಚ್ಛಿಸುತ್ತಾನೆ. ಯಮನ ಮಹಿಷವನ್ನು ತಂದು ಅದನ್ನು ತನ್ನ ಭಂಡಿಯಲ್ಲಿ ಹೂಡಿದನು. ಅಷ್ಟಸಿದ್ಧಿಗಳ ಅಭಿಮಾನಿ ದೇವತೆಗಳನ್ನು ಬಲಾತ್ಕಾರವಾಗಿ ತನ್ನ ಮನೆಗೆಲಸಗಳಲ್ಲಿ ನಿಯೋಜಿಸಿದನು.

೮. ಸಮಸ್ತ ಅಪ್ಸರಸ್ತ್ರೀಯರ ಸಮೂಹವನ್ನೂ ತನಗೆ ಸೇವೆ ಸಲ್ಲಿಸುವಂತೆ ಆಜ್ಞಾಪಿಸಿದನು. ಲೋಕತ್ರಯದಲ್ಲಿ ತನಗೆ ಲಭಿಸದಿರುವ ಉತ್ತಮವಾದ ವಸ್ತುಗಳು ಯಾವುವಿರುವುವೊ, ಅವುಗಳನ್ನು ಹೊಂದುವವರೆಗೂ ಕೋಪಿಷ್ಠನಾದ ಆತನಿಗೆ ಸಮಾಧಾನವಾಗುವುದಿಲ್ಲವು.

೯. ನಾವೂ ನಿತ್ಯದಲ್ಲಿಯೂ ಆತನ ಭಯದಿಂದ ತತ್ತಳಿಸಿ ಸೇವಕವೃತ್ತಿಯಿಂದ ಆತನ ಆಜ್ಞೆಗಳನ್ನು ನೆರವೇರಿಸುತ್ತ ಅನ್ಯಗತಿಯನ್ನೇ ಕಾಣದೆ ಇರುವೆವು.

೧೦–೧೧. ಶರಣಾಗತರನ್ನು ರಕ್ಷಿಸುವುದೇ ತಪಸ್ಸಿನ ಫಲವೆಂದು ಹೇಳಲಾಗಿರುವುದು. ಈ ರಾಕ್ಷಸನು ಶಿವನಿಂದ ವರವನ್ನು ಪಡೆದವನಾಗಿ ಸಕಲ ಬಲಿಷ್ಠರಿಂದಲೂ, ದೇವತೆಗಳಿಂದಲೂ, ರಾಕ್ಷಸರಿಂದಲೂ ಜಯಿಸಲಸಾಧ್ಯನಾಗಿರುವನು.

೧೨–೧೪. ಈತನ ಕೋಡುಗಳಿಂದ ತಿವಿಯಲ್ಪಟ್ಟವನಾಗಿ ಸಮುದ್ರರಾಜನು ಪ್ರತಿನಿತ್ಯವೂ ಕಾಣಿಕೆಯ ರೂಪದಿಂದ ಅನೇಕ ರತ್ನಗಳನ್ನು ಕೊಟ್ಟು

ಪರ್ವತಾಂಶ್ಚ ಸಮುತ್ಕ್ಷಿಪ್ಯ ಶೃಂಗಾಗ್ರೇಣ ಮಹೋದ್ಧತಃ ।
ಕ್ರೀಡತಿ ಕ್ಷೋದಿತಾಶೇಷಧಾತುಧೂಲಿವಿಲೇಪನೈಃ ॥ ೧೩ ॥
ನ ಶಕ್ಯಮತುಲಂ ತಸ್ಯ ಬಲಮನ್ಯದುರಾಸದಂ ।
ಸ್ವಯಮೇವ ವಿಜಾನೀಹಿ ಹತ್ವಾ ತೇ ನಿಜತೇಜಸಾ ॥ ೧೪ ॥
ಶಂಭುಶಕ್ತಿಃ ಪರಾ ಸೇಯಂ ಸ್ತ್ರೀರೂಪೇಣಾತ್ರ ದೃಶ್ಯತೇ ।
ತ್ವಯೈವಾಯಂ ನಿಹಂತವ್ಯಃ ಶಿವಾಲ್ಲಬ್ಧವರೋ ಹ್ಯಯಂ ॥ ೧೫ ॥
ನ ಜಾನೀಮೋ ವಯಂ ದೇವಿ ಕಿಂಚಿಚ್ಛಂಭುವಿಚೇಷ್ಟಿತಂ
ಕೇವಲಂ ಪಾಲನೀಯಾಃ ಸ್ಮ ಜಗನ್ಮಾತ್ರಾ ಸದಾ ತ್ವಯಾ ॥ ೧೬ ॥
ಇತಿ ತೇಷಾಂ ಭಯಾರ್ತಾನಾಮಾಕರ್ಣ್ಯ ವಚನಂ ಶುಭಂ ।
ವ್ಯಾಜಹಾರ ಪ್ರಸನ್ನಾತ್ಮಾ ದೇವೀ ದತ್ವಾsಭಯಂ ತದಾ ॥ ೧೭ ॥
ಶರಣಾಗತಸಂತ್ರಾಣಂ ತಪಸಿ ಸ್ಥಿತಯಾ ಮಯಾ ।
ಕರ್ತವ್ಯಮಮರಾಃ ಕಾಲಾತ್ಕ್ಷೀಣಃ ಶತ್ರುರ್ಭವಿಷ್ಯತಿ ॥ ೧೮ ॥

---

ಸಂತೋಷಪಡಿಸಲೆಳಸುವನು. ತನ್ನ ಕೋಡುಗಳಿಂದ ದೊಡ್ಡ ದೊಡ್ಡ ಪರ್ವತಗಳನ್ನುರುಳಿಸಿ ಅತ್ಯಂತ ಉದ್ಧತನಾಗಿ ಪುಡಿಪುಡಿಯಾದ ಅವುಗಳ ಧಾತುಧೂಳಿಯಿಂದ ಕ್ರೀಡಿಸುತ್ತಿರುವನು. ಆತನ ಬಲವು ಅಪ್ರತಿಮವೂ, ಸಹಿಸಲಶಕ್ಯವೂ ಆಗಿರುವುದು; ಇತರರಿಂದ ನಿಗ್ರಹಿಸಲ್ಪಡುವುದಲ್ಲ. ನೀನೇ ನಿನ್ನ ತೇಜಸ್ಸಿನಿಂದ ಅದನ್ನು ನಿಗ್ರಹಿಸಿ ಪ್ರತ್ಯಕ್ಷವಾಗಿ ನೋಡು.

೧೫. ಎಲೆ ತಾಯೆ! ನೀನು ಶಂಭುವಿನ ಪರಾಶಕ್ತಿಯಾಗಿ ಸ್ತ್ರೀರೂಪದಿಂದ ಉದ್ಭವಿಸಿರುವೆ. ಈ ಮಹಿಷನಾದರೋ ಶಿವನಿಂದಲೇ ವರವನ್ನು ಪಡೆದವನಾದುದರಿಂದ ಅವನ ಮಡದಿಯಾದ ನಿನ್ನಿಂದಲೇ ನಿಗ್ರಹಾರ್ಹನು.

೧೬. ಎಲೌ ದೇವಿಯೆ! ನಾವು ಸದಾಶಿವನ ವ್ಯವಹಾರಗಳನ್ನು ಎಳ್ಳಷ್ಟಾದರೂ ತಿಳಿಯಲಾರೆವು. ಇಂತಹ ನಾವೆಲ್ಲರೂ 'ಜಗನ್ಮಾತೆಯಾದ ನಿನ್ನಿಂದಲೇ ನಾವು ರಕ್ಷಿತರಾಗಬೇಕಾಗಿರುವುದು."

೧೭. ಹೀಗೆಂದು ನುಡಿದು ಭಯಗೊಂಡಿದ್ದ ದೇವತೆಗಳ ಮಾತನ್ನು ಕೇಳಿ ಪಾರ್ವತೀದೇವಿಯು ಪ್ರಸನ್ನಾಂತರಂಗಳಾಗಿ ಅವರಿಗೆ ಅಭಯವನ್ನಿತ್ತು ಹೇಳತೊಡಗಿದಳು.

೧೮. "ಎಲೈ ದೇವತೆಗಳೆ! ತಪೋನಿಷ್ಠೆಯಾದ ನನಗೆ ಶರಣಾಗತ ರಕ್ಷಣವು ಮುಖ್ಯ ಕರ್ತವ್ಯವಾಗಿರುವುದು. ನಿಮ್ಮ ಶತ್ರುವು ಕ್ಷಿಪ್ರದಲ್ಲಿಯೇ ನಾಶವನ್ನು ಹೊಂದುತ್ತಾನೆ.

ಉಪಾಯೇನ ಸಮಾಕೃಷ್ಯ ಹನಿಷ್ಯಾಮಿ ಮಹಾಸುರಂ ।
ನಿರಾಗಸಸ್ತು ಹನನಮದ್ಯ ಮೇ ನ ಹಿ ಯುಜ್ಯತೇ ॥ ೧೯ ॥
ಧರ್ಮಾಗೇ ಧರ್ಮಭೇತ್ತಾರಃ ಶಲಭತ್ವಂ ವ್ರಜಂತಿ ಹಿ ॥ ೨೦ ॥
ದೇವಾಸ್ತದ್ವಚನಂ ಶೃತ್ವಾ ಪ್ರಣಮ್ಯ ಗಿರಿಕನ್ಯಕಾಂ ।
ಜಗ್ಮುರ್ಯಥಾಗತಂ ಸರ್ವೇ ನಿರ್ಭಯಾ ಹೃಷ್ಟಚೇತಸಃ ॥ ೨೧ ॥
ಗತೇಷು ತೇಷು ದೇವೇಷು ಗೌರೀ ಕಮಲಲೋಚನಾ ।
ಬಭೂವ ಮೋಹಿನೀ ಶಕ್ತಿಃ ಕಾಂತಿಯುಕ್ತಾ ತಲೋದರೀ ॥ ೨೨ ॥
ಸಾ ದೇವೀ ದಿಕ್ಷು ಶೈಲೇಷು ಚತುರ್ಷ್ವರುಣಭೂಭೃತಃ ।
ರಕ್ಷಾರ್ಥಂ ಸ್ಥಾಪಿತವತೀ ಚತುರೋ ಬಟುಕಾನ್ವರಾನ್ ॥ ೨೩ ॥
ಯದಾ ಕೈಲಾಸಶಿಖರಾದಾಗತಾ ಶೈಲಕನ್ಯಕಾ ।
ಅನ್ವಗಚ್ಛನ್ನೇವಮಾನಾಶ್ಚತಸ್ರೋ ಮಾತರಸ್ತದಾ ॥ ೨೪ ॥
ದುಂದುಭಿಸ್ಸತ್ಯವತ್ಯಾಖ್ಯಾ ತಥಾ ಚಾನವಮಾ ಪರಾ ।
ಸುಂದರೀತಿ ಚತಸ್ರಸ್ತಾಮನ್ವಯುಃ ಪರಿಚಾರಿಕಾಃ ॥ ೨೫ ॥

---

೧೯–೨೦. ಉಪಾಯದಿಂದಲೇ ಆ ರಾಕ್ಷಸನನ್ನು ಎಳೆದುಹಾಕಿ ಸಂಹರಿಸುತ್ತೇನೆ. ಆದರೆ ನನಗೆ ದ್ರೋಹಮಾಡದಿರುವವರನ್ನು ಸಂಹರಿಸುವುದು ನನಗೆ ಇಷ್ಟವಿಲ್ಲ. ಧರ್ಮಿಷ್ಠಪುರುಷನ ಮುಂದೆ ಅಧರ್ಮಗಳು ಶಲಭಗಳಂತೆ ನಾಶವನ್ನೈದುವುವಲ್ಲವೆ!''

೨೧. ದೇವತೆಗಳು ಗಿರಿಜೆಯು ಹೇಳಿದ ಈ ಮಾತುಗಳನ್ನು ಕೇಳಿ ಭಯರಹಿತರಾಗಿ ಸಂತೋಷದಿಂದ ಆಕೆಗೆ ನಮಸ್ಕರಿಸಿ ತಮ್ಮ ಸ್ಥಾನಗಳಿಗೆ ಹೊರಟುಹೋದರು.

೨೨. ಅವರೆಲ್ಲರೂ ಹೊರಟುಹೋದಮೇಲೆ ದೇವಿಯು ಕಾಂತಿಯುಕ್ತಳೂ, ತಲೋದರಿಯೂ, ಕಮಲನೇತ್ರೆಯೂ ಆದ ಮೋಹಿನೀಶಕ್ತಿಯ ರೂಪವನ್ನು ತಾಳಿದಳು.

೨೩. ಆಕೆಯು ಅರುಣಾಚಲದ ನಾಲ್ಕು ದಿಕ್ಕುಗಳಲ್ಲಿರುವ ಶೈಲಗಳಲ್ಲಿಯೂ ರಕ್ಷಣಾರ್ಥವಾಗಿ ನಾಲ್ವರು ಬ್ರಹ್ಮಚಾರಿಗಳನ್ನು (ಗಣಪತಿಗಳನ್ನು) ನೆಲೆಗೊಳಿಸಿದಳು.

೨೪. ಆ ಗಿರಿಜೆಯು ಕೈಲಾಸದಿಂದ ಅರುಣಾಚಲಕ್ಕೆ ಬಂದಾಗ ಆಕೆಯನ್ನು ಸೇವಿಸುವ ಇಚ್ಛೆಯಿಂದ ನಾಲ್ವರು ಮಾತೃದೇವತೆಗಳು ಬಂದಿದ್ದರು.

೨೫. ದುಂದುಭಿ, ಸತ್ಯವತಿ, ಅನವಮಿ ಮತ್ತು ಸುಂದರಿಯೆಂಬ ಆ ನಾಲ್ವರು ಪರಿಚಾರಿಕೆಯರೂ ಆಕೆಯನ್ನು ಹಿಂಬಾಲಿಸಿದರು.

ವಿಮುಂಚತಾತಿಥಿಂ ಶ್ರಾಂತಂ ಕ್ಷುತ್ಪಿಪಾಸಾಸಮನ್ವಿತಂ ।
ಅರುಣಾದ್ರಿಮಿಮಂ ದ್ರಷ್ಟುಂ ನಾನ್ಯಮಿತ್ಯಬ್ರವೀಚ್ಚ ತಾನ್ ॥ ೨೬ ॥
ಸೀಮಾಚಲಸ್ಥಿತಾನ್ವೀರಾಂಸ್ತಾನಾದಿಶ್ಯ ಬಲಾಧಿಕಾನ್ ।
ತಪಶ್ಚಚಾರಾದ್ರಿಕನ್ಯಾ ಗೌತಮಾಶ್ರಮಸನ್ನಿಧೌ ॥ ೨೭ ॥
ತಸ್ಯಾಂ ತಪಂತ್ಯಾಂ ತನ್ವಂಗ್ಯಾಂ ನ ತಾಪಃ ಕಶ್ಚಿದಪ್ಯಭೂತ್ ।
ವವರ್ಷ ಕಾಲೇ ಜಲದಃ ಸಫಲಾಶ್ಚಾಭವನ್ದ್ರುಮಾಃ ॥ ೨೮ ॥
ವಿರೋಧೀನಿ ಚ ಸತ್ತ್ವಾನಿ ಮುಮುಚುಃ ಪೂರ್ವಮತ್ಸರಂ ।
ಆಶ್ರಮಃ ಸರ್ವಜಂತೂನಾಂ ಶರಣ್ಯೋಽಭೂದ್ಭಯಾಪಹಃ ॥ ೨೯ ॥
ಯೋಜನದ್ವಯಪರ್ಯಂತಂ ಸೀಮಾಶೈಲೇಷು ಸಂಸ್ಥಿತೈಃ ।
ಚತುರ್ಭಿರ್ಬಟುಕೈಃ ಶೂರೈಃ ರಕ್ಷಿತಶ್ಚಾರುಣಾಚಲಃ ॥ ೩೦ ॥
ನೋದಭೂತ್ಕಶ್ಚನ ತ್ರಾಸೋ ನ ಚ ದೃಷ್ಟೋ ಭಯೋದಯಃ ।
ನ ವ್ಯಾಧಿಪೀಡನಂ ಚಾಸೀತ್ತತ್ರ ನಾರಿವಿಜೃಂಭಣಂ ॥ ೩೧ ॥

---

೨೬. ಈ ನಾಲ್ವರನ್ನೂ ಕಂಡು ಆಕೆಯು, "ಅತಿಥಿಯೂ, ಬಳಲಿದವನೂ, ಕ್ಷುತ್ಪಿಪಾಸೆಗಳಿಂದ ಪೀಡಿತನೂ, ಅರುಣಾಚಲೇಶ್ವರನನ್ನು ನೋಡಬೇಕೆಂಬ ಅಭಿಲಾಷೆಯುಳ್ಳವನೂ ಆದವರನ್ನು ಮಾತ್ರ ಇಲ್ಲಿಗೆ ಬಿಡತಕ್ಕದ್ದು. ಇತರರನ್ನು ಸರ್ವಥಾ ಒಳಕ್ಕೆ ಬಿಡಬಾರದು" ಎಂದು ಅಪ್ಪಣೆ ಮಾಡಿದಳು.

೨೭. ಅಂತೆಯೇ ನಾಲ್ಕು ದಿಕ್ಪರ್ವತಗಳಲ್ಲಿದ್ದ ಬಲಶಾಲಿಗಳಾದ ಬ್ರಹ್ಮಚಾರಿಗಳಿಗೂ ಆಜ್ಞಾಪಿಸಿ ಪಾರ್ವತಿಯು ಗೌತಮರ ಆಶ್ರಮದ ಸಮೀಪದಲ್ಲಿಯೇ ತಪಸ್ಸನ್ನಾಚರಿಸಿದಳು.

೨೮. ಆ ಸುಂದರಿಯು ತಪಸ್ಸನ್ನು ಮಾಡುತ್ತಿರಲು ಸ್ವಲ್ಪವೂ ಜನರಿಗೆ ತಾಪವೆನಿಸಲಿಲ್ಲ. ಮೇಘವು ಕಾಲ ಕಾಲಕ್ಕೆ ಮಳೆಗರೆಯುತ್ತಿತ್ತು. ಮರಗಳೆಲ್ಲವೂ ಫಲಪುಷ್ಪಭರಿತಗಳಾದುವು.

೨೯. ಜಾತಿವೈರವುಳ್ಳ ಮೃಗಗಳೂ ಕೂಡ ತಮ್ಮ ಪೂರ್ವವೈರವನ್ನು ಕಳೆದುಕೊಂಡುವು. ಆಶ್ರಮವು ಸಕಲ ಪ್ರಾಣಿಗಳಿಗೂ ಅಭಯವನ್ನು ಕೊಡುವ ಶರಣ್ಯಸ್ಥಾನವಾಯಿತು.

೩೦. ಈ ರೀತಿ ನಾಲ್ಕು ದಿಕ್ಕುಗಳಲ್ಲಿರುವ ಸೀಮಾಪರ್ವತಸ್ಥರಾದ ಬ್ರಹ್ಮಚಾರಿಗಳಿಂದ ಎರಡುಯೋಜನ ಪರ್ಯಂತವಾದ ಪ್ರದೇಶವು ರಕ್ಷಿಸಲ್ಪಟ್ಟಿತು.

೩೧. ಯಾರಿಗೂ ಶರೀರಕಂಪವೆಂಬುದಿಲ್ಲ. ಭಯವೆಂಬುದು ಯಾರಲ್ಲಿಯೂ ಕಾಣಲಿಲ್ಲ. ವ್ಯಾಘ್ರಾದಿ ಹಿಂಸ್ರಜಂತುಗಳಿಂದ ಪೀಡನೆಯೂ ಇಲ್ಲ. ಕಾಮಕ್ರೋಧಾದಿ ಅರಿಷಡ್ವರ್ಗಗಳ ಮೇಲುಗೈಯೂ ಇಲ್ಲ.

ಕೃತಾರ್ಥಾ ಮುನಯಃ ಸರ್ವೇ ಪ್ರಶಂಸಂತೋ ನಗಾತ್ಮಜಾಂ ।
ಶಿವಲೋಕಪದಂ ಕೇಚಿತ್ಪ್ರತ್ಯಶಂಸಂಸ್ತಥಾಶ್ರಮಂ ॥ ೩೨ ॥
ಸಾಚ ಗೌರೀ ತಪೋ ಘೋರಂ ಕುರ್ವತೀ ಚ ದಿವಾನಿಶಂ ।
ನ ತೃಪ್ತಿಮಾಯಯೌ ಬಾಲಾ ಶಿವಸಂತೋಷಕಾರಕಂ ॥ ೩೩ ॥
ಮಹಿಷಶ್ಚ ಮಹಾವೀರ್ಯೋ ಮೃಗಯಾಂ ಕರ್ತುಮುದ್ಯತಃ ।
ಚಚಾರ ಕಾನನಂ ಸರ್ವಂ ವಿದೂರೇ ಶೋಣಭೂಭೃತಃ ॥ ೩೪ ॥
ದೈತ್ಯಸೈನ್ಯಸಮಾಯುಕ್ತೋ ಮೃಗಯೂಥಾನ್ಯನೇಕಶಃ ।
ವನೇಷು ನಿಘ್ನಂಸ್ತರಸಾ ವಿಚಚಾರಾಶು ಭಕ್ಷಯನ್ ॥ ೩೫ ॥
ಧನ್ವಿಭಿರ್ಬಲಿಭಿರ್ವೀರೈರ್ಮೃಗಾಃ ಕೇಚಿದನುದ್ರುತಾಃ ।
ಭಯಾರ್ತಾಃ ಪರಿಧಾವಂತಃ ಪ್ರಾವಿಶಂಸ್ತಂ ತಥಾಶ್ರಮಂ ॥ ೩೬ ॥
ಅನುವ್ರಜಂತೋ ದಿತಿಜಾ ಮೃಗಾಂಸ್ತಾನ್ ಹಂತುಮುದ್ಯತಾಃ ।
ವಾರಿತಾ ಬಟುಕೈರ್ವೀರೈರ್ಮಾ ಯಾತಾತ್ರೇತಿ ಸತ್ವರೈಃ ॥ ೩೭ ॥

---

೩೨. ಮುನಿಗಳೆಲ್ಲರೂ ಕೃತಾರ್ಥರಾದರು. ಕೆಲವರು ಗಿರಿಜೆಯನ್ನೂ, ಕೆಲವರು ಕೈಲಾಸ ಪದವಿಯನ್ನೂ, ಮತ್ತೆ ಕೆಲವರು ಆಶ್ರಮವನ್ನೂ ಹೊಗಳುವವರಾದರು.

೩೩. ಪರ್ವತಕುಮಾರಿಯೂ ಕೂಡ ಅಹೋರಾತ್ರಿಗಳಲ್ಲಿಯೂ ಶಿವನಿಗೆ ಪ್ರೀತಿಕರವಾದ ಘೋರವಾದ ತಪಸ್ಸನ್ನು ಮಾಡುವವಳಾಗಿ ತೃಪ್ತಿಯೆಂಬುದನ್ನೇ ತಿಳಿಯದೆ ಇದ್ದಳು.

೩೪. ಮಹಿಷಾಸುರನೂ ಸಹ ಅದೇ ಸಮಯದಲ್ಲಿ ಬೇಟೆಯನ್ನಾಡುವವನಾಗಿ ಅರುಣಾಚಲದ ಸಮೀಪದಲ್ಲಿಯೇ ಕಾಡುಗಳೆಲ್ಲವನ್ನೂ ಸಂಚರಿಸುತ್ತಿದ್ದನು.

೩೫. ರಾಕ್ಷಸ ಸೈನ್ಯದಿಂದ ಹಿಂಬಾಲಿಸಲ್ಪಟ್ಟವನಾಗಿ ಅನೇಕ ಮೃಗ ಸಮೂಹಗಳನ್ನು ಕೊಂದು ತಕ್ಷಣವೇ ಭಕ್ಷಣಮಾಡುತ್ತ ಕಾಡುಗಳಲ್ಲಿ ಓಡಾಡುತ್ತಿದ್ದನು.

೩೬. ಧನುರ್ಧಾರಿಗಳೂ, ವೀರರೂ, ಬಲಶಾಲಿಗಳೂ ಆದ ರಾಕ್ಷಸರು ಕೆಲವು ಮೃಗಗಳನ್ನು ಬೆನ್ನುಹತ್ತಲು ಅವು ಭಯಗೊಂಡು ಓಡುತ್ತ ಗಿರಿಜೆಯ ಆಶ್ರಮಪ್ರದೇಶವನ್ನು ಹೊಕ್ಕವು.

೩೭. ಅವುಗಳನ್ನು ಹಿಂಬಾಲಿಸಿ ಕೊಲ್ಲುವ ಪ್ರಯತ್ನದಲ್ಲಿದ್ದ ರಾಕ್ಷಸರನ್ನು ವೀರರಾದ ಬ್ರಹ್ಮಚಾರಿಗಳು ವೇಗದಿಂದ ಅಡ್ಡಹಾಕಿ ''ಇಲ್ಲಿಗೆ ಬರಕೂಡದು'' ಎಂದು ಪ್ರತಿಷೇಧಿಸಿದರು.

ಕಿಮತ್ರೇತಿ ತದಾ ಪೃಷ್ಟ್ವಾ ಬಟುಕಾ ದುಷ್ಟದಾನವೈಃ ।
ತಪಸ್ಯತಿ ವರಾರೋಹಾ ಕನ್ಯಾತ್ರೇತ್ಯಾಹುರಂಜಸಾ ॥ ೩೮ ॥
ನ ಕೇನಚಿತ್ಪ್ರವೇಷ್ಟವ್ಯಂ ಬಲಿನಾ ಮುನಿಸೇವಿತಂ ।
ತಪಃಸ್ಥಾನಮಿದಂ ದೇವ್ಯಾ ಶರಣಾಗತರಕ್ಷಕಂ ॥ ೩೯ ॥
ಇತಿ ತೇಷಾಂ ವಚಃ ಶ್ರುತ್ವಾ ಬಲಿನೋ ದುಷ್ಟದಾನವಾಃ ।
ತಥೇತಿ ವಿನಿವೃತ್ತ್ಯಾಶು ಕರ್ತವ್ಯಂ ಸಮಚಿಂತಯನ್ ॥ ೪೦ ॥
ಮಾಯಯಾ ಪಕ್ಷಿರೂಪಾಸ್ತೇ ಪ್ರವಿಶ್ಯಾಶ್ರಮಮಾದರಾತ್ ।
ಆರಾಮವೃಕ್ಷಶಾಖಾಸು ನಿಷೇದುಃ ಖಾದಿಹೇಕ್ಷಿತುಂ ॥ ೪೧ ॥
ಸಾ ಪುನರ್ಲಸಿತಾರಣ್ಯೇ ಸರ್ವರ್ತುಕುಸುಮಾನ್ವಿತೇ ।
ತಪಸ್ಯಂತೀ ತದಾ ದೃಷ್ಟ್ವಾ ಮಾಯಾದೈತ್ಯಸ್ಯ ಸೈನಿಕೈಃ ॥ ೪೨ ॥
ರೂಪಲಾವಣ್ಯತೇ ತಸ್ಯಾ ನಿಶ್ಚಯಂ ತಪಸಿ ಸ್ಥಿತಂ ।
ವೀಕ್ಷ್ಯ ತೇ ವಿಸ್ಮಯೋಪೇತಾ ಗತ್ವಾ ತಸ್ಮೈ ನ್ಯವೇದಯನ್ ॥ ೪೩ ॥
ಸ ಸ್ಮರಾರ್ತೋ ವೃದ್ಧರೂಪಃ ಪ್ರವಿವೇಶಾಶ್ರಮಂ ತದಾ ।
ಪೂಜಿತೋಽಸ್ಯಾಃ ಸಖೀಭಿಶ್ಚ ಗತಶ್ರಾಂತಿರಿವ ಸ್ಥಿತಃ ॥ ೪೪ ॥

---

೩೮. ಆ ರಾಕ್ಷಸರು ವಿಶೇಷವೇನೆಂದು ಕೇಳಲು ಬ್ರಹ್ಮಚಾರಿಗಳು "ಇಲ್ಲಿ ಪಾರ್ವತೀದೇವಿಯು ತಪಸ್ಸನ್ನು ಮಾಡುತ್ತಿರುವಳು" ಎಂದು ತಿಳಿಸಿದರು.

೩೯. "ಯಾವ ಬಲಿಷ್ಠನೂ ಇಲ್ಲಿಗೆ ಪ್ರವೇಶ ಮಾಡಬಾರದು. ಈ ಸ್ಥಳವು ಮುನಿಗಳ ವಾಸಸ್ಥಾನವಾಗಿರುವುದು. ಮತ್ತು ದೇವಿಯ ತಪೋವನವಾದುದರಿಂದ ಶರಣಾಗತ ಪ್ರಾಣಿಗಳ ರಕ್ಷಣೆಯೆಂಬ ಧರ್ಮವುಳ್ಳದ್ದಾಗಿದೆ."

೪೦. ಹೀಗೆಂದ ಅವರ ಮಾತುಗಳನ್ನು ಅಂಗೀಕರಿಸಿ ಬಲಶಾಲಿಗಳಾದ ದುಷ್ಟದಾನವರು ಹಿಂತಿರುಗಿ ಮುಂದೇನುಮಾಡಬೇಕೆಂದು ಯೋಚಿಸಿದರು.

೪೧. ಬಳಿಕ ತಮ್ಮ ಮಾಯೆಯ ಸಹಾಯದಿಂದ ಪಕ್ಷಿರೂಪಗಳನ್ನು ಧರಿಸಿ ಆಶ್ರಮವನ್ನು ಪ್ರವೇಶಮಾಡಿ ನೆರಳಿನ ಗಿಡಗಳ ಶಾಖೆಗಳ ಮೇಲೆ ಕುಳಿತು ಭೂಮಿಯನ್ನು ನೋಡಿದರು.

೪೨. ಸರ್ವರ್ತುಕುಸುಮಗಳಿಂದ ಯುಕ್ತವಾದ ಅರಣ್ಯದಲ್ಲಿ ತಪಸ್ಸನ್ನು ಮಾಡುತ್ತಿದ್ದ ಗಿರಿಜೆಯು ಆ ಮಾಯಾರಾಕ್ಷಸರ ಕಣ್ಣಿಗೆ ಬಿದ್ದಳು.

೪೩–೪೪. ಆಕೆಯ ರೂಪಲಾವಣ್ಯಗಳನ್ನೂ ತಪಸ್ಸಿನಲ್ಲಿ ದೃಢವಾದ ನಿಶ್ಚಯವನ್ನೂ ಕಂಡು ವಿಸ್ಮಯಗೊಂಡವರಾಗಿ ಈ ವಿಷಯವನ್ನು ಮಹಿಷಾಸುರನಲ್ಲಿ ನಿವೇದಿಸಿದರು. ಕಾಮಪೀಡಿತನಾದ ಆ ರಾಕ್ಷಸನು ಮುದುಕನ ವೇಷವನ್ನು ಧರಿಸಿ ಆಶ್ರಮವನ್ನು ಹೊಕ್ಕು ಸಖಿಯರಿಂದ ಅತಿಥಿಪೂಜೆಯನ್ನು ಕೊಂಡು ವಿಶ್ರಾಂತಿಯನ್ನು ಹೊಂದಿದವನಂತೆ ಆಸನದಲ್ಲಿ ಕುಳಿತುಕೊಂಡನು.

ವೃದ್ಧೋಽಪೃಚ್ಛತ್ಕಿಮರ್ಥಂ ತು ತಪೋಽಸ್ಯಾ ಇತಿ ತಾಸ್ತಥಾ ।
ಬಾಲಾ ಕಾಂತಪ್ರಸಾದಾರ್ಥಂ ಚಿರಮತ್ರ ತಪಸ್ಯತಿ ॥ ೪೫ ॥
ಪರಂ ಸ ಬಲವಾನ್ಕಾಂತೋ ನ ಕದಾಪಿ ಪ್ರಸೀದತಿ ।
ಕಾರ್ಯಂ ವಿವಾಹಸಮಯೇ ಮನೋರಥಂ ಯಥೋಚಿತಂ ॥ ೪೬ ॥
ಅಪೂರ್ವಪ್ರಭುಣಾ ತೇನ ನವೋಪಕರಣಂ ಮಹತ್ ।
ಸದ್ಯೋಜಾತಕುಲಾಲೇನ ಸದ್ಯಃ ಸೃಷ್ಟೈರ್ವಿಪಾಚಿತೈಃ ॥ ೪೭ ॥
ಭಾಜನೈರಪಿ ಸಾದ್ಯಸ್ಕೈರ್ನ್ಯಸ್ತೈಃ ಪಕ್ವೈಶ್ಚ ಶಾಲಿಭಿಃ ।
ತಾದೃಶೈಃ ಸಾಧನೈಃ ಸರ್ವೈಸ್ತಾದೃಶೈರ್ದ್ರವ್ಯಸಂಚಯೈಃ ॥ ೪೮ ॥
ಅಪೂರ್ವದೃಷ್ಟವಿಭವೈಃ ಕಾರ್ಯಂ ಸ್ಯಾದುಪಕಾರಣಂ ।
ಸಿದ್ಧೇ ತಥೋಪಕರಣೇಽಸ್ಯಾಃ ಸದ್ಯೋಽಸ್ತು ಸ್ವಯಂವರಃ ॥ ೪೯ ॥
ಇತಿ ತಾಸಾಂ ವಚಃ ಶ್ರುತ್ವಾ ವಿಹಸನ್ಮಹಿಷೋಽಭ್ಯದಾತ್ ।
ತಪಃಫಲಮಹಂ ಪ್ರಾಪ್ತಃ ಸತ್ಯಮಸ್ಯಾ ಇತಿ ಸ್ಥಿತಂ ।
ಮದೀಯಾಂ ಸಕಲಾಂ ಭೂತಿಂ ಶೃಣು ಬಾಲೇ ತಪಸ್ವಿನಿ ॥ ೫೦ ॥

---

೪೫. ಬಳಿಕ ಅವರನ್ನು ಕುರಿತು "ಈಕೆಯು ಏತಕ್ಕಾಗಿ ತಪಸ್ಸನ್ನು ಮಾಡುತ್ತಿರುವಳು ?" ಎಂದು ಕೇಳಲು ಅವರು "ಈಕೆಯು ತನ್ನ ಕಾಂತನನ್ನು ಒಲಿಸುವುದಕ್ಕಾಗಿ ಬಹಳ ಕಾಲದಿಂದಲೂ ತಪಸ್ಸಿನಲ್ಲಿ ನಿರತಳಾಗಿರುವಳು.

೪೬. ಈಕೆಗೆ ತಕ್ಕ ಬಲಿಷ್ಠನಾದ ಕಾಂತನು ಯಾವಾಗಲೂ ಪ್ರಸನ್ನನಾಗಲಿಲ್ಲ. ವಿವಾಹ ಸಮಯದಲ್ಲಿ ಈಕೆಯ ಮನೋರಥಗಳೆಲ್ಲವೂ ಯಥೋಚಿತವಾಗಿ ನಡೆಯಬೇಕು.

೪೭–೪೯. ಅಪೂರ್ವವಾದ ಆ ಕಾಂತನಿಂದ ಮಹತ್ತಾದ ಹೊಸ ಸಲಕರಣೆಗಳು ಮಾಡಲ್ಪಡಬೇಕು. ಕ್ಷಣದಲ್ಲಿ ಹುಟ್ಟಿದ ಕುಂಬಾರನಿಂದ ನಿಮಿಷಮಾತ್ರದಲ್ಲಿ ನಿರ್ಮಿತಗಳಾದ ಮಡಿಕೆಗಳಲ್ಲಿ ಸದ್ಯಃ ಪಕ್ವಗಳಾದ ಶಾಲಿಧಾನ್ಯಗಳಿಂದಲೂ, ಇದರಂತೆಯೇ ಅಪೂರ್ವಗಳಾದ ವಸ್ತುಗಳಿಂದಲೂ, ಅಂತಹವುಗಳೇ ಆದ ದ್ರವ್ಯಗಳಿಂದಲೂ ಪೂರ್ವದಲ್ಲಿ ಯಾರೂ ಎಂದೂ ನೋಡದ ವಿಭವದ್ರವ್ಯಗಳಿಂದ ಮದುವೆಯ ಸಲಕರಣೆಗಳು ಸಿದ್ಧಮಾಡಲ್ಪಡಬೇಕು. ಇಂತಹ ಸಲಕರಣೆಗಳು ಸಿದ್ಧವಾದರೆ ಈಕೆಯ ಸ್ವಯಂವರವು ನಡೆಯಲು ಅಡ್ಡಿಯಿಲ್ಲ."

೫೦. ಮಹಿಷಾಸುರನು ಪರಿಚಾರಿಕೆಯರ ಈ ಮಾತುಗಳನ್ನು ಕೇಳಿ ಗಟ್ಟಿಯಾಗಿ ನಗುತ್ತ ಹೇಳತೊಡಗಿದನು :—"ನಾನು ಈಕೆಯ ತಪಸ್ಸಿಗೆ ಫಲರೂಪವಾಗಿಯೇ ಬಂದೆನೆಂಬುದು ಸಿದ್ಧವಾದಂತಿದೆ. ನನ್ನ ಸಕಲ ವೈಭವವನ್ನೂ ಹೇಳುತ್ತೇನೆ. ಎಲೌ ತಪಸ್ವಿಬಾಲೆಯೆ ! ಕೇಳುವವಳಾಗು.

ಮಹಿಷೋಽಹಂ ಮಹಾವೀರೋ ದೈತ್ಯೇಂದ್ರಃ ಸುರವಂದಿತಃ ।
ಜಗತ್ತ್ರಯಮಿದಂ ಸರ್ವಂ ಮಯ್ಯೈವ ಪರಿಗೃಹ್ಯತೇ ॥ ೫೧ ॥
ಅನನ್ಯವೀರಸದ್ಭಾವೋ ಮಯ್ಯೇವ ಭುಜಶುಷ್ಮಣಾ ।
ಕಾಮರೂಪೋಽಸ್ಮ್ಯಹಂ ಬಾಲೇ ಸರ್ವಭೋಗಪ್ರದಾಯಕಃ ॥ ೫೨ ॥
ಭಜ ಮಾಂ ತವ ಭರ್ತಾರಂ ಪ್ರಾಣಿನಾಂ ತಪಸಃ ಫಲಂ ।
ಸರ್ವಂ ಸಂಪಾದಯಿಷ್ಯಾಮಿ ಕಲ್ಪವೃಕ್ಷೈಃ ಸಮಾಹೃತೈಃ ॥ ೫೩ ॥
ಸೃಜಾಮಿ ತಪಸಾ ಚಾಹಂ ವಿಶ್ವಕರ್ಮಾಣಮಾದಿತಃ ।
ಕಾಮಧೇನುಸಹಸ್ರಾಣಿ ಸೃಜಾಮಿ ತಪಸಾ ಕ್ಷಣಾತ್ ॥ ೫೪ ॥
ನವಭಿರ್ನಿಧಿಭಿಃ ಪ್ರಾಪ್ತೈಃ ಪಾರ್ಶ್ವಸ್ಥೈರ್ನಿತ್ಯದಾ ಮಮ ।
ಅಪೇಕ್ಷಿತಾರ್ಥಸಂಸಿದ್ಧಿಃ ಸಹಸೈವೋಪಪದ್ಯತೇ ॥ ೫೫ ॥
ಇತಿ ತಸ್ಯ ವಚಃ ಶ್ರುತ್ವಾ ಸ್ಮೃತದೇವಾಭವತ್ಸಮಾತ್ ।
ವಿಸೃಜ್ಯ ಮೌನಂ ಶನಕೈರ್ವಿಹಸಂತೀ ತಮಬ್ರವೀತ್ ॥ ೫೬ ॥

---

೫೧. ದೇವತೆಗಳಿಂದಲೂ ನಮಸ್ಕರಿಸಲ್ಪಡುವ ಮಹಾಬಲಶಾಲಿಯಾದ ಮಹಿಷಾಸುರನೇ ನಾನು. ಈ ಮೂರು ಲೋಕಗಳನ್ನೂ ನಾನೇ ಆಳುತ್ತಿರುತ್ತೇನೆ.

೫೨. ಇತರರಿಗೆ ಸಲ್ಲದ ವೀರಭಾವವು ಬಾಹುಪರಾಕ್ರಮದಿಂದ ನನಗೇ ಸಲ್ಲತಕ್ಕದ್ದಾಗಿದೆ. ಮತ್ತು ನಾನು ಕಾಮರೂಪಿಯೂ ಸಕಲಭೋಗಗಳನ್ನು ಸಂಪಾದಿಸಿಕೊಡುವವನೂ ಆಗಿದ್ದೇನೆ.

೫೩. ಎಲೌ ಬಾಲೆಯೆ! ಪ್ರಾಣಿಗಳಿಗೆ ತಪಸ್ಸಿನ ಫಲರೂಪದಂತೆ ಬಂದಿರುವ ನನ್ನನ್ನು ಸೇರುವವಳಾಗು. ದೇವಲೋಕದ ಕಲ್ಪವೃಕ್ಷಗಳ ಸಹಾಯದಿಂದ ನಿನಗೆ ಸಕಲ ಭೋಗಗಳನ್ನೂ ಉಂಟುಮಾಡುತ್ತೇನೆ.

೫೪. ನನ್ನ ತಪಃಪ್ರಭಾವದಿಂದ ಮೊದಲು ವಿಶ್ವಕರ್ಮನನ್ನು ಸೃಜಿಸುತ್ತೇನೆ. ಕ್ಷಣದಲ್ಲಿಯೇ ಸಾವಿರಾರು ಕಾಮಧೇನುಗಳನ್ನು ಸೃಷ್ಟಿಮಾಡುವ ತಪಸ್ಸು ನನ್ನಲ್ಲಿರುವುದು.

೫೫. ನಿತ್ಯದಲ್ಲಿಯೂ ನನ್ನ ಸಮೀಪದಲ್ಲಿಯೇ ಇರುವ ನವನಿಧಿಗಳ ಪ್ರಾಪ್ತಿಯಿಂದ ಅಭೀಪ್ಸಿತಗಳೆಲ್ಲವೂ ತಕ್ಷಣದಲ್ಲಿಯೇ ಸಿದ್ಧಿಸುತ್ತವೆ."

೫೬. ರಾಕ್ಷಸೇಂದ್ರನ ಈ ಮಾತುಗಳನ್ನು ಕೇಳಿ ಗಿರಿಜೆಯು ದೇವತೆಗಳ ಪ್ರಾರ್ಥನೆಯನ್ನು ಜ್ಞಾಪಿಸಿಕೊಂಡವಳಾಗಿ ಮೌನವ್ರತವನ್ನು ಸಾಕುಮಾಡಿ ಮುಗುಳ್ನಗೆಯಿಂದ ಆತನಿಗೆ ಹೀಗೆಂದಳು :—

ಅಹಂ ಬಲವತೋ ಭಾರ್ಯಾ ಭವಿಷ್ಯಾಮಿ ತಪಶ್ಚಿರಂ ।
ಕರೋಮಿ ಯುದ್ಧ್ಯಸಿ ಬಲೀ ಬಲಂ ದರ್ಶಯ ಮೇ ನಿಜಂ ॥ ೫೭ ॥
ವಿರಚತ್ಸ್ತ್ರೀ ಸ್ವಭಾವಂ ಸ್ವಂ ಶ್ರುತ್ವಾ ತದ್ವಾಕ್ಯಮುತ್ಥಿತಂ ।
ಹತೇ ಕೋಽಯಮಿತಿ ಕ್ರೋಧಾನ್ನನರ್ದ ಮಹಿಷಾಸುರಃ ॥ ೫೮ ॥
ಜಿಘೃಕ್ಷಂತಂ ಸಮಾಯಾಂತಂ ವಿಕ್ಷ್ಯ ತಂ ಮಹಿಷಾಸುರಂ ।
ಅಭೂದ್ದುರಾಸದಾ ದುರ್ಗಾ ಕನ್ಯಾ ಸಾ ಜ್ವಲನಾಕೃತಿಃ ॥ ೫೯ ॥
ಮಹಾಮಾಯಾಂ ಸಮಾಲೋಕ್ಯ ಜ್ವಲಂತೀಂ ಪುರತಃ ಸ್ಥಿತಾಂ ।
ಸ್ವಯಂ ಸ ಮಹಿಷಾಕಾರೋ ವವೃಧೇ ಮೇರುಸನ್ನಿಭಃ ॥ ೬೦ ॥
ಕುಲಭೂಧರಶೃಂಗಾಣಿ ಶೃಂಗಾಭ್ಯಾಂ ಮುಹುರಾಕ್ಷಿಪನ್ ।
ಆಜುಹಾವ ನಿಜಾಂ ಸೇನಾಮಾಪೂರಿತದಿಗಂತರಾಂ ॥ ೬೧ ॥
ಅಥ ಬ್ರಹ್ಮಮುಖಾ ದೇವಾಃ ಪ್ರಣಮ್ಯ ವಿವಿಧಾಯುಧೈಃ ।
ಪೂಜಯಾಮಾಸುರಾತ್ಮೀಯೈರ್ದುರ್ಗಾಂ ಕಾಲಾಗ್ನಿರೂಪಿಣೀಂ ॥ ೬೨ ॥

---

೫೭. "ನಾನು ಬಲಿಷ್ಠನಾದವನ ಭಾರ್ಯೆಯಾಗುತ್ತೇನೆ. ಅದಕ್ಕಾಗಿಯೇ ತಪಸ್ಸನ್ನು ಮಾಡುತ್ತಿರುವೆನು. ನೀನು ಬಲಿಷ್ಠನಾದರೆ ನಿನ್ನ ಪರಾಕ್ರಮವನ್ನು ತೋರಿಸು."

೫೮. ಆಕೆಯ ವಾಕ್ಯಗಳಲ್ಲಿ ತಾನು ಸ್ತ್ರೀಸ್ವಭಾವದವನೆಂಬ ಗೂಢಾರ್ಥ ವನ್ನು ತಿಳಿದವನಾಗಿ ಮಹಿಷಾಸುರನು ಅತ್ಯಂತ ಕೋಪಗೊಂಡವನಾಗಿ ಘರ್ಜಿ ಸಿದನು.

೫೯. ತನ್ನೊಡನೆ ಸೆಣಸುವುದಕ್ಕೆ ಬರುತ್ತಿರುವ ಮಹಿಷಾಸುರನನ್ನು ನೋಡಿ ದುರ್ಗಾದೇವಿಯು ಅಗ್ನಿಯಂತೆ ಪ್ರಜ್ವಲಿಸುತ್ತ ದುರಾಸಾದ್ಯಳಾದಳು.

೬೦. ಆ ರಾಕ್ಷಸನಾದರೊ ತನ್ನ ಮುಂದಿರುವ ಮಹಾಮಾಯೆಯ ತೇಜೋಯುಕ್ತವಾದ ರೂಪವನ್ನು ನೋಡಿ ತನ್ನ ಶರೀರವನ್ನು ಮೇರುಪರ್ವತದ ಆಕಾರಕ್ಕೆ ಬೆಳಸಿಕೊಂಡನು.

೬೧. ತನ್ನ ಕೊಂಬುಗಳಿಂದ ಕುಲಾಚಲಗಳ ಕೋಡುಗಲ್ಲುಗಳನ್ನೂ ಎತ್ತಿ ಬಿಸುಡುತ್ತ ಅಷ್ಟದಿಗ್ಭಾಗಗಳಲ್ಲಿಯೂ ತುಂಬಿ ತುಳುಕುತ್ತಿದ್ದ ತನ್ನ ಸೇನೆಯನ್ನು ಕರೆದನು.

೬೨. ಆಗ ಬ್ರಹ್ಮಾದಿ ದೇವತೆಗಳು ಪ್ರಳಯಾಗ್ನಿಯಂತೆ ಭಯಂಕರರೂಪ ವನ್ನು ತಾಳಿದ್ದ ಶಕ್ತಿಗೆ ನಮಸ್ಕರಿಸಿ ತಮ್ಮತಮ್ಮಲ್ಲಿದ್ದ ದಿವ್ಯಾಸ್ತ್ರಗಳೆಲ್ಲವನ್ನೂ ಆಕೆಗೆ ಒಪ್ಪಿಸುವವರಾದರು.

ಪಂಚಹೇತೀರ್ಹರಿಃ ಪ್ರಾದಾದ್ದಶ ಚಾಪಿ ಸದಾಶಿವಃ ।
ಬ್ರಹ್ಮಾ ಚತಸ್ರಶ್ಚ ತದಾ ತಸ್ಯೈ ಮಾಯಾತಿರೋಹಿತಾಃ ॥ ೬೩ ॥
ದಿಕ್ಪಾಲಾಶ್ಚ ಸುರಾಶ್ಚಾನ್ಯೇ ಪರ್ವತಾಶ್ಚ ಪಯೋಧಯಃ ।
ಸ್ತ್ರೀಯೈರಾಭರಣೈಃ ಶಸ್ತ್ರೈರಧೃಷ್ಯಾಸ್ತಾಮಪೂಜಯನ್ ॥ ೬೪ ॥
ಮಾಯಾ ಸಾ ಬಹುಭಿರ್ಹಸ್ತೈರ್ಜ್ವಲದಾಯುಧಸಂಚಯೈಃ ।
ಆಬದ್ಧಕವಚಾ ತೂರ್ಣಂ ದುರ್ಗಾಭೂತ್ಸಿಂಹವಾಹನಾ ॥ ೬೫ ॥
ಆಪೂರಿತದಿಶಾಭೋಗಂ ತೇಜಸ್ತತ್ಸೋಢುಮಕ್ಷಮಃ ।
ದುರ್ಗಾಯಾ ಘೋರಮಾಲೋಕ್ಯ ಮಹಿಷಸ್ತು ಪಲಾಯಿತಃ ॥ ೬೬ ॥
ಅಥ ತೇಜೋ ನಿಜಂ ಘೋರಂ ಪ್ರಜ್ವಲತ್ಸೋಢುಮಕ್ಷಮಂ ।
ಪಲಾಯಮಾನಮಾಲೋಕ್ಯ ಮಹಿಷಂ ಸಾ ವ್ಯಚಿಂತಯತ್ ॥ ೬೭ ॥
ಉಪಾಯೇನ ನಿಹಂತವ್ಯೋ ದುಷ್ಟೋಽಯಂ ಮಹಿಷಾಸುರಃ
ಮದಪೂರ್ವಂ ನಿವರ್ತ್ಯಂತೇ ಮೃಗಾ ಮೃಗಯುಭಿರ್ವನೇ ॥ ೬೮ ॥

---

೬೩. ಮಹಾವಿಷ್ಣುವು ಐದು ಆಯುಧಗಳನ್ನೂ, ಸದಾಶಿವನು ಹತ್ತು ಅಸ್ತ್ರಗಳನ್ನೂ, ಬ್ರಹ್ಮನು ನಾಲ್ಕು ಅಸ್ತ್ರಗಳನ್ನೂ ಆಕೆಯ ಮಾಯೆಯಿಂದ ಮೋಹಿತರಾಗಿ ಕೊಟ್ಟರು.

೬೪. ಅಷ್ಟದಿಕ್ಪಾಲಕರೂ, ಇತರ ದೇವತೆಗಳೂ, ಪರ್ವತಾಭಿಮಾನಿ ದೇವತೆಯರೂ, ಸಮುದ್ರರಾಜನೂ ತಮ್ಮತಮ್ಮ ಆಭರಣಗಳಿಂದಲೂ, ಶಸ್ತ್ರಗಳಿಂದಲೂ ಆಕೆಯನ್ನು ಪೂಜಿಸಿದರು.

೬೫. ಆ ಮಾಯಾಶಕ್ತಿಯೇ ಕಾಳೀರೂಪಿಯಾಗಿ ಅನೇಕ ಹಸ್ತಗಳಿಂದ ತೇಜಃಪುಂಜಗಳಾದ ಆಯುಧಗಳನ್ನು ಹಿಡಿದುಕೊಂಡು ಕ್ಷಣದಲ್ಲಿಯೇ ಕವಚವನ್ನು ತೊಟ್ಟುಕೊಂಡು ಸಿಂಹವನ್ನೇ ವಾಹನವನ್ನಾಗಿ ಸ್ವೀಕರಿಸಿದಳು.

೬೬. ಮಹಿಷಾಸುರನಾದರೋ ಸಕಲ ದಿಗಂತಗಳಲ್ಲಿಯೂ ತುಂಬಿರುವ ಆಕೆಯ ತೇಜಸ್ಸನ್ನು ತಡೆಯಲಾರದವನಾಗಿ ಘೋರರೂಪಳಾದ ಆಕೆಯನ್ನು ಬಿಟ್ಟು ಓಡತೊಡಗಿದನು.

೬೭. ಆಗ ತನ್ನ ಘೋರವಾದ ತೇಜಸ್ಸಿನ ಜ್ವಾಲೆಗಳನ್ನು ಸಹಿಸಲಾರದೆ ಓಡಿಹೋಗುತ್ತಿರುವ ಮಹಿಷಾಸುರನನ್ನು ಕಂಡು ಜಗದಂಬೆಯು ಯೋಚಿಸತೊಡಗಿದಳು.

೬೮. "ದುಷ್ಟನಾದ ಈ ಮಹಿಷಾಸುರನು ಉಪಾಯದಿಂದ ವಧೆಯಾಗಬೇಕು. ಕಾಡಿನಲ್ಲಿ ಬೇಡರು ಮೃಗಗಳನ್ನು ಇಷ್ಟಪದಾರ್ಥಗಳಿಂದ ಲೋಭಗೊಳಿಸಿ ವಶಪಡಿಸಿಕೊಳ್ಳುವುದಿಲ್ಲವೆ!

ದೂತೋಕ್ತಿಭಿಃ ಸಮಾಕೃಷ್ಯ ಮೃದ್ವೀಭಿರ್ಮರ್ಮವೃತ್ತಿಭಿಃ
ಕೋಪಮಸ್ಯ ಸಮುದ್ಭಾವ್ಯ ಕರಿಷ್ಯೇಽಭಿಮುಖಂ ಕ್ಷಣಾತ್ ॥ ೬೯ ॥
ಅಧರ್ಮವೃತ್ತಿಯುಕ್ತಾನಾಂ ಧರ್ಮವಾಕ್ಯಪರಿಶ್ರವಾತ್ ।
ಕೋಪಃ ಸಮುದ್ಭವೇತ್ಸದ್ಯಃ ಸ್ವಜೀವಕ್ಷಯಕಾರಣಂ ॥ ೭೦ ॥
ಅಥವಾ ಧರ್ಮಬುದ್ಧಿಸ್ಸ್ಯಾದ್ಯದಿ ಶಾಂತೋ ಭವಿಷ್ಯತಿ ।
ತದಾ ಹಿತೋಪದೇಶೇನ ಧರ್ಮಲೋಪೋ ನ ಸಂಭವೇತ್ ॥ ೭೧ ॥
ತಪಸ್ಯದ್ಭಿಸ್ಸದಾಕಾರ್ಯಃ ಕೋಪತ್ಯಾಗಃ ಫಲಾನ್ವಿತಃ ।
ಧರ್ಮಹಾನಿರ್ನ ಸೋಢವ್ಯಾ ತತ್ರೈಕೋಪೋ ಹಿ ತಪಃ ಪರಂ ॥ ೭೨ ॥
ಇತಿ ಸಂಚಿಂತ್ಯ ಸಾ ಗೌರೀ ನಾಮ್ನಾ ಸುರಗುರುಂ ಮುನಿಂ ।
ಸಂಕಲ್ಪ್ಯ ವಾನರಮುಖಂ ಪ್ರಾಹಿಣೋದಸುರಂ ಪ್ರತಿ ॥ ೭೩ ॥
ಗಚ್ಛತ್ವಂ ಮಾಯಯಾ ಯುಕ್ತೋ ಮಹರ್ಷೇ ವಾನರಾನನ ।
ಮಹಿಷಂ ಬೋಧಯಿತ್ವಾ ಚ ವಚನಂ ಶೀಘ್ರಮಾವ್ರಜ ॥ ೭೪ ॥

---

೬೯. ಈತನ ಅಂತರಂಗಕ್ಕೆ ನಾಟುವಂತಹ ಮೃದುವಾದ ವಾಕ್ಯಗಳನ್ನು ದೂತರ ಮೂಲಕ ಹೇಳಿಕಳುಹಿಸಿ ಅವನನ್ನು ಕರೆಸಿ ಕ್ಷಣದಲ್ಲಿಯೇ ಅವನ ಕೋಪವನ್ನು ಹೋಗಲಾಡಿಸಿ ಅಭಿಮುಖನನ್ನಾಗಿ ಮಾಡಿಕೊಳ್ಳುವೆನು.

೭೦. ಅಧರ್ಮನಿರತರಾದವರಿಗೆ ಧರ್ಮವನ್ನುಪದೇಶಮಾಡಿದರೆ ತಮ್ಮ ಜೀವನೋಪಾಯವು ನಾಶವಾಗುವುದೆಂಬ ಭಯದಿಂದ ತಕ್ಷಣದಲ್ಲಿಯೇ ಕೋಪವುಂಟಾಗುವುದು.

೭೧. ಅಲ್ಲದೆ ಅವನಲ್ಲಿ ಧರ್ಮಬುದ್ಧಿಯುಂಟಾಗಿ ಶಾಂತಮನಸ್ಕನಾದರೆ ಹಿತೋಪದೇಶದಿಂದ ಧರ್ಮಲೋಪವನ್ನು ಮಾಡಲಾರನು.

೭೨. "ತಪಸ್ಸಿನಲ್ಲಿ ನಿರತರಾಗಿರುವವರು ಕೋಪತ್ಯಾಗವೆಂಬುದನ್ನು ಮಾಡಬೇಕು. ಆದರೂ ಧರ್ಮಹಾನಿಯನ್ನು ಮಾತ್ರ ಸಹಿಸಲಾಗದು. ಆ ವಿಷಯದಲ್ಲಿ ಕೋಪವೆಂಬುದೇ ತಪವು."

೭೩. ಹೀಗೆಂದು ಯೋಚಿಸಿ ಪಾರ್ವತಿಯು ನಾಮಸ್ಮರಣೆಯಿಂದಲೇ ಸುರಗುರುವಾದ ಬೃಹಸ್ಪತ್ಯಾಚಾರ್ಯರನ್ನು ಬರಮಾಡಿಕೊಂಡು ಆತನನ್ನು ಮಹಿಷಾಸುರನಲ್ಲಿಗೆ ಕಳುಹಿಸಿದಳು.

೭೪. "ಎಲೈ ಬೃಹಸ್ಪತಿಯೆ! ನೀನು ಮಾಯೆಯಿಂದ ಕಪಿಮುಖನಾಗಿ ಆ ಮಹಿಷಾಸುರನಲ್ಲಿಗೆ ಹೋಗಿ ನನ್ನ ಮಾತುಗಳನ್ನು ಅವನಿಗೆ ತಿಳಿಸಿ ಬೇಗನೆ ಹಿಂದಿರುಗಬೇಕು.

ನ್ಯೈವ ತ್ವಮರುಣಾದ್ರೀಶಮುಪಪೀಡಯ ದುರ್ಮತೇ ।
ಅತ್ರ ದುರ್ಮನಸಾಂ ವೀರ್ಯಮದೃಶ್ಯಂ ಭವತಿ ಕ್ಷಣಾತ್ ॥ ೭೫ ॥
ನ ಕಲೇರುಪತಾಪೋಽತ್ರ ನಾಸುರೈರಪಿ ಪೀಡನಂ ।
ನ ಸಾಹಸಂ ಚ ಶುಭದಂ ಶಿವಭಕ್ತಿಮತಾಮಪಿ ॥ ೭೬ ॥
ಪೂರ್ವಜನ್ಮಕೃತೈಃ ಪುಣ್ಯೈರ್ಲಬ್ಧವೀರ್ಯಮಹೋದಯಃ ।
ಮಾ ತ್ವಂ ಶೋಣಾಚಲೇಶಾಗ್ನೌ ಶಲಭತ್ವಂ ಭಜಾಸುರ ॥ ೭೭ ॥
ಶಿವೇನ ದತ್ತಾ ವಿಭವಾಸ್ತವ ಪೂರ್ವತಪೋಬಲಾತ್ ।
ದಹ್ಯೇರನ್ನತ್ರ ಸಹಸಾ ದಾವವಹ್ನೌ ಯಥಾ ದ್ರುಮಾಃ ॥ ೭೮ ॥
ಅತ್ರ ಧರ್ಮಾತ್ಮನಾಂ ವಾಸಃ ಶಿವಭಕ್ತಿಮತಾಂ ಸದಾ ।
ಪರಪೀಡಾಪ್ರಸಕ್ತಾನಾಂ ಭವೇದ್ರೋಗಶತಾವೃತಃ ॥ ೭೯ ॥
ಐಶ್ವರ್ಯಮತುಲಂ ಪ್ರಾಪ್ತೋ ಬಲಮನ್ಯದ್ದುರಾಸದಂ
ಕಿಮರ್ಥಂ ಸ್ವಲ್ಪಬುದ್ಧಿಃ ಸನ್ಸ್ವದೋಷೈರ್ನಾಶಮೇಷ್ಯಸಿ ॥ ೮೦ ॥

---

೭೫. 'ಎಲೈ ದುರ್ಬುದ್ಧಿಯುಳ್ಳ ರಾಕ್ಷಸನೆ! ಅರುಣಾಚಲೇಶ್ವರನ ಉಪದ್ರವವನ್ನು ನೀನು ಸರ್ವಥಾ ಮಾಡಬೇಡ. ದುಷ್ಟರ ಶಕ್ತಿಯೆಲ್ಲವೂ ಇಲ್ಲಿ ಕ್ಷಣದಲ್ಲಿಯೇ ನಾಶವನ್ನೈದುವುದು.

೭೬. ಇಲ್ಲಿ ಕಲಿಯ ಪ್ರವೇಶವಿಲ್ಲ. ರಾಕ್ಷಸರಿಂದ ಉಪಟಳವೂ ನಡೆಯಲಾರದು. ಶಿವಭಕ್ತರೂ ಕೂಡ ಇಲ್ಲಿ ಸಾಹಸ ಕಾರ್ಯಗಳನ್ನು ಮಾಡಿದರೆ ಶುಭವಾಗುವುದಿಲ್ಲ.

೭೭. ನೀನು ಪೂರ್ವಜನ್ಮಗಳಲ್ಲಿ ಮಾಡಿದ ಪುಣ್ಯದಿಂದ ಬಲವನ್ನೂ ಐಶ್ವರ್ಯವನ್ನೂ ಹೊಂದಿರುವೆ. ಆದುದರಿಂದ ಅರುಣಾಚಲೇಶ್ವರನೆಂಬ ಅಗ್ನಿಯಲ್ಲಿ ಪತಂಗದಂತೆ ಬಿದ್ದು ನಾಶವಾಗಬೇಡ.

೭೮. ನೀನು ಪೂರ್ವದಲ್ಲಿ ಮಾಡಿದ ತಪಸ್ಸಿಗೆ ಫಲರೂಪವಾಗಿ ಸದಾಶಿವನು ನಿನಗೆ ಅನೇಕ ವಿಭವಗಳನ್ನು ಕೊಟ್ಟಿರುವನು. ಆದರೆ ಇಲ್ಲಿ ಅವುಗಳೆಲ್ಲವೂ ಕಾಳ್ಗಿಚ್ಚಿನಲ್ಲಿ ಮರಗಳು ಭಸ್ಮೀಭೂತಗಳಾಗುವಂತೆ ನಾಶಹೊಂದುವುವು.

೭೯. ಇದು ಶಿವಭಕ್ತರಾದ ಧರ್ಮಾತ್ಮರ ವಾಸಸ್ಥಾನವಾಗಿರುವುದು. ಇದರಿಂದ ಪರಪೀಡಾಸಕ್ತರು ಇಲ್ಲಿಗೆ ಬಂದರೆ ಅನೇಕ ರೋಗಗಳಿಂದ ನರಳುವರು.

೮೦. ನೀನು ಅತುಲವಾದ ಐಶ್ವರ್ಯವನ್ನು ಹೊಂದಿರುವೆ. ನಿನ್ನ ಬಲವೂ ಇತರರಿಗೆ ಹೊಂದಲು ಸಾಧ್ಯವಲ್ಲ. ಆದುದರಿಂದ ಕ್ಷುದ್ರಬುದ್ಧಿಯುಳ್ಳವನಾಗಿ ನಿನ್ನ ದೋಷಗಳಿಂದ ನೀನೇ ನಾಶವನ್ನು ಏತಕ್ಕೆ ಹೊಂದಬೇಕು?

ಮಯಾ ಕನ್ಯಾ ಪುನರ್ದೃಷ್ಟಾ ವಿಶೇಷಾದಬಲಾ ಮತಾ ।
ಅಂತರ್ಗತೋಽರುಣಾದ್ರೀಶ ಏತಸ್ಮಾತ್ಸಾ ವಿಶಿಷ್ಯತೇ ॥ ೮೧ ॥
ಅಥವಾ ಯುಕ್ತಿಭೇದೈಸ್ತ್ವಂ ಶಾಸ್ತ್ರೈರ್ವಾ ಶಿವಸಮ್ಮತೈಃ ।
ಅನಿಗ್ರಾಹ್ಯಮನೋವೃತ್ತಿರಾತ್ಮಸೈನ್ಯಂ ಸಮಾನಯ ॥ ೮೨ ॥
ಯೇನ ಲೋಕಾನ್ಸಮಸ್ತಾನ್ಸ್ತ್ವಂ ಬಾಧಸೇ ಬಲಗರ್ವಿತಃ ।
ತತ್ಸೈನ್ಯಂ ತವ ವೃದ್ಧಂ ಚ ಕ್ಷಣಾದ್ಧಕ್ಷ್ಯಾಮಿ ತೇಜಸಾ ॥ ೮೩ ॥
ಆನೀಯ ಸಕಲಂ ಸೈನ್ಯಮಗ್ರೇ ಸ್ಥಾಪಯ ಸಾಯುಧಂ ।
ಸದ್ಯಸ್ತ್ವಾತ್ಮಬಲೈಃ ಸೃಷ್ಟೈಃ ಸಂಹರಿಷ್ಯಾಮಿ ತತ್ಕ್ಷಣಾತ್ ॥ ೮೪ ॥
ಮಚ್ಛಸ್ತ್ರಪರಿಕೃತ್ತಸ್ಯ ಸಸೈನ್ಯಸ್ಯ ತವಾಯುಷಃ ।
ಮುಕ್ತಿರತ್ರೈವ ಭವಿತಾ ಕೋ ಜಾನಾತಿ ಶಿವೇಹಿತಂ ॥ ೮೫ ॥
ವಾರ್ಯಮಾಣೋಽಪಿ ಪೂರ್ವೇಣ ಕರ್ಮಣಾ ಪ್ರೇರಿತೋ ಜನಃ ।
ಅವಶಃ ಕರ್ಮ ಕುರುತೇ ಭುಂಕ್ತೇ ಚ ಸದೃಶಂ ಫಲಂ ॥ ೮೬ ॥

---

೮೧. ನೀನು ವಿಶೇಷತಃ ಅಬಲೆಯೆಂದು ತಿಳಿದ ಸ್ತ್ರೀಯನ್ನು ನಾನು ಪುನಃ ನೋಡಿದೆನು. ಆಕೆಯ ಅಂತರಂಗದಲ್ಲಿ ಅರುಣಾಚಲೇಶ್ವರನು ನೆಲಸಿರುವುದೇ ಆಕೆಯಲ್ಲಿ ವಿಶೇಷವು.

೮೨. ಹೀಗಲ್ಲದೆ ಯುಕ್ತಿಗಳಿಂದಲೂ ಶಿವಸಮ್ಮತಗಳಾದ ಶಾಸ್ತ್ರೋಕ್ತಿಗಳಿಂದಲೂ ನೀನು ಮನಸ್ಸನ್ನು ನಿಗ್ರಹಿಸಲು ಅಶಕ್ತನಾದರೆ ನಿನ್ನ ಸೈನ್ಯವನ್ನೆಲ್ಲ ತೆಗೆದುಕೊಂಡು ಬಾ.

೮೩. ಯಾವುದರ ಆಶ್ರಯದಿಂದ ನೀನು ಬಲಮತ್ತನಾಗಿ ಸಮಸ್ತ ಲೋಕಗಳನ್ನೂ ಬಾಧೆಗೊಳಿಸುತ್ತಿರುವೆಯೊ, ಅಂತಹ ನಿನ್ನ ಮಹಾಸೈನ್ಯವನ್ನು ನನ್ನ ತೇಜಸ್ಸಿನಿಂದ ಕ್ಷಣದಲ್ಲಿ ಸುಟ್ಟುಬಿಡುವೆನು.

೮೪. ನಿನ್ನ ಸಕಲ ಸೈನ್ಯವನ್ನೂ ಕರೆದುಕೊಂಡು ಆಯುಧಸಹಿತವನ್ನಾಗಿ ಮಾಡಿ ನನ್ನ ಮುಂದೆ ನಿಲ್ಲಿಸು. ತಕ್ಷಣದಲ್ಲಿಯೇ ಸೃಷ್ಟಗಳಾದ ನನ್ನ ಸೈನ್ಯಗಳಿಂದ ನಿಮಿಷಮಾತ್ರದಲ್ಲಿ ನಾಶಮಾಡುತ್ತೇನೆ.

೮೫. ನನ್ನ ಶಸ್ತ್ರಗಳಿಂದ ಕತ್ತರಿಸಲ್ಪಟ್ಟ ಸೈನ್ಯಸಹಿತನಾದ ನಿನ್ನ ಆಯುರವಸಾನವಾದರೂ ಇಲ್ಲಿಯೇ ಆಗುವುದು. ಈಶ್ವರನ ಇಚ್ಛೆಗಳನ್ನು ಯಾರು ತಿಳಿಯಬಲ್ಲರು ?

೮೬. ಬೇಡವೆಂದರೂ ಸಹ ಮನುಷ್ಯನು ಪೂರ್ವಕರ್ಮದಿಂದ ಪ್ರೇರಿತನಾಗಿ ಕಾರ್ಯಗಳನ್ನು ಅವಶ್ಯವಾಗಿ ಮಾಡುತ್ತಾನೆ. ಅವುಗಳಿಗೆ ತಕ್ಕ ಫಲಗಳನ್ನೂ ಅನುಭವಿಸುತ್ತಾನೆ.'

ತ್ವಯಾಪಿ ಕರುಣಾವಾಕ್ಯಂ ವಕ್ತವ್ಯಂ ಕಿಲ ಭೂರಿಭಿಃ ।
ಅಕಾರ್ಯವಿನಿವೃತ್ತ್ಯರ್ಥಂ ನಿತ್ಯಧರ್ಮಾನುಪಾಲನೇ ॥ ೮೭ ॥
ಇತಿ ಗೌರ್ಯಾ ಸಮಾದಿಷ್ಟಾಂ ವಾಚಂ ಕಪಿಮುಖೋ ಮುನಿಃ ।
ದೂತಃ ಸನ್ಸರ್ವಮಾಚಷ್ಟ ಮಹಿಷಸ್ಯಾಗ್ರತಃ ಸ್ಥಿತಃ ॥ ೮೮ ॥
ಸೋಽಪಿ ಸರ್ವಂ ಸಮಾಕರ್ಣ್ಯ ಕ್ರೋಧವೇಗಸಮಾಕುಲಃ ।
ತಂ ಭಕ್ಷಯಿತುಮಾರೇಭೇ ಸೋಽಪಿ ಮಾಯಾಬಲಾದ್ಯಯೌ ॥ ೮೯ ॥
ಅಥ ಸೈನ್ಯಂ ನಿಜಂ ಸರ್ವಂ ಸಮಾಹೂಯ ದುರಾಶಯಃ ।
ಸನ್ನದ್ಧಂ ಸಾಯುಧಂ ಯೋದ್ಧುಮಾದಿಶಲ್ಲೋಕಭೀಷಣಂ ॥ ೯೦ ॥
ಯುಗಾಂತಸಮಯೋದ್ವೇಲಚತುರರ್ಣವಸನ್ನಿಭಂ ।
ಸೈನ್ಯಾನಾಂ ಸೈನ್ಯಮತುಲಂ ಶೋಣಾದ್ರಿಂ ಪರ್ಯವೇಷ್ಟಯತ್ ॥ ೯೧ ॥
ಅಥ ಗೌರೀ ಸಮಾಲೋಕ್ಯ ದೈತ್ಯಾನಾಂ ಸೈನ್ಯಮುದ್ಧತಂ ।
ಸಸರ್ಜ ತೈಜಸಾನ್ಶೂರಾನ್ಘೋರಾನ್ಭೂತಗಣಾನ್ಬಹೂನ್ ॥ ೯೨ ॥

---

೮೭. ಎಲೈ ಬೃಹಸ್ಪತಿಯೆ! ನೀನೂ ಸಹ ಅವನನ್ನು ಅಕಾರ್ಯದಿಂದ ತಪ್ಪಿಸುವುದಕ್ಕೂ ನಿತ್ಯಧರ್ಮಗಳನ್ನು ಪಾಲಿಸುವುದಕ್ಕೂ ಆತನಿಗೆ ಕೃಪಾಪೂರಿತ ವಾಕ್ಯಗಳನ್ನಾಡಬೇಕು.''

೮೮. ಹೀಗೆ ಹೇಳಿದ ಗೌರಿಯ ಮಾತುಗಳೆಲ್ಲವನ್ನೂ ದೂತನಾದ ಬೃಹಸ್ಪತಿಯು ಕಪಿರೂಪದಿಂದ ಮಹಿಷಾಸುರನಿಗೆ ಎದುರಾಗಿ ನಿಂತು ತಿಳಿಸಿದನು.

೮೯. ಅವನೂ ಸಹ ಎಲ್ಲವನ್ನೂ ಕೇಳಿ ಕ್ರೋಧದಿಂದ ಕೂಡಿದವನಾಗಿ ದೂತನನ್ನು ತಿನ್ನುವುದಕ್ಕೆ ಪ್ರಯತ್ನಪಡಲು ಆತನು ತನ್ನ ಮಾಯಾಬಲದಿಂದ ಅದೃಶ್ಯನಾದನು.

೯೦. ಆಗ ದುರ್ಬುದ್ಧಿಯಾದ ರಾಕ್ಷಸನು ಲೋಕಭಯಂಕರವಾದ ತನ್ನ ಸೈನ್ಯವೆಲ್ಲವನ್ನೂ ಸೇರಿಸಿ ಪರಿಕರಗಳಿಂದಲೂ, ಆಯುಧಗಳಿಂದಲೂ ಸಜ್ಜುಗೊಳಿಸಿ ಯುದ್ಧಮಾಡಲು ಕಳುಹಿಸಿದನು.

೯೧. ಪ್ರಳಯಕಾಲದಲ್ಲಿ ಚತುಸ್ಸಮುದ್ರಗಳೂ ಮೇರೆದಪ್ಪಿ ಬರುವಂತೆ ಮಹಿಷಾಸುರನ ಅಪಾರವಾದ ಸೈನ್ಯವು ಸುಶಿಕ್ಷಿತರಾದ ಭಟರಿಂದೊಡಗೂಡಿ ಅರುಣಾಚಲವನ್ನು ಮುತ್ತಿತು.

೯೨. ಆಗ ಉಮಾದೇವಿಯೂ ರಾಕ್ಷಸರ ಅದ್ಭುತವಾದ ಸೈನ್ಯವನ್ನು ನೋಡಿ ತನ್ನ ತೇಜಸ್ಸಿನಿಂದಲೇ ಶೂರರೂ, ಘೋರರೂಪರೂ ಆದ ಅನೇಕ ಭೂತಗಣಗಳನ್ನು ಸೃಷ್ಟಿಮಾಡಿದಳು.

**ಏಕಪಾದಾಕ್ಷಿಚರಣಾ ಲಂಬಕರ್ಣಪಯೋಧರಾಃ ।**
**ಪಾಣಿಪಾದಶಿರಃಕುಕ್ಷಿವಕ್ತ್ರಾಃ ಕೇಚಿದ್ವಿನಿರ್ಗತಾಃ ॥ ೯೩ ॥**
**ಅಹಂ ಗ್ರಸಾಮಿ ಸಕಲಮಪರ್ಯಾಪ್ತಮಿದಂ ಮಮ ।**
**ಅಹಮೇವ ಹನಿಷ್ಯಾಮಿ ದೈತ್ಯಸೈನ್ಯಮಶೇಷತಃ ॥ ೯೪ ॥**
**ಕಿಂ ತ್ವಯಾತ್ರ ಪುನಃ ಕಾರ್ಯಂ ವೀಕ್ಷ್ಯ ತ್ವಂ ತಿಷ್ಠ ಕೇವಲಂ ।**
**ಅಹಮೇವಾತ್ರ ಯೋತ್ಸ್ಯಾಮಿತ್ಯಭಾಷಂತ ಪರಸ್ಪರಂ ॥ ೯೫ ॥**
**ತೇಷಾಂ ಕಥಯತಾಂ ಶಂಖಂ ಗಣಾನಾಂ ಯೋಗಿನೀ ಗಣೈಃ ।**
**ಅಥಮುಕ್ತ್ವಾ ಭಗವತೀ ಹಂತುಂ ತದ್ದೈತ್ಯಮಂಡಲಂ ॥ ೯೬ ॥**
**ಆಲೋಕ್ಯ ತಾಂ ತಥಾರೂಪಾಮಾಪತನ್ಸ್ತಸ್ಯ ಸೈನಿಕಾಃ ।**
**ದರ್ಶಯಂತಃ ಸ್ವವೀರ್ಯಾಣಿ ಸ್ವಾಮಿನೋಽಗ್ರೇ ಧೃತಾಯುಧಾಃ ॥ ೯೭ ॥**
**ವವೃಷುಃ ಶಸ್ತ್ರವರ್ಷಾಣಿ ದೈತ್ಯಾಃ ಪ್ರತಿ ದಿಗಂತರಂ ।**
**ಬಾಣೈಃ ಕಾರ್ಮುಕನಿರ್ಮುಕ್ತೈಸ್ತಾನಿ ಸಾ ತು ನ್ಯವಾರಯತ್ ॥ ೯೮ ॥**

---

೯೩. ಕೆಲವರು ಒಂದೇ ಕಾಲುಳ್ಳವರು, ಕೆಲವರು ಒಂದೇ ಕಣ್ಣಿನವರು, ಕೆಲವರು ಒಂದೇ ಪಾದವುಳ್ಳವರು, ಇತರರು ದೀರ್ಘವಾದ ಕಿವಿಗಳೂ, ಸ್ತನಗಳೂ ಉಳ್ಳವರು. ಕೆಲವರಿಗೆ ಮುಖಗಳು ಕೈಗಳಲ್ಲಿಯೂ, ಕಾಲಿನಲ್ಲಿಯೂ, ತಲೆಯಲ್ಲಿಯೂ, ಕಂಕುಳಿನಲ್ಲಿಯೂ ಇದ್ದುವು. ಇವರೆಲ್ಲರೂ ದೇವಿಯ ಶರೀರದಿಂದ ಹೊರಬಿದ್ದರು.

೯೪-೯೫. "ಈ ಸೈನ್ಯವನ್ನೆಲ್ಲ ನಾನೇ ಭಕ್ಷಿಸುತ್ತೇನೆ." "ಇದು ನನ್ನ ಹಸಿವಿಗೇ ಸಾಲದು." "ನಾನೊಬ್ಬಳೇ ಈ ರಾಕ್ಷಸ ಸೈನ್ಯವೆಲ್ಲವನ್ನೂ ನಿಶ್ಶೇಷವಾಗಿ ನಾಶಮಾಡುತ್ತೇನೆ." "ನಿನಗೆ ಇಲ್ಲಿ ಕೆಲಸವೇನು? ನೀನು ಸುಮ್ಮನೆ ನೋಡುತ್ತ ಕುಳಿತಿರು. ನಾನೇ ಇಲ್ಲಿ ಯುದ್ಧಮಾಡುತ್ತೇನೆ." ಹೀಗೆಂದು ಅವರು ತಮ್ಮತಮ್ಮಲ್ಲಿ ಮಾತನಾಡಿಕೊಳ್ಳುತ್ತಿದ್ದರು.

೯೬. ಹೀಗೆ ಹೇಳುತ್ತಿರುವ ಭೂತಗಣಗಳ ಸಹಾಯಕ್ಕಾಗಿ ದೇವಿಯು ಶಂಖವನ್ನು ಬಾಜಿಸಿ ಅಸಂಖ್ಯಾತಗಳಾದ ಯೋಗಿನೀಗಣಗಳನ್ನು ನಿಶ್ವಾಸರೂಪದಿಂದ ಸೃಜಿಸಿದಳು. ಅವರೆಲ್ಲರೂ ರಾಕ್ಷಸ ಸೈನ್ಯವನ್ನು ನಾಶಮಾಡಿದರು.

೯೭-೯೮. ಇಂತಹ ಭಯಂಕರ ರೂಪವನ್ನು ಕೈಗೊಂಡ ಪಾರ್ವತಿಯ ರೂಪವನ್ನು ನೋಡಿ ಮಹಿಷಾಸುರನ ಸೈನಿಕರು ತಮ್ಮ ಯಜಮಾನನ ಎದುರಿನಲ್ಲಿ ತಮ್ಮ ಪರಾಕ್ರಮವನ್ನು ತೋರಿಸಲೆಳಸಿ ಅನೇಕ ಆಯುಧಗಳನ್ನು ಧರಿಸಿ ಗಣಗಳ ಸೈನ್ಯದ ಮೇಲೆ ಬಿದ್ದರು. ರಾಕ್ಷಸರು ದಿಕ್ಕುಗಳೆಲ್ಲದರಲ್ಲಿಯೂ ಶಸ್ತ್ರಗಳ ಮಳೆಯನ್ನೇ ಕರೆದರು. ದೇವಿಯಾದರೊ ಅವುಗಳೆಲ್ಲವನ್ನೂ ತನ್ನ ಧನುಸ್ಸಿನಿಂದ ಬಿಡಲ್ಪಟ್ಟ ಬಾಣಗಳಿಂದ ಖಂಡಿಸಿದಳು.

ರಥಾನಾಂ ವಾರಣೇಂದ್ರಾಣಾಂ ಹಯಾನಾಂ ಲಕ್ಷಕೋಟಿಭಿಃ ।
ಯುಯುಧುರ್ಭೂತವೇತಾಲಾ ದೇವ್ಯಾ ಸೃಷ್ಟಾಸ್ತು ದುರ್ಜಯಾಃ ॥೯೯॥
ಮಾತರೋ ವಿವಿಧಾಕಾರಾ ಡಾಕಿನ್ಯೋ ಯೋಗಿನೀಗಣಾಃ ।
ಸೃಷ್ಟಾಶ್ಚ ತೇಜಸಾ ಭೂಯಃ ಪಿಶಾಚಾಃ ಪ್ರೇತರಾಕ್ಷಸಾಃ ॥ ೧೦೦ ॥
ದೇವ್ಯಾ ಸೃಷ್ಟೇನ ಸೈನ್ಯೇನ ದುರ್ಜಯೇನ ಮಹಾಸುರಾಃ ।
ಭಕ್ಷಿತಾಶ್ಚೂರ್ಣಿತಾ ಭಿನ್ನಾ ದಾರಿತಾ ನಿಹತಾಃ ಕ್ಷಣಾತ್ ॥ ೧೦೧ ॥
ದೇವೀ ಚ ಸಾಯುಧಾ ದೃಷ್ಟ್ವಾ ಜ್ವಲಂತೀ ನಿಹತಾಸುರೈಃ ।
ನೃತ್ಯದ್ಭೂತಗಣೈರ್ಭಕ್ತೈ ರಕ್ತೈರ್ಮಾಂಸೈಶ್ಚ ತೋಷಿತೈಃ ॥ ೧೦೨ ॥
ಯದಾ ಕೈಲಾಸಶಿಖರಾತ್ಪ್ರಾಪ್ತಾ ಕರ್ತುಂ ತಪೋ ಭವಂ ।
ತದಾ ಸಮಾಗತಾಃ ಕಾಶ್ಚಿನ್ಮಾತೃಕಾ ದೇಹಗುಪ್ತಯೇ ॥ ೧೦೩ ॥
ದುಂದುಭಿಃ ಸತ್ಯವತ್ಯಾಖ್ಯಾ ತಥಾ ಚಾನವಮಾ ಪರಾ ।
ಸುಂದರೀತಿ ಚತಸ್ರಸ್ತಾ ಅನ್ವಯುಃ ಪರಿಚಾರಿಕಾಃ ॥ ೧೦೪ ॥

---

೯೯. ಆಕೆಯಿಂದ ಸೃಜಿಸಲ್ಪಟ್ಟ ಸೈನ್ಯಗಳು ಅಸಂಖ್ಯೇಯಗಳಾದ ರಥಗಳಿಂದಲೂ, ಗಜಗಳಿಂದಲೂ, ಕುದುರೆಗಳಿಂದಲೂ ಯುದ್ಧಮಾಡುತ್ತ ಅಜೇಯಗಳಾದುವು.

೧೦೦. ಆಕೆಯ ತೇಜಸ್ಸಿನಿಂದ ಸಪ್ತಮಾತೃಕೆಯರೂ, ನಾನಾ ರೂಪಗಳುಳ್ಳ ಡಾಕಿನಿಯರೂ, ಯೋಗಿನಿಯರೂ, ಪಿಶಾಚಗಳೂ, ಪ್ರೇತಗಳೂ, ರಾಕ್ಷಸಗಣಗಳೂ ಸೃಷ್ಟರಾದರು.

೧೦೧. ದೇವಿಯಿಂದ ಸೃಷ್ಟವಾದ ಜಯಿಸಲಸಾಧ್ಯವಾದ ಈ ಸೈನ್ಯದಿಂದ ರಾಕ್ಷಸರೆಲ್ಲರೂ ಭಕ್ಷಿತರಾದರು. ಕೆಲವರು ಚೂರ್ಣಿತಾಂಗರೂ, ಕೆಲವರು ಭಿನ್ನಾವಯವರೂ, ಹಲವರು ಸೀಳಿದ ಶರೀರವುಳ್ಳವರೂ ಆದುದರಿಂದ ಕ್ಷಣಮಾತ್ರದಲ್ಲಿಯೇ ರಾಕ್ಷಸ ಸೈನ್ಯವೆಲ್ಲವೂ ಧ್ವಂಸವಾಯಿತು.

೧೦೨. ರಾಕ್ಷಸರನ್ನು ಸಂಹರಿಸಿ ಅವರ ಮಾಂಸರಕ್ತಗಳಿಂದ ಸಂತುಷ್ಟರಾಗಿ ಕುಣಿಯುತ್ತಿರುವ ಭೂತಗಣಗಳ ಮಧ್ಯದಲ್ಲಿ ದೇವಿಯೂ ಆಯುಧ ಸಮೇತಳಾಗಿ ಜ್ವಲಿಸುತ್ತಿದ್ದಳು.

೧೦೩. ಗಿರಿಜೆಯು ಕೈಲಾಸವನ್ನು ಬಿಟ್ಟು ತಪಸ್ಸನ್ನು ಮಾಡಲೆಳಸಿ ಭೂಲೋಕಕ್ಕೆ ಬಂದಾಗಲೇ ಕೆಲವರು ಮಾತೃಕೆಯರು ಆಕೆಯ ದೇಹವನ್ನು ರಕ್ಷಿಸುವುದಕ್ಕಾಗಿ ಆಕೆಯೊಡನೆ ಬಂದರು.

೧೦೪. ದುಂದುಭಿ, ಸತ್ಯವತಿ, ಅನವಮಿ ಮತ್ತು ಸುಂದರಿಯೆಂಬ ನಾಲ್ವರು ಪರಿಚಾರಿಕೆಯರಾಗಿ ಆಕೆಯನ್ನು ಹಿಂಬಾಲಿಸಿದರು.

ದೇವ್ಯಾ ಸೃಷ್ಟಾ ಚ ಚಾಮುಂಡಾ ದಂಷ್ಟ್ರಾವಲಯಭೀಷಣಾ ।
ದೈತ್ಯಕೃತ್ತಿವಸಾಮಾಂಸರಕ್ತತೃಪ್ತಾ ಚಚಾರ ಸಾ ॥ ೧೦೫ ॥
ಅಸುರಂ ಕಂಚಿದಾಕ್ರಮ್ಯ ನಟನಂ ಸಾ ಚಕಾರ ಹ ॥ ೧೦೬ ॥
ಅಥತಾಂ ಸಮವೇಕ್ಷ್ಯ ದುರ್ಮದೋ ಹಿ
ಜ್ವಲಯಾಮಾಸ ಚ ಕೋಪವಹ್ನಿನಾ ಸಃ ।
ಅತಿತೀವ್ರವಿವೃತ್ತಭೀಷ್ಮನೇತ್ರ
ಶ್ರುತಿ ಶೃಂಗಾಗ್ರವಿಭಿನ್ನಮೇಘಜಾಲಃ ॥ ೧೦೭ ॥
ಜ್ವಲದಗ್ನಿ ಶಿಖಾಭದೀರ್ಘಜಿಹ್ವಾ
ಪರಿಲೀಢೋನ್ನತಶೈಲಶೃಂಗಭಾಗಃ ।
ಅವನಿಂ ದಲಯನ್ಖುರಾಭಿಘಾತೈ
ರಸಕೃತ್ಪಾಂಸುಭಿರಾಸ್ವನನ್ದಿಗಂತಾನ್ ॥ ೧೦೮ ॥
ಅತಿ ಘುರ್ಘುರದೀರ್ಘಘೋರನಾದ
ಸ್ಫುಟದಂಡಭ್ರಮನೋಹಿತಾಮರೋ ಯಃ ।
ಧೃತವಾಲಧಿದಂಡತಾಡ್ಯಮಾನ
ಪ್ರತಿಶೀರ್ಣಾಮಿತಶಸ್ತ್ರವರ್ಷಸಂಘಃ ॥ ೧೦೯ ॥

---

೧೦೫–೧೦೬. ದೇವಿಯಿಂದ ಸೃಷ್ಟಳಾದ ಚಾಮುಂಡಾಮಾತೆಯು ಕೋರೆ ದಾಡೆಗಳಿಂದ ಭಯಂಕರ ರೂಪವನ್ನು ತಾಳಿ ದೈತ್ಯರ ಚರ್ಮ, ವಪೆ, ಮಾಂಸ, ರಕ್ತಗಳಿಂದ ತೃಪ್ತಳಾಗಿ ವಿಹರಿಸುತ್ತಿದ್ದಳು. ಆಕೆಯು ರಾಕ್ಷಸನನ್ನು ಆಕ್ರಮಣ ಮಾಡಿ ನಾಟ್ಯಮಾಡಲಾರಂಭಿಸಿದಳು.

೧೦೭. ಆಕೆಯನ್ನು ಕಂಡು ಮದೋನ್ಮತ್ತನಾದ ರಾಕ್ಷಸನು ಕೋಪದಿಂದ ಉರಿಯಹತ್ತಿದನು. ಆಗ ಅವನ ರೂಪವು ಕೆಂಪಡರಿ ವಿಶಾಲವಾದ ಭಯಂಕರ ನೇತ್ರಶ್ರೋತ್ರಗಳಿಂದಲೂ, ಮೇಘಮಂಡಲವನ್ನು ಭೇದಿಸುತ್ತಿರುವ ಶೃಂಗ ಗಳಿಂದಲೂ ದುಸ್ಸಹವಾಗಿದ್ದಿತು.

೧೦೮. ಉರಿಯುತ್ತಿರುವ ಬೆಂಕಿಯ ಜ್ವಾಲೆಯಂತೆ ದೀರ್ಘವಾದ ನಾಲಿಗೆ ಯಿಂದ ಎತ್ತರವಾದ ಪರ್ವತಶೃಂಗವನ್ನು ನೆಕ್ಕುತ್ತಿರುವಂತಿದ್ದನು. ತನ್ನ ಗೊರಸುಗಳಿಂದ ಭೂಮಿಯನ್ನು ಸೀಳುತ್ತ ಧೂಳನ್ನೆಬ್ಬಿಸಿ ದಿಗ್ದೇಶಗಳಲ್ಲಿಯೂ ಪ್ರತಿಧ್ವನಿತವಾಗುವಂತೆ ಘರ್ಜಿಸಿದನು.

೧೦೯. ದೀರ್ಘವೂ ಭಯಂಕರವೂ ಆದ ರಾಕ್ಷಸನ ಘರ್ಘರನಾದದಿಂದ ದೇವತೆಗಳಿಗೂ ಸಹ ಬ್ರಹ್ಮಾಂಡವು ಭಿನ್ನವಾಗುತ್ತಿರುವುದೆಂಬ ಭ್ರಾಂತಿ ಯುಂಟಾಯಿತು. ದೇವಿಯು ಅವನ ಮೇಲೆ ಪ್ರಯೋಗಿಸುತ್ತಿದ್ದ ಶಸ್ತ್ರವರ್ಷ ವನ್ನೆಲ್ಲ ಬಾಲದ ತಾಡನದಿಂದಲೇ ನಿವಾರಣೆ ಮಾಡಿಕೊಂಡನು.

ಮೃತಯೇ ಮೃಗಮುದ್ಬಲಿತ್ರಯಾಢ್ಯಾಂ ।
ಮೃಗರಾಜಸ್ಥಿತಿಭಾಸುರಾಂ ಭವಾನೀಂ ॥ ೧೧೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಅರುಣಾಚಲಮಾಹಾತ್ಮ್ಯೇ ಪೂರ್ವಾರ್ಧೇ "ದೇವ್ಯಾಸ್ತಪಶ್ಚರ್ಯಾಯಾಂ ಮಹಿಷಾಸುರೇಣ ಸಹ ಯುದ್ಧವರ್ಣನಂ"ನಾಮ ದಶಮೋಽಧ್ಯಾಯಃ

---

೧೧೦. ಇಂತಹ ಮಹಿಷಾಸುರನು ಮೃತ್ಯುಸನ್ನಿಹಿತನಾಗಿ ಸಿಂಹವಾಹಿನಿಯಾಗಿ ನಿಂತಿದ್ದ ಭವಾನಿಯನ್ನು ಕುರಿತು ವೇಗದಿಂದ ಓಡಿಬಂದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯೆಯ ಪೂರ್ವಾರ್ಧದಲ್ಲಿ "ದೇವಿಯು ಮಹಿಷಾಸುರನೊಡನೆ ಮಾಡಿದ ಯುದ್ಧದ ವರ್ಣನ"ವೆಂಬ ಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಾದಶೋಽಧ್ಯಾಯಃ

## ಮಹಿಷಾಸುರ ವಧೋತ್ತರಂ ದೇವೀಪಾಣೌ ಮಹಿಷಾಸುರಶಿರಸ್ಸಂಲಗ್ನತಾ ವೃತ್ತಾಂತವರ್ಣನಂ

ಬ್ರಹ್ಮೋವಾಚ :—

ಸ ತು ಸಿಂಹಸ್ಥಿತಾಂ ಗೌರೀಂ ಜ್ವಲಂತೀಂ ವಿವಿಧಾಯುಧಾಂ ।
ಶೈಲವರ್ಷೇಣ ಮಹತಾ ಕುಪಿತಃ ಸಮಪೂರಯತ್ ॥ ೧ ॥
ಶರವರ್ಷೇಣ ಮಹತಾ ತನ್ನಿವಾರ್ಯ ವಿದೂರತಃ ।
ಬಿಭೇದ ನಿಶಿತೈಃ ಶಸ್ತ್ರೈರಶೇಷಂ ತಸ್ಯ ವಿಗ್ರಹಂ ॥ ೨ ॥
ಭಿದ್ಯಮಾನೋಽಪಿ ದೈತ್ಯೇಂದ್ರಃ ಶೈಲಸಾರಪ್ರದುರ್ಧರಃ ।
ವಿಷಾದಂ ನಾಗಮತ್ಕಿಂಚಿದ್ವವೃಧೇ ಯುದ್ಧದುರ್ಮದಃ ॥ ೩ ॥
ಭಿದ್ಯಮಾನಃ ಸ ಖಡ್ಗೇನ ಚಕ್ರೈರಸಿಭೀ ಋಷ್ಟಿಭಿಃ ।
ಶೂಲೇನ ಚಾಯುಧೈಶ್ಚಾನ್ಯೈರಂತರ್ಧಾನಮಗಾಹತ ॥ ೪ ॥
ತತಃ ಸಿಂಹಾಕೃತಿರ್ಭೀಮಃ ಪ್ರಚಂಡನಿನದಾನನಃ ।
ತೀಕ್ಷ್ಣದಂಷ್ಟ್ರಃ ಶಿತನಖಃ ಪರಿಬಭ್ರಾಮ ಕೇಸರೀ ॥ ೫ ॥

---

## ಕನ್ನಡದ ಅನುವಾದ

### ಮಹಿಷಾಸುರನ ಕಂಠಲಿಂಗವು ದೇವಿಯು ಅಂಗೈಯಲ್ಲಿ ನಿಂತುದು

೧. ಬ್ರಹ್ಮನು ಹೇಳುತ್ತಾನೆ:—ಸಿಂಹವಾಹಿನಿಯಾಗಿ ವಿಧವಿಧವಾದ ಆಯುಧಗಳಿಂದ ವಿರಾಜಿಸುತ್ತಿರುವ ಗೌರೀದೇವಿಯನ್ನು ಕಂಡು ಮಹಿಷನು ಆಕೆಯನ್ನು ಮಹತ್ತರವಾದ ಶೈಲವೃಷ್ಟಿಯಿಂದ ಆಚ್ಛಾದಿಸಿದನು.

೨. ಅಮೋಘವಾದ ಬಾಣವರ್ಷದಿಂದ ಅದನ್ನೆಲ್ಲ ನಿವಾರಿಸಿ ದೇವಿಯು ದೂರದಿಂದಲೇ ತೀಕ್ಷ್ಣವಾದ ಶಸ್ತ್ರಗಳಿಂದ ರಾಕ್ಷಸನ ದೇಹವನ್ನು ಕತ್ತರಿಸಿದಳು.

೩. ಈ ರೀತಿಯಿಂದ ಘಾಯಗೊಂಡವನಾದರೂ ರಾಕ್ಷಸೇಂದ್ರನು ಕಲ್ಲಿನಂತೆ ಗಟ್ಟಿಯಾದ ಶರೀರವುಳ್ಳವನಾದುದರಿಂದ ಅದನ್ನು ಲೆಕ್ಕಿಸದೆ ಯುದ್ಧದ ಮದದಿಂದ ಉನ್ಮತ್ತನಾದನು.

೪. ಆಕೆಯ ಖಡ್ಗ, ಕತ್ತಿ, ಋಷ್ಟಿ, ಶೂಲ ಮುಂತಾದ ಆಯುಧಗಳಿಂದ ನೋವುಗೊಂಡವನಾದರೂ ರಾಕ್ಷಸೇಶ್ವರನು ತಕ್ಷಣದಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೫. ಸಿಂಹದ ಆಕಾರವನ್ನು ಪರಿಗ್ರಹಿಸಿ ಭಯಂಕರವಾಗಿ ಘರ್ಜನೆ ಮಾಡುತ್ತ ತೀಕ್ಷ್ಣವಾದ ಹಲ್ಲುಗಳೂ ನಖಗಳೂ ಉಳ್ಳವನಾಗಿ ಓಡಾಡುತ್ತಿದ್ದನು.

ದೇವೀಸಿಂಹಶ್ಚಪೇಟೇನ ತಾಡಯಾಮಾಸ ಪಾಣಿನಾ ।
ದೈತ್ಯಸಿಂಹಸ್ಯ ಚ ನಖೈಸ್ತಸ್ಯವಕ್ಷೋ ವ್ಯದಾರಯತ್ ॥ ೬ ॥
ಅಥ ವ್ಯಾಘ್ರತಯಾ ಪ್ರಾಪ್ತಃ ಸ್ಫುಟವ್ಯಾತ್ತಾನನೋ ಮಹಾನ್ ।
ತಂ ಹಂತುಂ ಚ ಬಲಾದ್ದೇವೀ ವೇಗೇನ ಕರಮುಕ್ಷಿಪತ್ ॥ ೭ ॥
ದೀರ್ಘಾಭಿರ್ನೀಲರೇಖಾಭಿಃ ಪೂರ್ಣಃ ಪಿಂಗಲವಿಗ್ರಹಃ ।
ಯಾನಾವಳಿಭಿರಾಕೀರ್ಣಃ ಸ್ವರ್ಣಾದ್ರಿರಿವ ಸಂಚರನ್ ॥ ೮ ॥
ಮೃಗೈರಿವ ಪರಿತ್ರಾತುಂ ಮುಚ್ಯಮಾನೋಽಗ್ರತೋ ಬಲೀ ।
ಜ್ವಲಂತಮಿವ ರೋಷಾಗ್ನಿಂ ಜಿಹ್ವಾಹೇತಿಭಿರಾವಹನ್ ॥ ೯ ॥
ಆಗಚ್ಛಂತಂ ರಯಾದ್ದೇವೀ ಭಲ್ಲೇನ ಶಶಿವರ್ಚಸಾ ।
ಪ್ರತಿ ವಿವ್ಯಾಧ ತಂ ವ್ಯಾಘ್ರಂ ಪುರತ್ರಯಮಿವೇಶ್ವರಃ ॥ ೧೦ ॥
ಸ ಬಾಣಸ್ತನ್ಮುಖೇ ಮಗ್ನಸ್ತದ್ರಕ್ತೇನ ಸಮುಕ್ಷಿತಃ ।
ಜಗಾಹೇ ಗಗನಂ ಭಿತ್ವಾ ದೇಹಮಸ್ಯ ವಿನಿರ್ಗತಃ ॥ ೧೧ ॥
ಸ ದೈತ್ಯೋ ವಾರಣೋ ಭೂತ್ವಾ ದೇವೀಮಾಶ್ವಭ್ಯುಪಾಗಮತ್ ।
ಬಲಿಭಿಃ ಪಶುಭಿರ್ಭಿನ್ನೈಸ್ತಸ್ಯಾಃ ಪ್ರೀತಿಮಿವಾವಹನ್ ॥ ೧೨ ॥

---

೬. ದೇವಿಯ ವಾಹನವಾದ ಸಿಂಹವು ಮುಂಗಾಲುಗಳಿಂದ ರಾಕ್ಷಸನನ್ನು ಹೊಡೆಯಲು ಅವನು ತನ್ನ ನಖಗಳಿಂದ ಅದರ ಎದೆಯನ್ನು ಸೀಳಿದನು.

೭. ಬಳಿಕ ರಾಕ್ಷಸನು ವ್ಯಾಘ್ರರೂಪವನ್ನು ಧರಿಸಿ ದೊಡ್ಡದಾಗಿ ಬಾಯಿಯನ್ನು ತೆರೆದುಕೊಂಡು ಬರುತ್ತಿರಲು ಅವನನ್ನು ಕೊಲ್ಲಲೆಳಸಿ ದೇವಿಯು ಖಡ್ಗವನ್ನು ಬೀಸಿದಳು.

೮–೧೦. ಉದ್ದವಾದ ಕರಿಯ ಪಟ್ಟೆಗಳಿಂದ ಕೂಡಿದ ಹೊಂಬಣ್ಣದ ಮೈಯುಳ್ಳವನಾಗಿ ಮಾರ್ಗಗಳಿಂದ ಶೋಭಿಸುವ ಮೇರುಪರ್ವತದಂತೆ ಕಾಣುತ್ತ ತಮ್ಮನ್ನು ರಕ್ಷಣೆಮಾಡಲು ಮೃಗಗಳಿಂದ ಕಳುಹಿಸಲ್ಪಟ್ಟಂತೆ ತೋರುತ್ತ ಬಲಿಷ್ಠನಾಗಿ ಮುಂದೆ ನಿಂತು ನಾಲಗೆಯೆಂಬ ಆಯುಧದಿಂದ ರೋಷಾಗ್ನಿಯನ್ನು ಹೊರಚೆಲ್ಲುತ್ತ ಜ್ವಲಿಸುತ್ತಿರುವವನಾಗಿ ವೇಗದಿಂದ ಬರುತ್ತಿರುವ ರಾಕ್ಷಸನನ್ನು ದೇವಿಯು ಚಂದ್ರಸಮಾನ ಕಾಂತಿಯುಳ್ಳ ಭಲ್ಲಾಯುಧದಿಂದ ಹೊಡೆದು ತ್ರಿಪುರಾಸುರನನ್ನು ಹೊಡೆದ ಈಶ್ವರನಂತೆ ಕಾಣುತ್ತಿದ್ದಳು.

೧೧. ಆ ಆಯುಧವಾದರೊ ವ್ಯಾಘ್ರರೂಪಿಯಾದ ರಾಕ್ಷಸನ ಮುಖವನ್ನು ಪ್ರವೇಶಿಸಿ ಅವನ ರಕ್ತದಿಂದ ತೊಯ್ದು ಶರೀರವನ್ನು ಭೇದಿಸಿಕೊಂಡು ಹೊರಕ್ಕೆ ಬಂದು ಆಕಾಶದಲ್ಲಿ ಲೀನವಾಯಿತು.

೧೨. ಆ ದೈತ್ಯನು ಆನೆಯ ರೂಪವನ್ನು ಕೈಕೊಂಡು ದಾರಿಯಲ್ಲಿ ಸಿಕ್ಕಿದ ಮೃಗಗಳನ್ನೆಲ್ಲ ಕೊಂದು ದೇವಿಗೆ ನೈವೇದ್ಯವನ್ನು ಮಾಡುವವನಂತೆ ಕಾಣುತ್ತ

ತಂ ಗಜೇಂದ್ರಂ ಸಮಾಯಾಂತಂ ಮದಕ್ಲಿನ್ನಮಹೀತಲಂ ।
ದೇವೀಸಿಂಹಸ್ತದಾ ದೃಷ್ಟ್ವಾ ನನರ್ದ ಚ ಜಘಾನ ಚ ॥ ೧೩ ॥
ಅಥ ಖಡ್ಗಧರೋ ವೀರಶ್ಚರ್ಮಪಾಣಿಃ ಸಮುದ್ಗತಃ ।
ವಕ್ತ್ರಂ ದಧಾನೋ ಬಭ್ರಾಮ ದಂಷ್ಟ್ರಾಭ್ರುಕುಟಿಭೀಷಣಂ ॥ ೧೪ ॥
ದೇವೀ ಚ ವಿಲಸತ್ಖಡ್ಗಚಕ್ರಚಕ್ರಲಸತ್ಕರಾ ।
ಯುಯೋಧ ತೇನ ವೀರೇಣ ಭಗ್ನಶೀರ್ಷೋಽಭ್ಯಪದ್ಯತ ॥ ೧೫ ॥
ಭೂಯಃ ಸ ಮಾಹಿಷಂ ರೂಪಮಾಸ್ಥಾಯಾಸುರಮಾಯಯಾ ।
ದೇವ್ಯಾ ಯೋದ್ಧುಂ ಪ್ರವವೃತೇ ಯಥಾಪೂರ್ವಮನಾಕುಲಂ ॥ ೧೬ ॥
ಅಥ ದೇವೈರ್ಮುನೀಂದ್ರೈಶ್ಚ ಚೋದಿತೋ ಗೌತಮೋ ಮುನಿಃ ।
ಪ್ರಬೋಧಯಿತುಮಾರೇಭೇ ಸ್ತುತಿಭಿರ್ಜಗದಂಬಿಕಾಂ ॥ ೧೭ ॥
ತ್ವಯಿ ಸರ್ವಸ್ಯ ಜಗತಃ ಪ್ರಾಣಶಕ್ತಿಃ ಪರಾ ಮತಾ ।
ಓಜಃಶಕ್ತಿರ್ಜ್ಞಾನಶಕ್ತಿರ್ಬಲಶಕ್ತಿಶ್ಚ ಗಮ್ಯತೇ ॥ ೧೮ ॥

---

ಆಕೆಗೆ ಸಂತೋಷವನ್ನುಂಟುಮಾಡುವವನಾಗಿ ತಕ್ಷಣದಲ್ಲಿಯೇ ಎದುರಿಗೆ ಬಂದನು.

೧೩. ಮದದಿಂದ ಭೂಮಿಯನ್ನು ನೆನೆಯಿಸುತ್ತ ಎದುರಿಗೆ ಬರುತ್ತಿರುವ ಆ ಮಹಾಗಜವನ್ನು ಕಂಡು ದೇವಿಯ ವಾಹನವಾದ ಸಿಂಹವು ಘರ್ಜನೆಯನ್ನು ಮಾಡಿ ಅದನ್ನು ಹಿಂಸಿಸಿತು.

೧೪. ಆ ರಾಕ್ಷಸನು ಆ ದೇಹವನ್ನು ಬಿಟ್ಟು ಕತ್ತಿಯನ್ನೂ ಗುರಾಣಿಯನ್ನೂ ಧರಿಸಿ ಕೋರೆದಾಡೆಗಳಿಂದಲೂ ಹುಬ್ಬುಗಂಟುಗಳಿಂದಲೂ ಭಯಂಕರವಾದ ಮುಖದೊಡನೆ ಓಡಿಬಂದನು.

೧೫–೧೬. ಚಾಮುಂಡಿಯೂ ಸಹ ಜಾಜ್ವಲ್ಯಮಾನವಾದ ಖಡ್ಗಚಕ್ರಾದ್ಯಾಯುಧಗಳಿಂದ ಅವನೊಡನೆ ಯುದ್ಧಮಾಡಲು ಅವನ ತಲೆಯು ಕತ್ತರಿಸಿ ನೆಲದ ಮೇಲೆ ಬಿದ್ದನು. ಮತ್ತೆ ರಾಕ್ಷಸನು ಅಸುರಮಾಯೆಯಿಂದ ಮಹಿಷದ ರೂಪವನ್ನೇ ಧರಿಸಿಕೊಂಡು ಮೊದಲಿನಂತೆಯೇ ನಿರ್ವ್ಯಾಕುಲನಾಗಿ ಯುದ್ಧಮಾಡತೊಡಗಿದನು.

೧೭. ಆಗ ದೇವತೆಗಳಿಂದಲೂ ಮುನಿಗಳಿಂದಲೂ ಚೋದಿತನಾಗಿ ಗೌತಮಮುನಿಯು ಅನೇಕ ಸ್ತೋತ್ರಗಳಿಂದ ಜಗನ್ಮಾತೆಯನ್ನು ಎಚ್ಚರಗೊಳಿಸಲು ಪ್ರಯತ್ನಪಟ್ಟನು.

೧೮. "ನಿನ್ನಲ್ಲಿಯೇ ಸಕಲ ಲೋಕಗಳ ಪ್ರಾಣಶಕ್ತಿಯು ಅಡಗಿರುವುದು. ಮತ್ತು ಓಜಶ್ಶಕ್ತಿಯೂ, ಜ್ಞಾನಶಕ್ತಿಯೂ, ಕ್ರಿಯಾಶಕ್ತಿಯೂ ನಿನ್ನಲ್ಲಿಯೇ ಕಾಣಲ್ಪಡುವುವು.

ಕಿಮೇತದದ್ಯ ಮೋಹಾಯ ಯುದ್ಧಮಾರಭ್ಯತೇ ತ್ವಯಾ ।
ಉಪಸಂಹ್ರಿಯತಾಮೇಷ ದೈತ್ಯೋ ಭುವನಗುಪ್ತಯೇ ॥ ೧೯ ॥
ಭಿನ್ನಾನಾಮಸ್ಯ ದೇಹಾನಾಮುಪಸಂಹರಣಾತ್ತವ ।
ಬಲಯಶ್ಚೋಪದಿಶ್ಯಂತೇ ನಿಗಮೋಕ್ತಾ ವರಪ್ರದಾಃ ॥ ೨೦ ॥
ಅನ್ಯಥಾ ತೃಣಕಲ್ಪಸ್ಯ ಶತ್ರೋರಸ್ಯ ನಿಬರ್ಹಣೇ ।
ಕಾಲಾಗ್ನಿವರ್ಚಸೋ ದೇವಿ ಕಿಮರ್ಥಂ ಸಂಭ್ರಮಸ್ತ್ವಿಯಾನ್ ॥ ೨೧ ॥
ಸ್ವಶಕ್ತಿಮವಸಂಸ್ತಭ್ಯ ಸಮಾಕರ್ಷಯ ತಾಂ ರಿಪೋಃ ।
ಪ್ರಾಣಶಕ್ತಿಂ ತ್ರಿಶೂಲೇನ ಗುಣತ್ರಯವಪುರ್ಧೃತಾ ॥ ೨೨ ॥
ಇತಿ ಸ್ಮ ಬೋಧಿತಾ ತೇನ ಪುರಾ ಭಗವತೀ ತದಾ ।
ಮಹಿಷಾಸುರಮಾಕ್ರಮ್ಯ ತ್ರಿಶೂಲೇನಾಭ್ಯಧಾರಯತ್ ॥ ೨೩ ॥
ಅನೇಕಗಿರಿಸಂಕಾಶಂ ದೇವ್ಯಾ ವಿಗ್ರಹಮಾತ್ಮನಃ ।
ಅಶಕ್ತಸ್ತಂ ಧಾರಯಿತುಂ ಸಸಾದ ಮಹಿಷಾಸುರಃ ॥ ೨೪ ॥
ನಿಷ್ಪಿಷ್ಟೋ ವಿಲುಠನ್ಕ್ರೋಶನ್ನಾಕ್ರಾಂತಶ್ಚ ಪರಿಸ್ಫುರನ್ ।
ನಿರ್ಗಂತುಮುದ್ಗತಶಿರಾ ನ ಶಶಾಕಾಸುರಾಧಿಪಃ ॥ ೨೫ ॥

---

೧೯. ಈಗ ಲೋಕವಿಡಂಬವನ್ನು ಮಾಡಲು ಈ ಯುದ್ಧವು ಆರಂಭಿಸಲ್ಪಟ್ಟಿತೆ? ಸಕಲ ಲೋಕಗಳ ರಕ್ಷಣಾರ್ಥವಾಗಿ ಈ ರಾಕ್ಷಸನು ಸಂಹರಿಸಲ್ಪಡಲಿ.

೨೦. ಇವನ ಭಿನ್ನಗಳಾದ ದೇಹಗಳನ್ನೆಲ್ಲ ನೀನು ಉಪಸಂಹಾರಮಾಡುತ್ತಿರುವುದರಿಂದ ವೇದೋಕ್ತಗಳಾದ ಬಲಿಗಳೇ ವರಪ್ರದಗಳಾಗಿರುವಂತೆ ಕಾಣುತ್ತಿವೆ.

೨೧. ಅಲ್ಲದಿದ್ದರೆ ತೃಣಕ್ಕೆ ಸಮಾನನಾದ ಈ ರಾಕ್ಷಸನನ್ನು ನಿಗ್ರಹಿಸಲು ಕಾಲಾಗ್ನಿಸದೃಶಳಾದ ನಿನಗೆ ಇಷ್ಟು ಸಂಭ್ರಮವು ಏಕೆ?

೨೨. ನಿನ್ನ ಶಕ್ತಿಯನ್ನೇ ಆಶ್ರಯಿಸಿಕೊಂಡು ತ್ರಿಗುಣಮಯಾಕಾರವುಳ್ಳ ತ್ರಿಶೂಲದಿಂದ ಈ ರಾಕ್ಷಸನ ಪ್ರಾಣಶಕ್ತಿಯನ್ನು ನೀನೇ ಆಕರ್ಷಣೆಮಾಡು."

೨೩. ಹೀಗೆ ಎಚ್ಚರಗೊಳಿಸಲ್ಪಟ್ಟವಳಾಗಿ ಪಾರ್ವತಿಯು ತನ್ನ ಭಗವದ್ರೂಪವನ್ನು ಸ್ಮರಿಸಿ ಮಹಿಷಾಸುರನನ್ನು ಕೆಳಕ್ಕೆ ಕೆಡವಿ ತ್ರಿಶೂಲದಿಂದ ತಿವಿದಳು.

೨೪. ಆ ರಾಕ್ಷಸನು ಅನೇಕ ಪರ್ವತಗಳಂತೆ ದುಸ್ಸಹ ಭಾರದಿಂದ ಕೂಡಿದ ದೇವಿಯ ರೂಪವನ್ನು ತಡೆಯಲಾರದೆ ಬಹಳವಾಗಿ ಶಿಥಿಲಗಾತ್ರನಾದನು.

೨೫. ಮೈಯೆಲ್ಲ ಪುಡಿಯಾಗಲು ಹೊರಳಾಡುತ್ತ, ಕೂಗಾಡುತ್ತ, ನಡುಗುತ್ತ ದೇವಿಯಿಂದ ಆಕ್ರಮಿಸಲ್ಪಟ್ಟು ಬಿಡಿಸಿಕೊಳ್ಳಲಾರದೆ ತಲೆಯನ್ನು ಮಾತ್ರ ಆಡಿಸುತ್ತಿದ್ದನು.

ತ್ರಿಶೂಲಮುಖಭಿನ್ನಾಂಗರಕ್ತಧಾರಾಸಮುದ್ಧತಃ ।
ಸಮುದ್ರ ಇವ ಸಂಜಾತಃ ಸಂಧ್ಯಾರುಣಕಳೇಬರಃ ॥ ೨೬ ॥
ಅಥ ಖಡ್ಗೇನ ತೀಕ್ಷ್ಣೇನ ಕರ್ತಯಿತ್ವಾ ಚ ತಚ್ಛಿರಃ ।
ನನರ್ತ ತಸ್ಯ ಶಿರಸಿ ತಿಷ್ಠನ್ತೀ ಮಹಿಷಾರ್ದಿನೀ ॥ ೨೭ ॥
ದುರ್ಗಾಂ ಸಿದ್ಧಾಶ್ಚ ಗಂಧರ್ವಾಃ ಪ್ರಶಶಂಸುರ್ಮಹರ್ಷಯಃ ।
ಪುಷ್ಪವೃಷ್ಟಿಶ್ಚ ಮಹತೀ ದೇವೈರ್ಮುಕ್ತಾ ಸಮಂತತಃ ।
ಪ್ರಣತಃ ಪ್ರಾಂಜಲಿರ್ದೇವೀಂ ತುಷ್ಟಾವ ವಿಬುಧಾಧಿಪಃ ॥ ೨೮ ॥

ಇಂದ್ರ ಉವಾಚ:—

ನಮಸ್ತೇ ಜಗತಾಂ ಮಾತ್ರೇ ಭೂತಾನಾಂ ಬೀಜಸಂವಿದೇ ॥ ೨೯ ॥
ಭಕ್ತಿಶ್ಶ್ರದ್ಧಾ ಚ ಭಜತಾಂ ಶಕ್ತಿಶ್ಚಾಸಿ ತ್ವಮಂಬಿಕೇ ।
ಕಾರಣಂ ಪರಮಾ ಕೀರ್ತಿಃ ಶಾಂತಿರ್ದಾಂತಿಃ ಕಲಾ ಕ್ಷಮಾ ॥ ೩೦ ॥
ಏಕೈವ ವಿಶ್ವರೂಪಾ ತ್ವಂ ನಾಮಭೇದೈರ್ನಿಗದ್ಯಸೇ ।
ತೇಷು ತೇಷು ಪದೇಷ್ವಸ್ಮಾನ್ಸ್ವತಪೋಽನುಗುಣಸಿದ್ಧಿಷು ।
ನಿಯುಜ್ಯ ಶತ್ರುಂ ನಿರ್ಭಿದ್ಯ ಶಿವಾ ಜ್ಞೇಯಾ ಪ್ರಕಾಶಸೇ ॥ ೩೧ ॥

---

೨೬. ತ್ರಿಶೂಲದಿಂದ ನಿರ್ಭಿನ್ನವಾದ ಅವಯವಗಳಿಂದ ಹೊರಚಿಮ್ಮುತ್ತಿರುವ ರಕ್ತದ ಮಧ್ಯದಲ್ಲಿ ಅವನ ಶರೀರವು ಸಂಧ್ಯಾರಾಗದಿಂದ ಕೆಂಪಾದ ಸಮುದ್ರದಲ್ಲಿನ ಪಶ್ಚಿಮಾಚಲದಂತೆ ಕಾಣುತ್ತಿದ್ದಿತು.

೨೭. ಆಗ ಆ ಮಹಿಷಾಸುರನ ತಲೆಯನ್ನು ತನ್ನ ತೀಕ್ಷ್ಣವಾದ ಖಡ್ಗದಿಂದ ಕತ್ತರಿಸಿ ದೇವಿಯು ಅಲ್ಲಿ ನರ್ತನವನ್ನು ಮಾಡಿದಳು.

೨೮. ದುರ್ಗಾದೇವಿಯನ್ನು ಸಿದ್ಧರೂ, ಗಂಧರ್ವರೂ, ಮಹರ್ಷಿಗಳೂ ಪ್ರಶಂಸಿಸಿದರು. ದೇವತೆಗಳು ಸಂತತವಾದ ಪುಷ್ಪವೃಷ್ಟಿಯನ್ನು ಸುರಿಸಿದರು. ಇಂದ್ರನು ನಮಸ್ಕಾರಮಾಡಿ ದೇವಿಯನ್ನು ಸ್ತುತಿಸಿದನು.

೨೯. ಇಂದ್ರನು ಹೇಳುತ್ತಾನೆ:—"ಸಕಲ ಲೋಕಗಳಿಗೆ ಜನನಿಯೂ, ಪ್ರಾಣಿಗಳಿಗೆ ಬೀಜರೂಪಳಾಗಿಯೂ ಇರುವ ನಿನಗೆ ನಮಸ್ಕಾರವು.

೩೦. ನಿನ್ನನ್ನು ಭಜಿಸುವವರಿಗೆ ನೀನೇ ಭಕ್ತಿರೂಪಳೂ, ಶ್ರದ್ಧಾಮಯಿಯೂ, ಶಕ್ತಿಯೂ, ಆದಿಕಾರಣಳೂ, ಉತ್ತಮ ಕೀರ್ತಿದಾಯಕಳೂ, ಶಾಂತಿಯೂ, ದಮವೂ, ತೇಜವೂ, ಕ್ಷಮೆಯೂ ಆಗಿರುವೆ.

೩೧. ನೀನು ಒಬ್ಬಳೇ ಆದರೂ ಬಹುರೂಪಳಾಗಿ ನಾಮಭೇದಗಳಿಂದ ವಿಹರಿಸಿರುವೆ. ನಮ್ಮನಮ್ಮ ತಪಃಫಲಗಳಿಗನುಸಾರವಾಗಿ ನಮ್ಮನಮ್ಮ ಸ್ಥಾನಗಳಲ್ಲಿ ಸ್ಥಾಪಿಸಿ ಶತ್ರುವಾದ ಮಹಿಷಾಸುರನಾದವನನ್ನು ನಿಗ್ರಹಿಸಿ ನೀನು ಶಿವೆಯೆಂಬ ಅನ್ವರ್ಥನಾಮದಿಂದ ಪ್ರಕಾಶಿಸುತ್ತಿರುವೆ.

ಹತೋಽಯಂ ಮಹಿಷೋ ದುಷ್ಟೋ ವಿನಿಕೃತ್ತಶ್ಚ ಶಾಂಭವಿ ॥ ೩೨ ॥
ಛಿನ್ನಮೇತಸ್ಯ ತು ಶಿರಃ ಸಜೀವಮಿವ ಲಕ್ಷ್ಯತೇ ।
ರಕ್ತನೇತ್ರಂ ತೀಕ್ಷ್ಣಶೃಂಗಂ ಜ್ವಲಜ್ಜಿಹ್ವಂ ಚಲಂ ಶಿರಃ ॥ ೩೩ ॥
ಆಕ್ರಮ್ಯ ತವ ತಿಷ್ಠನ್ತ್ಯ ರೂಪಮೇವ ಸದಾಸ್ತು ನಃ ।
ಚಕ್ರಶೃಂಗಧನುರ್ಬಾಣಖಡ್ಗಚರ್ಮವರಾಭಯೈಃ ॥ ೩೪ ॥
ಶೂಲಘಂಟಾಂಕುಶಕಶಾಕಪಾಲಕುಲಿಶಾದಿಭಿಃ ।
ಅಶೇಷದೇವತಾಮೂರ್ತಿರಶೇಷೈರ್ದೇವತಾಯುಧೈಃ ॥ ೩೫ ॥
ಆಪೂರಿತಾ ತ್ವಮೇವಾಂಬ ಸರ್ವಶತ್ರೂನ್ನಿಹಂಸಿ ನಃ ।
ಆಯುಧಾನಾಂ ಸಹಸ್ರಾಣಿ ತನ್ಮಯಾಸ್ತೇ ವಿಭೂತಯಃ ।
ತ್ವಜ್ಜಿತಾರಾತಯಃ ಸರ್ವೇ ವಿವಿಧಾಯುಧವಾಹನಾಃ ॥ ೩೬ ॥
ರಥನಾಗಹಯೈರ್ಯುಕ್ತಾಃ ಸಸೈನ್ಯಾ ಅಪಿ ಭೂಭೃತಃ ।
ಕ್ಷಣೇನ ದಗ್ಧವೀರ್ಯಾಃ ಸ್ಯುಸ್ತ್ವತ್ಪ್ರಸಾದವಿವರ್ಜಿತಾಃ ॥ ೩೭ ॥
ಅಪದೋಽಪ್ಯಲ್ಪವೀರ್ಯೋಽಪಿ ತ್ವತ್ಪಾದಾಂಬುಜಸೇವಕಃ ।
ತ್ರಿಲೋಕನಾಥತಾಂ ಪ್ರಾಪ್ತಃ ಪ್ರಥತೇ ಕೀರ್ತಿಮಂಡಿತಃ ॥ ೩೮ ॥

---

೩೨–೩೩. ದುಷ್ಟನಾದ ಈ ರಾಕ್ಷಸನು ಛಿನ್ನಭಿನ್ನನಾಗಿ ಹತನಾದನು. ಆದರೂ ಇವನ ಶಿರವು ಜೀವಯುಕ್ತವಾಗಿರುವಂತೆ ತೋರುತ್ತಿದೆ. ಅದು ಕೆಂಪೇರಿದ ಕಣ್ಣುಗಳಿಂದಲೂ, ತೀಕ್ಷ್ಣಶೃಂಗಗಳಿಂದಲೂ, ಉರಿಯುತ್ತಿರುವ ನಾಲಿಗೆಯಿಂದಲೂ ಕೂಡಿ ಚಲಿಸುತ್ತಿರುವುದು.

೩೪. ಚಕ್ರ, ಶೃಂಗ, ಬಿಲ್ಲು, ಬಾಣ, ಖಡ್ಗ, ಚರ್ಮದ ಗುರಾಣಿಗಳಿಂದಲೂ, ವರದ ಮತ್ತು ಅಭಯ ಮುದ್ರೆಗಳಿಂದಲೂ ಒಪ್ಪುತ್ತಿರುವ ಕೈಗಳಿಂದ ಕೂಡಿ ಮಹಿಷಾಸುರನನ್ನು ತುಳಿದುಕೊಂಡಿರುವ ಈ ನಿನ್ನ ರೂಪವೇ ನಮಗೆ ಯಾವಾಗಲೂ ಪ್ರತ್ಯಕ್ಷವಾಗಲಿ.

೩೫–೩೬. ತ್ರಿಶೂಲ, ಘಂಟೆ, ಅಂಕುಶ, ಕಶಾ, ಕಪಾಲ, ವಜ್ರಾಯುಧ ಮುಂತಾದ ಸಕಲ ದೇವತೆಗಳ ಆಯುಧಗಳಿಂದ ದೇವತಾಮಯಿಯಾಗಿ ನಿಂತು ನೀನೇ ನಮ್ಮ ಸರ್ವಶತ್ರುಗಳನ್ನೂ ನಾಶಮಾಡುತ್ತಿರುವೆ. ಸಾವಿರಾರು ಆಯುಧಗಳಿಂದ ನಿನ್ನ ವಿಭೂತಿಗಳು ಒಪ್ಪುತ್ತಿರುವುವು. ಎಲ್ಲರೂ ನಿನ್ನ ಸಹಾಯದಿಂದ ಶತ್ರುಗಳನ್ನು ಗೆದ್ದು ವಿಧ ವಿಧವಾದ ಆಯುಧ ವಾಹನಗಳಿಂದ ಒಪ್ಪುತ್ತಿರುವರು.

೩೭. ರಥಗಳು, ಆನೆಗಳು, ಕುದುರೆಗಳು, ಕಾಲಾಳುಗಳು ಇವುಗಳಿಂದ ಕೂಡಿದ ಸೈನ್ಯಗಳುಳ್ಳ ರಾಜರೂ ಕೂಡ ನಿನ್ನ ಕರುಣೆಯು ವಿಮುಖವಾದರೆ ಕ್ಷಣದಲ್ಲಿಯೇ ಪರಾಕ್ರಮವೆಲ್ಲವನ್ನೂ ಕಳೆದುಕೊಳ್ಳುವರು.

೩೮. ನಿಲ್ಲುವುದಕ್ಕೆ ನೆಲೆಯಿಲ್ಲದ ಕ್ಷೀಣಸತ್ವನಾದರೂ ನಿನ್ನ ಪಾದಸೇವೆಯ

ತದ್ರೂಪಮಿದಮತ್ಯುಗ್ರಂ ಧ್ಯಾಯತಾಮರ್ಚತಾಂ ಸದಾ ।
ನ ಶತ್ರುಭ್ಯೋ ಭಯಂ ಕಿಂಚಿದ್ಭವೇದ್ವಿಜಯಶಾಲಿನಾಂ ॥ ೩೯ ॥
ಈದೃಶಂ ಸರ್ವಲೋಕೇಷು ರೂಪಂ ತೇ ದೇವವಂದಿತಂ ।
ಪೂಜ್ಯತಾಮಿಷ್ಟಸಿದ್ಧ್ಯರ್ಥಂ ದೇವೈರ್ಭೃತ್ಯೈಶ್ಚ ಸರ್ವದಾ ॥ ೪೦ ॥
ಮಾತರಶ್ಚ ತ್ವಯಾ ಸೃಷ್ಟಾಃ ಸರ್ವಾಭೀಷ್ಟಫಲಪ್ರದಾಃ ।
ಸಗಣಾಃ ಪ್ರತಿಪೂಜ್ಯಂತಾಂ ಸರ್ವಸ್ಥಾನೇಷು ಸರ್ವದಾ ॥ ೪೧ ॥
ಅಯಂ ಚ ನಿಹತೋ ದೈತ್ಯಸ್ತ್ವತ್ಪಾದಕೃತಲಾಂಛನಃ ।
ತವ ಭಕ್ತ್ಯೈಃ ಸದಾ ಪೂಜ್ಯಸ್ತ್ವತ್ಪ್ರಸಾದಾತ್ತ್ವದಗ್ರತಃ ॥ ೪೨ ॥
ಇತ್ಥಂ ಸುರೇಂದ್ರಪ್ರಣುತಾ ಸರ್ವರ್ಷಿಸುರಸೇವಿತಾ ।
ತಥೇತಿ ವರದಾ ದೇವೀ ಸಸರ್ಜ ಚ ದಿವಂ ಪ್ರತಿ ॥ ೪೩ ॥
ಸ್ವಯಮಪ್ಯಾತ್ಮನಸ್ತತ್ರ ತದ್ರೂಪಂ ವಿವಿಧಾಯುಧಂ ।
ಸಂಸ್ಥಾಪ್ಯ ಮಾತೃಭಿಸ್ಸಾರ್ಧಂ ಸ್ಥಾನರಕ್ಷಣಮಾತನೋತ್ ॥ ೪೪ ॥

---

ಬಲದಿಂದ ತ್ರಿಲೋಕಗಳ ಆಧಿಪತ್ಯವನ್ನು ಪಡೆದು ಕೀರ್ತಿವಂತನಾಗಿ ಬಾಳುತ್ತಾನೆ.

೩೯–೪೦. ನಿನ್ನ ಈ ಮಹೋಗ್ರರೂಪವನ್ನು ಧ್ಯಾನಿಸುವವರಿಗೂ, ಪೂಜಿಸುವವರಿಗೂ ನಿತ್ಯ ವಿಜಯವುಂಟಾಗಿ ಶತ್ರುಗಳಿಂದ ಯಾವ ಭಯವೂ ಉಂಟಾಗುವುದಿಲ್ಲವು. ಇಂತಹ ನಿನ್ನ ಸುರಪೂಜಿತವಾದ ರೂಪವು ಸಕಲ ಲೋಕಗಳಲ್ಲಿಯೂ ದೇವತೆಗಳಿಂದಲೂ, ಭಕ್ತರಿಂದಲೂ ಇಷ್ಟಾರ್ಥಲಾಭಕ್ಕಾಗಿ ಸರ್ವಕಾಲದಲ್ಲಿಯೂ ಪೂಜೆಗೊಳ್ಳಲಿ.

೪೧. ನಿನ್ನಿಂದ ಸೃಷ್ಟರಾದ ಸಪ್ತಮಾತೃಕೆಯರೂ ತಮ್ಮ ಗಣಗಳಿಂದೊಡಗೂಡಿ ಎಲ್ಲೆಡೆಗಳಲ್ಲಿಯೂ ಸಕಲಾಭೀಷ್ಟದಾಯಕಿಯರಾಗಿ ಪೂಜೆಗಳನ್ನು ಸ್ವೀಕರಿಸಲಿ.

೪೨. ಈ ರಾಕ್ಷಸನೂ ಕೂಡ ನಿನ್ನಿಂದ ಹತನಾಗಿ ನಿನ್ನ ಪಾದಚಿಹ್ನವನ್ನು ಧರಿಸಿದುದರಿಂದ ನಿನ್ನ ಇಷ್ಟದಂತೆ ನಿನ್ನ ಪೂಜೆಗೆ ಮೊದಲೇ ಪೂಜೆಯನ್ನುಗೊಳ್ಳಲಿ."

೪೩–೪೪. ಹೀಗೆಂದು ಇಂದ್ರನಿಂದ ಪ್ರಾರ್ಥಿತಳಾಗಿ ಮಹರ್ಷಿಗಳಿಂದ ಸ್ತುತಳಾದ ಜಗದಂಬೆಯು ಹಾಗೆಯೇ ಆಗಲೆಂದು ಅನುಗ್ರಹಿಸಿ ಅವರನ್ನು ಸ್ವರ್ಗಕ್ಕೆ ಬೀಳ್ಕೊಟ್ಟು ತಾನೂ ಅಲ್ಲಿಯೇ ವಿವಿಧಾಯುಧಧಾರಿಯಾದ ತನ್ನ ರೂಪವನ್ನು ಸ್ಥಾಪಿಸಿ ಮಾತೃಕೆಯೊಡನೆ ಆ ಕ್ಷೇತ್ರದ ರಕ್ಷಣೆಯನ್ನು ಮಾಡಿದಳು.

ಸಂಗೃಹ್ಯ ನಿರ್ಮಲಂ ರೂಪಂ ಸಖೀಜನ ಸಮಾವೃತಾ ।
ಮಹಿಷಸ್ಯ ಶಿರೋಽಪಶ್ಯದ್ವಿಕೃತ್ತಂ ಖಡ್ಗಧಾರಯಾ ॥ ೪೫ ॥
ಕಥಯಂತೀ ಪುನಸ್ತಸ್ಯ ಚಿತ್ರಂ ಲೋಕವಿಭೂಷಣಂ ।
ಸಖೀಭಿಃ ಸಹ ಸಾ ಬಾಲಾ ಕಂಠಂ ತಸ್ಯ ವ್ಯಲೋಕಯತ್ ॥ ೪೬ ॥
ಅಪಶ್ಯಚ್ಚ ತದಾ ಲಿಂಗಂ ಕರ್ತುಂ ತಸ್ಯ ಚ ಪೂಜನಂ ।
ಆದತ್ತ ಸಹಸಾ ಗೌರೀ ಲಿಂಗಂ ತಸ್ಯ ಗಳೇ ಸ್ಥಿತಂ ॥ ೪೭ ॥
ಆಲೋಕಯಚ್ಚ ಸುಚಿರಂ ರಕ್ತಧಾರಾಪರಿಪ್ಲುತಂ ।
ಆಸಜ್ಜತ ಪುನರ್ಲಿಂಗಮಸ್ಯಾಃ ಪಾಣಿತಲಂ ಗತಂ ॥ ೪೮ ॥
ವಿಮೋಚಯಿತುಮುದ್ಯುಕ್ತಾ ನಾಶಕ್ನೋಲ್ಲಗ್ನಮಂಜಸಾ ।
ಅಚಿಂತಯಚ್ಚ ಸಾ ದೇವೀ ಕಿಮೇತದಿತಿ ವಿಸ್ಮಯಾತ್ ॥ ೪೯ ॥
ವಿಷಾದೇನ ಚ ಸಂಯುಕ್ತಾ ಮಹರ್ಷೀಣಾಂ ಪುರಃಸ್ಥಿತಾ ।
ಆಹತಃ ಶಿವಭಕ್ತೋಽಯಮಿತಿ ಶೋಕಂ ಸಮಾದಿಶತ್ ॥ ೫೦ ॥
ಅಗರ್ಹತ ಭೃಶಂ ಮೌಢ್ಯಮಾತ್ಮನಃ ಸ್ತ್ರೀಸ್ವಭಾವಜಂ ।
ಅವಿಚಾರಸಮಾರಬ್ಧಂ ಶಿವಭಕ್ತನಿಬರ್ಹಣಂ ॥ ೫೧ ॥

---

೪೫. ಮತ್ತೆ ಶುದ್ಧವಾದ ಸೌಮ್ಯರೂಪವನ್ನು ಹೊಂದಿದವಳಾಗಿ ಸಖೀಜನರೊಡನೆ ಸುಳಿದಾಡುತ್ತ ತನ್ನ ಖಡ್ಗದಿಂದ ಕತ್ತರಿಸಲ್ಪಟ್ಟ ಮಹಿಷಾಸುರನ ತಲೆಯನ್ನು ಕಂಡಳು.

೪೬. ತನ್ನ ಸಖಿಯರಿಗೆ ಅವನ ಲೋಕೋತ್ತರವಾದ ವ್ಯಾಪಾರವನ್ನು ವಿಸ್ತರಿಸುತ್ತ ದೇವಿಯು ಅವರೊಡನೆ ಆ ರಾಕ್ಷಸನ ಕಂಠಪ್ರದೇಶದಲ್ಲಿ ತನ್ನ ದೃಷ್ಟಿಯನ್ನು ಪ್ರಸರಿಸಿದಳು.

೪೭. ಆಗ ಆತನ ಕಂಠದಲ್ಲಿದ್ದ ಲಿಂಗವನ್ನು ಕಂಡು ಅದನ್ನು ಪೂಜಿಸಬೇಕೆಂಬ ಅಭಿಲಾಷೆಯಿಂದ ಸಂಭ್ರಮಯುಕ್ತಳಾಗಿ ಅದಕ್ಕೆ ಕೈನೀಡಿದಳು.

೪೮. ರಕ್ತದಿಂದ ತೊಯ್ದಿರುವ ಆ ಲಿಂಗವನ್ನು ಕೆಲವುಕಾಲ ನೋಡುತ್ತಿದ್ದಹಾಗೆಯೇ ಆ ಲಿಂಗವು ಆಕೆಯ ಅಂಗೈಯಲ್ಲಿ ಅಂಟಿ ನಿಂತಿತು.

೪೯. ಅದನ್ನು ತೆಗೆಯಲು ಬಹಳ ಪ್ರಯತ್ನಮಾಡಿದರೂ ಸಾಧ್ಯವಾಗಲಿಲ್ಲ. ಆಗ ದೇವಿಯು ವಿಸ್ಮಯಗೊಂಡು ಇದೇನೆಂದು ಯೋಚಿಸತೊಡಗಿದಳು.

೫೦. ಆಕೆಯು ಮಹರ್ಷಿಗಳ ಸನ್ನಿಧಿಯಲ್ಲಿ ನಿಂತು ಅತ್ಯಂತ ದುಃಖಭರಿತಳಾಗಿ ಈ ಶಿವಭಕ್ತನು ನನ್ನಿಂದ ಹತನಾದನೆಂದು ಶೋಕಿಸತೊಡಗಿದಳು.

೫೧. ಪೂರ್ವಾಪರವಿವೇಚನೆಯಿಲ್ಲದೆ ಸ್ತ್ರೀಸ್ವಭಾವದಿಂದ ಉತ್ಪನ್ನವಾಗಿ ಶಿವಭಕ್ತನ ನಿಗ್ರಹದಲ್ಲಿ ಪರಿಸಮಾಪ್ತಿಗೊಂಡ ತನ್ನ ಮೌಢ್ಯವನ್ನು ತಾನೇ ನಿಂದಿಸಿದಳು.

ಉಪತಾಪಪರೀತಾಂಗೀ ಗೌತಮಂ ಮುನಿಸತ್ತಮಂ ।
ಉಪಗಮ್ಯಾಬ್ರವೀದ್ಬಾಲಾ ಸಾಹಸಂ ಕೃತಮಾತ್ಮನಾ ॥ ೫೨ ॥
ಭಗವನ್ಸರ್ವಧರ್ಮಜ್ಞ ಗೌತಮಾರ್ಯ ಮುನೀಶ್ವರ ।
ಮಾನ್ಯಯಾ ಧರ್ಮರೂಪೇಣ ಕೋಽಪ್ಯಧರ್ಮಃ ಪ್ರಕಲ್ಪಿತಃ ॥ ೫೩ ॥
ದೇವಾನಾಂ ರಕ್ಷಣಂ ಕರ್ತುಮಭಯಂ ದಾತುಮುದ್ಯತಾ ।
ಅಜ್ಞಾನಾನ್ಮಹಿಷಂ ದೈತ್ಯಂ ಶಿವಭಕ್ತಮುಮರ್ದಯಂ ॥ ೫೪ ॥
ರಜಸಾಕ್ರಾಂತಬುದ್ಧೀನಾಂ ನ ಭವೇದ್ಧರ್ಮಸಂಗ್ರಹಃ ।
ಗುರುಪ್ರಸಾದ ಸುಲಭಃ ಸುರದ್ವಿಘ್ನಶತಾಕುಲಃ ॥ ೫೫ ॥
ಸುದುರ್ಧರ್ಷಾ ನಿರಾಚಾರದುರ್ದಮಾಃ ಶಿವಸಂಶ್ರಯಾಃ ।
ವಿಶೇಷತೋ ಲಿಂಗಧರಾಃ ಶಿವಸ್ತಾನ್ಬಹುಮನ್ಯತೇ ॥ ೫೬ ॥
ಪುರಾ ಪುರತ್ರಯಾವಾಸಾ ದೈತೇಯಾ ಲಿಂಗಧಾರಕಾಃ ।
ಅಜಿತಾಃ ಶಂಭುನಾ ಪೂರ್ವಂ ಮುಕ್ತಲಿಂಗಾ ನಿಷೂದಿತಾಃ ॥ ೫೭ ॥

---

೫೨. ಬಳಿಕಲಾ ದೇವಿಯು ಪಶ್ಚಾತ್ತಾಪದಿಂದ ತಪ್ತಳಾಗಿ ಗೌತಮ ಮುನಿಶ್ರೇಷ್ಠನನ್ನು ಕಂಡು ನಮಸ್ಕರಿಸಿ ತಾನು ಮಾಡಿದ ಸಾಹಸ ಕಾರ್ಯವನ್ನು ಆತನಲ್ಲಿ ಬಿನ್ನವಿಸಿದಳು.

೫೩. "ಎಲೈ ಗೌತಮನೆ! ನೀನು ಸಕಲ ಧರ್ಮಗಳನ್ನೂ ತಿಳಿದಿರುವೆ. ವೃದ್ಧನೂ ಮುನಿಶ್ರೇಷ್ಠನೂ ಆಗಿರುವೆ. ಈಗ ನಾನು ಧರ್ಮವೆಂಬ ವ್ಯಾಜದಿಂದ ಅಧರ್ಮವೊಂದನ್ನಾಚರಿಸಿರುವೆನು.

೫೪. ದೇವತೆಗಳನ್ನು ರಕ್ಷಿಸಲು ಅಭಯವನ್ನು ಕೊಟ್ಟವಳಾಗಿ ಅಜ್ಞಾನದಿಂದ ಉತ್ತಮ ಶಿವಭಕ್ತನಾದ ಮಹಿಷಾಸುರನನ್ನು ನಿಗ್ರಹಮಾಡಿದೆನು.

೫೫. ರಜೋಗುಣದಿಂದ ಆವೃತವಾದ ಬುದ್ಧಿಯುಳ್ಳವರಿಗೆ ಗುರುಗಳ ಅನುಗ್ರಹದಿಂದ ಉಂಟಾಗಿ, ಸಕಲ ವಿಘ್ನಗಳನ್ನೂ ಧ್ವಂಸಮಾಡುವುದಾದ ಧರ್ಮಸಂಗ್ರಹವು ಆಗುವುದಿಲ್ಲ.

೫೬. ಲಿಂಗಧಾರಿಗಳು ಇತರರಿಗೆ ಅಜೇಯರಾಗುವರು. ಆಚಾರಹೀನರಿಗೆ ದುರ್ದಾಂತರಾಗಿರುವರು. ಶಿವನು ಅವರನ್ನು ವಿಶೇಷವಾಗಿ ಗೌರವಿಸುತ್ತಾನೆ.

೫೭. ಪೂರ್ವದಲ್ಲಿ ರಾಕ್ಷಸರಾದ ತ್ರಿಪುರರು ಲಿಂಗಧಾರಿಗಳಾಗಿದ್ದುದರಿಂದ ಶಿವನಿಂದಲೂ ಸಹ ಅವರನ್ನು ಗೆಲ್ಲಲಾಗಲಿಲ್ಲ. ಅವರು ಲಿಂಗಗಳನ್ನು ತ್ಯಜಿಸಿದೊಡನೆಯೇ ಜಯಿಸಲ್ಪಟ್ಟರು.

ಅಸ್ಯಕಂಠಸ್ಥಿತಂ ಲಿಂಗಂ ಮಮ ಪಾಣಿಂ ನ ಮುಂಚತಿ ।
ಕಥಂ ಪಾಪಂ ನಿರಸ್ಯಾಮಿ ಶಿವಭಕ್ತವಧಾಶ್ರಿತಂ ॥ ೫೮ ॥
ಅಸ್ಯ ಕಂಠಸ್ಥಿತಂ ಲಿಂಗಂ ಧಾರಯಂತೀ ತಪೋಽನ್ವಿತಾ ।
ತೀರ್ಥಯಾತ್ರಾಂ ಕರಿಷ್ಯಾಮಿ ಯಾವಚ್ಛಂಭುಃ ಪ್ರಸೀದತಿ ॥ ೫೯ ॥
ಪುನಃ ಕೈಲಾಸಮುಖ್ಯೇಷು ಶಂಭುಸ್ಥಾನೇಷು ಭೂರಿಷು ।
ತೀರ್ಥೇಷು ರಚಿತಸ್ನಾನಾ ಲಪ್ಸ್ಯೇ ಪಾಪವಿಶೋಧನಂ ॥ ೬೦ ॥
ಇತಿ ತಸ್ಯಾಃ ಪರಿಶ್ರಾಂತಿಂ ದುರ್ಧರ್ಮಪರಿಶಂಕಯಾ ।
ಆಕರ್ಣ್ಯ ಶಿವಧರ್ಮಜ್ಞೋ ಭಯಾರ್ತಾಂ ತಾಮುವೋಚತ ॥ ೬೧ ॥
ಮಾ ಭೈಷೀರ್ಗಿರಿಜೇ ಮೋಹಾಚ್ಛಿವಭಕ್ತೋ ಹತಸ್ತ್ವಿತಿ ।
ಧರ್ಮಸೂಕ್ಷ್ಮಾರ್ಥವೇತ್ತಾರೋ ದುರ್ಲಭಾ ಗಿರಿಕನ್ಯಕೇ ॥ ೬೨ ॥
ಸದಾಶಿವಸ್ಯ ವದನೈಃ ಸದ್ಯೋಜಾತಾದಿ ಸಂಶ್ರಿತೈಃ ।
ಆಗಮಾಃ ಪಂಚಭಿಃ ಪ್ರೋಕ್ತಾ ಅಷ್ಟಾವಿಂಶತಿಕೋಟಯಃ ॥ ೬೩ ॥

---

೫೮. ಈ ಮಹಿಷಾಸುರನ ಕಂಠದಲ್ಲಿದ್ದ ಲಿಂಗವು ನನ್ನ ಕೈಯನ್ನು ಬಿಡುವುದಿಲ್ಲ. ಶಿವಭಕ್ತನನ್ನು ನಿಗ್ರಹಮಾಡಿದ ಪಾಪವನ್ನು ಹೇಗೆ ಕಳೆದು ಕೊಳ್ಳಲಿ?

೫೯. ಈ ಲಿಂಗವನ್ನು ಕೈಯಲ್ಲಿ ಧರಿಸಿಕೊಂಡು ತಪಸ್ಸಂಪನ್ನಳಾಗಿ ಪರಮೇಶ್ವರನು ನನ್ನಲ್ಲಿ ಸುಪ್ರೀತನಾಗುವವರೆಗೂ ತೀರ್ಥಯಾತ್ರೆಗಳನ್ನು ಮಾಡುವೆನು.

೬೦. ಮತ್ತೆ ಕೈಲಾಸವೇ ಮೊದಲಾದ ಶಿವವಾಸಸ್ಥಾನಗಳಲ್ಲಿಯೂ, ಅನೇಕ ತೀರ್ಥಗಳಲ್ಲಿಯೂ ಸ್ನಾನಮಾಡಿಕೊಂಡು ಈ ಪಾಪದ ಪರಿಹಾರವನ್ನು ಹೊಂದಲು ಯತ್ನಿಸುವೆನು.''

೬೧. ದುಷ್ಕಾರ್ಯವನ್ನು ಮಾಡಿದ ಭಯದಿಂದ ವಿಹ್ವಲಳಾಗಿರುವ ಆಕೆಯ ಕಷ್ಟವನ್ನು ನೋಡಿ ಶಿವಧರ್ಮಜ್ಞರಾದ ಗೌತಮರು ಆಕೆಗೆ ಸಮಾಧಾನ ಮಾಡಿದರು.

೬೨. ''ಎಲೌ ಗಿರಿಜೆಯೆ! ಅಜ್ಞಾನದಿಂದ ಶಿವಭಕ್ತನನ್ನು ಕೊಂದೆನೆಂದು ಭಯಪಡಬೇಡ. ಈ ವಿಷಯದಲ್ಲಿ ಧರ್ಮಸೂಕ್ಷ್ಮವನ್ನು ತಿಳಿದಿರುವವರು ಬಹಳ ವಿರಳರಾಗಿರುವರು.

೬೩. ಸದ್ಯೋಜಾತವೇ ಮೊದಲಾದ ಪರಮೇಶ್ವರನ ಐದು ಮುಖಗಳಿಂದ ಇಪ್ಪತ್ತೆಂಟು ಕೋಟಿ ವಿಧಗಳಾದ ಆಗಮಗಳು ಹೇಳಲ್ಪಟ್ಟುವು.

ನಿರ್ಣಯಾಃ ಶಿವಭಕ್ತಾನಾಂ ಶಿವಮಾರ್ಗಸ್ಯ ಶೋಭನಾಃ ।
ತೇಷು ತೇಷು ಮುನೀಂದ್ರೈಶ್ಚ ನತ್ವೈವ ಪ್ರತಿಪದ್ಯತೇ ॥ ೬೪ ॥
ಕಾಲೋ ಮುಖಂ ಚ ಕಂಕಾಲಂ ಶೈವಂ ಪಾಶುಪತಂ ತಥಾ ।
ಮಹಾವ್ರತಂ ಪಂಚ ಚೈತಾಃ ಶಿವಮಾರ್ಗಪ್ರವೃತ್ತಯಃ ॥ ೬೫ ॥
ಭೇದಾಶ್ಚ ಬಹವಸ್ತೇಷಾಮನ್ಯೋನ್ಯಸ್ಯ ಶಿವೇ ರತಾಃ ।
ಸಾಧ್ಯ ಏಕೋ ಹಿ ಬಲವಾನ್ಸರ್ವೈಸ್ತೈರನಿಶಂ ಶಿವಃ ॥ ೬೬ ॥
ಸರ್ವ ಏವ ಸದಾ ಪೂಜ್ಯಾಃ ಸ್ವಧರ್ಮಪರಿನಿಷ್ಠಿತೈಃ ।
ಅಮತ್ಸರೈಃ ಶಿವೇ ಭಕ್ತೈಃ ಶಿವಾಜ್ಞಾಪರಿಪಾಲಕೈಃ ॥ ೬೭ ॥
ವೇದೈಶ್ಚ ಬಹುಭಿರ್ಯಜ್ಞೈರ್ಭಕ್ತ್ಯಾ ಚ ಪರಯಾ ಶಿವಃ ।
ಆರಾಧ್ಯತೇ ಮಹಾದೇವಃ ಸರ್ವದಾ ಸರ್ವದಾಯಕಃ ॥ ೬೮ ॥
ಜೀವಹಿಂಸಾ ನ ಕರ್ತವ್ಯಾ ವಿಶೇಷೇಣ ತಪಸ್ವಿಭಿಃ ।
ಶಿವಧರ್ಮಸ್ಯ ಭೇತ್ತಾರೋ ನಿಹಂತವ್ಯಾಸ್ತಥಾಂಜಸಾ ॥ ೬೯ ॥

---

೬೪. ಶಿವಭಕ್ತರಿಗೆ ಶಾಸ್ತ್ರರೂಪಗಳಾಗಿಯೂ, ಶಿವಾಚಾರ ಮಾರ್ಗಗಳಲ್ಲಿ ಶೋಭಿಸುವುವುಗಳಾಗಿಯೂ ಇರುವ ಈ ಆಗಮಗಳಲ್ಲಿ ಭಕ್ತಿಭರಿತರಾದ ಮುನಿಗಳ ಪ್ರವರ್ತನೆಯಿರುತ್ತದೆ.

೬೫. ಕಾಲ, ಕಂಕಾಲ, ಶೈವ, ಪಾಶುಪತ ಮತ್ತು ಮಹಾವ್ರತಗಳೆಂಬ ಐದು ಮುಖ್ಯ ಆಗಮಗಳೇ ಶಿವಮಾರ್ಗಗಳಲ್ಲಿ ಪ್ರವರ್ತಕಗಳಾಗಿರುವುವು.

೬೬. ಶಿವನಿರತರಾದವರಲ್ಲಿ ಪರಸ್ಪರ ಭೇದಗಳು ಬಹು ವಿಧಗಳಾಗಿರುವುವು. ಎಲ್ಲ ಆಗಮಗಳಿಂದಲೂ ಧ್ಯೇಯನಾದ, ಬಲಿಷ್ಠನಾದ ಸದಾಶಿವನು ಮಾತ್ರ ಒಬ್ಬನೇ ಆಗಿರುವನು.

೬೭. ತಮ್ಮ ಧರ್ಮದಲ್ಲಿಯೇ ಆಸಕ್ತಿಯುಳ್ಳವರಾಗಿ, ಮಾತ್ಸರ್ಯರಹಿತರಾಗಿ, ಶಿವಭಕ್ತರೂ, ಶಿವಾಜ್ಞಾಧಾರಿಗಳೂ ಆದ ಭಕ್ತರಿಂದ ಸಕಲರೂ ಸಂಪೂಜ್ಯರೇ ಸರಿ.

೬೮. ವೇದಗಳಿಂದಲೂ, ವಿಧವಿಧಗಳಾದ ಯಜ್ಞಗಳಿಂದಲೂ, ಅನುತ್ತಮವಾದ ಭಕ್ತಿಯಿಂದಲೂ, ಸರ್ವಾಭೀಷ್ಟಪ್ರದನಾದ ಸದಾಶಿವನೇ ಸರ್ವಕಾಲದಲ್ಲಿಯೂ ಪೂಜೆಮಾಡಿಸಿಕೊಳ್ಳುವನು.

೬೯. ತಪೋನಿರತರಾದವರಿಗೆ ಜೀವಹಿಂಸೆಯನ್ನು ಮಾಡಬಾರದೆಂಬುದು ವಿಶೇಷ ನಿಯಮವು. ಆದರೆ ಶಿವಧರ್ಮಗಳನ್ನು ಕೆಡಿಸುವವರನ್ನು ಅವಶ್ಯಕವಾಗಿ ನಿಗ್ರಹಿಸಬೇಕು.

ನ ವೇಷಜುಷಿ ವೀಕ್ಷೇತ ನ ಲಿಂಗಂ ನೈವ ಸಂಭವಂ ।
ಶಿವಧರ್ಮಸ್ಯ ಭೇತ್ತಾರಂ ಹನ್ಯಾದೇವಾಽವಿಚಾರಯನ್ ॥ ೭೦ ॥
ಬಹುಭಿಃ ಸ್ಫೂರ್ತಯಾ ಬುದ್ಧ್ಯಾ ಧರ್ಮವಿದ್ಭಿರ್ನಿರೂಪಿತೇ ।
ಶಿವಧರ್ಮಸ್ಯ ವಿಲಯೇ ಸದ್ಯಃ ಶಕ್ತಿಃ ಪ್ರವರ್ತತೇ ॥ ೭೧ ॥
ಅಸ್ಯ ಕರ್ಮ ಪುನರ್ದಿಷ್ಟಂ ಲಿಂಗಮೈಶ್ವರ್ಯಚರ್ಚಿತಂ ।
ನ ಜೇತುಂ ಶಕ್ಯತೇ ದೇವಿ ತೇನಾಸೌ ಸರ್ವದೈವತೈಃ ॥ ೭೨ ॥
ಯದಯಂ ನಿಹತೋ ದೇವಿ ತ್ವಯಾ ಶಂಕರಮಾನ್ಯಯಾ ।
ಆಕ್ರಾಂತಃ ಪಾಪದೋಷೇಣ ಮಹರ್ಷೀಣಾಂ ಶಿವಾಶ್ರಯಾತ್ ॥ ೭೩ ॥
ಅಥ ತೇ ಕುಪಿತಾಸ್ತಸ್ಯ ವೈಷಮ್ಯಾದವಮಾನತಃ ।
ಶೇಪುರ್ಮಹಿಷವದ್ದುಷ್ಟೋ ಮಹಿಷೋಽಯಂ ಭವತ್ವಿತಿ ॥ ೭೪ ॥
ತತಸ್ತದ್ವಚನಾತ್ಸದ್ಯೋ ಮಹಿಷೋಽಭೂತ್ ಕ್ಷಣಾತ್ತಥಾ ।
ಪ್ರಣಮ್ಯ ತೋಷಯಾಮಾಸ ಯಯಾಚೇ ಶಾಪಮೋಚನಂ ॥ ೭೫ ॥

---

೭೦. ವೇಷಧಾರಿಯಾದವನಲ್ಲಿ ಲಿಂಗವನ್ನೂ, ಸತ್ಕುಲವನ್ನೂ ವಿಚಾರಿಸಬಾರದು. ಶಿವಧರ್ಮದ್ರೋಹಿಯನ್ನು ಯಾವ ವಿಚಾರವಿಲ್ಲದೆಯೇ ಆಗಲಿ ಖಂಡಿತವಾಗಿಯೂ ಸಂಹರಿಸಲೇಬೇಕು.

೭೧. ಅನೇಕ ಧರ್ಮಜ್ಞಾನಿಗಳಿಂದ ಉಜ್ಜ್ವಲವಾದ ಸ್ಫೂರ್ತಿಯೊಡಗೂಡಿದ ಬುದ್ಧಿಪೂರ್ವಕವಾಗಿ ನಿರೂಪಿಸಲ್ಪಟ್ಟ ಶಿವಧರ್ಮದ ಅಂತ್ಯದಲ್ಲಿ ಶಕ್ತಿಯೆಂಬುದು ತಾನಾಗಿಯೇ ಉಂಟಾಗುತ್ತದೆ.

೭೨. ಈ ರಾಕ್ಷಸನ ಸುಕೃತದಿಂದ ಸಂಪತ್ಪ್ರದಾಯಕವಾದ ಲಿಂಗವು ಇವನಿಂದ ಪೂಜಿಸಲ್ಪಟ್ಟಿತು. ಆದುದರಿಂದಲೇ ಇವನು ಸಕಲ ದೇವತೆಗಳಿಂದಲೂ ಅಜೇಯನಾಗಿದ್ದನು.

೭೩. ಶಿವಭಕ್ತಾಗ್ರೇಸರಳಾದ ನಿನ್ನಿಂದ ಈತನು ಸಂಹೃತನಾದುದೂ ಸಹ ಶಿವಭಕ್ತರಾದ ಮಹರ್ಷಿಗಳ ಶಾಪದ ಬಲದಿಂದಲೇ ಆಗಿರುವುದು.

೭೪. ಇವನ ಉದ್ದಂಡತನವನ್ನೂ ಅವಮಾನಪಡಿಸುವುದನ್ನೂ ಕಂಡು ಕೋಪಗೊಂಡ ಮಹರ್ಷಿಗಳು ಇವನನ್ನು ಮಹಿಷನಂತೆ ದುಷ್ಟನಾಗಿರುವುದರಿಂದ ಮಹಿಷರೂಪವನ್ನು ತಾಳಲೆಂದು ಶಪಿಸಿದರು.

೭೫. ಅವರ ಶಾಪಬಲದಿಂದ ಈ ರಾಕ್ಷಸನು ತಕ್ಷಣದಲ್ಲಿಯೇ ಮಹಿಷರೂಪನಾದನು. ಬಳಿಕ ಪಶ್ಚಾತ್ತಾಪದಿಂದ ಅವರಿಗೆ ನಮಸ್ಕರಿಸಿ ಪ್ರಸನ್ನಗೊಳಿಸಿಕೊಂಡು ಶಾಪವಿಮೋಚನ ಕಾಲವನ್ನು ಕೇಳಿಕೊಂಡನು.

ದತ್ವಾ ಪ್ರಕಾಮರೂಪತ್ವಂ ದದುರಸ್ಮೈ ಪ್ರಸಾದಿತಾಃ ।
ಮಹಿಷತ್ವೇಽಪಿ ಸಂಹಾರಂ ಸ್ವಯಂ ದೇವ್ಯಾ ಶಿವಾಜ್ಞಯಾ ॥ ೭೬ ॥
ವಿಷಾದೋ ನ ಚ ಕರ್ತವ್ಯೋ ಲಿಂಗದರ್ಶನತಸ್ತ್ವಯಾ ।
ಸಿದ್ಧಾನಾಂ ಶಿವರೂಪಾಣಾಮವಜ್ಞಾ ಕಂ ನ ಬಾಧತೇ ॥ ೭೭ ॥
ಮಹಿಷತ್ವೇ ಸಮುತ್ಪನ್ನೇ ದೋಷೇಣ ಸಮುಪಸ್ಥಿತೇ ।
ಸಿದ್ಧಪ್ರಸಾದಾಲ್ಲಬ್ಧೋಽಯಂ ಶಾಪನಾಶಸ್ತ್ವಯಾಕೃತಃ ॥ ೭೮ ॥
ಸರ್ವೇ ಲೋಕಾಶ್ಚ ಸಂತ್ರಾತಾ ದುಷ್ಟೋಽಯಂ ಪರಿರಕ್ಷಿತಃ ।
ಶಾಪದೋಷಸಮುತ್ಪನ್ನೇ ಮಹಿಷತ್ವೇ ವಿಮೋಚಿತೇ ॥ ೭೯ ॥
ತ್ವಯಾ ಚ ಗಿರಿಶಪ್ರೀತ್ಯೈ ತಪಃ ಕುರ್ವಾಣಯಾದ್ರಿಜೇ ।
ದ್ರಷ್ಟವ್ಯಂ ತೈಜಸಂ ಲಿಂಗಮರುಣಾಚಲಸಂಜ್ಞಿತಂ ॥ ೮೦ ॥
ಪೂರ್ವಜನ್ಮನಿ ಭಕ್ತೋಽಯಮರುಣಾದ್ರಿಪತೇಃ ಸ್ಫುಟಂ ।
ಮಹಿಷತ್ವೇ ಮದಾಕ್ರಾಂತಃ ಪರಂ ಲಿಂಗೇನ ಸಂಗತಃ ॥ ೮೧ ॥

---

೭೬. ಆಗ ಅವರು ಸಂತುಷ್ಟರಾಗಿ ಆತನಿಗೆ ಇಚ್ಛಾರೂಪಧಾರಣಶಕ್ತಿಯನ್ನು ಕೊಟ್ಟು ಮಹಿಷರೂಪದಲ್ಲಿಯೂ ಸಹ ಶಿವಸಂಕಲ್ಪದಂತೆ ಪಾರ್ವತಿಯಿಂದಲೇ ಸಂಹಾರವಾಗುವಂತೆ ಅನುಗ್ರಹಿಸಿದರು.

೭೭. ನಿನ್ನ ಕೈಯಲ್ಲಿ ಲಿಂಗಸಂಗವಾದುದನ್ನು ಕುರಿತು ದುಃಖವನ್ನು ಮಾಡಬಾರದು. ಶಿವಸಾರೂಪ್ಯವನ್ನು ಹೊಂದಿದ ಸಿದ್ಧರ ಅವಮಾನವು ಯಾರನ್ನಾದರೂ ಬಾಧಿಸುವುದಿಲ್ಲವೆ?

೭೮. ತನ್ನ ಪಾಪದಿಂದಲೇ ಲಬ್ಧವಾದ ಮಹಿಷರೂಪವನ್ನು ಕಳೆಯುವ ಶಾಪನಾಶವು ಸಿದ್ಧಪುರುಷರ ಇಚ್ಛೆಯಂತೆ ನಿನ್ನಿಂದ ನಡೆಯಿತು.

೭೯. ಶಾಪದಿಂದ ಲಬ್ಧವಾದ ಈ ಮಹಿಷರೂಪವು ಕಳೆದುಹೋಗಲು ಸಕಲ ಲೋಕಗಳೂ ರಕ್ಷಿಸಲ್ಪಟ್ಟುವು. ಈ ರಾಕ್ಷಸನೂ ಸದ್ಗತಿಯನ್ನು ಹೊಂದಿದನು.

೮೦. ಎಲೌ ಪಾರ್ವತಿಯೆ! ಪರಮಶಿವನನ್ನು ಪ್ರೀತಿಗೊಳಿಸುವುದಕ್ಕಾಗಿ ತಪಸ್ಸನ್ನು ಮಾಡಲೆಳಸುವ ನೀನು ಅರುಣಾಚಲವೆಂಬ ಹೆಸರುಳ್ಳ ತೈಜಸಲಿಂಗವನ್ನು ಸಂದರ್ಶಿಸಬೇಕು.

೮೧. ಪೂರ್ವಜನ್ಮದಲ್ಲಿ ಇವನು ನಿಜವಾಗಿಯೂ ಅರುಣಾಚಲೇಶ್ವರನ ಭಕ್ತನಾಗಿದ್ದಿರಬೇಕು. ಆದುದರಿಂದಲೇ ಮಹಿಷರೂಪವನ್ನು ತಾಳಿ ಮದೋನ್ಮತ್ತನಾಗಿದ್ದರೂ ಕೂಡ ಈಗಲೂ ಇವನು ಲಿಂಗಧಾರಿಯಾಗಿರುವನು.

ಭಕ್ತ್ಯಾ ಲಿಂಗಧರಂ ಹಂತುಂ ಕಃ ಸಮರ್ಥೋಽತ್ರ ಜಗತ್ತ್ರಯೇ ।
ದೃಷ್ಟಾಃ ಪುರತ್ರಯೇ ಪೂರ್ವಂ ರುದ್ರೇಣಾಪೂಜಿತಾಸ್ತ್ರಯಃ ॥ ೮೨ ॥
ತ್ವತ್ಖಡ್ಗಪರಿಕೃತ್ತೇನ ಕಂಠೇನಾಸ್ಯ ವರಾನನೇ ।
ದೀಕ್ಷಾದಿರಹಿತಂ ಲಿಂಗಂ ದತ್ತಂ ಹಂತೀತಿ ಚೋದಿತಂ ॥ ೮೩ ॥
ಕೃತಂ ಹಿ ಮಹಿಷೇಣಾಪಿ ಭಕ್ತಿತೋ ಲಿಂಗಧಾರಣಂ ।
ಕದಾಚಿತ್ ಕ್ಷಪಣೋಕ್ತಾನಾಂ ವಿಭಾಷಾತ್ಕೃತ್ಯಯುಗ್ಮತಃ ॥ ೮೪ ॥
ಪೂರ್ವಜನ್ಮತಪೋಯೋಗಾತ್ಸ್ಮರಣೋ ಲಿಂಗಧಾರಣಾತ್ ।
ತ್ವತ್ಪಾದಪದ್ಮಸಂಸ್ಪರ್ಶಾದಯಂ ಮುಕ್ತೋ ನ ಸಂಶಯಃ ॥ ೮೫ ॥
ಮದುಕ್ತನಿಷ್ಕೃತೀನಾಂ ತು ಪಾತಕಾನಾಂ ಚ ನಾಶನಂ ।
ದರ್ಶನಂ ಶೈಲವರ್ಯಸ್ಯ ಪ್ರಾಯಶ್ಚಿತ್ತಂ ಪರಂ ಮತಂ ॥ ೮೬ ॥
ಸಂಸ್ಥಾಪ್ಯ ವಿವಿಧಾನ್ಶೈವಾನ್ಶಿವಸಿದ್ಧಾಂತವೇದಿನಃ ।
ಆವಾಹ್ಯ ಸರ್ವತೀರ್ಥಾನಿ ಸರ್ವದೋಷನಿವೃತ್ತಯೇ ॥ ೮೭ ॥
ಸರಃ ಕಿಮಪಿ ಸಂಪಾದ್ಯ ಸ್ನಾತ್ವಾ ತತ್ರ ವರಾನನೇ ।
ಅಘಮರ್ಷಣಸಂಯುಕ್ತಾ ಸಲಿಂಗಾ ಸ್ನಾನಮಾಚರ ॥ ೮೮ ॥

---

೮೨. ವಿಧ್ಯುಕ್ತರೀತಿಯಿಂದ ಲಿಂಗವನ್ನು ಧರಿಸಿದವನನ್ನು ಸಂಹರಿಸಲು ಮೂರು ಲೋಕಗಳಲ್ಲಿಯೂ ಯಾವನು ತಾನೆ ಸಮರ್ಥನು? ತ್ರಿಪುರಗಳಲ್ಲಿ ರಾಕ್ಷಸರು ಶಿವನಿಂದ ರಕ್ಷಿಸಲ್ಪಟ್ಟುದನ್ನು ನೋಡಿಲ್ಲವೆ?

೮೩. ಎಲೌ ಗೌರಿಯೆ! ನಿನ್ನ ಖಡ್ಗದಿಂದ ಇವನ ಶಿರಚ್ಛೇದವಾದುದರಿಂದ ದೀಕ್ಷಾದಿ ವಿಧಿಗಳಿಲ್ಲದೆ ಕೊಟ್ಟ ಲಿಂಗವು ಪ್ರತಿಗ್ರಹ ಮಾಡಿದವನನ್ನು ಕೊಲ್ಲುವುದೆಂಬುದು ಸ್ಥಿರವಾಯಿತು.

೮೪. ಮಹಿಷಾಸುರನಿಂದಲೂ ಭಕ್ತಿಯಿಂದಲೇ ಲಿಂಗವು ಧರಿಸಲ್ಪಟ್ಟಿತು. ಇವನು ಹಿಂದಿನ ಜನ್ಮದಲ್ಲಿ ಒಬ್ಬಾನೊಬ್ಬ ಬೌದ್ಧಸನ್ಯಾಸಿಯು ಕುಚೋದ್ಯವಾಗಿ ಹೇಳಿದ ಮಾತುಗಳಲ್ಲಿಯೇ ವಿಶ್ವಾಸವನ್ನು ಮಾಡಿದನು.

೮೫. ಪೂರ್ವಜನ್ಮದ ತಪಸ್ಸಿನ ಫಲರೂಪವಾಗಿ ಇವನಿಗೆ ಜನ್ಮಸ್ಮರಣೆಯುಂಟಾಯಿತು. ಶಿವಲಿಂಗವನ್ನು ಧರಿಸಿದುದರಿಂದಲೂ ನಿನ್ನ ಪಾದಪದ್ಮಗಳ ಸಂಸ್ಪರ್ಶದಿಂದಲೂ ಇವನು ಮೋಕ್ಷವನ್ನು ಪಡೆದನೆಂಬುದರಲ್ಲಿ ಸಂಶಯವಿಲ್ಲ.

೮೬. ನನ್ನಿಂದ ಹೇಳಲ್ಪಟ್ಟ ಪ್ರಾಯಶ್ಚಿತ್ತಗಳಲ್ಲಿ ಸಕಲ ಪಾಪಗಳನ್ನೂ ನಾಶಮಾಡುವಂತಹ ಅರುಣಾಚಲ ದರ್ಶನವೆಂಬುದೇ ಅನುತ್ತಮವಾದ ಪ್ರಾಯಶ್ಚಿತ್ತವು.

೮೭–೮೮. ಈ ಅರುಣಾಚಲದಲ್ಲಿ, ಶೈವಸಿದ್ಧಾಂತದಲ್ಲಿ ಪಂಡಿತರಾದವರನ್ನು ನೆಲೆಗೊಳಿಸಿ ಸರ್ವದೋಷಪರಿಹಾರಾರ್ಥವಾಗಿ ತೀರ್ಥಗಳನ್ನೆಲ್ಲ ಆವಾಹನೆಮಾಡಿ

ತ್ರಿಸಂಧ್ಯಂಚೈವ ಮಾಸಾಂತೇ ದೇವಯಾಗಮಹೋತ್ಸವೇ ॥ ೮೯ ॥
ಆರಾಧಯೋಪಚಾರೈಸ್ತ್ವಮರುಣಾದ್ರಿಮಯಂ ಶಿವಂ ॥ ೯೦ ॥
ಏವಂ ತಸ್ಯ ಮುನೇರ್ನಿಶಮ್ಯ ವಚನಂ ಶೈವಾರ್ಥಸಂಭಾವಿತಂ ।
ಪ್ರೀತಾ ದೇವನಮಸ್ಕೃತಾ ಗಿರಿಸುತಾ ದೇವೀ ಜಗದ್ರಕ್ಷಕೀ ।
ಶೈವಂ ಧಾಮಮಿಮಂ ವಿಧಾತುಮುಚಿತಂ ಶೋಣಾಚಲಸ್ಯಾಗ್ರತಃ ।
ತೀರ್ಥಾಗಾಹನಬುದ್ಧಿಮಾಶು ವಿದಧೇ ಕರ್ತುಂ ತ್ವಘಕ್ಷಾಲನಂ ॥ ೯೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಪೂರ್ವಾರ್ಧೇ "ಮಹಿಷಾಸುರವಧೋತ್ತರಂ ದೇವೀ ಪಾಣೌ ಮಹಿಷಾಸುರಶಿರಸ್ಸಂಲಗ್ನತಾ ವೃತ್ತಾಂತವರ್ಣನಂ" ನಾಮ ಏಕಾದಶೋಽಧ್ಯಾಯಃ

---

ಒಂದು ಸರೋವರವನ್ನು ನಿರ್ಮಿಸಿ ಅದರಲ್ಲಿ ನಿನ್ನ ಪಾಣಿಲಿಂಗದೊಡನೆ ಸ್ನಾನ ಮಾಡಲು ಪಾಪನಿರ್ಮುಕ್ತಳಾಗುವೆ.

೮೯–೯೦. ದೇವತೆಗಳ ಯಜ್ಞಮಹೋತ್ಸವ ಕಾಲದಲ್ಲಿ ತಿಂಗಳಕೊನೆಯಲ್ಲಿ ತ್ರಿಸಂಧ್ಯೆಗಳಲ್ಲಿ ನಾನಾವಿಧೋಪಚಾರಗಳಿಂದ ಅರುಣಾಚಲೇಶ್ವರನಾದ ಶಿವನನ್ನು ಆರಾಧಿಸು."

೯೧. ಈ ರೀತಿಯಾಗಿ ಶೈವಾಗಮಾನುಸಾರಿಗಳಾದ ಆ ಗೌತಮನ ವಾಕ್ಯಗಳನ್ನು ಕೇಳಿ ದೇವವಂದಿತೆಯೂ, ಗಿರಿರಾಜಪುತ್ರಿಯೂ, ಜಗನ್ನಾಯಕಿಯೂ ಆದ ದೇವಿಯು ಅರುಣಾಚಲದಮೇಲೆ ಶಿವಾಲಯವನ್ನು ಕಟ್ಟುವುದಕ್ಕೂ, ತನ್ನ ಪಾಪಪರಿಹಾರಕ್ಕಾಗಿ ತೀರ್ಥಸ್ನಾನ ಮಾಡುವುದಕ್ಕೂ ಮನಸ್ಸುಮಾಡಿದಳು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯೆಯ ಪೂರ್ವಾರ್ಧದಲ್ಲಿ "ಮಹಿಷಾಸುರನ ಕಂಠಲಿಂಗವು ದೇವಿಯ ಪಾಣಿಲಗ್ನವಾದ ವರ್ಣನ"ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾದಶೋಽಧ್ಯಾಯಃ

## ದೇವ್ಯಾಃ ಶಿವಸಮಾಗಮ ವರ್ಣನಂ

ಬ್ರಹ್ಮೋವಾಚ :–

ಇತಿ ಸಂಭಾಷಮಾಣೇ ತು ಮಹರ್ಷೌ ಮುನಿಸೇವಿತೇ ।
ವಿಜಹೌ ಗಿರಿಜಾ ಶಂಕಾಂ ಶಿವಭಕ್ತವಧಾಶ್ರಿತಾಂ ॥ ೧ ॥
ಅಥಾಂತರಿಕ್ಷಾದುದಭೂದ್ವಾಣೀ ಕರ್ಣಮನೋಹರಾ ।
ಮಾ ಗಮಃ ಶೈಲಕನ್ಯೇ ತ್ವಂ ಪಾಪನಿಷ್ಕೃತಿಕಾರಣಾತ್ ॥ ೨ ॥
ಗಂಗಾ ಚ ಯಮುನಾ ಸಿಂಧುರ್ಗೋದಾಪಿ ಚ ಸರಸ್ವತೀ ।
ನರ್ಮದಾ ಸಾ ಚ ಕಾವೇರೀ ಶೋಣಃ ಶೋಣನದೀ ಚ ಸಾ ॥ ೩ ॥
ಅತ್ರೈವ ನವತೀರ್ಥಾನಿ ಸಂಭವಂತು ಶಿಲಾತಲೇ ।
ತ್ವತ್ಖಡ್ಗದಾರಿತೇ ದೇವಿ ಕುರು ತತ್ರಾಘಮರ್ಷಣಂ ॥ ೪ ॥
ಅಸ್ಮಿನ್ನಾಶ್ವಯುಜೇ ಮಾಸಿ ಜ್ಯೇಷ್ಠಾನಕ್ಷತ್ರ ಆಗತೇ ।
ನಿಮಜ್ಜ್ಯ ಖಡ್ಗತೀರ್ಥೇ ತ್ವಂ ಸಲಿಂಗಾ ಮಾಸಮಾವಸ ॥ ೫ ॥

---

## ಕನ್ನಡದ ಅನುವಾದ

### ದೇವಿಯು ಪರಮೇಶ್ವರನನ್ನು ನೋಡಿದುದು

೧. ಬ್ರಹ್ಮನು ಸನಕಮಹರ್ಷಿಗೆ ಹೇಳುತ್ತಾನೆ:—ಸಕಲ ಮುನಿಗಳಿಂದೊಡಗೂಡಿದ ಗೌತಮನ ವಾಕ್ಯಗಳನ್ನು ಕೇಳಿ ದೇವಿಯು ಶಿವಭಕ್ತಸಂಹಾರದಿಂದುಂಟಾಗಿದ್ದ ಮನಸ್ಸಿನ ದುಃಖವನ್ನು ತ್ಯಜಿಸಿದಳು.

೨. ಆಗ ಒಂದು ಕಿವಿಗಿಂಪಾದ ಅಶರೀರವಾಣಿಯಾಯಿತು:—"ಎಲೌ ಪಾರ್ವತಿಯೆ! ನೀನು ಪಾಪ ಪ್ರಾಯಶ್ಚಿತ್ತವನ್ನು ಮಾಡುವ ಉದ್ದೇಶದಿಂದ ಎಲ್ಲಿಗೂ ಹೋಗಬೇಕಾದುದಿಲ್ಲವು.

೩. ಗಂಗೆ, ಯಮುನೆ, ಸಿಂಧು, ಗೋದಾವರಿ, ಸರಸ್ವತಿ, ನರ್ಮದೆ, ಶೋಣಾ, ಶೋಣನದಿ ಮತ್ತು ಕಾವೇರಿ— ಇವುಗಳೇ ಪುಣ್ಯತೀರ್ಥಗಳು.

೪. ನಿನ್ನ ಖಡ್ಗದಿಂದ ಸೀಳಲ್ಪಟ್ಟ ಈ ಶಿಲೆಯಲ್ಲಿಯೇ ಈ ಒಂಬತ್ತು ತೀರ್ಥಗಳೂ ಸನ್ನಿಹಿತವಾಗಿರುವುವು. ಇಲ್ಲಿಯೇ ನೀನು ಅಘಮರ್ಷಣ ಸ್ನಾನವನ್ನು ಮಾಡು.

೫. ಈ ಆಶ್ವಯುಜ ಮಾಸದಲ್ಲಿ ಜ್ಯೇಷ್ಠಾ ನಕ್ಷತ್ರದ ದಿನ ನೀನು ಲಿಂಗ ಸಹಿತಳಾಗಿ ಈ ಖಡ್ಗತೀರ್ಥದಲ್ಲಿ ಸ್ನಾನಮಾಡಿ ಒಂದು ತಿಂಗಳು ಇಲ್ಲಿಯೇ ವಾಸಮಾಡು.

ನಿವರ್ತ್ಯ ಸಾವನಂ ಮಾಸಮತ್ರ ದಿಕ್ಪಾಲಸಮ್ಮಿತಂ ।
ತತಃ ಪಾಣಿಸ್ಥಿತಂ ಲಿಂಗಂ ಲಬ್ಧ್ವಾ ಪಾಪವಿಶೋಧನಂ ।
ಪ್ರತಿಷ್ಠಾಪಯ ತೀರ್ಥಾಗ್ರೇ ಲೋಕಾನುಗ್ರಹಕಾರಣಾತ್ ॥ ೬ ॥
ಉತ್ತೀರ್ಯ ತೀರ್ಥವರ್ಯೇಽಸ್ಮಿನ್ಸ್ನಾತ್ವಾ ಲಿಂಗೇಽರ್ಚಿತೇ ಶಿವೇ ।
ತಾಪತ್ರಯೋಪಶಾಂತಿಶ್ಚ ತ್ರೈಲೋಕ್ಯಸ್ಯ ನ ಸಂಶಯಃ ॥ ೭ ॥
ಸರ್ವಪಾಪಹರಂ ಲಿಂಗಂ ಸ್ಥಾವರಂ ತೀರ್ಥಸನ್ನಿಧೌ ।
ಸ್ಥಾಪಯ ಸ್ಥಿರಯಾ ಭಕ್ತ್ಯಾ ಸದಾ ಲೋಕಹಿತಾಯ ಚ ॥ ೮ ॥
ನಕ್ಷತ್ರೇ ವೈಶ್ವದೈವತ್ಯೇ ದೇವಕ್ಯಾಃ ಸಂಗಮಾಚರ ।
ಮಹೋತ್ಸವಸಮಾಯುಕ್ತಂ ಯಾವದ್ದಶದಿನಾವಧಿ ॥ ೯ ॥
ಕೃತ್ವಾ ಚಾವಭೃಥಂ ಪುಣ್ಯನಕ್ಷತ್ರೇ ವಹ್ನಿದೈವತೇ ।
ಸಾಯಮಭ್ಯರ್ಚ್ಯ ವಿಧಿವಚ್ಛೋಣಾಚಲವಪುರ್ಮಮ ॥ ೧೦ ॥
ತತಸ್ತೇ ದರ್ಶಯಿಷ್ಯಾಮಿ ತೈಜಸಂ ರೂಪಮಾತ್ಮನಃ ।
ಏತತ್ಕೃತಂ ತೇ ಲೋಕಾನಾಂ ರಕ್ಷಾಯೈ ಸಂಭವಿಷ್ಯತಿ ॥ ೧೧ ॥
ಇತಿ ತದ್ವಚನಂ ಶ್ರುತ್ವಾ ಮಹರ್ಷಿವಚನಂ ಚ ಸಾ ।
ಉಭಯಂ ಕರ್ತುಮಾರೇಭೇ ತಪಸಾ ಶೈಲಕನ್ಯಕಾ ॥ ೧೨ ॥

---

೬. ಅಷ್ಟದಿಕ್ಪಾಲಕರಿಗೆ ಪ್ರೀತಿದಾಯಕವಾದ ಒಂದು ಸೌರಮಾಸವನ್ನು ಕಳೆದಮೇಲೆ ನೀನು ಪಾಪಗಳಿಂದ ಶುದ್ಧಳಾಗಿ ಬಳಿಕ ಲೋಕಾನುಗ್ರಹಾರ್ಥವಾಗಿ ಈ ಲಿಂಗವನ್ನು ತೀರ್ಥದ ಸಮೀಪದಲ್ಲಿ ಪ್ರತಿಷ್ಠೆಮಾಡುವವಳಾಗು.

೭-೮. ಲೋಕತ್ರಯಗಳಲ್ಲಿ ಯಾರಾದರೂ ಈ ಉತ್ತಮ ತೀರ್ಥದಲ್ಲಿ ಮಿಂದು ಬಂದು ಈ ಲಿಂಗವನ್ನು ಪೂಜಿಸಿದರೆ ಅವರ ತಾಪತ್ರಯಗಳು ನಿಶ್ಶೇಷವಾಗುವುದರಲ್ಲಿ ಸಂಶಯವಿಲ್ಲ. ಈ ಪಾಪನಾಶಕವಾದ ಸ್ಥಾವರಲಿಂಗವನ್ನು ಲೋಕಹಿತಕ್ಕಾಗಿ ದೃಢಭಕ್ತಿಯಿಂದ ಈ ತೀರ್ಥದ ಸಮೀಪದಲ್ಲಿಯೇ ಸ್ಥಾಪಿಸು.

೯. ವಿಶ್ವದೇವತಾಕವಾದ ನಕ್ಷತ್ರದಲ್ಲಿ ದೇವತೆಗಳ ಸಮೂಹಗಳಿಂದೊಡಗೂಡಿ ಹತ್ತುದಿನಗಳವರೆವಿಗೂ ಮಹೋತ್ಸವವನ್ನು ನಡೆಸುವವಳಾಗು.

೧೦-೧೨. ಅಗ್ನಿದೇವತಾಕವಾದ ಕೃತ್ತಿಕಾ ನಕ್ಷತ್ರದ ದಿನದಲ್ಲಿ ಅವಭೃಥಸ್ನಾನವನ್ನು ಮಾಡಿ, ನನ್ನ ಅರುಣಾಚಲ ರೂಪವನ್ನು ಸಾಯಂಕಾಲದಲ್ಲಿ ವಿಧ್ಯುಕ್ತರೀತಿಯಲ್ಲಿ ಪೂಜಿಸಲು ನಾನು ನನ್ನ ತೈಜಸರೂಪವನ್ನು ನಿನಗೆ ತೋರಿಸುವೆನು. ನೀನು ಮಾಡುವ ಈ ಕಾರ್ಯದಿಂದ ಲೋಕಗಳ ಸಂರಕ್ಷಣೆಯು ನಡೆಯುತ್ತದೆ.'' ಹೀಗೆಂದ ಆಕಾಶವಾಣಿಯನ್ನೂ, ಗೌತಮರ ವಚನಗಳನ್ನೂ ಕೇಳಿ ಗೌರಿಯು ತಪಸ್ಸಿನಿಂದ ಎರಡನ್ನೂ ಅನುಷ್ಠಾನಮಾಡಲೆಳಸಿದಳು.

ಖಡ್ಗೇನ ದಾರಯಾಮಾಸ ಶಿಲಾತಲಮನಾಕುಲಾ ।
ಉದಜೃಂಭತ ತೀರ್ಥಾನಾಂ ನವಕಂ ತತ್ರ ತಕ್ಷಣಾತ್ ॥ ೧೩ ॥
ತಸ್ಯ ಕಂಠಸ್ಥಿತಂ ಲಿಂಗಂ ಧ್ಯಾಯಂತೀ ಪರ್ವತಾತ್ಮಜಾ ।
ತೀರ್ಥೇ ಮಮಜ್ಜ ತಸ್ಮಿನ್ನಾ ಮುನೀನಾಮಭ್ಯನುಜ್ಞಯಾ ॥ ೧೪ ॥
ತೀರ್ಥಾನಾಂ ನವಕಂ ತತ್ರ ಸಂಜಾತಂ ಸ್ಫಾಟಿಕಪ್ರಭಂ ।
ಅಂತರ್ವಸತಿತಃ ಕಾಂತ್ಯಾ ಮೇಚಕೀಕೃತಮಂಜಸಾ ॥ ೧೫ ॥
ವಸಂತ್ಯಾಂ ಶೈಲಕನ್ಯಾಯಾಂ ತೀರ್ಥೇ ತ್ರಿಂಶದ್ದಿನಂ ತ್ವಥ ।
ಶಂಭೋರ್ವಿರಹಸಂತಪ್ತಂ ಮನಶ್ಚಂಚಲತಾಂ ಯಯೌ ॥ ೧೬ ॥
ತತ್ರ ಶ್ರಿಯಾ ಸರೋಜಾನಿ ಚಕ್ಷುಷೋತ್ಪಲಕಾನನಂ ।
ಮಂದಸ್ಮಿತೇನ ಕುಮುದಂ ಸಸರ್ಜ ಸಲಿಲಸ್ಯ ಸಾ ॥ ೧೭ ॥
ದೇವ್ಯಾಸ್ತೇನೋದವಾಸೇನ ಲೋಕಾಸ್ತು ನಿರುಪದ್ರವಾಃ ।
ಕೃತಾರ್ಥಾಸ್ಸಹಸಾ ಜಾತಾಸ್ತತ್ತತ್ಕಾಲಫಲಾನ್ವಿತಾಃ ॥ ೧೮ ॥
ಮಾಸಾಂತೇ ಸಾ ಸಮುತ್ತೀರ್ಯ ಕೃತ್ವಾ ದೇವ್ಯುತ್ಸವಂ ತಥಾ ।
ಕಾರ್ತಿಕೇ ಮಾಸಿ ನಕ್ಷತ್ರೇ ಕೃತ್ತಿಕಾಖ್ಯೇ ನಿಶೋದಯೇ ॥ ೧೯ ॥

---

೧೩. ಅಲ್ಲಿದ್ದ ಬಂಡೆಯನ್ನು ಖಡ್ಗದಿಂದ ನಿರ್ಭೀತಳಾಗಿ ಸೀಳಲು ತಕ್ಷಣದಲ್ಲಿಯೇ ಅದರೊಳಗಿನಿಂದ ಒಂಬತ್ತು ತೀರ್ಥಗಳು ಉತ್ಪನ್ನವಾದುವು.

೧೪. ಬಳಿಕ ಮಹರ್ಷಿಗಳ ಆಜ್ಞಾನುಸಾರವಾಗಿ ಪಾರ್ವತಿಯು ಆ ರಾಕ್ಷಸನ ಕಂಠದಲ್ಲಿದ್ದ ಲಿಂಗವನ್ನೇ ಧ್ಯಾನಮಾಡುತ್ತ ಆ ಖಡ್ಗತೀರ್ಥದಲ್ಲಿ ಸ್ನಾನ ಮಾಡಿದಳು.

೧೫. ಸ್ಫಟಿಕದಂತೆ ಶುಭ್ರವಾಗಿ ಉದ್ಭವಿಸಿದ ಆ ತೀರ್ಥಗಳು ದೇವಿಯ ಜಲವಾಸದಿಂದಲೂ, ಕಾಂತಿಯಿಂದಲೂ ಮೇಘವರ್ಣಗಳಾದುವು.

೧೬–೧೭. ಈ ಮೇರೆಗೆ ತೀರ್ಥದಲ್ಲಿ ಆ ಗಿರಿಜೆಯು ಮೂವತ್ತು ದಿನಗಳು ವಾಸಮಾಡಲು ದೇವದೇವನ ವಿರಹದಿಂದ ತಪಿಸುತ್ತಿರುವ ಆಕೆಯ ಮನಸ್ಸು ಚಂಚಲವಾಯಿತು. ಆ ಸರೋವರದಲ್ಲಿಯೇ ತನ್ನ ತನುಸೌಂದರ್ಯದಿಂದ ಕಮಲಗಳನ್ನೂ ಕಣ್ಣುಗಳಿಂದ ನೀಲೋತ್ಪಲಗಳನ್ನೂ ಮುಗುಳ್ನಗೆಯಿಂದ ಕುಮುದಗಳನ್ನೂ ಸೃಜಿಸಿದಳು.

೧೮. ಈ ಪ್ರಕಾರವಾಗಿ ದೇವಿಯು ಮಾಡಿದ ಆ ಜಲಸಂವಾಸದಿಂದ ಸಕಲ ಲೋಕಗಳೂ ಉಪದ್ರವರಹಿತಗಳಾದುವಲ್ಲದೆ ಸದ್ಯದಲ್ಲಿಯೇ ಕೃತಾರ್ಥಗಳಾಗಿ ಕಾಲಾನುಸಾರವಾದ ಫಲಗಳನ್ನೂ ಕೊಟ್ಟುವು.

೧೯. ಒಂದು ತಿಂಗಳಾದಮೇಲೆ ಆಕೆಯು ಮೇಲಕ್ಕೆ ಬಂದು ಕಾರ್ತಿಕ ಮಾಸದ ಕೃತ್ತಿಕಾ ನಕ್ಷತ್ರದ ದಿನದಲ್ಲಿ ವೈಭವದಿಂದ ಉತ್ಸವವನ್ನು ನಡೆಸಿದಳು.

ಪೂಜಯಿತ್ವಾ ತಪಸ್ಸಿದ್ಧೈರುಪಚಾರೈರ್ಬಹೂದಯೈಃ ।
ಅರುಣಾದ್ರಿಮಯಂ ಲಿಂಗಂ ತುಷ್ಟಾವ ಜಗದಂಬಿಕಾ ॥ ೨೦ ॥
ನಮಸ್ತೇ ವಿಶ್ವರೂಪಾಯ ಶೋಣಾಚಲವಪುರ್ಭೃತೇ ।
ತೇಜೋಮಯಾದ್ರಿಲಿಂಗಾಯ ಸರ್ವಪಾತಕನಾಶಿನೇ ॥ ೨೧ ॥
ಬ್ರಹ್ಮಣಾ ವಿಷ್ಣುನಾ ಚ ತ್ವಂ ದುಷ್ಪರಿಚ್ಛೇದ್ಯವೈಭವಃ ।
ಅಗ್ನಿರೂಪೋಽಪಿ ಸನ್ಶಾಂತೋ ಲೋಕಾನುಗ್ರಹತೃಪ್ತಯೇ ॥ ೨೨ ॥
ಶಕ್ತ್ಯಾಚ ತತ್ವಸಂಘಾತಕರಃ ಕಾಲಾನಲಾಕೃತಿಃ ।
ಅದ್ರಿಶ್ರೇಷ್ಠಾರುಣಾದ್ರೀಶ ರೂಪಲಾವಣ್ಯವಾರಿಧೇ ॥ ೨೩ ॥
ವಿಚಿತ್ರರೂಪಮೇತತ್ತೇ ವೇದವೇದ್ಯಂ ಸುರಾರ್ಚಿತಂ ।
ತೇಜಸಾಂ ದೇವ ಸರ್ವೇಷಾಂ ಬೀಜಭೂತಂ ನಿಗದ್ಯಸೇ ॥ ೨೪ ॥
ದಿವ್ಯಂ ಹಿ ಪರಮಂ ತೇಜಸ್ತವ ದೇವ ಮಹೇಶ್ವರ ।
ಯತ್ಪುರಾ ಬ್ರಹ್ಮಣಾ ದೃಷ್ಟಂ ವಿಷ್ಣುನಾ ಚ ವಿಚಿನ್ವತಾ ॥ ೨೫ ॥
ಅದ್ಯ ಪೂತಾಸ್ಮಿ ದೇವೇಶ ತವ ಸಂದರ್ಶನಾದಹಂ ।
ತೇಜೋ ದರ್ಶಯ ಮೇ ದಿವ್ಯಂ ಸರ್ವದೋಷಹರಂ ಪರಂ ॥ ೨೬ ॥

---

೨೦. ತನ್ನ ತಪಸ್ಸಿನಿಂದ ಅನೇಕ ವಿಧಗಳಾದ ಪರಿಕರಗಳನ್ನು ಪಡೆದು ಅರುಣಾಚಲೇಶ್ವರ ಲಿಂಗವನ್ನು ಪೂಜಿಸಿ ಆ ಬಳಿಕ ಈ ರೀತಿ ಸ್ತೋತ್ರಮಾಡಿದಳು.

೨೧. "ಶೋಣಾಚಲದ ರೂಪವನ್ನು ಧರಿಸಿದ ವಿಶ್ವರೂಪನಾದ ನಿನಗೆ ನಮಸ್ಕಾರವು. ನೀನು ಸಕಲ ಪಾಪಗಳನ್ನೂ ನಾಶಮಾಡುವ ತೇಜೋಮಯ ಲಿಂಗವಾಗಿರುವೆ.

೨೨–೨೩. ಬ್ರಹ್ಮ ವಿಷ್ಣುಗಳಿಂದಲೂ ನಿನ್ನ ರೂಪದ ತುದಿಮೊದಲನ್ನು ತಿಳಿಯಲು ಸಾಧ್ಯವಾಗಲಿಲ್ಲ. ನೀನು ತೇಜೋಯುಕ್ತನಾದರೂ ವಿಶ್ವರಕ್ಷಣ ದಾಕ್ಷಿಣ್ಯದಿಂದ ಶಾಂತನಾಗಿರುವೆ. ಶಕ್ತಿಯಿಂದ ತತ್ತ್ವಸಮೂಹವನ್ನು ಕೈಗಳಲ್ಲಿ ಧರಿಸಿ ಪ್ರಳಯಾಗ್ನಿಯಂತೆ ಜ್ವಲಿಸುತ್ತ ನೀನು ರೂಪಲಾವಣ್ಯವಿಶಿಷ್ಟನಾಗಿ ಪರ್ವತಶ್ರೇಷ್ಠವಾದ ಈ ಅರುಣಾಚಲದ ರೂಪನಾಗಿರುವೆ.

೨೪. ಈ ನಿನ್ನ ಅದ್ಭುತರೂಪವು ವೇದೈಕವೇದ್ಯವೂ ದೇವತಾವಂದ್ಯವೂ ಆಗಿರುವುದು. ದೇವಾ! ನೀನು ಸಕಲ ತೇಜಸ್ಸುಗಳಿಗೂ ಬೀಜಭೂತನಾಗಿರುವೆ ಯೆಂದು ಹೇಳಲ್ಪಡುವೆ.

೨೫. ಪೂರ್ವದಲ್ಲಿ ಬ್ರಹ್ಮವಿಷ್ಣುಗಳಿಂದ ಕಾಣಲ್ಪಟ್ಟ ರೂಪವು ದಿವ್ಯವೂ, ಅತ್ಯುತ್ತಮವೂ, ಐಶ್ವರ್ಯಸಮನ್ವಿತವೂ ಆಗಿ ತೇಜೋಮಯವಾಗಿರುವುದು.

೨೬. ಇಂದು ನಿನ್ನ ಸಂದರ್ಶನದಿಂದ ನಾನು ಪುನೀತಳಾದೆನು. ಸರ್ವ ದೋಷನಿವಾರಕವಾದ ನಿನ್ನ ಪರಾತ್ಪರವಾದ ತೇಜಸ್ಸನ್ನು ನನಗೆ ತೋರು."

ಪ್ರಾರ್ಥಯಂತ್ಯಾಂ ತದಾ ದೇವ್ಯಾಮರುಣಾದ್ರಿಮಯಃ ಶಿವಃ ।
ಆವಿರ್ಬಭೂವ ತೇಜೋಭಿರಾಪೂರ್ಯ ಭುವನಾಂತರಂ ॥ ೨೭ ॥
ಕೋಟಿಸೂರ್ಯೋದಯಪ್ರಖ್ಯಂ ತುಲ್ಯಂ ಪೂರ್ಣೇಂದುಕೋಟಿಭಿಃ ।
ಕಾಲಾಗ್ನಿಕೋಟಿಸಂಕಾಶಂ ತೇಜಃ ಪರಮದೃಶ್ಯತ ॥ ೨೮ ॥
ಪ್ರಣಮ್ಯ ಪರಯಾ ಭಕ್ತ್ಯಾ ಮುನಿಭಿಃ ಸಾರ್ಧಮಂಬಿಕಾ ।
ವಿಸ್ಮಯಾಕ್ರಾಂತಹೃದಯಾ ನನಂದ ನಳಿನೇಕ್ಷಣಾ ॥ ೨೯ ॥
ಅಥ ತೇಜೋನಿಧೇಸ್ತಸ್ಮಾದರುಣಾದ್ರಿಃ ಸಮುತ್ಥಿತಃ ।
ಹಿರಣ್ಮಯೋಽಬ್ರವೀದ್ವಾಚಂ ಪುರುಷಃ ಕಾಲಕಂಧರಃ ॥ ೩೦ ॥
ಪ್ರಸನ್ನೋಽಸ್ಮಿ ತಪೋಭಿಸ್ತೇ ಸ್ಥಾನೇಷು ಮಮ ಕಲ್ಪಿತೈಃ ।
ತೇಜೋಮಯಮಿದಂ ರೂಪಮೀಕ್ಷಿತಂ ಚ ತ್ವಯಾಧುನಾ ॥ ೩೧ ॥
ಕಾರಣೈರ್ಬಹುಭಿರ್ಲೋಕಾನ್ರಕ್ಷೇಥಾಸ್ತ್ವಂ ಜಗನ್ಮಯಿ ।
ತಪಾಂಸಿ ಕುರುಷೇ ಭೂಮೌ ಕಿಮನ್ಯತ್ಪ್ರಾರ್ಥಿತಂ ತವ ॥ ೩೨ ॥

---

೨೭. ಗಿರಿಜೆಯು ಈ ರೀತಿಯಾಗಿ ಪ್ರಾರ್ಥಿಸುತ್ತಿರಲು ಶಿವನು ಅರುಣಾಚಲೇಶ್ವರನಾಗಿ ತನ್ನ ತೇಜಸ್ಸಿನಿಂದ ದಿಕ್ಕುಗಳೆಲ್ಲವನ್ನೂ ಬೆಳಗುತ್ತ ಪ್ರತ್ಯಕ್ಷನಾದನು.

೨೮. ಆತನ ತೇಜಸ್ಸು ಕೋಟಿಸೂರ್ಯರು ಏಕಕಾಲದಲ್ಲಿ ಉದಿಸಿದಂತೆಯೂ, ಕೋಟಿ ಪೂರ್ಣಚಂದ್ರರು ಏಕಕಾಲದಲ್ಲಿಯೆ ಮೂಡಿದಂತೆಯೂ, ಕೋಟಿ ಪ್ರಳಯಾಗ್ನಿಗಳು ಒಮ್ಮೆಯೇ ಉದ್ಭವಿಸಿದಂತೆಯೂ ನೋಡುವವರಿಗೆ ಭ್ರಾಂತಿಯನ್ನುಂಟುಮಾಡುತ್ತಿದ್ದಿತು.

೨೯. ಆಗ ಕಮಲನೇತ್ರೆಯಾದ ಗೌರಿಯು ಆ ತೇಜಸ್ಸಿಗೆ ಮುನಿಗಳೊಡನೆ ಪರಮ ಭಕ್ತಿಯಿಂದ ನಮಸ್ಕರಿಸಿ ವಿಸ್ಮಯಗೊಂಡ ಹೃದಯವುಳ್ಳವಳಾಗಿ ಹರ್ಷವಾಂತಳು.

೩೦. ಆ ತೇಜೋರಾಶಿಯಿಂದ ಹಿರಣ್ಮಯನೂ, ನೀಲಕಂಠನೂ ಆದ ಅರುಣಾಚಲೇಶ್ವರನು ಆವಿರ್ಭವಿಸಿ ಬಂದು ಪಾರ್ವತಿಗೆ ಹೇಳತೊಡಗಿದನು :—

೩೧. "ಎಲೌ ಪಾರ್ವತಿಯೆ! ನನ್ನ ನೆಲೆವನೆಗಳಲ್ಲಿ ನೀನೆಸಗಿದ ಅನೇಕ ತಪಸ್ಸುಗಳಿಂದ ಸಂತೋಷಗೊಂಡಿರುವೆನು. ಈಗ ನನ್ನ ತೇಜೋಮಯವಾದ ರೂಪವೂ ಸಹ ನಿನ್ನಿಂದ ನೋಡಲ್ಪಟ್ಟಿತು.

೩೨. ಓ ಜಗದ್ರೂಪಿಣಿ! ಅನೇಕ ಕಾರಣಗಳಿಂದ ನೀನು ಲೋಕಗಳನ್ನು ರಕ್ಷಿಸುತ್ತಲೇ ಇರುವೆ. ಭೂಲೋಕದಲ್ಲಿ ಈ ವಿಧವಾದ ತಪಸ್ಸುಗಳನ್ನೂ ಮಾಡುವೆ. ಇಂತಿರುವ ನಿನಗೆ ಪ್ರಾರ್ಥನೆಯು ಬೇರೆ ಯಾವುದಿರುವುದು?

ಮಲ್ಲೋಚನತ್ವಿಷಾ ತೇಽದ್ಯ ತಮೋರಾಶಿಃ ಸಮುತ್ಥಿತಃ ।
ಅಶೇಷೋ ಹಿ ಪ್ರಶಾಂತೋಽಭೂತ್ತೇಜಸೋಽಸ್ಯ ನಿರೀಕ್ಷಣಾತ್ ॥ ೩೩ ॥
ಅಯಂ ತು ಮಹಿಷೋ ದುಷ್ಟೋ ಮದ್ಭಕ್ತಂ ಲಿಂಗಪೂಜಕಂ ।
ಜಗ್ರಾಹ ಸಹಸಾಹ್ಯೇತತ್ತಸ್ಯ ಲಿಂಗಂ ಗಳೇಸ್ಥಿತಂ ॥ ೩೪ ॥
ಅನೇನ ಭಕ್ಷಿತಂ ತಚ್ಚ ನಾಸ್ತಿಕಸ್ಯೋಪದೇಶತಃ ।
ಅಕರೋನ್ಮಯ್ಯವಿಶ್ವಾಸಂ ಲಿಂಗರೂಪೇ ಗಳೇ ಸ್ಥಿತೇ ॥ ೩೫ ॥
ಕ್ರಮೇಣ ಸೋಽಪಿ ಸಂಪ್ರಾಪ್ತೋ ಮುನಿಜನ್ಮ ಮನೋಹರಂ ।
ಮಾಮೇವಾಭ್ಯರ್ಚಯನ್ಧ್ಯಾಯನ್ಗಣನಾಥತ್ವಮಾವಸನ್ ॥ ೩೬ ॥
ಪೂರ್ವ ಜನ್ಮನಿ ಭಕ್ತೋಽಯಂ ಮಹಿಷೋಽಪಿ ತ್ವಯಾ ಹತಃ ।
ಚಿರಂ ಮಲ್ಲಿಂಗಧೃಗ್ಯಸ್ಮಾತ್ಸಿದ್ಧಿರಸ್ಯಾಪಿ ದೇವ್ಯತಃ ॥ ೩೭ ॥
ಶಿವಲಿಂಗೇಷ್ವವಿಶ್ವಾಸಃ ಶಿವಭಕ್ತಾವಮಾನನಂ ।
ನ ಕರ್ತವ್ಯಂ ಸದಾ ಭಕ್ತೈಸ್ತಸ್ಮಾದ್ದೇವ್ಯೈ ಮುಕ್ತಿಕಾಂಕ್ಷಿಭಿಃ ॥ ೩೮ ॥
ದೀಕ್ಷಯಾ ರಹಿತಂ ಲಿಂಗಂ ಯೇನ ಸಂಧಾರ್ಯತೇ ಬಲಾತ್ ।
ನ ತಾದೃಶಂ ಫಲಂ ಧತ್ತೇ ವಜ್ರವತ್ತಂ ನಿಹಂತಿ ಚ ॥ ೩೯ ॥

---

೩೩. ನನ್ನ ಲೋಚನಗಳಿಂದುಂಟಾದ ನಿನ್ನ ತಮಸ್ಸಿನ ರಾಶಿಯು ನನ್ನ ಈ ತೇಜಸ್ಸಿನ ಅವಲೋಕನದಿಂದ ಸಂಪೂರ್ಣವಾಗಿ ನಾಶವನ್ನು ಹೊಂದಿತು.

೩೪. ದುಷ್ಟನಾದ ಈ ಮಹಿಷಾಸುರನು ಲಿಂಗಪೂಜಕನಾದ ಭಕ್ತನನ್ನು ಅಕಸ್ಮಾತ್ತಾಗಿ ನಿಗ್ರಹಿಸಿದನು. ಈ ಲಿಂಗವು ಆತನ ಕಂಠದಲ್ಲಿದ್ದಿತು.

೩೫. ನಾಸ್ತಿಕನಾದವನೊಬ್ಬನ ಉಪದೇಶಾನುಸಾರವಾಗಿ ಅವನ ಆ ಲಿಂಗವನ್ನು ಇವನು ಭಕ್ಷಿಸಿದನು. ಅಲ್ಲದೆ ಇವನು ಕಂಠಸ್ಥವಾದ ನನ್ನ ಲಿಂಗರೂಪದಲ್ಲಿಯೂ ಅವಿಶ್ವಾಸವನ್ನೂ ಮಾಡಿದನು.

೩೬–೩೭. ಕಾಲಕ್ರಮದಲ್ಲಿ ಆ ಶಿವಭಕ್ತನಾದರೋ ಮನೋಹರವಾದ ಮುನಿಜನ್ಮವನ್ನು ಪಡೆದನು; ನನ್ನನ್ನೇ ಪೂಜಿಸಿ, ಧ್ಯಾನಿಸಿ ಗಣೇಶ್ವರನ ಪದವಿಯನ್ನು ಹೊಂದಿದನು. ಈ ಮಹಿಷಾಸುರನು ಪೂರ್ವಜನ್ಮದಲ್ಲಿ ನನ್ನ ಭಕ್ತನಾಗಿದ್ದರೂ ನಿನ್ನಿಂದ ಸಂಹರಿಸಲ್ಪಟ್ಟನು. ಆದರೂ ಬಹಳಕಾಲ ನನ್ನ ಚಿಹ್ನವಾದ ಲಿಂಗವನ್ನು ಧರಿಸಿದ್ದರಿಂದ ಇವನಿಗೂ ಸಿದ್ಧಿಯು ಲಭಿಸಿತು.

೩೮. ಆದುದರಿಂದ ಮೋಕ್ಷಾಭಿಲಾಷಿಗಳು ಎಂದೆಂದಿಗೂ ಶಿವಲಿಂಗಗಳಲ್ಲಿ ಅವಿಶ್ವಾಸವನ್ನೂ, ಶಿವಭಕ್ತರ ಅವಮಾನವನ್ನೂ ಮಾಡಬಾರದು.

೩೯. ದೀಕ್ಷಾರಹಿತವಾಗಿ ಬಲಾತ್ಕಾರದಿಂದ ಲಿಂಗವು ಯಾರಿಂದ ಧರಿಸಲ್ಪಡುತ್ತದೆಯೊ ಅದರಿಂದ ಉತ್ತಮ ಫಲವಾಗುವುದಿಲ್ಲ. ಅದು ವಜ್ರಾಯುಧದಂತೆ ಧರಿಸಿದವನನ್ನೇ ಸಂಹರಿಸುವುದು.

ನ ದೋಷಸ್ತತ್ರ ಕಿಂಚಿತ್ತೇ ಶೋಣಾಚಲನಿರೀಕ್ಷಣಾತ್ ।
ಸಫಲಾ ನಯನಾವಾಪ್ತಿಃ ಸರ್ವದೋಷವಿನಾಶನಾತ್ ॥ ೪೦ ॥
ತ್ವತ್ಪುತ್ರಸ್ತನ್ಯದಾನೇನ ಧಾತ್ರ್ಯೋಪಕೃತಮಾತ್ಮಜೇ ।
ತ್ವಾಮಪೀತಕುಚಾಂ ಚಕ್ರೇ ವತ್ಸಲಾಂ ಭಕ್ತರಕ್ಷಿಣೀಂ ॥ ೪೧ ॥
ನಕ್ಷತ್ರೇ ಕೃತ್ತಿಕಾಖ್ಯೇಽತ್ರ ತವ ಸನ್ನಿಧಿಲೋಭತಃ ।
ಪ್ರಾಯಶ್ಚಿತ್ತಾಭಿಧಾನೇನ ಭವಾಪೀತಕುಚಾಭಿಧಾ ॥ ೪೨ ॥
ಪೂಜಾಶೇಷಂ ಸಮಾಧಾಯ ಭಕ್ತಾನುಗ್ರಹಹೇತವೇ ।
ಭಜ ಮಾಂ ಕರುಣಾಮೂರ್ತಿರಪೀತಕುಚನಾಯಿಕಾ ॥ ೪೩ ॥
ಇತಿ ದೇವಸ್ಯ ವಚನಮಾಕರ್ಣ್ಯಾತ್ಯಂತ ಶೀತಲಂ ।
ಪ್ರಣಮ್ಯ ಪ್ರಾರ್ಥಿತವತೀ ಪ್ರೋವಾಚ ಚ ತಮಂಬಿಕಾ ॥ ೪೪ ॥
ದೇವದೇವ ಪ್ರಸಾದೇನ ತ್ವಯಾನುಗ್ರಹಶಾಲಿನಾ ।
ಏತತ್ತೇ ದರ್ಶಿತಂ ತೇಜೋಽದೃಷ್ಟಂ ದೇವೈಶ್ಚ ಮಾನವೈಃ ॥ ೪೫ ॥

---

೪೦. ಅರುಣಾಚಲನಾದ ನನ್ನ ದರ್ಶನದಿಂದ ನಿನ್ನಲ್ಲಿ ದೋಷವು ಕಿಂಚಿತ್ತಾದರೂ ಉಳಿಯಲಿಲ್ಲವು. ಸಕಲ ದೋಷಗಳ ನಿವಾರಣೆಯಾಗಿ ನಿನ್ನ ಲೋಚನಗಳೂ ಸಫಲಗಳಾದುವು.

೪೧. ನಿನ್ನ ಮಗನಾದ ಕಾರ್ತಿಕೇಯನಿಗೆ ಸ್ತನ್ಯಪಾನ ಮಾಡಿಸಿದುದರಿಂದ ಅವನಲ್ಲಿ ದಾದಿಯೊಬ್ಬಳ ಉಪಕಾರವು ಹೆಚ್ಚಿನದಾಯಿತು. ಅದರಿಂದಲೇ ಆಕೆಯು ಪುತ್ರವತ್ಸಲೆಯೂ ಭಕ್ತರಕ್ಷಕಳೂ ಆದ ನಿನ್ನನ್ನು ಅಪೀತಕುಚೆಯನ್ನಾಗಿ ಮಾಡಿದಳು.

೪೨. ಆದುದರಿಂದ ಈ ಪರ್ವತದಲ್ಲಿ ಕೃತ್ತಿಕಾ ನಕ್ಷತ್ರದ ದಿನದಲ್ಲಿ ನಿನ್ನ ವಿಶೇಷ ಸಾನ್ನಿಧ್ಯವಿರುವುದರಿಂದ ಪ್ರಾಯಶ್ಚಿತ್ತರೂಪವಾಗಿ ನಿನಗೆ ಅಪೀತಕುಚೆಯೆಂಬ ನಾಮವಿರುವುದು.

೪೩. ಭಕ್ತರ ಅನುಗ್ರಹಾರ್ಥವಾಗಿ ನೀನು ಪೂಜೆಯನ್ನು ಸಾಂಗವಾಗಿ ನಡೆಸಿ ಕರುಣಾಮೂರ್ತಿಯಾಗಿ ಅಪೀತಕುಚೆಯೆಂಬ ನಾಮದಿಂದ ನನ್ನನ್ನು ಭಜಿಸುತ್ತಿರು.''

೪೪. ಅತ್ಯಂತ ಮಧುರವಾದ ಮಹೇಶ್ವರನ ಈ ಮಾತುಗಳನ್ನು ಕೇಳಿ ಗಿರಿಜೆಯು ಅವನನ್ನು ನಮಸ್ಕರಿಸಿ ತನ್ನ ಪ್ರಾರ್ಥನೆಯನ್ನು ಈ ರೀತಿಯಾಗಿ ಕೇಳಿಕೊಂಡಳು :—

೪೫. "ಎಲೈ ಮಹಾದೇವನೆ! ಅನುಗ್ರಹೋನ್ಮುಖನಾದ ನಿನ್ನ ಪ್ರಸಾದದಿಂದ ದೇವತೆಗಳಿಂದಲೂ, ಮನುಷ್ಯರಿಂದಲೂ ನೋಡಲ್ಪಡದಿರುವ ನಿನ್ನ ಈ ತೇಜೋರೂಪವನ್ನು ನಾನು ಕಂಡುದಾಯಿತು.

ಪ್ರತ್ಯಕ್ಷಂ ಕೃತ್ತಿಕಾಮಾಸಿ ಮದ್ವ್ರತಾಂತಮಹೋತ್ಸವೇ ।
ನಕ್ಷತ್ರೇ ಕೃತ್ತಿಕಾಖ್ಯೇಽಸ್ಮಿನ್ಸ್ತೇಜಸ್ತೇ ದೃಶ್ಯತಾಂ ಪರಂ ॥ ೪೬ ॥
ತದ್ವೀಕ್ಷಿತಮಿದಂ ತೇಜಃ ಪರಮಂ ಪ್ರತಿವತ್ಸರಂ ।
ದೃಷ್ಟ್ವಾ ಸಮಸ್ತೈರ್ದುರಿತೈರ್ಮುಚ್ಯಂತಾಂ ಸರ್ವಜಂತವಃ ॥ ೪೭ ॥
ತಥೇತಿ ದೇವದೇವೇನ ಪ್ರೋಚೇಽಥಾಂತರ್ದಧೇ ಗಿರಾ ।
ಪ್ರದಕ್ಷಿಣಂ ಚಕಾರೈನಂ ಸಖೀಭಿಃ ಸಾ ತತೋಽಂಬಿಕಾ ॥ ೪೮ ॥
ಘನಶ್ಯಾಮಲಯಾ ಕಾಂತ್ಯಾ ಪರಿತೋ ಜೃಂಭಮಾಣಯಾ ।
ಅರುಣಾದ್ರಿಮಯಂ ಲಿಂಗಂ ಚಕ್ರೇ ಮರಕತಪ್ರಭಂ ॥ ೪೯ ॥
ಮಂದಂ ಚರಂತೀ ಜಾತಾಭಿಃ ಪ್ರಭಾಭಿಃ ಪಾದಪದ್ಮಯೋಃ ।
ತಸ್ತಾರ ಪರಿತೋ ಭೂಮಿಂ ಪದ್ಮಪತ್ರೈಃ ಸಪಲ್ಲವೈಃ ॥ ೫೦ ॥
ಪ್ರಫುಲ್ಲಕನಕಾಂಭೋಜನೀಲೋತ್ಪಲದಲೋತ್ಕರೈಃ ।
ಅರ್ಚಯಂತೀವ ಶೋಣಾದ್ರಿಮಭಿತೋ ದೃಷ್ಟಿಕಾಂತಿಭಿಃ ॥ ೫೧ ॥
ಇಂದ್ರಾದಿಲೋಕಪಾಲಾನಾಮಂಗನಾಭಿರ್ನಿಷೇವಿತಾ ।
ಪ್ರಸಾದಿತಾ ಮಾತೃಗಣೈಃ ಗಂಧದಾನವಿಭೂಷಣೈಃ ॥ ೫೨ ॥

---

೪೬. ಕಾರ್ತಿಕಮಾಸದ ನನ್ನ ವ್ರತದ ಅಂತ್ಯಮಹೋತ್ಸವದಲ್ಲಿ ಕೃತ್ತಿಕಾ ನಕ್ಷತ್ರದ ದಿವಸ ನಿನ್ನ ಈ ತೇಜಸ್ಸು ಎಲ್ಲರಿಗೂ ಪ್ರತ್ಯಕ್ಷವಾಗಿ ಕಾಣಲಿ.

೪೭. ಈ ಪರಮ ತೇಜಸ್ಸನ್ನು ಯಾರು ಪ್ರತಿ ಸಂವತ್ಸರವೂ ನೋಡುವರೊ ಅವರ ಸಮಸ್ತ ಪಾಪಗಳೂ ಬಿಡುಗಡೆಯಾಗುವಂತೆ ಅನುಗ್ರಹಿಸು.''

೪೮. ಬಳಿಕ ಪರಮೇಶ್ವರನು ಹಾಗೆಯೇ ಆಗಲೆಂದು ಅನುಗ್ರಹಿಸಿ ಆ ಪರ್ವತದಲ್ಲಿಯೇ ಅಂತರ್ಹಿತನಾದನು. ಆಗ ಗಿರಿಜೆಯು ತನ್ನ ಸಖಿಯ ರೊಡಗೂಡಿ ಆ ಪರ್ವತಕ್ಕೆ ಪ್ರದಕ್ಷಿಣೆಯನ್ನು ಮಾಡಿದಳು.

೪೯. ಸುತ್ತಲೂ ಪ್ರಸರಿಸುತ್ತಿರುವ ತನ್ನ ಮೇಘಶ್ಯಾಮಲ ಕಾಂತಿಯಿಂದ ಆ ಅರುಣಾಚಲವನ್ನು ಮರಕತಲಿಂಗಮಯವಾಗಿ ಕಾಣುವಂತೆ ಮಾಡುತ್ತಿದ್ದಳು.

೫೦. ಪಾದಕಮಲಗಳ ಕಾಂತಿಗಳಿಂದ ಬೆಳಗುತ್ತ ಮೆಲ್ಲ ಮೆಲ್ಲಗೆ ನಡೆದು ಕೊಂಡು ಪರ್ವತದ ಸುತ್ತುಮುತ್ತಣ ಪ್ರದೇಶವನ್ನು ಪಲ್ಲವಸಹಿತಗಳಾದ ಕಮಲ ದಳಗಳಿಂದ ಅಲಂಕರಿಸುತ್ತಿದ್ದಳು.

೫೧–೫೮. ಅರಳಿದ ಕೆಂದಾವರೆಗಳು, ಕನ್ನೈದಿಲೆಗಳೇ ಮುಂತಾದುವುಗಳ ಪತ್ರಸಮೂಹಗಳಿಂದ ಪೂಜಿಸಿ ಅರುಣಾಚಲದ ಸುತ್ತಲೂ ದೃಷ್ಟಿಯನ್ನು ಬೀರುತ್ತ, ಇಂದ್ರಾದಿ ದಿಕ್ಪಾಲಕರ ಸ್ತ್ರೀಯರುಗಳಿಂದ ಸೇವಿತಳಾಗಿ ಮಾತೃಕೆ ಯರು ಗಂಧ, ದಾನಗಳು, ಅಲಂಕಾರಗಳು ಮುಂತಾದುವುಗಳನ್ನು ಕೊಟ್ಟು ಪ್ರಸನ್ನಮಾಡಿಕೊಳ್ಳುತ್ತಿರಲು, ಛತ್ರ, ಚಾಮರ, ಅಭಿಷೇಕಪಾತ್ರೆ, ಬೀಸಣಿಗೆ,

ಛತ್ರಚಾಮರಭೃಂಗಾರತಾಲವೃಂತಫಲಾಚಿಕಾಃ ।
ವಹನ್ತೀಭಿಃ ಸುರಸ್ತ್ರೀಭಿರ್ವೃತಾ ಮುನಿವಧೂಯುತಾ ॥ ೫೩ ॥
ಪ್ರದಕ್ಷಿಣಂ ಚಕಾರೈನಮರುಣಾದ್ರಿಂ ಸ್ವಯಂಪ್ರಭಂ ।
ಕಾಂಕ್ಷನ್ತೀ ಶಿವಸಾಯುಜ್ಯಂ ವಿವಾಹಾಗ್ನಿಮಿವಾದ್ರಿಜಾ ॥ ೫೪ ॥
ತಸ್ಯಾಂ ಪ್ರದಕ್ಷಿಣಂ ಭಕ್ತ್ಯಾ ಕುರ್ವಾಣಾಯಾಂ ಪದೇಪದೇ ।
ಪ್ರೇಕ್ಷಿತಾ ಶಂಭುನಾ ದೇವಾಃ ಪರಿವವ್ರುಃ ಸುರೇಶ್ವರಾಃ ॥ ೫೫ ॥
ಸರಸ್ವತೀಸಮಂ ಧಾತ್ರಾ ವಿಷ್ಣುನಾ ಚ ಸಮಂ ರಮಾ ।
ಸರ್ವದಿಕ್ಪಾಲಕಾಂತಾಭಿಃ ಸಮೇತಾ ಶೈಲಬಾಲಿಕಾ ॥ ೫೬ ॥
ನಿರುನ್ಧತೀವ ದೇವೇನ್ದ್ರಂ ಸಲಿಲೈರ್ವರದಾನತಃ ।
ಅದ್ರಿನಾಥಸ್ವರೂಪಸ್ಯ ಶೀತತ್ವಮಿವ ಕುರ್ವತೀ ॥ ೫೭ ॥
ತಪಸ್ಯಯಾಽವಿನಾಭಾವಾದ್ದೇವಸ್ಯೇವ ಕೃತಸ್ಮೃತಿಃ ।
ದುಷ್ಕರಸ್ಯೋದವಾಸಸ್ಯ ಬೋಧಯನ್ತೀವ ಸಾಧುತಾಂ ॥ ೫೮ ॥
ಋಷೀಣಾಂ ದೇವಮಾನಾನಾಮುಪದೇಷ್ಟುಮಿವ ಕ್ರಮಾತ್ ।
ಕ್ರೀಡಾಮಿವ ಪುರಾಭ್ಯಸ್ತಾಂ ತಪಸಾಪಿ ಚ ಸಂಗತಾ ॥ ೫೯ ॥
ಆತ್ಮಾನಂ ವಿರಹೋತ್ತಪ್ತಮಾತ್ಮಸ್ಥಂ ತಾದೃಶಂ ಶಿವಂ ।
ಸಂಚಿಂತ್ಯಚೋಭಯೋಃ ಕರ್ತುಂ ಶೀತಲತ್ವಂ ಜಲೇ ಸ್ಥಿತಾ ॥ ೬೦ ॥

---

ತಾಂಬೂಲ ಸಂಪುಟಗಳನ್ನು ಹೊತ್ತುಬರುತ್ತಿರುವ ದೇವಕನ್ಯೆಯರಿಂದಲೂ, ಮುನಿಪತ್ನಿಯರಿಂದಲೂ ಬಳಸಲ್ಪಟ್ಟವಳಾಗಿ, ಶಿವಸಾಯುಜ್ಯವನ್ನು ಹೊಂದಬೇಕೆಂಬ ಇಚ್ಛೆಯಿಂದ ನೂತನ ವಧುವು ಅಗ್ನಿಯನ್ನು ಪ್ರದಕ್ಷಿಣೆಮಾಡುವಂತೆ ಗಿರಿಜೆಯು ಸ್ವಯಂಪ್ರಭವಾದ ಅರುಣಾಚಲವನ್ನು ಪ್ರದಕ್ಷಿಣೆ ಮಾಡಿದಳು.

೫೫. ಭಕ್ತಿಭರಿತಳಾಗಿ ಆಕೆಯು ಪ್ರದಕ್ಷಿಣೆಯನ್ನು ಮಾಡುತ್ತಿರಲು ಹೆಜ್ಜೆ ಹೆಜ್ಜೆಗೂ ಈಶ್ವರನಿಂದ ಪ್ರೇರೇಪಿಸಲ್ಪಟ್ಟ ದೇವತೆಗಳೂ ಸ್ವರ್ಗದ ಅಧಿಕಾರಿಗಳೂ ಆಕೆಯನ್ನು ಸುತ್ತುವರೆದಿದ್ದರು.

೫೬–೬೦. ವಿಷ್ಣುವಿನೊಡನೆ ಲಕ್ಷ್ಮಿಯೂ, ಬ್ರಹ್ಮನೊಡನೆ ಸರಸ್ವತಿಯೂ ಬರುತ್ತಿರಲು ಸಕಲ ದಿಕ್ಪಾಲಕಸ್ತ್ರೀಯರೊಡಗೂಡಿದ ಆ ಗಿರಿರಾಜ ಕನ್ಯಕೆಯು ನೀರಿನಿಂದಲೂ, ವರಪ್ರದಾನದಿಂದಲೂ ದೇವೇಂದ್ರನನ್ನು ನಿರೋಧಮಾಡುವವಳಂತೆ, ಅರುಣಾಚಲೇಶ್ವರನ ಸ್ವರೂಪವನ್ನು ಶೀತಲಮಾಡುವವಳಂತೆ, ತಪಶ್ಚರ್ಯೆಯಿಂದ ದೇವದೇವನು ತನ್ನನ್ನು ಎಡಬಿಡದಿರುವನೆಂದು ಜ್ಞಾಪಿಸಿಕೊಂಡವಳಂತೆ, ಕಷ್ಟಸಾಧ್ಯವಾದ ಜಲವಾಸದ ಸಾಧುತ್ವವನ್ನು ಬೋಧಿಸುವವಳಂತೆ, ಋಷಿಗಳಿಗೂ ದೇವತೆಗಳಿಗೂ ಕ್ರಮವಾಗಿ ಉಪದೇಶಮಾಡುವವಳಂತೆ, ಪೂರ್ವದಲ್ಲಿ ಅಭ್ಯಾಸಮಾಡಿದ ಕ್ರೀಡೆಯಂತೆ ತಪಸ್ಸನ್ನು ಲೆಕ್ಕಿಸದೆ ವಿರಹದಿಂದ

ತೀರ್ಥಾನಾಮಿವ ಸರ್ವೇಷಾಮುದ್ಭೂತಾನಾಂ ಶಿಲಾತಲೇ ।
ಆಧಿಕ್ಯಮಥ ಲೋಕಸ್ಯ ವಕ್ತುಕಾಮಾ ಸ್ವಯಂ ಸ್ಥಿತಾ ॥ ೬೧ ॥
ದುರಿತಘ್ನಂ ಚ ಪಂಚಾಗ್ನಿಮಥಾವಾಸಂ ಸುದುಷ್ಕರಂ ।
ಅಧಿಗಮ್ಯ ತಪಸ್ತಸ್ಯ ಶಾಂತಿಂ ಕರ್ತುಮಿವ ಸ್ಥಿತಾ ॥ ೬೨ ॥
ಮಹಿಷಾಸುರಕಂಠೋತ್ಥರಕ್ತಧಾರಾಪರಿಪ್ಲುತಂ ।
ಕ್ಷಾಲಯಂತೀವ ಲಿಂಗಂ ತದಮಲೈಸ್ತೀರ್ಥವಾರಿಭಿಃ ॥ ೬೩ ॥
ಅರುಣಾಖ್ಯಂ ಪುರಂ ರಮ್ಯಂ ನಿರ್ಮಿತಂ ವಿಶ್ವಕರ್ಮಣಾ ।
ಅಪೀತಕುಚನಾಥೇಶ ಶೋಣಾದ್ರೀಶ್ವರತುಷ್ಟಯೇ ॥ ೬೪ ॥
ಶೃಂಗೇಷು ಯಸ್ಯ ಸೌಧೇಷು ವಸಂತ್ಯೋ ವಾರಯೋಷಿತಃ ।
ಅಧಃಕೃತಾಭ್ರತಡಿತೋ ಜಿಗೀಷಂತೀವ ಚಾಮರೀಃ ॥ ೬೫ ॥
ಯತ್ತುಂಗಸೌಧಶೃಂಗೇಷು ಗಾಯಂತೀರ್ವಾರಯೋಷಿತಃ ।
ಸಿದ್ಧಚಾರಣಗಂಧರ್ವವಿದ್ಯಾಧರವಿರಾಜಿತಂ ॥ ೬೬ ॥

---

ತಪಿಸುತ್ತಿರುವ ತನ್ನನ್ನೂ ತನ್ನ ಆತ್ಮನಲ್ಲಿ ನೆಲಸಿರುವ ಶಿವನನ್ನೂ ಧ್ಯಾನಿಸಿ, ಈರ್ವರಿಗೂ ಶೈತ್ಯೋಪಚಾರವನ್ನು ಮಾಡುವವಳಂತೆ ಆ ಗಿರಿಜೆಯು ಜಲದಲ್ಲಿ ನಿಂತಳು.

೬೧. ಆ ಶಿಲಾತಲದಲ್ಲಿ ಹುಟ್ಟಿದ ಸಕಲ ತೀರ್ಥಗಳ ಮಾಹಾತ್ಮ್ಯೆಯನ್ನೂ ಲೋಕಗಳಿಗೆ ಹೇಳುತ್ತಿರುವಳೊ ಎಂಬಂತೆ ಆಕೆಯಲ್ಲಿ ಸಾಕ್ಷಾತ್ಕರಿಸಿ ನಿಂತಿದ್ದಳು.

೬೨. ಪಾಪಘ್ನವೂ, ಇಷ್ಟಾರ್ಥದಾಯಕವೂ, ಕಷ್ಟಸಾಧ್ಯವೂ ಆದ ಪಂಚಾಗ್ನಿ ತಪಸ್ಸನ್ನು ಮಾಡಿ ಅದಕ್ಕೆ ಶಾಂತಿಯನ್ನು ಮಾಡುವವಳಂತೆ ಈಗಲಾ ದೇವಿಯು ಜಲವಾಸವನ್ನು ಮಾಡಿದಳು.

೬೩. ಆಗಲಾ ಗಿರಿಜೆಯು ಮಹಿಷಾಸುರನ ಕಂಠದ ರಕ್ತದಿಂದ ಆಪ್ಲುತವಾದ ಲಿಂಗವನ್ನು ನಿರ್ಮಲಗೊಳಿಸುವವಳಂತೆ ಶುದ್ಧವಾದ ತೀರ್ಥೋದಕದಲ್ಲಿ ಮಿಂದಳು.

೬೪–೬೫. ಇಷ್ಟರಲ್ಲಿಯೇ ದೇವಶಿಲ್ಪಿಯಾದ ವಿಶ್ವಕರ್ಮನು ಅಪೀತಕುಚ ನಾಮಕಳಾದ ಆ ಗಿರಿಜೆಗೂ, ಅರುಣಾಚಲೇಶ್ವರನಿಗೂ ನಿವಾಸಕ್ಕಾಗಿ ಅರುಣ ವೆಂಬ ಪಟ್ಟಣವನ್ನು ಸೃಜಿಸಿದನು. ಅದರ ಸೌಧಾಗ್ರಗಳಲ್ಲಿ ವಾಸಮಾಡು ತ್ತಿರುವ ವಾರಸ್ತ್ರೀಯರು ಮುಗಿಲಮಿಂಚುಗಳನ್ನೂ ಅಣಕಿಸಿ ದೇವಸ್ತ್ರೀಯರನ್ನೇ ಜಯಿಸುವವರಂತೆ ತೋರುತ್ತಿದ್ದರು.

೬೬. ಆ ನಗರದ ಎತ್ತರವಾದ ಮಹಡಿಗಳಲ್ಲಿ ವೇಶ್ಯೆಯರು ಯಾವಾಗಲೂ ಗಾಯನಮಾಡುತ್ತಿದ್ದರು. ಸಿದ್ಧರು, ಚಾರಣರು, ಗಂಧರ್ವರು, ವಿದ್ಯಾಧರರೂ ಅಲ್ಲಿ ಮೆರೆಯುತ್ತಿದ್ದರು.

ಅಷ್ಟಾಪದರಥಾಕ್ರಾಂತಮಷ್ಟವೀಥೀವಿರಾಜಿತಂ ।
ಅಷ್ಟಾಪದ ಪಥಾಕಾರಮಷ್ಟದಿಕ್ಪಾಲಪೂಜಿತಂ ॥ ೬೭ ॥
ಅಷ್ಟಸಿದ್ಧಿಯುತೈಃ ಸಿದ್ಧೈರಷ್ಟಮೂರ್ತಿಪದಾಶ್ರಯೈಃ ।
ಅಷ್ಟಾಂಗ ಭಕ್ತಿಯುಕ್ತೈಸ್ತೈರ್ಯುಕ್ತಮಷ್ಟಾಂಗಬುದ್ಧಿಭಿಃ ॥ ೬೮ ॥
ಚಾತುರ್ವರ್ಣ್ಯಗುಣೋಪೇತಮುಪವರ್ಣಪರಿಷ್ಕೃತಂ ।
ಲಸತ್ಸುವರ್ಣದುರ್ವರ್ಣಶಾಲಾಮಾಲಾಸಮಾಸ್ಥಿತಂ ॥ ೬೯ ॥
ಶಂಖದುಂದುಭಿ ನಿಸ್ಸಾಣ ಮೃದಂಗಮುರಜಾಧಿಭಿಃ ।
ವೀಣಾವೇಣುಮುಖೈಸ್ತಾಲೈಃ ಸಾಲಾಪೈರುಪರಂಜಿತಂ ॥ ೭೦ ॥
ಬ್ರಹ್ಮಘೋಷನಿನಾದೇನ ಮಹರ್ಷೀಣಾಂ ಶಿವಾತ್ಮನಾಂ ।
ಸೇವಿತವ್ಯಂ ದಿನೇ ದಿವ್ಯ ಸಮದರ್ಶವೃಷಧ್ವಜಂ ॥ ೭೧ ॥
ನವರತ್ನಪ್ರಭಾಜಾಲೈಸರ್ವಗ್ರಹಸಮೋದಯೈಃ ।
ನಿಶಾದಿವಸಯೋರೇವಂ ದರ್ಶಯನ್ನಿವ ಸರ್ವದಾ ॥ ೭೨ ॥

---

೬೭. ಚಿನ್ನದ ರಥಗಳಿಂದ ತುಂಬಿದ ಅಷ್ಟವೀಧಿಗಳಿಂದ ಕೂಡಿದುದಾಗಿ ಕುಬೇರನ ಅಲಕಾನಗರಿಯ ರಾಜಬೀದಿಗಳನ್ನು ಹೋಲುವ ಬೀದಿಗಳೊಡಗೂಡಿ ಅಷ್ಟದಿಕ್ಪಾಲಕರಿಂದ ಪೂಜಿತವಾಗಿ ಆ ನಗರವು ರಂಜಿಸುತ್ತಿದ್ದಿತು.

೬೮. ಅಣಿಮಾದ್ಯಷ್ಟಸಿದ್ಧಿಗಳಿಂದ ಯುಕ್ತರಾಗಿ, ಪರಮೇಶ್ವರನ ಪಾದಭಕ್ತರಾದ ಸಿದ್ಧರಿಂದಲೂ, ಸಾಷ್ಟಾಂಗ ನಮಸ್ಕಾರವನ್ನು ಮಾಡುವ ಇತರ ಭಕ್ತರಿಂದಲೂ, ಯಮಾದಿ ಅಷ್ಟಾಂಗಯೋಗಸಹಿತವಾದ ಬುದ್ಧಿಯುಳ್ಳ ಯೋಗಿಗಳಿಂದಲೂ ಆ ಪಟ್ಟಣವು ತುಂಬಿದ್ದಿತು.

೬೯. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚಾತುರ್ವರ್ಣ್ಯದ ಜನರಿಂದ ಕೂಡಿ, ಸೂಕ್ಷ್ಮವಾದ ಕೌಶಲದಿಂದ ಶುದ್ಧವಾಗಿ ಮಿರುಗುತ್ತಿರುವ ಚಿನ್ನ ಬೆಳ್ಳಿಗಳ ಮನೆ ಸಾಲುಗಳಿಂದ ಆ ಪಟ್ಟಣವು ಮನೋಹರವಾಗಿದ್ದಿತು.

೭೦. ಸುಶ್ರಾವ್ಯವಾಗಿ ಧ್ವನಿಮಾಡುತ್ತಿರುವ ಶಂಖ, ದುಂದುಭಿ, ನಿಸ್ಸಾಣ, ಮೃದಂಗ, ಮುರಜ, ವೀಣಾ, ವೇಣು, ತಾಲ ಮುಂತಾದ ವಾದ್ಯವಿಶೇಷಗಳಿಂದ ಆ ನಗರವು ಶೋಭಿಸುತ್ತಿದ್ದಿತು.

೭೧–೭೨. ಇಂತನೇಕ ವೈಭವಗಳಿಂದೊಪ್ಪಿ ಮೆರೆಯುತ್ತಿರುವ ಆ ಅರುಣ ಪಟ್ಟಣವು ಶಿವೈಕಭಕ್ತರಾದ ಮಹರ್ಷಿಗಳಿಂದ ಹೊರಡುವ ವೇದಘೋಷಗಳಿಂದ ನಿತ್ಯದಲ್ಲಿಯೂ ಸೇವೆಗೊಳ್ಳುತ್ತಿರುವ ಸರ್ವಸಮದರ್ಶಿಯೂ, ವೃಷಭವಾಹನನೂ ಆದ ಶಿವನ ಬಿಡಾರವಾಗಿದ್ದಿತು. ಅಹೋರಾತ್ರಿಯೆನ್ನದೆ ಸರ್ವಕಾಲದಲ್ಲಿಯೂ ನವಗ್ರಹಗಳು ಏಕಕಾಲದಲ್ಲಿ ಉದಯಿಸಿದುವೆಂಬ ಭ್ರಾಂತಿಯನ್ನುಂಟುಮಾಡುವ ನವರತ್ನಗಳ ಕಾಂತಿಗಳಿಂದ ಅದು ಶೋಭಿಸುತ್ತಿದ್ದಿತು.

ವಿಷ್ಣುಃ ಸ್ಥಿತಶ್ಚ ತಂ ಪ್ರೀತ್ಯಾ ಸಿಷೇವೇ ಪುರತೋ ವಿಭುಂ ।
ಶಕ್ರಃ ಸುರಗಣೈಃ ಸಾರ್ಧಂ ಸಹಸ್ರಾಕ್ಷಃ ಸಮಾಯಯೌ ॥ ೭೩ ॥
ಪಪಾತ ದಿವ್ಯಗಂಧಾಢ್ಯಾ ಪುಷ್ಪವೃಷ್ಟಿಃ ಸಮಂತತಃ ।
ವ್ಯೋಮಗಂಗಾಜಲೋತ್ಸಂಗಶೀತಲೋ ಮರುದಾಯಯೌ ॥ ೭೪ ॥
ಅತೀವ ಸೌರಭಾಮೋದವಾಸಿತಾಖಿಲದಿಙ್ಮುಖಃ ॥ ೭೫ ॥
ಕನಕಾಂಕಿತ ಶೃಂಗಾಗ್ರಪರಿಭೂತವನಾವಲಿಃ ।
ದರ್ಪಸಂಭ್ರಮಸನ್ನದ್ಧೋ ನನಾದ ವೃಷಭೋ ಮುಹುಃ ॥ ೭೬ ॥
ವಸಂತಪ್ರಮುಖಾಃ ಸರ್ವೇ ಸಹರ್ಷಮೃತವಃ ಪುರಃ ।
ಅಸೇವಂತ ಪ್ರಿಯಕರೈಃ ಪುಷ್ಪೈಃ ಸ್ವಯಮಥೋಚಿತೈಃ ॥ ೭೭ ॥
ಗಣಾಶ್ಚ ವಿವಿಧಾಕಾರಾಃ ಸಿದ್ಧಾಶ್ಚ ಪರಮರ್ಷಯಃ ।
ಸುರಾಶ್ಚ ಕುತುಕೋಪೇತಾಃ ಸಮಾಗಚ್ಛನ್ದಿದೃಕ್ಷವಃ ॥ ೭೮ ॥
ಕುಂಕುಮಕ್ಲೋದಸಂಮಿಶ್ರ ಕರ್ಪೂರರಜಸಾನ್ವಿತಃ ।
ಖದಿರಾಮುಷ್ಟಿಮಹಾಸಾರಃ ಸಮಕೀರ್ಯತ ಸರ್ವತಃ ॥ ೭೯ ॥

---

೭೩. ಆ ಪಟ್ಟಣದಲ್ಲಿ ವಿಷ್ಣುವು ವಿಶ್ವವ್ಯಾಪಕನಾದ ಶಿವನನ್ನು ಪರಮ ಪ್ರೀತಿಯಿಂದ ಸೇವಿಸಿದನು. ಸಹಸ್ರನೇತ್ರನಾದ ಇಂದ್ರನು ದೇವಪರಿವಾರ ದಿಂದ ಸಹಿತನಾಗಿ ಆ ಪ್ರಭುವಿನ ಸೇವೆಗಾಗಿ ಅಲ್ಲಿಗೈತಂದನು.

೭೪. ದಿವ್ಯಗಂಧಯುಕ್ತವಾದ ಪುಷ್ಪವೃಷ್ಟಿಯು ದೇವಲೋಕದಿಂದ ಸುರಿಯಿತು. ದೇವಗಂಗೆಯ ಜಲದಿಂದ ಶೀತಲವಾದ ಮಂದಮಾರುತವು ಬೀಸತೊಡಗಿತು.

೭೫–೭೬. ಅತ್ಯಂತ ಸೌರಭದ್ರವ್ಯಗಳ ಸುವಾಸನೆಯಿಂದ ದಿಕ್ಕುಗಳೆಲ್ಲ ವನ್ನೂ ತುಂಬುತ್ತ, ಕೊಂಬುಗಳ ಕೊನೆಯಲ್ಲಿರುವ ಭಂಗಾರದ ಕಳಶಗಳಿಂದ ವನತರುಗಳನ್ನು ಅಲ್ಲಾಡಿಸುತ್ತ ದರ್ಪದಿಂದಲೂ ಸಂಭ್ರಮದಿಂದಲೂ ಮೆರೆಯು ತ್ತಿರುವ ಪರಶಿವನ ವೃಷಭೇಂದ್ರನು ಅಡಿಗಡಿಗೂ ಘರ್ಜಿಸುತ್ತಿದ್ದನು.

೭೭–೭೮. ವಸಂತವೇ ಮೊದಲಾದ ಸಕಲ ಋತುಗಳೂ ತಮ್ಮ ತಮ್ಮ ಕಾಲಗಳಿಗೆ ಉಚಿತಗಳಾದ ಪುಷ್ಪವಿಶೇಷಗಳಿಂದ ಅರುಣಾಚಲೇಶ್ವರನನ್ನು ಸಂತೋಷಗೊಳಿಸಿ ಸೇವಿಸಿದುವು. ವಿಧವಿಧವಾದ ಆಕಾರಗಳುಳ್ಳ ಪ್ರಮಥ ಗಣಗಳೂ, ಮಹರ್ಷಿಗಳೂ, ಸಿದ್ಧರೂ, ಕೌತುಕೋಪೇತರಾದ ದೇವತೆಗಳೂ ಪೂಜೋತ್ಸವವನ್ನು ನೋಡಲು ಆ ಪಟ್ಟಣಕ್ಕೆ ಬಂದರು.

೭೯. ಕುಂಕುಮಕರ್ದಮದಿಂದ ಮಿಶ್ರವಾದ ಕರ್ಪೂರ ಧೂಳಿಯಿಂದಲೂ, ಖದಿರವೃಕ್ಷಗಳ ಎಳೆದಳಿರಿಂದಲೂ ಆ ಪಟ್ಟಣವು ಎಲ್ಲೆಲ್ಲಿಯೂ ಅಲಂಕೃತ ವಾಗಿದ್ದಿತು.

अथ ಮೃದಂಗಕಮರ್ದಲಝಲ್ಲರೀ
ಪಟಹದುಂದುಭಿತಾಲಸಮನ್ವಿತೈಃ ।
ಜಲಜಕೀಚಕ ಕಾಹಲನಿಸ್ವನೈಃ
ಸುರಕೃತೈರ್ಭುವನಂ ಸಮಪೂರಯನ್ ॥ ೮೦ ॥
ಸುರವಧೂಜನನೃತ್ತನಿರಂತರೋ
ಲ್ಲುಲಿತ ತುಂಬುರಗಾಯನಗೀತಿಭಿಃ ।
ಅಭಿವೃತೋ ಮುನಿದೇವಗಣಾನ್ವಿತೋ
ವೃಷಗತಃ ಸಮದರ್ಶಿ ವೃಷಧ್ವಜಃ ॥ ೮೧ ॥
ಸರಸಮೇತ್ಯ ಶಿವಃ ಕರುಣಾನಿಧಿ
ರ್ನತಮುಖೀಮಪಿ ತಾಮುಪಲಜ್ಜಯಾ ।
ಲಲಿತಮಂಕಮನಂಗರಿಪುಃ ಶಿವಾಂ
ಧೃತಿಮಹಾ ನಧಿರೋಪ್ಯ ಜಹರ್ಷ ಸಃ ॥ ೮೨ ॥
ಲಲಿತಯಾ ನಿಜಯಾ ಪ್ರಿಯಯಾನ್ವಿತಃ
ಸುರಮುನೀಂದ್ರ ಸಮಾಜ ಸಮಾವೃತಃ ।
ಲಲಿತಮಪ್ಸರಸಾಂ ಮುಹುರಾದರಾ
ನ್ನಟನಮೈಕ್ಷತ ಗೀತಿಸಮನ್ವಿತಂ ॥ ೮೩ ॥

---

೮೦. ಆಗ ದೇವತೆಗಳಿಂದ ಬಾಜಿಸಲ್ಪಟ್ಟ ಮೃದಂಗ, ಮದ್ದಳೆ, ಝಲ್ಲರಿ, ಪಟಹ, ದುಂದುಭಿ, ತಾಲ, ಶಂಖ, ವೇಣು, ಕಹಳೆ ಮುಂತಾದ ವಾದ್ಯಗಳ ಧ್ವನಿಯಿಂದ ಭೂಮಿಯೆಲ್ಲವೂ ತುಂಬಿತು.

೮೧. ದೇವತಾಸ್ತ್ರೀಯರ ನರ್ತನದಿಂದ ನಿರಂತರದಲ್ಲಿಯೂ ಯುಕ್ತವಾದ ತುಂಬುರನ ಗಾಯನದಿಂದ ಕೂಡಿದವನಾಗಿ ಮುನಿಗಳಿಂದಲೂ, ದೇವತೆಗಳಿಂದಲೂ ಸಮೇತನಾಗಿ ವೃಷಭವಾಹನನಾದ ಆ ಮಹೇಶ್ವರನು ಪ್ರತ್ಯಕ್ಷನಾದನು.

೮೨. ಆ ಸದಾಶಿವನು ಸರಸವಾಗಿ ಬಂದು ಲಜ್ಜೆಯಿಂದ ನಮ್ರವದನೆಯಾಗಿರುವ ಪಾರ್ವತಿಯನ್ನು ಕರುಣೆಯಿಂದ ಧೈರ್ಯಗೊಂಡವನಾಗಿ ತನ್ನ ಮೃದುವಾದ ಅಂಕದಲ್ಲಿ ಕುಳ್ಳಿರಿಸಿಕೊಂಡು ಹರ್ಷಿಸಿದನು.

೮೩. ತನಗೆ ಪ್ರೀತಿಪಾತ್ರಳಾದ ಲಲಿತಾಂಬಿಕೆಯಿಂದಲೂ, ದೇವರ್ಷಿ ಮಹರ್ಷಿಗಳ ಸಮೂಹದಿಂದಲೂ ಪರಿವೃತನಾಗಿ ಪರಮೇಶ್ವರನು ಅತ್ಯಾದರದಿಂದ ಅಪ್ಸರಸ್ತ್ರೀಯರ ಗೀತಯುಕ್ತವಾದ ನರ್ತನವನ್ನು ನೋಡುತ್ತಿದ್ದನು.

ಅಥ ಶಿವಃ ಸುರರಾಜಸಮರ್ಪಿತಾ
ನ್ಸುಭಪಟೀರಮುಖಾನಿಲಸೌರಭಾನ್ ।
ಹಿಮಗಿರಿಪ್ರಹಿತಾಂಶ್ಚ ಸಮಗ್ರಹೀ
ನ್ಮೃಗಮದೈಃ ಸಹ ಗಂಧಸಮುಚ್ಚಯಾನ್ ॥ ೮೪ ॥
ಸಮನುಲೇಪಿತಹಾರಸುಮಂಡಿತಾ
ವಭಿಗತೌ ಸಿತತಾಂ ಸಮಲಂಕೃತೌ ।
ಸ್ವಯಮಪೀತಕುಚಾಕುಚಕುಟ್ಮಲಾ
ವರಣರಂಭಣ ಚಂಚಲಸತ್ಕರೌ ॥ ೮೫ ॥
ಕಠಿನತುಂಗಘನಸ್ತನಕೋರಕ
ಸ್ಥಗಿತಮಂಗಳಗಂಧಮನೋಹರಃ ।
ಗಿರಿಸುತಾಮಧಿಗಮ್ಯ ಶಿವಃ ಸ್ವಯಂ
ವಿರಹತಾಪಮಶೇಷಮಪಾಕರೋತ್ ॥ ೮೬ ॥
ಅಥ ವಿನೋದಶತೈರುಪಲಕ್ಷಿತಾಂ
ನಿಜವಿಯೋಗಜತಾಪಕೃತಾನ್ವಿತಾಂ ।
ಅರುಣಶೈಲಪತೀ ಸ್ವಯಮದ್ರಿಜಾಂ
ವರಮಭೀಪ್ಸಿತಮರ್ಥಯ ಚೇತ್ಯಶಾತ್ ॥ ೮೭ ॥

---

೮೪. ಆಗ ಸದಾಶಿವನು ದೇವೇಂದ್ರನೊಪ್ಪಿಸಿದ ಶುಭ್ರವಾದ ಶ್ರೀಗಂಧವೇ ಮೊದಲಾದ ಸೌರಭದ್ರವ್ಯಗಳನ್ನೂ, ಹಿಮವದ್ರಾಜನು ಕಳುಹಿಸಿದ ಕಸ್ತೂರಿಯೇ ಮುಂತಾದ ವಾಸನಾ ದ್ರವ್ಯಗಳನ್ನೂ ಅಂಗೀಕರಿಸಿದನು.

೮೫. ಪಾರ್ವತೀ ಪರಮೇಶ್ವರರಿಬ್ಬರೂ ಸುಗಂಧಲೇಪನದಿಂದಲೂ, ನವರತ್ನ ಹಾರಗಳಿಂದಲೂ ಅಲಂಕೃತರಾಗಿ ಶುಭ್ರಕಾಯರಾಗಿ ಕಂಗೊಳಿಸಿದರು. ಆಗಲಾ ಪರಶಿವನಾದರೋ ಅಪೀತಕುಚಾನಾಮಕಳಾದ ಪಾರ್ವತಿಯ ಕುಚಪಟ್ಟಿಕೆಯನ್ನು ಎತ್ತಿಹಿಡಿಯುವ ಸಂಭ್ರಮದಿಂದ ಚಂಚಲಗಳಾದ ಕೈಗಳುಳ್ಳವನಾದನು.

೮೬. ಕಠಿನಗಳಾಗಿಯೂ, ಉತ್ತುಂಗಗಳಾಗಿಯೂ, ಪೀನಗಳಾಗಿಯೂ ಇರುವ ಸ್ತನಗಳ ಮುಖಗಳಲ್ಲಿ ಲೇಪಿಸಿದ ಮಂಗಳದ್ರವ್ಯಗಳುಳ್ಳ ಮನೋಹರ ಳಾದ ಗಿರಿಜೆಯನ್ನು ಹೊಂದಿ ಸದಾಶಿವನು ತನ್ನ ವಿರಹತಾಪವನ್ನು ನಿಶ್ಶೇಷವಾಗಿ ಕಳೆದುಕೊಂಡನು.

೮೭. ಬಳಿಕ ಅನೇಕ ವಿನೋದಗಳಿಂದ ಕೂಡಿದವಳಾಗಿಯೂ, ತನ್ನ ವಿಯೋಗದಿಂದ ಉಂಟಾದ ತಾಪದಿಂದ ಕೃಶಳಾಗಿಯೂ ಇರುವ ಪಾರ್ವತಿ ಯನ್ನು ಕುರಿತು ಅರುಣಾಚಲೇಶ್ವರನು ತಾನೇ ಬೇಕಾದ ವರಗಳನ್ನು ಕೇಳಿ ಕೊಳ್ಳುವಂತೆ ಆಕೆಗೆ ಅಜ್ಞೆಮಾಡಿದನು.

ಸಕುತುಕಂ ಪ್ರಣಿಪತ್ಯ ನಗಾತ್ಮಜಾ
ಪುರರಿಪುಂ ಭುವನತ್ರಯಗುಪ್ತಯೇ ।
ಇಮಮಯಾಚತ ಶೋಣಗಿರೀಶ್ವರಂ
ವರಮುದಾರಮನುಗ್ರಹಸಮ್ಮುದಂ ॥ ೮೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಪೂರ್ವಾರ್ಧೇ "ದೇವ್ಯಾಃ ಶಿವಸಮಾಗಮವರ್ಣನಂ"ನಾಮ ದ್ವಾದಶೋಽಧ್ಯಾಯಃ

---

೮೮. ಆಗ ಗಿರಿಸುತೆಯು ಕೌತುಕಯುಕ್ತಳಾಗಿ ತ್ರಿಪುರಾರಿಯಾದ ಅರುಣಾಚಲೇಶ್ವರನನ್ನು ನಮಸ್ಕರಿಸಿ ಸಕಲ ಲೋಕಗಳನ್ನೂ ಉದ್ಧರಿಸುವ ಇಚ್ಛೆಯಿಂದ ಉದಾರವಾದುದೂ ಅನುಗ್ರಹೈಕಲಭ್ಯವಾದುದೂ ಆದ ಒಂದು ವರವನ್ನು ಈ ರೀತಿ ಕೇಳಿಕೊಂಡಳು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಪೂರ್ವಾರ್ಧದಲ್ಲಿ "ದೇವೀ ಪರಮೇಶ್ವರ ಸಮಾಗಮವರ್ಣನ"ವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋದಶೋಽಧ್ಯಾಯಃ

### ಶಿವೇನ ಅರುಣಾಚಲಸ್ಯ ಸರ್ವಶ್ರೈಷ್ಠ್ಯವರಪ್ರಧಾನವರ್ಣನಂ

ಬ್ರಹ್ಮೋವಾಚ :—

ಅಥಗೌರೀ ಪುರಾರಾತಿಂ ಪ್ರಣಮ್ಯ ಜಗದಂಬಿಕಾ ।
ಅಯಾಚತ್ತಾದೃಶಂ ಶಂಭುಮವಿನಾಭಾವಮಾತ್ಮನಃ ॥ ೧ ॥
ಇದಂ ವಿಜ್ಞಾಪಯಾಮಾಸ ಲೋಕಾನುಗ್ರಹಕಾರಣಾತ್ ।
ಕೃಪಯಾ ಪರಯಾ ಪೂರ್ಣಾ ಗೌರೀ ಸಂವಾದಸುಂದರೀ ॥ ೨ ॥
ನ ತ್ಯಾಜ್ಯಮೇತತ್ತೇ ರೂಪಮತ್ರ ದೃಷ್ಟಿಮನೋಹರಂ ।
ಅಹಂ ತ್ವಯಾ ನ ಚ ತ್ಯಾಜ್ಯಾ ಸಾಪರಾಧಾಪಿ ಸರ್ವದಾ ॥ ೩ ॥
ಮನೋಹರಮಿದಂ ರೂಪಮೇತತ್ತೇ ಲೋಕಮಂಗಳಂ ।
ಆಲೋಕ್ಯತಾಂ ಸದಾ ಸರ್ವೈರ್ದಿವ್ಯಗಂಧಸಮನ್ವಿತಂ ॥ ೪ ॥
ಭುಜಂಗಗರಳ ಬ್ರಹ್ಮಕಪಾಲ ಶಿವಭಸ್ಮಭಿಃ ।
ಭೀಷಣೈರಲಮೀಶಾನ ಜಯವೇಷ ಪರಿಗ್ರಹೈಃ ॥ ೫ ॥

---

### ಕನ್ನಡದ ಅನುವಾದ

#### ಅರುಣಾಚಲಕ್ಕೆ ಸರ್ವಶ್ರೈಷ್ಠ್ಯವು ಪ್ರಾಪ್ತವಾದುದು

೧. ಬ್ರಹ್ಮನು ಹೇಳುತ್ತಾನೆ:—ಜಗದಂಬೆಯಾದ ಗೌರಿಯು ತ್ರಿಪುರಾರಿಯನ್ನು ನಮಸ್ಕರಿಸಿ ತನ್ನನ್ನು ಎಂದಿಗೂ ಅಗಲದಿರುವಂತೆ ಕೇಳಿಕೊಂಡಳು.

೨. ಅಲ್ಲದೆ ಸಂಭಾಷಣಾಚತುರಳಾದ ಆಕೆಯು ಪರಮ ಕೃಪಾಪೂರ್ಣಳಾಗಿ ಲೋಕಾನುಗ್ರಹವನ್ನು ಮಾಡಲೆಳಸಿ ಆತನಲ್ಲಿ ಈ ರೀತಿ ವಿಜ್ಞಾಪನೆ ಮಾಡಿದಳು.

೩–೪. "ಎಲೈ ಮಹೇಶ್ವರನೆ! ನಯನಮನೋಹರವಾದ ಈ ನಿನ್ನ ರೂಪವು ಇಲ್ಲಿ ಸ್ಥಿರವಾಗಿ ನಿಲ್ಲಲಿ. ಹಾಗೂ ನಾನು ಅಪರಾಧ ಸಹಸ್ರಗಳನ್ನು ಮಾಡಿದರೂ ನಿನ್ನನ್ನು ಅಗಲಬಾರದು. ಮನೋಹರವೂ, ಮಂಗಳಕಾರಕವೂ, ದಿವ್ಯಗಂಧಾಢ್ಯವೂ ಆದ ಈ ನಿನ್ನ ರೂಪವು ಭೂಲೋಕದಲ್ಲಿ ಯಾವಾಗಲೂ ಎಲ್ಲರಿಗೂ ಪ್ರತ್ಯಕ್ಷವಾಗಿರಲಿ.

೫–೬. ಕಾಳಸರ್ಪಗಳು, ವಿಷಕಂಠ, ಬ್ರಹ್ಮಕಪಾಲ, ಭಸ್ಮಧಾರಣ ಮುಂತಾದುವುಗಳಿಂದ ಭೀಷಣವೇಷವನ್ನು ಪರಿಗ್ರಹಿಸುವ ನಿಯಮವು ಸಾಕು. ಇಲ್ಲಿ ನೀನು ಸುಕುಮಾರನೂ, ದಿವ್ಯವಸ್ತ್ರ, ಗಂಧಮಾಲ್ಯಾದಿಗಳಿಂದ ಅಲಂಕೃತನೂ, ನವರತ್ನಾಭರಣಗಳಿಂದ ಭೂಷಿತನೂ ಆಗಿ ವಿಹರಿಸುತ್ತಿರು.

ಸುಕುಮಾರೋ ಭವೇರ್ದಿವ್ಯಮಾಲ್ಯಗಂಧಾಂಬರಾಧಿಭಿಃ ।
ಭೂಷಿತೋ ರತ್ನಭೂಷಾಭಿರ್ವಿಹರಸ್ವ ಮಹೇಶ್ವರ ॥ ೬ ॥
ಆಗತಾ ನಿತ್ಯಮೀಶಾನ ದೇವಗಂಧರ್ವಕನ್ಯಕಾಃ ।
ಸೇವಂತಾಮತ್ರ ದೇವೇಶಂ ನೃತ್ಯವಾದಿತ್ರಗೀತಿಭಿಃ ॥ ೭ ॥
ಗಣಾಶ್ಚ ಮಾನುಷಾ ಭೂತ್ವಾ ಸೇವಂತಾಂ ತ್ವಾಮಹರ್ನಿಶಂ ।
ತ್ವತ್ಪ್ರಸಾದಾದಯಂ ದೇವ ಸುಗಂಧಿಃ ಪುಷ್ಟಿವರ್ಧನಃ ।
ಆವಯೋಃ ಸಂಗಮೋ ದೃಷ್ಟೋ ಭೂಯಾತ್ಸರ್ವಾರ್ಥದಾಯಕಃ ॥ ೮ ॥
ಗೃಹೀತುಮತ್ರ ದೇವೇಶ ಸರ್ವಮಂತ್ರಾತ್ಮಕಂ ವಪುಃ ।
ಚರಿತಂ ತವ ಕೈಂಕರ್ಯಮಸ್ತು ಭಕ್ತಿಃ ಸದಾ ತವ ॥ ೯ ॥
ಜ್ಞಾನಾಜ್ಞಾನಕೃತಂ ನಿತ್ಯಮಪರಾಧಸಹಸ್ರಕಂ ।
ಕ್ಷಮ್ಯತಾಂ ತವ ಭಕ್ತಾನಾಮನನ್ಯಶರಣೇಕ್ಷಣಾತ್ ॥ ೧೦ ॥
ಇತಿ ದೇವ್ಯಾ ವಚಃ ಶ್ರುತ್ವಾ ಶಂಭುಃ ಶೋಣಾಚಲೇಶ್ವರಃ ।
ತಮೇವ ವರದಃ ಪ್ರಾದಾದ್ವರಂ ಸರ್ವಮಭೀಪ್ಸಿತಂ ॥ ೧೧ ॥
ಆಭಾಷ್ಯ ಗೌರೀಂ ಕುತುಕಾದ್ರಂತುಕಾಮಃ ಸ್ವಯಂ ಶಿವಃ ।
ಧಾರಯ ತ್ವಂ ಮೃಗಮದಂ ಮನೋಜ್ಞಮಿತಿಮೂಚಿವಾನ್ ॥ ೧೨ ॥

---

೭. ದೇವಗಂಧರ್ವ ಸ್ತ್ರೀಯರು ನಿತ್ಯವೂ ಇಲ್ಲಿಗೆ ಬಂದು ದೇವದೇವನಾದ ನಿನ್ನನ್ನು ನೃತ್ಯ, ವಾದ್ಯ, ಗೀತಾದಿಗಳಿಂದ ಸೇವಿಸುತ್ತಿರಲಿ.

೮. ಪ್ರಮಥಗಣಗಳೆಲ್ಲರೂ ಮನುಷ್ಯರಾಗಿ ಹುಟ್ಟಿ ನಿನ್ನನ್ನು ಅಹೋರಾತ್ರಿಗಳಲ್ಲಿಯೂ ಸೇವಿಸಲಿ. ನಿನ್ನ ಪ್ರಸಾದದಿಂದ ಈ ಪ್ರದೇಶವು ಸುಗಂಧವುಳ್ಳದಾಗಿಯೂ, ಪುಷ್ಟಿಕಾರಕವೂ ಆಗಲಿ. ಇಲ್ಲಿ ನಮ್ಮಿಬ್ಬರ ಸಹವಾಸವನ್ನು ನೋಡುವವರಿಗೆ ಸಕಲಾರ್ಥಗಳ ಸಿದ್ಧಿಯಾಗಲಿ.

೯. ಎಲೈ ಮಹಾದೇವನೆ! ಇಲ್ಲಿಯೇ ನಾನು ನಿನ್ನ ಮಂತ್ರಾತ್ಮಕ ಶರೀರವನ್ನು ಧಾರಣಮಾಡಿದೆನು. ನಿನ್ನ ಸೇವೆಯನ್ನೂ ಇಲ್ಲಿಯೇ ಮಾಡಿದೆನು. ನನಗೆ ನಿನ್ನಲ್ಲಿಯೇ ಯಾವಾಗಲೂ ಭಕ್ತಿಯುಂಟಾಗಲಿ.

೧೦. ನಿನ್ನನ್ನೇ ಶರಣ್ಯನೆಂದು ನಂಬಿರುವ ಭಕ್ತರು ನಿತ್ಯದಲ್ಲಿಯೂ ಮಾಡುವ ಜ್ಞಾನ ಮತ್ತು ಅಜ್ಞಾನಪೂರ್ವಕವಾದ ಸಾವಿರಾರು ಅಪರಾಧಗಳನ್ನು ಕ್ಷಮಿಸುವವನಾಗು.''

೧೧. ದೇವಿಯ ಈ ಮಾತುಗಳನ್ನು ಕೇಳಿ ಸ್ವಯಂಭುವೂ, ವರಪ್ರದನೂ ಆದ ಅರುಣಾಚಲೇಶ್ವರನು ಆಕೆಯ ಸರ್ವಾಭೀಷ್ಟಗಳನ್ನೂ ದಯೆಪಾಲಿಸಿದನು.

೧೨. ಬಳಿಕಲಾತನು ಕೌತುಕದಿಂದ ಮಾತನಾಡುತ್ತ ಆಕೆಯೊಡನೆ ಕ್ರೀಡಿಸ ಬಯಸಿ ಮನೋಜ್ಞವಾದ ಕಸ್ತೂರಿಯನ್ನು ಧರಿಸುವಂತೆ ಹೇಳಿ ಇಂತೆಂದನು.

ಮಹಾದೇವ ಉವಾಚ :—

ಪುಲಕಾಖ್ಯೋ ಮಹಾನ್ದೈತ್ಯೋ ಮೃಗರೂಪೀ ತಪೋಽಧಿಕಂ ।
ಕೃತ್ವಾ ಪ್ರಾಪ ವರಂ ಮತ್ತಃ ಸೌಗನ್ಧ್ಯಂ ಪರಮಾದ್ಭುತಂ ॥ ೧೩ ॥
ಲಬ್ಧ್ವಾ ವರಂ ಸ್ವಗಂಧೇನಾಮೋಹಯತ್ಸುರಯೋಷಿತಃ ।
ತದೈವಾಧರ್ಮಸಂಪ್ರಾಪ್ತೋ ಬಬಾಧೇ ಸಕಲಂ ಜಗತ್ ॥ ೧೪ ॥
ದೇವೈರಭ್ಯರ್ಥಿತಃ ಸೋಽಹಮಾಹೂಯಾಸುರನಾಯಕಂ ।
ವಿಮುಂಚ ಲೋಕರಕ್ಷಾರ್ಥಮಾಸುರಂ ದೇಹಮಿತ್ಯಶಾಂ ॥ ೧೫ ॥

ಪುಲಕ ಉವಾಚ :—

ತ್ಯಕ್ಷ್ಯಾಮಿ ದೇವದೇವೇಶ ದೇಹಮೇತಂ ತ್ವದಾಜ್ಞಯಾ ।
ಪ್ರಣಮ್ಯ ಭಕ್ತಿಮನಸಾ ಮಾಮಭ್ಯರ್ಚ್ಯೇದಮೂಚಿವಾನ್ ॥ ೧೬ ॥
ಮದಂಗಸಂಭವಂ ದಿವ್ಯಂ ಸೌರಭಂ ವಿಶ್ವಮೋಹನಂ ।
ಧಾರ್ಯತಾಂ ದೇವದೇವೇಶ ಸದಾ ಸಾದರಚೇತಸಾ ॥ ೧೭ ॥
ಪುಲಕಸ್ವೇದಜಾತೋಽಹಿ ಸದಾಪ್ರಖ್ಯಾಯತಾಂ ತವ ।
ಅಯಂ ಮೃಗಮದೋ ಲೋಕೇ ಶೃಂಗಾರರಸವರ್ಧನಃ ॥ ೧೮ ॥

---

೧೩. ಮಹಾದೇವನು ಹೇಳುತ್ತಾನೆ:—"ಪೂರ್ವದಲ್ಲಿ ಜಿಂಕೆಯ ರೂಪವನ್ನು ತಾಳಿದ್ದ ಪುಲಕನೆಂಬ ರಾಕ್ಷಸನೊಬ್ಬನು ಅಧಿಕವಾದ ತಪಸ್ಸನ್ನು ಮಾಡಿ ನನ್ನಿಂದ ಅತ್ಯದ್ಭುತವಾದ ಶರೀರ ಸೌಗಂಧ್ಯವನ್ನು ಪಡೆದನು.

೧೪. ಈ ರೀತಿ ವರವನ್ನು ಪಡೆದು ಅವನು ತನ್ನ ಸುಗಂಧದಿಂದ ಸುರವನಿತೆಯರನ್ನೂ ಮೋಹಗೊಳಿಸಿದನು. ಹಾಗೆಯೇ ಅಧರ್ಮದಲ್ಲಿ ತೊಡಗಿ ಸರ್ವಲೋಕವನ್ನೂ ಬಾಧಿಸತೊಡಗಿದನು.

೧೫. ಆಗ ನಾನು ದೇವತೆಗಳಿಂದ ಪ್ರಾರ್ಥಿತನಾಗಿ ಆ ರಾಕ್ಷಸನನ್ನು ಕರೆದು ಲೋಕರಕ್ಷಣಾರ್ಥವಾಗಿ ತನ್ನ ರಾಕ್ಷಸಶರೀರವನ್ನು ಬಿಡುವಂತೆ ಆಜ್ಞೆ ಮಾಡಿದೆನು.

೧೬. ಪುಲಕನು ಹೇಳಿದನು :—'ಎಲೈ ಮಹಾದೇವನೆ! ನಿನ್ನ ಆಜ್ಞಾನುಸಾರವಾಗಿ ನಾನು ಈ ದೇಹವನ್ನು ಬಿಡುತ್ತೇನೆ.' ಹೀಗೆಂದು ಭಕ್ತಿಭಾವದಿಂದ ಪೂಜಿಸಿ ನಮಸ್ಕಾರ ಮಾಡಿ ನನಗೆ ಮತ್ತೆ ಹೇಳಿದನು :—

೧೭. 'ನನ್ನ ಶರೀರದಿಂದ ಹುಟ್ಟಿದ ಲೋಕಮೋಹಕವಾದ ಈ ದಿವ್ಯ ಸುಗಂಧದ್ರವ್ಯವು ಯಾವಾಗಲೂ ಆದರಹೃದಯನಾದ ನಿನ್ನಿಂದ ಧರಿಸಲ್ಪಡಲಿ.

೧೮. ಈ ಪುಲಕನ ಬೆವರಿನಿಂದ ಹುಟ್ಟಿದ ಈ ಕಸ್ತೂರಿಯು ಲೋಕದಲ್ಲಿ ಶೃಂಗಾರವರ್ಧನವಾಗಿ ಯಾವಾಗಲೂ ನಿನ್ನಿಂದ ಖ್ಯಾತಿಯನ್ನು ಪಡೆಯಲಿ.

ತ್ವತ್ಪ್ರಿಯಃ ಕಾಂತಿಸೌಭಾಗ್ಯರೂಪಲಾವಣ್ಯದಾಯಕಃ ।
ವಿಸೃಜಾಮಿ ನಿಜಂ ದೇಹಂ ದೇವದೇವ ಜಗತ್ಪತೇ ॥ ೧೯ ॥
ಸದಾ ಬಹುಮತೋ ದೇವ್ಯಾ ದಿವ್ಯಸೌರಭಲುಬ್ಧಯಾ ।
ಮದಂಶಸಂಭವಾ ಯೇ ಸ್ಯುರ್ಮತ್ತಪೋಲಬ್ಧ ಸೌರಭಾಃ ॥ ೨೦ ॥
ಲೀಯಂತಾಂ ತವ ದೇವೇಶ ಮೂರ್ತಾವಾಲೇಪನಚ್ಛಲಾತ್ ।
ತಥೇತಿ ಮಯ್ಯುಕ್ತವತಿ ಸ ದೈತ್ಯಃ ಪುಲಕಾಭಿದಃ ॥ ೨೧ ॥
ವಿಸಸರ್ಜ ನಿಜಂ ದೇಹಂ ಮಯಿ ಸನ್ನ್ಯಸ್ತಜೀವಿತಃ ।
ತತಸ್ತದಂಗಸಂಭೂತಂ ಮದಂ ಬಹುಲಸೌರಭಂ ।
ಅಧಾರಯಮಹಂ ಪ್ರೇಮ್ಣಾ ಶತಶೃಂಗಾರವರ್ಧನಂ ॥ ೨೨ ॥
ತಪಸಾ ದೇವದೇವೇಶಿ ತಪ್ತಂ ತವ ವಪುಃ ಕೃಶಂ ।
ಮದಂಗಂ ಚ ವಿಯೋಗಾತ್ತ ಇದಂ ನಿರ್ವಾಪಯಾಧುನಾ ॥ ೨೩ ॥
ಇತಿ ಪ್ರಶಸ್ಯ ಬಹುಧಾ ಪುಲಕಸ್ನೇಹಮುದದ್ಭುತಂ ।
ಆಲಿಲಿಂಪ ಮಹಾದೇವಃ ಪಾರ್ವತೀಂ ಪ್ರೇಮಮಂದಿರಾಂ ॥ ೨೪ ॥
ಅಪೃಚ್ಛಚ್ಚ ಹಸನ್ದೇವಃ ಪಾರ್ವತೀಂ ಲಲನಾಕೃತಿಂ ॥ ೨೫ ॥

---

೧೯. ನಿನಗೆ ಪ್ರಿಯನೂ, ಸೌಭಾಗ್ಯ, ರೂಪ, ಲಾವಣ್ಯಗಳನ್ನು ಕೊಡುವವನೂ, ದಿವ್ಯಸುಗಂಧಗಳಿಂದ ಮೋಹಿತಳಾಗುವ ದೇವಿಯಿಂದ ಪುರಸ್ಕೃತನೂ ಆಗಿ ನಾನು ನಿನ್ನ ಸನ್ನಿಧಾನದಲ್ಲಿ ಈ ಶರೀರವನ್ನು ವಿಸರ್ಜಿಸುತ್ತೇನೆ.

೨೦. ನನ್ನ ಅಂಶದಿಂದ ಹುಟ್ಟಿ ನನ್ನ ತಪಸ್ಸಿನ ಪ್ರಭಾವದಿಂದ ಸೌಗಂಧ್ಯವನ್ನು ಹೊಂದಿದವರೆಲ್ಲರೂ ನಿನ್ನ ಶರೀರಾಲೇಪನದ ವ್ಯಾಜದಿಂದ ನಿನ್ನ ಮೂರ್ತಿಯಲ್ಲಿ ಮೋಕ್ಷವನ್ನು ಹೊಂದಲಿ'.

೨೧–೨೨. ಎಲೌ ದೇವಿಯೇ! ನಾನು ಅಂತೆಯೇ ಅನುಗ್ರಹಿಸಲು ಪುಲಕನಾಮಕನಾದ ಆ ದೈತ್ಯನು ನನ್ನಲ್ಲಿಯೇ ತನ್ನ ಪ್ರಾಣವನ್ನು ನ್ಯಾಸಮಾಡಿ ದೇಹವನ್ನು ಬಿಟ್ಟನು. ಆದುದರಿಂದ ಅವನ ಶರೀರದಿಂದ ಬಂದ ಸುಗಾಂಧಾಢ್ಯವೂ ಶೃಂಗಾರವರ್ಧನವೂ ಆದ ಈ ಕಸ್ತೂರಿಯನ್ನು ಪ್ರೇಮದಿಂದ ನಾನು ಧರಿಸಿದೆನು.

೨೩. ಎಲೌ ದೇವನಾಯಕಿಯೆ! ನಿನ್ನ ಶರೀರವು ತಪಸ್ಸಿನಿಂದ ಬಹು ಕೃಶವಾಗಿರುವುದು. ನಿನ್ನ ವಿಯೋಗದಿಂದ ನನ್ನ ಶರೀರವೂ ಕೃಶವಾಗಿದೆ. ಈ ಕಸ್ತೂರಿಯಿಂದ ಎರಡು ದೇಹಗಳನ್ನೂ ಲೇಪಿಸು."

೨೪–೨೭. ಹೀಗೆ ಹೇಳುತ್ತ ಪುಲಕನ ಅದ್ಭುತ ಭಕ್ತಿಯನ್ನು ಕೊಂಡಾಡಿ ಮಹೇಶ್ವರನು ಆ ಕಸ್ತೂರಿಯನ್ನು ತನ್ನ ಪ್ರಿಯೆಯಾದ ಪಾರ್ವತಿಗೆ ಲೇಪಿಸತೊಡಗಿದನು. ಆಗ ಸ್ತ್ರೀರೂಪಳಾದ ಆಕೆಯ ಕೈಯಲ್ಲಿದ್ದ ಪುಷ್ಪವನ್ನು ಕಂಡು ನಗುತ್ತ ಇದೇನೆಂದು ಕೇಳಲು ಆ ಪಾರ್ವತಿಯು ಆತನನ್ನು ಕುರಿತು

ಕಿಮೇತದಿತಿ ಹಸ್ತೋತ್ಥಂ ದೃಷ್ಟ್ವಾ ತಂ ಜಗದಂಬಿಕಾ ।
ಅಬ್ರವೀದರುಣಾದ್ರೀಶಮಾನನಮ್ಯ ಜಗದಂಬಿಕಾ ॥ ೨೬ ॥
ಆಗತಿಂ ತಸ್ಯ ಪುಷ್ಪಸ್ಯ ಸದಾ ಸ್ವಕರವರ್ತಿನಃ ॥ ೨೭ ॥

ದೇವ್ಯುವಾಚ :—

ಅಹಂಕೈಲಾಸಶಿಖರಾದ್ದೇವದೇವ ತ್ವದಾಜ್ಞಯಾ ।
ತಪಃ ಕರ್ತುಮನುಪ್ರಾಪ್ತಾ ಕಾಂಚೀಂ ಕನಕತೋರಣಾಂ ॥ ೨೮ ॥
ಅವಾಪ್ಯ ಮಾನಸೋದ್ಭೂತಂ ಕಲ್ಹಾರಮಿದಮುತ್ತಮಂ ।
ಆರಾಧಯಂ ಮಹಾದೇವಮಮ್ಲಾನಗುರುಸೌರಭಂ ॥ ೨೯ ॥
ಯದಕ್ಷಯಮವಿಶ್ರಾಂತಮರ್ಚನಾಯೋಜಿತಂ ಮಯಾ ।
ಅವಿಚ್ಛಿನ್ನಮಹಾದೀಪ್ತಿಃ ಕಾಮಧೇನುಘೃತಾಪ್ಲುತಃ ॥ ೩೦ ॥
ಅವೇಕ್ಷಣೀಯೋ ಭೂಪಾಲೈರನುಪಾಲ್ಯಶ್ಚ ಸರ್ವದಾ ।
ಧರ್ಮಲಕ್ಷಣಮಾಧೇಯಂ ಲೋಕರಕ್ಷಾರ್ಥಮಾದರಾತ್ ॥ ೩೧ ॥
ಸರ್ವಾಭೀಪ್ಸಿತಸಿದ್ಧ್ಯರ್ಥಂ ಮತ್ಪ್ರೀತಿಕರಣಾಯ ಚ ।
ತ್ವಯಾ ಸಂಸ್ಥಾಪಿತಾ ಧರ್ಮಾ ದ್ವಾತ್ರಿಂಶಲ್ಲೋಕಗುಪ್ತಯೇ ।
ರಕ್ಷಣೀಯಾ ಪ್ರಯತ್ನೇನ ತತ್ಸನ್ನಿಧಿಮುಪಾಗತೈಃ ॥ ೩೨ ॥

---

ಪರಮೇಶ್ವರನಿಗೆ ನಮಸ್ಕರಿಸಿ ನಿತ್ಯವೂ ತನ್ನ ಕೈಯಲ್ಲಿರುವ ಪುಷ್ಪವು ಬಂದ ಕಾರಣವನ್ನು ಹೇಳತೊಡಗಿದಳು.

೨೮. ದೇವಿಯು ಹೇಳುತ್ತಾಳೆ:—"ಎಲೈ ಮಹೇಶ್ವರನೆ! ನಾನು ನಿನ್ನ ಆಜ್ಞಾನುಸಾರವಾಗಿ ತಪಸ್ಸನ್ನು ಮಾಡಲು ಕೈಲಾಸವನ್ನು ಬಿಟ್ಟು ಕನಕತೋರಣ ಯುತವಾದ ಕಾಂಚೀಕ್ಷೇತ್ರಕ್ಕೆ ಬಂದೆನು.

೨೯. ಆಗ ಮಾನಸಸರೋವರದಲ್ಲಿ ಹುಟ್ಟಿ, ಮ್ಲಾನವಿಲ್ಲದೆ ಅತ್ಯಂತ ಸುಗಂಧಯುಕ್ತವಾದ ಈ ಬೆಳುದಾವರೆಯನ್ನು ಪಡೆದು ಮಹಾದೇವನಾದ ನಿನ್ನನ್ನು ಪೂಜಿಸಿದೆನು.

೩೦. ಈ ಕಮಲವು ಅಂದಿನಿಂದ ಅಕ್ಷಯವಾಗಿಯೂ, ಅವಿಶ್ರಾಂತ ವಾಗಿಯೂ, ಅವ್ಯಾಹತವಾದ ದೀಪ್ತಿಯುಳ್ಳದ್ದಾಗಿಯೂ, ಕಾಮಧೇನುವಿನ ಘೃತದಿಂದ ಸಿಕ್ತವಾಗಿಯೂ ಇರಬೇಕೆಂದು ನನ್ನಿಂದ ಪೂಜೆಗಾಗಿ ನಿರ್ಮಿ ಸಲ್ಪಟ್ಟಿತು.

೩೧. ಕಾಂಚಿಯಲ್ಲಿರುವ ಆ ಮಹೇಶ್ವರನು ಯಾವಾಗಲೂ ರಾಜರಿಂದ ಸೇವ್ಯನಾಗುವನು. ಮತ್ತು ಅನುಪಾಲಿತನಾಗುವನು. ಅಲ್ಲಿ ಲೋಕಾನುಗ್ರಹ ಕ್ಕಾಗಿ ಧರ್ಮರಕ್ಷಣೆಯೂ ಸಹ ಆದರದಿಂದ ನಡೆಯುತ್ತದೆ.

೩೨. ಸಕಲ ಅಭೀಷ್ಟಗಳ ಸಿದ್ಧಿಗಾಗಿಯೂ, ನನಗೆ ಪ್ರೀತಿಯನ್ನುಂಟು

ಸರ್ವಾಲಂಕಾರಸಂಯುಕ್ತಂ ಸರ್ವಭೋಗಕೃತೋತ್ಸವಂ ।
ಆಲೋಕ್ಯತಾಮಿದಂ ರೂಪಂ ಕನ್ಯಾಯಾಂ ಮಮ ಕಾಂತಿಮತ್ ॥೩೩॥
ಬ್ರಹ್ಮೋವಾಚ:—
ಇತಿ ದೇವ್ಯಾ ವಚಃ ಶ್ರುತ್ವಾ ಶಂಭುಃ ಶೋಣಾಚಲೇಶ್ವರಃ ।
ತಥೇತಿ ವರದಃ ಪ್ರಾದಾದ್ವರಂ ಸರ್ವಮಭೀಪ್ಸಿತಂ ॥ ೩೪ ॥
ಏಷ ಶೋಣಾಚಲಃ ಶ್ರೀಮಾನ್ದೃಶ್ಯತೇ ಲೋಕಪೂಜಿತಃ ।
ಸರ್ವದಾ ವರದಾ ಗೌರ್ಯಾ ಸರ್ವಭೋಗೈಶ್ಚ ಸಂವೃತಃ ॥ ೩೫ ॥
ಯ ಏತಚ್ಛಾಂಭವಂ ರೂಪಮರುಣಾದ್ರಿತಯಾ ಸ್ಥಿತಂ ।
ಸಂಪಶ್ಯಂತಿ ನಮಸ್ಯಂತಿ ಕೃತಾರ್ಥಾಃ ಸರ್ವ ಏವ ತೇ ॥ ೩೬ ॥
ಅರುಣಾಚಲಮಹಾತ್ಮ್ಯಮೇತಚ್ಛೃಣ್ವಂತಿ ಯೇ ಭುವಿ ।
ಭವಂತಿ ಸತತಂ ತೇಷಾಂ ಸಮಗ್ರಾಃ ಸರ್ವಸಂಪದಃ ॥ ೩೭ ॥

---

ಮಾಡುವುದಕ್ಕಾಗಿಯೂ, ನನ್ನಿಂದ ಲೋಕಹಿತಕ್ಕಾಗಿ ಸ್ಥಾಪಿಸಲ್ಪಟ್ಟಿರುವ ಮುವ್ವತ್ತೆರಡು ನಿಯಮಗಳನ್ನು ಆ ದೇವತಾಸಾರ್ವಭೌಮನ ಸನ್ನಿಧಿಯನ್ನು ಸೇವಿಸುವವರೆಲ್ಲರೂ ಪ್ರಯತ್ನಪೂರ್ವಕವಾಗಿ ಅನುಸರಿಸಬೇಕು.

೩೩. ಸಕಲಾಭರಣಗಳಿಂದ ಕೂಡಿದುದೂ, ಸಮಸ್ತ ವೈಭವಗಳಿಂದ ಶೋಭಿಸುವ ಉತ್ಸವವುಳ್ಳದ್ದೂ ಆದ ನನ್ನ ಕಾಂತಿಯುಕ್ತವಾದ ರೂಪವು ಅಲ್ಲಿ ಕನ್ಯಾಸಂಕ್ರಮಣದ ಕಾಲದಲ್ಲಿ ಭಕ್ತರೆಲ್ಲರಿಂದಲೂ ನೋಡಲ್ಪಡುವಂತಹುದಾಗಲಿ.''

೩೪. ಬ್ರಹ್ಮನು ಹೇಳುತ್ತಾನೆ:—ಪಾರ್ವತಿಯ ಈ ಮಾತುಗಳನ್ನು ಕೇಳಿ ಅರುಣಾಚಲೇಶ್ವರನಾದ ಸದಾಶಿವನು ಅಂತೆಯೆ ಸಮ್ಮತಿಸಿ ಆಕೆಯು ಕೇಳಿದ ವರಗಳೆಲ್ಲವನ್ನೂ ದಯೆಪಾಲಿಸಿದನು.

೩೫. ಇಂದಿಗೂ ಕೂಡ ವರದಾಯಕಿಯಾದ ಗೌರಿಯಿಂದ ಸಕಲ ಭೋಗ ಭಾಗ್ಯಗಳಿಂದ ಸೇವಿತವಾಗಿ ಸಕಲ ಲೋಕಗಳಲ್ಲಿಯೂ ಪೂಜಿತವಾಗಿ ಸಂಪದ್ಯುಕ್ತವಾದ ಅರುಣಾಚಲವು ಕಂಗೊಳಿಸುತ್ತಿರುವುದು.

೩೬. ಯಾವ ಮನುಷ್ಯರು ಅರುಣಾಚಲಾಕಾರದಿಂದ ನಿಂತಿರುವ ಈ ಸದಾಶಿವನ ರೂಪವನ್ನು ನೋಡುವರೊ, ಯಾರು ನಮಸ್ಕರಿಸುವರೊ, ಅವರೆಲ್ಲರೂ ಕೃತಾರ್ಥರಾಗುವರು.

೩೭. ಭೂಲೋಕದಲ್ಲಿ ಯಾರು ಅರುಣಾಚಲಮಾಹಾತ್ಮ್ಯವನ್ನು ಕೇಳುವರೊ, ಅವರಿಗೆ ನಿತ್ಯದಲ್ಲಿಯೂ ಸಕಲೈಶ್ವರ್ಯಗಳೂ ಶಾಶ್ವತವಾಗಿ ಕೈಗೂಡುತ್ತವೆ.

ಶ್ರೀಮತ್ತ್ವಂ ವಾಕ್ಪತಿತ್ವಂ ಚ ರೂಪಮವ್ಯಾಹತಂ ಬಲಂ ।
ಲಭಂತೇ ಪಾಪನಾಶಂ ಚ ಮಾಹಾತ್ಮ್ಯಸ್ಯಾಸ್ಯ ಧಾರಣಾತ್ ॥ ೩೮ ॥
ಸರ್ವತೀರ್ಥಾಭಿಷವಣಂ ಸರ್ವಯಜ್ಞಕ್ರಿಯಾಫಲಂ ॥ ೩೯ ॥
ಸದಾಶಿವ ಪ್ರಸಾದಂ ಚ ದತ್ತೇ ಶೋಣಾದ್ರಿದರ್ಶನಂ ॥ ೪೦ ॥
ಇತಿ ಕೈಲಾಸಶಿಖರಾತ್ಪ್ರಾಪ್ತಾದೇವೀ ಶಿವಾಜ್ಞಯಾ ।
ಶಾಪಮೋಕ್ಷಂ ಗತವತೀ ಶೋಣಾಚಲನಿರೀಕ್ಷಣಾತ್ ॥ ೪೧ ॥
ಸ್ಥಾನೇಷ್ವನ್ಯೇಷು ದೇವಸ್ಯ ವಿದ್ಯಮಾನೇಷು ಚ ಕ್ಷಿತೌ ।
ದಿವಿ ಚಾತ್ಯಂತ ಪುಣ್ಯೇಷು ಶಂಭುರತ್ರ ಪ್ರಸೇದಿವಾನ್ ॥ ೪೨ ॥
ಅಯಂ ಸದಾಶಿವಃ ಸಾಕ್ಷಾದರುಣಾಚಲರೂಪತಃ ।
ದೃಶ್ಯತೇ ಪರಮಂ ತೇಜಃ ಸರ್ಗಸ್ಥಿತ್ಯಂತ ಕಾರಣಂ ॥ ೪೩ ॥
ಏತತ್ತು ತೈಜಸಂ ಲಿಂಗಂ ಸರ್ವದೇವ ನಮಸ್ಕೃತಂ ।
ದೃಶ್ಯತೇ ಕರ್ಮಭೂರೇಷಾ ತೇನ ಧರ್ಮಾಧಿಕಾಮತಾ ॥ ೪೪ ॥

---

೩೮. ಈ ಮಾಹಾತ್ಮ್ಯವನ್ನು ಮನಸ್ಸಿನಲ್ಲಿ ದೃಢಪಡಿಸಿಕೊಂಡವರಿಗೆ ಐಶ್ವರ್ಯವೂ, ವಾಕ್ಪಟುತ್ವವೂ, ಶರೀರಸೌಂದರ್ಯವೂ, ಅಪ್ರತಿಮವಾದ ಬಲವೂ, ಸಮಸ್ತ ಪಾಪಗಳ ನಾಶವೂ ಸಹಜವಾಗಿಯೇ ಉಂಟಾಗುವುವು.

೩೯–೪೦. ಈ ಅರುಣಾಚಲವು ದರ್ಶನಮಾಡುವವರಿಗೆ ಸಕಲ ತೀರ್ಥ ಸ್ನಾನಗಳ ಫಲವನ್ನೂ, ಸರ್ವಯಜ್ಞಗಳನ್ನು ಸಾಂಗವಾಗಿ ಮಾಡಿದ ಫಲವನ್ನೇ ಅಲ್ಲದೆ ಮಹಾದೇವನ ಅನುಗ್ರಹವನ್ನೂ ಕೊಡುತ್ತದೆ.

೪೧. ಹೀಗೆ ಶಿವನ ಅಜ್ಞಾನುಸಾರವಾಗಿ ಕೈಲಾಸ ಶಿಖರದಿಂದ ಭೂಲೋಕಕ್ಕೆ ಬಂದ ಪಾರ್ವತಿಯು ಅರುಣಾಚಲೇಶ್ವರನ ದರ್ಶನದಿಂದ ತನ್ನ ಶಾಪವನ್ನು ಕಳೆದುಕೊಂಡಳು.

೪೨. ಭೂಮ್ಯಾಕಾಶಗಳಲ್ಲಿರುವ ಅನ್ಯಕ್ಷೇತ್ರಗಳಲ್ಲಿ ಕಾಣುವ ಅತ್ಯಂತ ಪುಣ್ಯಫಲಪ್ರದಗಳಾದ ಪರಮೇಶ್ವರನ ರೂಪಗಳಿಗಿಂತಲೂ ಇಲ್ಲಿ ಈ ಅರುಣಾ ಚಲದಲ್ಲಿ ಸದಾಶಿವನ ವಿಶೇಷ ಪ್ರಸಾದವಿರುವುದು.

೪೩. ತ್ರಿಲೋಕಗಳ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾದ ಪರಮ ತೇಜೋಮಯನಾದ ಸದಾಶಿವನು ಇಲ್ಲಿ ಅರುಣಾಚಲರೂಪದಿಂದ ಜನರಿಗೆ ಕಾಣುತ್ತಿರುವನು.

೪೪. ಭೂಲೋಕದಲ್ಲಿ ಸಕಲ ದೇವತಾವಂದ್ಯವಾದ ಶಿವನ ತೈಜಸಲಿಂಗವು ನೆಲಸಿರುವುದರಿಂದ ಈ ಕರ್ಮಭೂಮಿಯೇ ಧರ್ಮದಿಂದ ಅಧಿಕವೆಂದು ಹೆಸರು ಗೊಂಡಿರುವುದು.

ಅರುಣಾಚಲನಾಥಸ್ಯ ತೇಜಸಾ ಧೂತಕಲ್ಮಷಾಃ ।
ಭಕ್ತಿಮಂತೋ ನರಾ ಲೋಕೇ ಸುಖಮಾಪ್ಸ್ಯಂತಿ ಸರ್ವತಃ ॥ ೪೫ ॥
ಪ್ರದಕ್ಷಿಣೈರ್ನಮಸ್ಕಾರೈಸ್ತಪೋಭಿರ್ನಿಯಮೈರಪಿ ।
ಯೋಽರ್ಚಯಂತ್ಯರುಣಾದ್ರೀಶಂ ತೇಷಾಂ ಶಂಭುರ್ವಶಂಗತಃ ॥ ೪೬ ॥
ನ ತಥಾ ತಪಸಾ ಯೋಗೈರ್ದಾನೈಃ ಪ್ರೀಣಾತಿ ಶಂಕರಃ ।
ಯಥಾ ಸಕೃದಪಿ ಪ್ರಾಪ್ತಾದರುಣಾಚಲದರ್ಶನಾತ್ ॥ ೪೭ ॥
ಸ್ವಯಂಭುವಃ ಸದಾ ದೇವಾಃ ಸೇತಿಹಾಸಾ ದಿವಿ ಸ್ಥಿತಾಃ ।
ಪರಿತೋ ಗಿರಿರೂಪಾಸ್ತೇ ಸ್ತುವಂತ್ಯರುಣಪರ್ವತಂ ॥ ೪೮ ॥
ಏತಸ್ಯ ವೈಭವಂ ಸರ್ವಂ ನ ಮಯಾ ನ ಚ ಶಾರ್ಙ್ಗಿಣಾ ।
ವಚಸಾ ಶಕ್ಯತೇ ವಕ್ತುಂ ವರ್ಷಕೋಟಿ ಶತೈರಪಿ ॥ ೪೯ ॥
ದೇವಾಶ್ಚ ಹರಿಮುಖ್ಯಾಸ್ತೇ ಕಲ್ಪಕಾದ್ಯಾಃ ಸುರದ್ರುಮಾಃ ।
ಪ್ರಚ್ಛನ್ನರೂಪಾಃ ಸೇವಂತೇ ಸರ್ವದೈವಾರುಣಾಚಲಂ ॥ ೫೦ ॥

---

೪೫. ಅರುಣಾಚಲೇಶ್ವರನ ತೇಜಸ್ಸಿನಿಂದ ಭಕ್ತಿಯುಕ್ತರಾದ ಜನರು ತಮ್ಮ ಪಾಪಗಳನ್ನು ಕಳೆದುಕೊಂಡು ಲೋಕದಲ್ಲಿ ಸರ್ವಸುಖಗಳನ್ನೂ ಹೊಂದುವರು.

೪೬. ಪ್ರದಕ್ಷಿಣೆ, ನಮಸ್ಕಾರ, ತಪಸ್ಸು, ವ್ರತನಿಯಮಗಳು ಇವುಗಳಿಂದ ಯಾರು ಅರುಣಾಚಲೇಶ್ವರನನ್ನು ಪೂಜಿಸುತ್ತಾರೆಯೊ ಅವರಿಗೆ ಸದಾಶಿವನು ವಶಂಗತನಾಗಿರುವನು.

೪೭. ಆಕಸ್ಮಿಕವಾಗಿಯಾದರೂ ಪ್ರಾಪ್ತವಾದ ಅರುಣಾಚಲದ ದರ್ಶನದಿಂದ ಪರಮೇಶ್ವರನು ಸುಪ್ರೀತನಾದಂತೆ ಯಾವ ತಪಸ್ಸಿನಿಂದಲೂ, ಯೋಗದಿಂದಲೂ, ದಾನಗಳಿಂದಲೂ ಪ್ರೀತನಾಗುವುದಿಲ್ಲ.

೪೮. ಸ್ವರ್ಗದಲ್ಲಿದ್ದ ಅನಾದಿಗಳಾದ ವೇದಗಳೂ ಇತಿಹಾಸಗಳಿಂದೊಡಗೂಡಿ ಪರ್ವತಾಕಾರಗಳಿಂದ ಅರುಣಾಚಲೇಶ್ವರನನ್ನು ಬಳಸಿಕೊಂಡು ಸ್ತೋತ್ರ ಮಾಡುತ್ತಿರುವುವು.

೪೯. ಈ ಕ್ಷೇತ್ರದ ವೈಭವವನ್ನು ನಾನಾಗಲಿ ವಿಷ್ಣುವಾಗಲಿ ಕೋಟಿ ಕೋಟಿ ವರ್ಷಗಳಲ್ಲಿಯೂ ಸಂಪೂರ್ಣವಾಗಿ ವಿವರಿಸಲಾರೆವು.

೫೦. ಮಹಾವಿಷ್ಣುವೇ ಮೊದಲಾದ ದೇವತೆಗಳೂ ಕಲ್ಪವೃಕ್ಷವೇ ಮೊದಲಾದ ಸುರವೃಕ್ಷಗಳೂ ತಮ್ಮ ರೂಪಗಳನ್ನು ಮರೆಸಿಕೊಂಡು ಸರ್ವಕಾಲದಲ್ಲಿಯೂ ಅರುಣಾಚಲೇಶ್ವರನನ್ನು ಸೇವಿಸುವರು.

ನ ತಸ್ಯ ಕಲಿದೋಷಃ ಸ್ಯಾನ್ನಾಧಿವ್ಯಾಧಿವಿಜೃಂಭಣಾ ।
ಯತ್ರ ಸಂಪೂಜ್ಯತೇ ಲಿಂಗಮರುಣಾಚಲಸಂಜ್ಞಿತಂ ॥ ೫೧ ॥
ಇತ್ಯೇತತ್ಕಥಿತಂ ಸರ್ವಂ ತವ ಶಂಭುಪದಾಶ್ರಯಂ ।
ಚರಿತಂ ಹ್ಯರುಣಸ್ಯಾಸ್ಯ ಕಲ್ಪಪುಣ್ಯದುರಾಸದಂ ॥ ೫೨ ॥

ಸೂತ ಉವಾಚ:—

ಇತಿ ವಿಧಿಮುಖನಿಃಸೃತಾಮುದಾರಾ
ಮರುಣಗಿರೀಶಕಥಾಸುಧಾಪಗಾಂ ಹಿ ।
ಶೃತಿಪುಟಯುಗಳಾತ್ಪಿಬನ್ಮನೋಜ್ಞಾಂ
ಸನಕಮುನಿಸ್ತಪಸಾಂ ಫಲಂ ಸ ಲೇಭೇ ॥ ೫೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಪೂರ್ವಾರ್ಧೇ "ಶಿವೇನ ಅರುಣಾಚಲಸ್ಯ ಸರ್ವಶ್ರೈಷ್ಠ್ಯ ವರಪ್ರಧಾನವರ್ಣನಂ"ನಾಮ ತ್ರಯೋದಶೋಽಧ್ಯಾಯಃ

**ಅರುಣಾಚಲಮಾಹಾತ್ಮ್ಯಸ್ಯ ಪೂರ್ವಾರ್ಧಂ ಸಂಪೂರ್ಣಂ**

---

೫೧. ಯಾವ ಪ್ರದೇಶದಲ್ಲಿ ಅರುಣಾಚಲೇಶ್ವರಲಿಂಗವು ಪೂಜೆಗೊಳ್ಳುತ್ತಿರುವುದೊ ಅಲ್ಲಿ ಕಲಿದೋಷವಾಗಲಿ ಶಾರೀರಕ ಮಾನಸಿಕ ದುಃಖಗಳ ಸುಳಿವಾಗಲಿ ಇರುವುದೇ ಇಲ್ಲವು.

೫೨. ಎಲೈ ಸನಕನೆ! ಈ ರೀತಿಯಾದ ಅರುಣಾಚಲೇಶ್ವರನ ಚರಿತ್ರೆಯು ಅನೇಕ ಕಲ್ಪಗಳಲ್ಲಿ ಮಾಡಿದ ಪುಣ್ಯದಿಂದಲೂ ಲಭಿಸುವುದಿಲ್ಲ. ಶಂಭುವಿನ ಪಾದಗಳನ್ನು ಆಶ್ರಯಿಸಿರುವ ಮಾಹಾತ್ಮ್ಯ ವಿಷಯವೆಲ್ಲವನ್ನೂ ನಿನಗೆ ಹೇಳಿರುವೆನು.

೫೩. ಸೂತನು ಶೌನಕಾದಿಗಳಿಗೆ ಹೇಳುತ್ತಾನೆ:—ಈ ರೀತಿಯಾಗಿ ಬ್ರಹ್ಮನ ಮುಖಪದ್ಮದಿಂದ ಸುರಿಯುತ್ತಿರುವ ಅರುಣಾಚಲ ಮಾಹಾತ್ಮ್ಯವೆಂಬ ಅಮೃತಪ್ರವಾಹವನ್ನು ಕರ್ಣದ್ವಯದಿಂದಲೂ ಯಥೇಚ್ಛವಾಗಿ ಪಾನಮಾಡುತ್ತ ಆ ಸನಕಮಹರ್ಷಿಯು ತಪಸ್ಸಿನ ಉತ್ತಮ ಫಲವನ್ನು ಹೊಂದುವವನಾದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಪೂರ್ವಾರ್ಧದಲ್ಲಿ "ಶಿವನಿಂದ ಅರುಣಾಚಲಕ್ಕೆ ಸರ್ವಶ್ರೈಷ್ಠ್ಯವು ಪ್ರಾಪ್ತವಾದುದರ ವರ್ಣನ"ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು

**ಅರುಣಾಚಲ ಮಹಾತ್ಮ್ಯದ ಪೂರ್ವಾರ್ಧವು ಮುಗಿದುದು**

॥ ಶ್ರೀಃ ॥

# ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧಃ ಪ್ರಾರಭ್ಯತೇ

## ಅಥ ಪ್ರಥಮೋಽಧ್ಯಾಯಃ

### ಸ್ಥಾನಮಾಹಾತ್ಮ್ಯ ಪ್ರಸ್ತಾವವರ್ಣನಂ

ವ್ಯಾಸ ಉವಾಚ:—

ವಸಂತೋ ನೈಮಿಷಾರಣ್ಯೇ ಮುನಯಃ ಸೂತಮಬ್ರುವನ್ ।

ಮುನಯ ಊಚುಃ:—

ಸ್ಥಾನಾನಾಮುತ್ತಮಂ ಶೈವಂ ಯತ್ಸ್ಥಳಂ ತದ್ವದಸ್ವ ನಃ ॥ ೧ ॥

ಸೂತ ಉವಾಚ:—

ಯೂಯಂ ಶೃಣುತ ಯತ್ಪೂರ್ವಂ ನಂದೀಶ್ವರಮುಖಾಚ್ಛೃತಂ ।
ಮಾರ್ಕಂಡೇಯೇನ ತದ್ವಕ್ಷ್ಯೇ ಮುನಯಃ ಶೃಣುತಾದರಾತ್ ॥ ೨ ॥

ಮಾರ್ಕಂಡೇಯ ಉವಾಚ:—

ನಂದೀಶ್ವರ ತ್ವಯಾ ಪ್ರೋಕ್ತೋ ಮಹಿಮಾ ಮಾಧ್ಯಮೇಶ್ವರಃ ।
ಮಯಾಪ್ಯವಧೃತಃ ಸರ್ವೋ ಭಕ್ತಿಶ್ರದ್ಧಾರ್ದ್ರಚೇತಸಾ ॥ ೩ ॥
ತಥಾಪಿ ವದ ಮೇ ಭೂಯೋ ದೇವದೇವ ದಯಾನಿಧೇ ।
ಅಹಂ ಯತ್ಪರಿಪೃಚ್ಛಾಮಿ ಭವಂತಂ ವಿಹಿತಾದರಃ ॥ ೪ ॥

---

## ಕನ್ನಡದ ಅನುವಾದ

### ಸ್ಥಾನಮಾಹಾತ್ಮ್ಯ ಪ್ರಸ್ತಾವ ವರ್ಣನ

೧. ವ್ಯಾಸರು ಹೇಳುತ್ತಾರೆ:—ನೈಮಿಷಾರಣ್ಯದಲ್ಲಿ ವಾಸಿಸುತ್ತಿರುವ ಮುನಿಗಳು ಸೂತನನ್ನು ಕುರಿತು ಹೇಳಿದರು:—ಶೈವಕ್ಷೇತ್ರಗಳಲ್ಲಿ ಅತ್ಯುತ್ತಮವಾದ ಕ್ಷೇತ್ರವನ್ನು ನಮಗೆ ತಿಳಿಸುವವನಾಗು.

೨. ಸೂತರು ಹೇಳುತ್ತಾರೆ:—ಎಲೈ ಮುನಿಗಳೇ! ಆದರದಿಂದ ಕೇಳಿರಿ. ಪೂರ್ವದಲ್ಲಿ ನಂದೀಶ್ವರನ ಮುಖದಿಂದ ಮಾರ್ಕಂಡೇಯ ಮಹರ್ಷಿಯು ಕೇಳಿದುದನ್ನು ನಿಮಗೆ ಹೇಳುತ್ತೇನೆ.

೩. ಮಾರ್ಕಂಡೇಯನು ಕೇಳಿದನು:—"ಎಲೈ ನಂದಿಕೇಶ್ವರನೆ! ಮಹಾಮಹಿಮನಾದ ಮಧ್ಯಮೇಶ್ವರನ ವಿಷಯವನ್ನು ಹೇಳಿದೆ. ನಾನೂ ಸಹ ಭಕ್ತಿಶ್ರದ್ಧೆಗಳಿಂದ ಕೂಡಿದ ಮನಸ್ಸಿನಿಂದ ಎಲ್ಲವನ್ನೂ ಕೇಳಿದೆನು.

೪. ದಯಾಸಮುದ್ರನಾದ ದೇವೇಶ್ವರನೆ! ಹಾಗೂ ನಾನು ಆದರಯುಕ್ತವಾಗಿ ನಿನ್ನನ್ನು ಕೇಳುವ ಈ ವಿಷಯವನ್ನು ನನಗೆ ತಿಳಿಸುವವನಾಗು.

ತ್ವಯಾಪ್ಯವಿದಿತಂ ಕಿಂಚಿನ್ನಾಸ್ತ್ಯತ್ರ ಭುವನತ್ರಯೇ ।
ಸರ್ವಾಗಮಪುರಾಣೇಷು ಬಾಹ್ಯೇಷ್ವಾಭ್ಯಂತರೇಷು ಚ ॥ ೫ ॥
ಸ್ವರ್ಗಾಪವರ್ಗಯೋಃ ಪುಂಸಾಂ ಭೂಮಿರೇವ ವಿಶಿಷ್ಯತೇ ।
ಸರ್ವಕರ್ಮಾಣಿ ನಿರ್ಮಾತುಂ ತತ್ತತ್ಫಲಪರಾಯಣೈಃ ॥ ೬ ॥
ಫಲಂ ಚ ತ್ರಿವಿಧಂ ಪುಂಸಾಂ ತ್ವಯೈವ ಕಥಿತಂ ಪುರಾ ।
ಭೂಮೌ ಸುಖಂ ಸ್ವರ್ಗಭೋಗಃ ಕೈವಲ್ಯಮಿತಿ ಭೇದತಃ ॥ ೭ ॥
ಪುಣ್ಯಕ್ಷಯೇಣ ಕ್ಷೀಯೇತ ಪ್ರಾಯಃ ಪ್ರಾಥಮಿಕಂ ದ್ವಯಂ ।
ಕ್ಷೀಯತೇ ನ ತೃತೀಯಂ ತು ಕರ್ಮಣಾಮೇವ ನಾಶ್ರಯಾತ್ ॥ ೮ ॥
ತತ್ಸಿದ್ಧಿಸ್ತು ತ್ವಯಾ ಪ್ರೋಕ್ತಾ ವಿಶುದ್ಧಜ್ಞಾನಗೋಚರಾ ।
ಸರ್ವೇಷಾಂ ದುರ್ಲಭಂ ಶುದ್ಧಜ್ಞಾನಂ ದೇಹಭೃತಾಂ ಪುನಃ ॥ ೯ ॥
ತಜ್ಜ್ಞಾನಂ ಕುತ್ರ ವಾ ಕ್ಷೇತ್ರೇ ಶಾಸ್ತ್ರಾದಿಪಠನಂ ವಿನಾ ।
ಶಿವಪೂಜನಮಾತ್ರೇಣ ಸಿದ್ಧ್ಯೇತ್ಸರ್ವಶರೀರಿಣಾಂ ॥ ೧೦ ॥
ಜ್ಞಾನಯೋಗಕ್ರಿಯಾಚರ್ಯಾಸ್ವಶೇಷಾಣಾಂ ಶರೀರಿಣಾಂ ।
ಅಪಿ ಶೈವಾಗಮೋಕ್ತಾಸು ನ ಬುದ್ಧಿಃ ಸಂಪ್ರವರ್ತತೇ ॥ ೧೧ ॥

---

೫. ಮೂರು ಲೋಕಗಳಲ್ಲಿಯೂ, ಸಕಲ ಆಗಮಗಳಲ್ಲಿಯೂ, ಪುರಾಣಗಳಲ್ಲಿಯೂ, ಒಳಗಾಗಲಿ ಹೊರಗಾಗಲಿ ನಿನಗೆ ತಿಳಿಯದ ವಿಷಯವು ಸ್ವಲ್ಪವಾದರೂ ಇಲ್ಲ.

೬. ಮನುಷ್ಯರು ಸ್ವರ್ಗಮೋಕ್ಷಗಳಲ್ಲಿ ಆಸಕ್ತಿಯುಳ್ಳವರಾಗಿ ಅವುಗಳಿಗೆ ತಕ್ಕ ಕರ್ಮಗಳನ್ನು ಮಾಡಲು ಭೂಲೋಕವೇ ಉತ್ತಮವೆನಿಸಿರುವುದು.

೭. ಈ ಕರ್ಮಗಳ ಫಲಗಳೂ, ಐಹಿಕಸುಖ, ಸ್ವರ್ಗಭೋಗ ಮತ್ತು ಕೈವಲ್ಯಗಳೆಂಬದಾಗಿ ಮೂರು ಬಗೆಯಾಗಿರುವುವೆಂದು ನೀನು ಮೊದಲೇ ತಿಳಿಸಿರುವೆ.

೮. ಸಾಧಾರಣವಾಗಿ ಮೊದಲನೆಯವುಗಳೆರಡೂ ಪುಣ್ಯಕ್ಷಯದಿಂದ ನಾಶವಾಗುತ್ತವೆ. ಆದರೆ ಮೂರನೆಯದು ಮಾತ್ರ ಕೇವಲ ಕರ್ಮವನ್ನೇ ಆಶ್ರಯಿಸಿಲ್ಲವಾದುದರಿಂದ ಕ್ಷಯವನ್ನು ಹೊಂದುವುದಿಲ್ಲ.

೯. ಕೈವಲ್ಯದ ಸಿದ್ಧಿಯೂ ಸಹ ಶುದ್ಧವಾದ ಜ್ಞಾನದಿಂದ ಸಂಪಾದಿತವೆಂದು ನೀನು ಹೇಳಿರುವೆ. ಆದರೆ ಸಕಲ ಪ್ರಾಣಿಗಳಿಗೂ ಶುದ್ಧಜ್ಞಾನವು ಅತ್ಯಂತ ದುರ್ಲಭವಾಗಿರುವುದು.

೧೦. ಅಂತಹ ಜ್ಞಾನವು ಶಾಸ್ತ್ರಾದಿಗಳ ಪಠನವಿಲ್ಲದೆ ಕೇವಲ ಶಿವಪೂಜೆಯಿಂದಲೇ ಸಕಲ ಜೀವರಿಗೂ ಉಂಟಾಗುವಂತಹ ಕ್ಷೇತ್ರವು ಎಲ್ಲಿರುವುದು?

೧೧. ಪ್ರಾಯಶಃ ಸಕಲ ಜೀವರಿಗೂ ಜ್ಞಾನ, ಯೋಗ, ಕ್ರಿಯಾ, ಆಚಾರ ಮುಂತಾದ ಶಿವಾಗಮೋಕ್ತಮಾರ್ಗಗಳಲ್ಲಿ ಬುದ್ಧಿಯುಂಟಾಗುವುದಿಲ್ಲ.

ಯಸ್ಯ ಸ್ಥಾನಸ್ಯ ಮಾಹಾತ್ಮ್ಯಾದಲ್ಪೈರಪಿ ಶರೀರಿಣಃ ।
ಲಪ್ಸ್ಯಂತೇ ನಿಯಮೈಃ ಶುದ್ಧಜ್ಞಾನಂ ತನ್ಮಮ ಕಥ್ಯತಾಂ ॥ ೧೨ ॥
ಭಸ್ಮರುದ್ರಾಕ್ಷವಹನಾದೀಶ್ವರಸ್ಮರಣಾತ್ಸಕೃತ್ ।
ಯತ್ರ ಮುಗ್ಧೈರಪಿ ಶ್ರೇಯೋ ಲಭ್ಯಂ ತತ್ಸ್ಥಾನಮುಚ್ಯತಾಂ ॥ ೧೩ ॥
ಅಬುದ್ಧಿಪೂರ್ವಕೇಣಾಪಿ ಯತ್ರ ವಾಸೇನ ದೇಹಿನಾಂ ।
ಅವಿಘ್ನಂ ಸೇತ್ಸ್ಯತೇ ಶ್ರೇಯಃ ಸ್ಥಾನಂ ತನ್ಮೇಽನುಗೃಹ್ಯತಾಂ ॥ ೧೪ ॥
ಜಾತಾನಾಂ ವರ್ಣಸಾಂಕರ್ಯೇಽತೈರಶ್ಚೀಂ ಯೋನಿಮಾಯುಷಾಂ ।
ಸ್ಥಾವರಾಣಾಮಪಿ ಶ್ರೇಯೋ ಯತ್ರ ತತ್ಕ್ಷೇತ್ರಮುಚ್ಯತಾಂ ॥ ೧೫ ॥

ಇತೀರಯಿತ್ವಾ ಸ ಮೃಕಂಡುನಂದನಃ
ಸಮಂ ಮುನೀಂದ್ರೈರಪರೈರ್ಮಹಾತ್ಮಭಿಃ ।
ಪಪಾತ ತಸ್ಯಾಂಘ್ರಿ ಸರೋರುಹದ್ವಯೇ
ಶಿಲಾದಸೂನೋರಖಿಲಾಗಮಾಬ್ಧೇಃ ॥ ೧೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ಸ್ಥಾನಮಾಹಾತ್ಮ್ಯ ಪ್ರಸ್ತಾವವರ್ಣನಂ" ನಾಮ ಪ್ರಥಮೋಽಧ್ಯಾಯಃ

---

೧೨–೧೩. ಯಾವ ಕ್ಷೇತ್ರದ ಮಾಹಾತ್ಮ್ಯೆಯಿಂದ ಮನುಷ್ಯರು ಅತ್ಯಲ್ಪ ನಿಯಮಗಳಿಂದಲೇ ಶುದ್ಧಜ್ಞಾನವನ್ನು ಪಡೆಯುವರೊ ಅಂತಹ ಕ್ಷೇತ್ರವನ್ನು ನನಗೆ ತಿಳಿಸುವವನಾಗು. ಭಸ್ಮರುದ್ರಾಕ್ಷಿಗಳನ್ನು ಧರಿಸುವುದರಿಂದಲೂ, ಕೇವಲ ಒಂದುಸಲವೇ ಈಶ್ವರನನ್ನು ಸ್ಮರಿಸುವುದರಿಂದಲೂ ಮೂಢರಿಗೂ ಕೂಡ ಮೋಕ್ಷವನ್ನು ಸಂಪಾದಿಸಿಕೊಡುವಂತಹ ಕ್ಷೇತ್ರವನ್ನು ತಿಳಿಸು.

೧೪–೧೫. ಅಜ್ಞಾನದಿಂದಲೂ ಸಹ ಎಲ್ಲಿ ವಾಸಿಸುವುದರಿಂದ ನಿರ್ವಿಘ್ನವಾಗಿ ಮೋಕ್ಷದ ಸಾಧನೆಯಾಗುತ್ತದೆಯೊ ಅಂತಹ ಉತ್ತಮ ಕ್ಷೇತ್ರದ ವಿಚಾರವನ್ನು ನನಗೆ ಅನುಗ್ರಹಿಸು. ಸಂಕರ ಜಾತಿಗಳಲ್ಲಿ ಹುಟ್ಟಿದವರೂ, ತಿರ್ಯಗ್ಯೋನಿಗಳಲ್ಲಿ ಬಳಲುವವರೂ, ಸ್ಥಾವರ ಭಾವವನ್ನು ಹೊಂದಿದವರೂ ಆದ ಜೀವರು ಎಲ್ಲಿ ಶ್ರೇಯಸ್ಸನ್ನು ಪಡೆಯುವರೊ ಅಂತಹ ಕ್ಷೇತ್ರವನ್ನು ತಿಳಿಸು."

೧೬. ಹೀಗೆ ಕೇಳುತ್ತ ಮಾರ್ಕಂಡೇಯನು ಇತರ ಮುನಿಗಳಿಂದೊಡಗೂಡಿ ಸಕಲಾಗಮಗಳ ಸಾರವನ್ನು ತಿಳಿದ ಶಿಲಾದನ ಮಗನಾದ ನಂದಿಕೇಶ್ವರನ ಪಾದ ಪದ್ಮಗಳಲ್ಲಿ ಬೀಳುವವನಾದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ಸ್ಥಾನಮಾಹಾತ್ಮ್ಯ ಪ್ರಸ್ತಾವವರ್ಣನ" ವೆಂಬ ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿತೀಯೋಽಧ್ಯಾಯಃ

### ವಿವಿಧ ಶಿವಕ್ಷೇತ್ರವರ್ಣನಂ

ನಂದಿಕೇಶ್ವರ ಉವಾಚ :—

ಸ್ಥಾನಂ ತ್ವಯಾ ಪೃಷ್ಟಮಸ್ತಿ ಮುನೇ ಮಾಹೇಶ್ವರಾಗ್ರಣಿ ।
ಚರಾಚರಾಣಾಂ ಸರ್ವೇಷಾಂ ಭೂತಾನಾಮಪಿ ಶರ್ಮಣೇ ॥ ೧ ॥
ಪ್ರಕಲ್ಪಿತಂ ಹಿ ದೇವೇನ ತತ್ತತ್ಕರ್ಮಾನುಗುಣ್ಯತಃ ।
ಶರೀರಭಾಜಾಂ ಜನನಂ ತಾಸುತಾಸ್ವಪಿ ಯೋನಿಷು ॥ ೨ ॥
ತ್ವಯಾ ಶುಶ್ರೂಷಿತಂ ತೇಷಾಂ ಹಿತಾಯ ಮಹತೇ ಹ್ಯಲಂ ।
ಅನ್ಯಥಾ ಸಂಸೃತೇರ್ಹಾನಿಃ ಕಲ್ಪಕೋಟಿಶತೈರ್ನಹಿ ॥ ೩ ॥
ಸ್ವಲ್ಪೈರ್ಹಿ ಕರ್ಮಭಿಜ್ಞಾನೈರ್ನರಾ ಅಪಿ ಪುನಃ ಪುನಃ ।
ಘಟೀಯಂತ್ರನಯಾಜ್ಜನ್ಮಮರಣೇ ನೈವ ಶಾಶ್ವತಃ ॥ ೪ ॥
ಕಥಂ ನು ವಿರತೋ ದೇಹೀ ಗರ್ಭವೋಕಸಮಾಗಮಾತ್ ।
ವಿಶ್ರಾಂತಯೇ ಪ್ರಕಲ್ಪೇತ ವಿಶುದ್ಧಜ್ಞಾನತೋ ವಿನಾ ॥ ೫ ॥

---

### ಕನ್ನಡದ ಅನುವಾದ

#### ವಿವಿಧ ಶಿವಕ್ಷೇತ್ರಗಳ ವರ್ಣನವು

೧. ನಂದಿಕೇಶ್ವರನು ಹೇಳುತ್ತಾನೆ :—ಎಲೈ ಮಹೇಶ್ವರ ಭಕ್ತಾಗ್ರಣಿಯೆ ! ನೀನು ಕೇಳಿದಂತೆ ಸಕಲ ಚರಾಚರ ಪ್ರಾಣಿಗಳ ಸೌಖ್ಯಕ್ಕೆ ಸಾಧನವಾಗಿರತಕ್ಕ ಸ್ಥಾನವೊಂದಿರುವುದು.

೨. ಮಹೇಶ್ವರನೇ ಈ ಲೋಕದ ಜೀವರ ಕರ್ಮಾನುಸಾರವಾಗಿ ಅವರಿಗೆ ಅನೇಕ ವಿಧಗಳಾದ ಯೋನಿಗಳಲ್ಲಿ ಜನ್ಮವನ್ನು ನಿರ್ಧಾರಮಾಡಿರುವನು.

೩. ಅವರ ಹಿತದೃಷ್ಟಿಯಿಂದ ನೀನು ಮಹೇಶ್ವರನ ಶುಶ್ರೂಷೆಮಾಡಿರುವುದೇ ಸಾಕು. ಇಲ್ಲದಿದ್ದರೆ ಈ ಜೀವರಿಗೆ ಕೋಟಿಕಲ್ಪಗಳಾದರೂ ಸಂಸಾರದಿಂದ ಮೋಕ್ಷವೇ ಇಲ್ಲವಷ್ಟೆ !

೪. ಅಲ್ಪವಾದ ಕರ್ಮಜ್ಞಾನಗಳಿಂದ ಮನುಷ್ಯರು ಘಟೀಯಂತ್ರದ ನೀರಿನಂತೆ ಮತ್ತೆ ಮತ್ತೆ ಜನನ ಮರಣಗಳನ್ನೇ ಹೊಂದುತ್ತ ಸೌಖ್ಯವನ್ನೇ ಕಾಣುವುದಿಲ್ಲವು.

೫. ಜೀವನು ಗರ್ಭವಾಸದಿಂದ ಮುಕ್ತನಾಗಿ ಶಾಶ್ವತ ಸುಖವನ್ನು ಪಡೆಯಬೇಕಾದರೆ ಶುದ್ಧಜ್ಞಾನವಿಲ್ಲದೆ ಹೇಗೆ ಸಾಧ್ಯವಾಗುವುದು ?

ಪ್ರದೇಶಾಃ ಕಥಿತಾಃ ಪೂರ್ವಂ ಪ್ರಸಂಗವಶತೋ ಮಯಾ ।
ಋಷಿಭೇದಾದಿಕಂ ತೇಷು ನಿವಾಸಃ ಕೃತ್ತಿವಾಸಸಃ ॥ ೬ ॥
ಕೇಚಿತ್ತೀರೇಷು ಗಂಗಾಯಾಃ ಕೇಚಿತ್ಸಾರಸ್ವತೇ ತಟೇ ।
ಕಾಲಿಂದೀತೀರಯೋರನ್ಯೇ ಕತಿಚಿಚ್ಛೋಣರೋಧಸಿ ॥ ೭ ॥
ಅಪರೇ ನರ್ಮದಾತೀರೇ ಪರೇ ಗೋದಾವರೀ ತಟೇ ।
ಕತಿಚಿದ್ಗೋಮತೀ ತೀರೇಷ್ವನ್ಯೇ ಹೇಮವತೀ ತಟೇ ॥ ೮ ॥
ಸಮುದ್ರಪಾರ್ಶ್ವೇಷ್ವಿತರೇ ದ್ವೀಪೇಷ್ವನ್ಯೇ ಸರಸ್ವತಾಂ ।
ಮುಖೇಷು ಕೇಚಿತ್ಸಿಂಧೂನಾಂ ಸಂಭೇದೇಷ್ವಪಿ ಕೇಚನ ॥ ೯ ॥
ಕೃಷ್ಣವೇಣೀ ತಟೇ ಕೇಚಿತ್ತುಂಗಭದ್ರಾಂತಿಕೇ ಪರೇ ।
ಉಪವೇಣ್ಯಾಂ ಕತಿಪಯೇ ಪರೇ ಶಕ್ತ್ಯಾಪಗಾಂತಿಕೇ ॥ ೧೦ ॥
ಕಾವೇರೀ ತೀರ ಇತರೇ ಕೇಚಿದ್ವೇಗವತೀತಟೇ ।
ಅನ್ಯೇ ತು ತಾಮ್ರಪರ್ಣ್ಯಾಶ್ಚ ಕತಿಚಿನ್ಮುರಲಾತಟೇ ॥ ೧೧ ॥
ಕೇಚಿದಿರಾವತೀತೀರೇ ತ್ವಿತರೇ ಯಾತುಕಾಂಕ್ಷಿಕೇ ॥ ೧೨ ॥

ಕನ್ಯಾತಟೇಷು ಕತಿಚಿತ್ಕತಿಚಿತ್ಕುಮಾರೀ
ತೀರೇಪರೇಚ ತಮಸಾವರುಣಾಂತಿಕೇಽನ್ಯೇ ।
ಮಂದಾಕಿನೀ ಸವಿಧಯೋರಿತರೇ ಪರೇಽಪಿ
ಶಿಪ್ರಾತಟೇ ಪರಿಸರೇಷು ಪರೇ ಸರಯ್ವಾಃ ॥ ೧೩ ॥

---

೬. ನಿನಗೆ ಪ್ರಸಂಗವಶದಿಂದ ನಾನು ಅನೇಕ ಕ್ಷೇತ್ರಗಳನ್ನು ತಿಳಿಸಿದ್ದೇನೆ. ಅವುಗಳಲ್ಲಿ ಅನೇಕ ಮಹರ್ಷಿಗಳು ವಾಸಿಸುತ್ತಿರುವರು. ಅವುಗಳಲ್ಲೆಲ್ಲ ಮಹೇಶ್ವರನ ಸಾನ್ನಿಧ್ಯವೂ ಇರುವುದು.

೭–೧೯. ಈ ಮಹರ್ಷಿಗಳಲ್ಲಿ ಕೆಲವರು ಗಂಗಾ ತೀರದಲ್ಲಿಯೂ, ಕೆಲವರು ಸರಸ್ವತೀ ತೀರದಲ್ಲಿಯೂ, ಕೆಲವರು ಕಾಲಿಂದೀ, ಶೋಣಾ, ನರ್ಮದಾ, ಗೋದಾವರೀ, ಗೋಮತೀ, ಹೇಮವತೀ ತೀರಗಳಲ್ಲಿಯೂ, ಇನ್ನು ಕೆಲವರು ಸಮುದ್ರಗಳ ತೀರಪ್ರದೇಶಗಳಲ್ಲಿಯೂ, ಸರೋವರಗಳಿರುವ ಇತರ ದ್ವೀಪಗಳಲ್ಲಿ ಕೆಲವರೂ, ನದೀಮುಖಗಳಲ್ಲಿಯೂ, ನದೀಸಂಗಮಗಳಲ್ಲಿಯೂ ಕೆಲವರೂ, ಕೃಷ್ಣವೇಣಿ ತುಂಗಭದ್ರಾ ತೀರಗಳಲ್ಲಿ ಕೆಲವರೂ ವಾಸಿಸುತ್ತಿರುವರು. ಕೆಲವರು ಉಪವೇಣಿ, ಶಕ್ತಿ, ಕಾವೇರಿ, ವೇಗವತೀ ತೀರಗಳಲ್ಲಿರುವರು. ಇನ್ನು ಕೆಲವರು ತಾಮ್ರಪರ್ಣಿ, ಮುರಲಾ, ಇರಾವತಿ, ಯಾತುಕಾಂಕ್ಷಿಕಾ ನದಿಗಳ ತೀರಗಳಲ್ಲಿ ವಾಸಮಾಡುತ್ತಿರುವರು. ಕನ್ಯಾತೀರದಲ್ಲಿ ಕೆಲವರೂ, ಮತ್ತೆ ಕೆಲವರು ಕುಮಾರೀ ತೀರದಲ್ಲಿಯೂ, ತಮಸಾ, ವರುಣಾ ನದೀತೀರಗಳಲ್ಲಿ ಇನ್ನೂ ಕೆಲವರೂ, ಮಂದಾಕಿನೀ ಶಿಪ್ರಾ ನದಿಗಳ ತೀರಗಳಲ್ಲಿ ಕೆಲವರೂ ವಾಸವಾಗಿರುವರು.

ವಿಪಾಶಾಭ್ಯಾಶ ಇತರೇ ಶತಧೃತಿತಟೇ ಪರೇ ।
ಚರ್ಮಣ್ವತ್ಯುಪಕಂಠೇಽನ್ಯೇ ಕೇಚಿದ್ಭೀಮರಥೀ ತಟೇ ॥ ೧೪ ॥
ಕೇಚಿದ್ಬಿಂದುಸರೋಽಭ್ಯರ್ಣೇ ಪರೇ ಪಂಪಾಸರಸ್ತಟೇ ।
ಅಭ್ಯರ್ಣಕೇಽಪಿ ಭೈರವ್ಯಾಃ ಕತಿಚಿತ್ಕೌಶಿಕೀತಟೇ ॥ ೧೫ ॥
ಅಪರೇ ಮಾಲಿನೀತೀರೇ ಪರೇ ಗಂಧವತೀ ತಟೇ ।
ಕತಿಚಿನ್ಮಾನಸೋಪಾಂತೇ ಕೇಚಿದಚ್ಛೋದರೋಧಸಿ ॥ ೧೬ ॥
ಇಂದ್ರದ್ಯುಮ್ನಸರಸ್ಯನ್ಯ ಏಕೇ ತು ಮಣಿಕರ್ಣಿಕೇ ।
ಪರೇತು ವರದಾತೀರೇ ತಾಪ್ಯಾಂ ಕತಿಚನಾಪರೇ ।
ಪಾತಾಲಗಂಗಾಸವಿಧೇ ಶರಾವತ್ಯಂತಿಕೇ ಪರೇ ॥ ೧೭ ॥
ಲೋಹಿತ್ಯಾಕೂಲಯೋಃ ಕೇಚಿತ್ಕತಿಚಿತ್ಕಾಲಿಮಾತಟೇ ।
ವಿತಸ್ತೋಪಾಂತಿಕೇ ತ್ವನ್ಯೇ ಚಂದ್ರಭಾಗಾಂತಿಕೇ ಪರೇ ॥ ೧೮ ॥
ಸುರಲೋಪಾಂತಿಕೇ ಕೇಚಿತ್ಪಯೋಷ್ಣೀ ತೀರಯೋಃ ಪರೇ ।
ಕೇಚಿನ್ಮಧುಮತೀತೀರೇ ಕೇಚನಾನುಪಿನಾಕಿನೀಂ ॥ ೧೯ ॥
ಉಕ್ತಂ ವಾರಣಸೀಕ್ಷೇತ್ರಂ ಕ್ರೋಶಪಂಚಕಪಾವನಂ ।
ದೇವಸ್ತತ್ರಾವಿಮುಕ್ತಾಖ್ಯೋ ವಿಶಾಲಾಕ್ಷ್ಯಾ ಸಮರ್ಚಿತಃ ॥ ೨೦ ॥
ಕಪಾಲಮೋಚನಂ ಯತ್ರ ಯತ್ರಾಸ್ತೇ ಕಾಲಭೈರವಃ ।
ಮೃತಾನಾಂ ಯತ್ರ ರುದ್ರತ್ವಂ ಕಾಶೀಂ ವಿದ್ಧಿ ಹಿತಾಂ ಮುನೇ ॥ ೨೧ ॥

---

ವಿಪಾಶೆ, ಶತಧೃತಿ, ಚರ್ಮಣ್ವತಿ, ಭೀಮರಥೀ ನದಿಗಳ ತೀರದಲ್ಲಿ ಕೆಲವರೂ ನೆಲಸಿರುವರು. ಕೆಲವರು ಬಿಂದುಸರಸ್ತೀರದಲ್ಲಿಯೂ, ಪಂಪಾಸರಸ್ತೀರದಲ್ಲಿಯೂ, ಭೈರವೀ, ಕೌಶಿಕೀ ನದಿಗಳ ತೀರದಲ್ಲಿಯೂ ವಾಸವಾಗಿರುವರು. ಮಾಲಿನೀ, ಗಂಧವತೀ, ಮಾನಸಸರಸ್ಸು, ಅಚ್ಛೋದ, ಇಂದ್ರದ್ಯುಮ್ನ, ಮಣಿಕರ್ಣಿಕಾ, ವರದಾ, ತಾಪೀ, ಪಾತಾಲಗಂಗಾ, ಶರಾವತೀ ಮುಂತಾದುವುಗಳ ತೀರಭೂಮಿಗಳಲ್ಲಿ ಕೆಲವು ಮಂದಿ ಮಹರ್ಷಿಗಳು ವಾಸವಾಗಿರುವರು. ಕೆಲವರು ಲೋಹಿತ್ಯೆ, ಕಾಲಿಮೆ, ವಿತಸ್ತಾ, ಚಂದ್ರಭಾಗೆ, ಸುರಲಾ, ಪಯೋಷ್ಣಿ, ಮಧುಮತಿ, ಪಿನಾಕಿನಿ ಮುಂತಾದ ನದೀ ತೀರಗಳಲ್ಲಿ ವಾಸವಾಗಿರುವರು.

೨೦–೨೧. ಐದುಕ್ರೋಶಗಳ ವಿಸ್ತೀರ್ಣ ಪ್ರದೇಶವುಳ್ಳ ಪರಮಪಾವನವಾದ ಕಾಶೀಕ್ಷೇತ್ರವನ್ನೂ ನಿನಗೆ ಹೇಳಿರುವೆನು. ಅಲ್ಲಿ ಪರಮೇಶ್ವರನು ಅವಿಮುಕ್ತೇಶ್ವರನೆಂದು ಹೆಸರುಗೊಂಡು ಜಗದಂಬೆಯಾದ ವಿಶಾಲಾಕ್ಷಿಯೊಡನೆ ಪೂಜೆಗೊಳ್ಳುತ್ತಿರುವನು. ಕಾಶೀಕ್ಷೇತ್ರದಲ್ಲಿಯೇ ಬ್ರಹ್ಮನ ಕಪಾಲಮೋಚನವಾಯಿತು. ಅಲ್ಲಿ ಕಾಲಭೈರವನು ಪ್ರತ್ಯಕ್ಷನಾಗಿರುವನು. ಈ ಕ್ಷೇತ್ರದಲ್ಲಿ ಮರಣವನ್ನು ಹೊಂದುವವರೆಲ್ಲರೂ ರುದ್ರತ್ವವನ್ನು ಹೊಂದುವರು.

ಗಯಾಪ್ರಯಾಗಾವಪಿ ತೇ ಕಥಿತೌ ಸರ್ವಸಿದ್ಧಿದೌ ।
ಯತ್ರಪಿಂಡಪ್ರದಾನೇನ ತುಷ್ಯಂತಿ ಪಿತರಃ ಕಿಲ ॥ ೨೨ ॥
ಆಕರ್ಣಿತಂ ಚ ಕೇದಾರಂ ಯಸ್ಮಿನ್ಮಹಿಷರೂಪಧೃಕ್ ।
ದೇವೋಽಪಿ ಚ ಹತೋ ದೇವ್ಯಾ ಸರ್ವಶ್ರೇಯಸ್ಕರೋ ನೃಣಾಂ ॥ ೨೩ ॥
ಸರ್ವಸಿದ್ಧಿಕರಂ ಪುಂಸಾಂ ಕ್ಷೇತ್ರಂ ಬದರಿಕಾಶ್ರಮಂ ।
ಯತ್ರಾಸ್ತೇ ತ್ರ್ಯಂಬಕೋ ದೇವ್ಯಾ ನರನಾರಾಯಣಾರ್ಚಿತಃ ॥ ೨೪ ॥
ಶ್ರುತಂ ಹಿ ನೈಮಿಷಂ ಕ್ಷೇತ್ರಂ ತ್ವಯಾ ಯತ್ರ ಮಹೇಶ್ವರಃ ।
ದೇವದೇವಾಭಿಧಃ ಪುಣ್ಯೋ ದೇವೀ ಸಾರಂಗಧಾರಿಣೀ ॥ ೨೫ ॥
ಅಮರೇಶಮಿತಿ ಸ್ಥಾನಂ ಪ್ರೋಕ್ತಂ ಸರ್ವಾರ್ಥಸಾಧಕಂ ।
ಓಂಕಾರನಾಮಾ ತತ್ರೇಶಶ್ಚಂಡಿಕಾಖ್ಯಾ ಮಹೇಶ್ವರೀ ॥ ೨೬ ॥
ಪುಷ್ಕರಾಖ್ಯಂ ಮಹಾಸ್ಥಾನಂ ಶ್ರುತಂ ತೇ ಕಥಿತಂ ಮಯಾ ।
ಯತ್ರ ದೇವೋ ರಜೋಗಂಧಿಃ ಪುರುಹೂತಾ ಮಹೇಶ್ವರೀ ॥ ೨೭ ॥

---

೨೨. ಸಕಲ ಅಭೀಷ್ಟಗಳನ್ನೂ ನೆರವೇರಿಸುವ ಗಯಾಪ್ರಯಾಗಗಳನ್ನೂ ನಿನಗೆ ಹೇಳಿರುವೆನು. ಅಲ್ಲಿ ಪಿಂಡಪ್ರದಾನಮಾಡುವುದರಿಂದ ಪಿತೃಗಳಿಗೆ ಪರಮಪ್ರೀತಿಯುಂಟಾಗುವುದು.

೨೩. ಮಹಿಷರೂಪವನ್ನು ಧರಿಸಿ ಅಸುರತ್ವವನ್ನು ಹೊಂದಿದ ದೇವತೆಯು ಪಾರ್ವತಿಯಿಂದ ಹತನಾದ ಪವಿತ್ರಕ್ಷೇತ್ರವೆನಿಸಿದ ಕೇದಾರವನ್ನೂ ನೀನು ಕೇಳಿರುವೆ.

೨೪. ಮಹೇಶ್ವರನು ಗೌರೀಸಮೇತನಾಗಿ ನೆಲಸಿ ನರನಾರಾಯಣರಿಂದ ಪೂಜೆಗೊಳ್ಳುತ್ತಿರುವ ಪವಿತ್ರವಾದ ಬದರಿಕಾಶ್ರಮವು ಜನರಿಗೆ ಸರ್ವಾಭೀಷ್ಟ ಗಳನ್ನೂ ಉಂಟುಮಾಡುವುದು.

೨೫. ಮಹಾದೇವನು ದೇವದೇವನೆಂದು ಹೆಸರುಗೊಂಡು ಸಾರಂಗಧರೆ ಯೆಂದು ಹೆಸರಾದ ಜಗನ್ಮಾತೆಯೊಡನೆ ನೆಲಸಿರತಕ್ಕ ನೈಮಿಷಾರಣ್ಯವನ್ನೂ ನಿನಗೆ ತಿಳಿಸಿರುವೆನು.

೨೬. ಸರ್ವಾರ್ಥದಾಯಕವಾದ ಅಮರೇಶ್ವರಕ್ಷೇತ್ರದ ಮಾಹಾತ್ಮ್ಯೆಯೂ ನಿನಗೆ ಹೇಳಲ್ಪಟ್ಟಿರುವುದು. ಅಲ್ಲಿ ರುದ್ರನು ಓಂಕಾರೇಶ್ವರನೆಂದೂ ಗಿರಿಜೆಯು ಚಂಡಿಕೆಯೆಂದೂ ಪ್ರಸಿದ್ಧರಾಗಿರುವರು.

೨೭. ಪರಮಪಾವನವಾದ ಪುಷ್ಕರಕ್ಷೇತ್ರದಲ್ಲಿ ರಜೋಗಂಧಿಯೆಂಬ ಈಶ್ವರನ ರೂಪವೂ ಪುರುಹೂತೆಯೆಂಬ ಪಾರ್ವತಿಯ ರೂಪವೂ ಇವೆಯೆಂಬು ದನ್ನು ನೀನು ಕೇಳಿರುವೆ.

ಆಷಾಢೀ ನಾಮ ತೇ ಸ್ಥಾನಂ ಪಾವನಂ ಕಥಿತಂ ಮಯಾ ।
ಆಷಾಢೇಶೋ ಹರಸ್ತತ್ರ ರತೀಶಾ ಪರಮೇಶ್ವರೀ ॥ ೨೮ ॥
ದಂಡಿಮುಂಡೀ ಸಮಾಖ್ಯಂಚ ಸ್ಥಾನಂ ತೇ ಕಥಿತಂ ಮಯಾ ।
ಯತ್ರ ಮುಂಡೀ ಮಹಾದೇವೋ ದಂಡಿಕಾ ಪರಮೇಶ್ವರೀ ॥ ೨೯ ॥
ಲಾಕುಲಂ ನಾಮ ತೇ ಸ್ಥಾನಂ ಸಂಶುದ್ಧಂ ಕಥಿತಂ ಮಯಾ ।
ಲಾಕುಲೀಶೋ ಹರೋ ಯಸ್ಮಿನ್ನನಂಗಾ ಸರ್ವಮಂಗಳಾ ॥ ೩೦ ॥
ಭಾರಭೂತಿರಿತಿ ಸ್ಥಾನಂ ಭವತೋಽಭಿಹಿತಂ ಮಯಾ ।
ಯತ್ರ ಭಾರಾಭಿದಶ್ಶಂಭುರ್ಭೂತಾಖ್ಯಾ ಭೂಧರಾತ್ಮಜಾ ॥ ೩೧ ॥
ಅರಾಳಕೇಶ್ವರಂ ನಾಮ ಸ್ಥಾನಂ ತೇ ಕಥಿತಂ ಮಯಾ ।
ಯತ್ರಸೂಕ್ಷ್ಮಾಭಿದಶ್ಶೂಲೀ ಸೂಕ್ಷ್ಮಾಖ್ಯಾ ಶೈಲನಂದಿನೀ ॥ ೩೨ ॥
ಗಯಾ ನಾಮ ಮಹಾಕ್ಷೇತ್ರಂ ತವ ಪ್ರಸ್ತಾವಿತಂ ಮಯಾ ।
ಮಂಗಳಾಖ್ಯಾ ಶಿವಾ ತತ್ರ ಶಂಕರಃ ಪ್ರಪಿತಾಮಹಃ ॥ ೩೩ ॥
ಕುರುಕ್ಷೇತ್ರಮಿತಿಸ್ಥಾನಂ ಭವತೇ ವಿನಿವೇದಿತಂ ।
ಯತ್ರ ಸ್ಥಾಣುಪ್ರಿಯಾ ದೇವೀ ದೇವಃ ಸ್ಥಾಣುಸಮಾಹ್ವಯಃ ॥ ೩೪ ॥

---

೨೮. ಆಷಾಢೀಕ್ಷೇತ್ರವೆಂಬ ಪವಿತ್ರವಾದ ಕ್ಷೇತ್ರವನ್ನು ನಿನಗೆ ತಿಳಿಸಿರುವೆನಷ್ಟೆ. ಅಲ್ಲಿ ಈಶ್ವರನು ಆಷಾಢೇಶ್ವರನೂ, ಪಾರ್ವತಿಯು ರತೀಶ್ವರಿಯೂ ಆಗಿರುವರು.

೨೯. ನಿನಗೆ ತಿಳಿಸಿರುವ ದಂಡಿ ಮುಂಡಿಯೆಂಬ ಕ್ಷೇತ್ರದಲ್ಲಿ ಮಹಾದೇವನು ಮುಂಡೀಶ್ವರನೂ ದೇವಿಯು ದಂಡಿಕೆಯೂ ಆಗಿರುವರು.

೩೦. ಲಾಕುಲವೆಂಬ ಪರಿಶುದ್ಧವಾದ ಸ್ಥಾನದಲ್ಲಿ ಶಿವನು ಲಾಕುಲೀಶನೆಂದೂ ಗಿರಿಜೆಯು ಅನಂಗಳೆಂದೂ ಪ್ರಸಿದ್ಧರಾಗಿರುವರು.

೩೧. ಭಾರಭೂತಿಯೆಂಬ ಸ್ಥಳವನ್ನು ನಿನಗೆ ನಿರೂಪಿಸಿದೆನು. ಅಲ್ಲಿ ಶಂಭುವು ಭಾರೇಶ್ವರನೆಂದೂ ಅದ್ರಿಜೆಯು ಭೂತಿಯೆಂದೂ ನೆಲೆಗೊಂಡಿರುವರು.

೩೨. ಅರಾಳಕೇಶ್ವರವೆಂಬ ಸ್ಥಾನದಲ್ಲಿ ಶಿವನು ಸೂಕ್ಷ್ಮೇಶ್ವರನೆಂದೂ ಅಂಬಿಕೆಯು ಸೂಕ್ಷ್ಮಳೆಂದೂ ಕರೆಯಲ್ಪಡುವರು.

೩೩. ಗಯೆಯೆಂಬ ಮಹಾಕ್ಷೇತ್ರವನ್ನು ಕುರಿತು ಪ್ರಸ್ತಾಪಿಸಿದೆನು. ಅಲ್ಲಿ ಪಾರ್ವತಿಯು ಮಂಗಳೆಯೆಂದೂ ಪರಮೇಶ್ವರನು ಶಂಕರನೆಂದೂ ಪ್ರಸಿದ್ಧಿಗೊಂಡಿರುವರು.

೩೪. ಕುರುಕ್ಷೇತ್ರವೆಂಬ ಪ್ರದೇಶದಲ್ಲಿ ಪಾರ್ವತಿಯು ಸ್ಥಾಣುಪ್ರಿಯೆಯೆಂದೂ ಈಶ್ವರನು ಸ್ಥಾಣುವೆಂದೂ ಕರೆಯಲ್ಪಡುವರು.

ಉಕ್ತಂ ಕನಖಲಂ ನಾಮ ಮಯಾತೇ ಸ್ಥಾನಮುತ್ತಮಂ ।
ಉಗ್ರೋ ಯತ್ರ ಪುರಾರಾತಿರುಗ್ರಾ ಗಿರಿವರಾತ್ಮಜಾ ॥ ೩೫ ॥
ತಾಲಕಾಖ್ಯಂ ಮಹಾಕ್ಷೇತ್ರಂ ಮಾರ್ಕಂಡೇಯ ಮಯೋದಿತಂ ।
ದೇವೀ ಸ್ವಾಯಂಭುವೀ ಯತ್ರ ಸ್ವಯಂಭೂಃ ಪರಮೇಶ್ವರಃ ॥ ೩೬ ॥
ಅಟ್ಟಹಾಸಮಿತಿ ಪ್ರೋಕ್ತಂ ಮಹಾಸ್ಥಾನಂ ಮಯಾ ತವ ।
ಯತ್ರಾರ್ಕಃ ಪೂಜಯಿತ್ವೇಶಮಾಸೀತ್ಪೂರ್ಣಮನೋರಥಃ ॥ ೩೭ ॥
ಕೃತ್ತಿವಾಸಾಭಿದಂ ಕ್ಷೇತ್ರಮುಕ್ತಂ ತೇ ವೇದವಿತ್ತಮ ।
ಯಃ ಕೈಲಾಸಾದಪಿ ಶ್ಲಾಘ್ಯೋ ನಿವಾಸಃ ಕೃತ್ತಿವಾಸಸಃ ॥ ೩೮ ॥
ಭ್ರಮರಾಂಬಿಕಯಾ ದೇವ್ಯಾ ಮಹೇಶೋ ಮಲ್ಲಿಕಾರ್ಜುನಃ ।
ಶ್ರೀಶೈಲೇ ಸೃಷ್ಟಿಸಿದ್ಧ್ಯರ್ಥಂ ಪೂಜಿತಃ ಪರಮೇಷ್ಠಿನಾ ॥ ೩೯ ॥
ಸುವರ್ಣಮುಖರೀ ತೀರೇ ಕಾಳಹಸ್ತೀತಿ ಶಂಕರಃ ।
ವ್ಯಾಸೇನಾರಾಧಿತೋ ಭೃಂಗಮುಖರಾಲಕಯಾಂಬಯಾ ॥ ೪೦ ॥
ಕಾಂಚ್ಯಾಮೇಕಾಮ್ರಮೂಲಸ್ಥಃ ಕಾಮಾಕ್ಷ್ಯಾ ಕಾಮಶಾಸನಃ ।
ತಪಸ್ಯಂತ್ಯಾಭಿಸಂಶ್ಲಿಷ್ಟೋ ವಲಯೇನಾಂಕಿತೋಽಭವತ್ ॥ ೪೧ ॥

---

೩೫. ಕನಖಲವೆಂಬ ಉತ್ತಮವಾದ ಕ್ಷೇತ್ರದಲ್ಲಿ ದೇವನು ಉಗ್ರನೆಂದೂ ದೇವಿಯು ಉಗ್ರೆಯೆಂದೂ ಕರೆಯಲ್ಪಡುವರು.

೩೬. ಎಲೈ ಮಾರ್ಕಂಡೇಯನೆ! ನಿನಗೆ ತಾಲಕಾಖ್ಯಕ್ಷೇತ್ರವುಂಟೆಂಬುದನ್ನು ಹೇಳಿದೆನಲ್ಲವೆ! ಅಲ್ಲಿ ದೇವಿಯು ಸ್ವಾಯಂಭುವಿಯೆಂದೂ ಮಹೇಶ್ವರನು ಸ್ವಯಂಭುವೆಂದೂ ಪ್ರಸಿದ್ಧರಾಗಿರುವರು.

೩೭. ಹಿಂದೆ ನಿನಗೆ ತಿಳಿಸಿದ ಅಟ್ಟಹಾಸವೆಂಬ ಮಹಾಕ್ಷೇತ್ರದಲ್ಲಿ ಸೂರ್ಯನು ಮಹಾದೇವನನ್ನು ಪೂಜಿಸಿ ಇಷ್ಟಾರ್ಥಗಳನ್ನು ಪಡೆದನು.

೩೮. ಕೃತ್ತಿವಾಸಕ್ಷೇತ್ರವೆಂಬುದು ಮಹೇಶ್ವರನಿಗೆ ಕೈಲಾಸಪರ್ವತಕ್ಕಿಂತಲೂ ಪ್ರಿಯತರವಾದ ವಾಸಸ್ಥಾನವಾಗಿರುವುದು.

೩೯. ಶ್ರೀಶೈಲದಲ್ಲಿ ಮಲ್ಲಿಕಾರ್ಜುನನೆಂಬ ಹೆಸರಿನಿಂದ ಮಹಾದೇವನು ಭ್ರಮರಾಂಬಾನಾಮಕಳಾದ ಪಾರ್ವತಿಯೊಡನೆ ನೆಲಸಿರುವನು. ಅಲ್ಲಿಯೇ ಆತನನ್ನು ಸೃಷ್ಟಿಕಾರ್ಯದ ನಿರ್ವಿಘ್ನಸಿದ್ಧಿಗಾಗಿ ಬ್ರಹ್ಮನು ಪೂಜೆಮಾಡಿದನು.

೪೦–೪೧. ಸುವರ್ಣಮುಖರೀ ನದಿಯ ತೀರದಲ್ಲಿ ಭೃಂಗಮುಖರಾಲಕೆಯೆಂಬ ನಾಯಕಿಯೊಡನೆ ಕಾಳಹಸ್ತೀಶ್ವರನೆಂಬ ರೂಪದಿಂದ ಶಿವನು ವ್ಯಾಸಮಹರ್ಷಿಯಿಂದ ಪೂಜಿಸಲ್ಪಟ್ಟನು. ಕಾಂಚೀಕ್ಷೇತ್ರದಲ್ಲಿ ಆಮ್ರವೃಕ್ಷದಲ್ಲಿ ಮಹೇಶ್ವರನು ತಪೋನಿರತಳಾದ ಕಾಮಾಕ್ಷಿಯೆಂಬ ಪಾರ್ವತಿಯಿಂದ ಆಲಿಂಗಿತನಾಗಿ ಆಕೆಯ ಕಟಿವಲಯದಿಂದ ಚಿಹ್ನಿತನಾದನು.

ಅಸ್ತಿ ವ್ಯಾಘ್ರಪುರಂನಾಮ ತಿಲ್ಲಿಕಾನನಮಧ್ಯಗಂ ।
ಯತ್ರ ನೃತ್ಯಂತಮೀಶಾನಂ ಪರ್ಯುಪಾಸ್ತೇ ಪತಂಜಲಿಃ ॥ ೪೨ ॥
ಶ್ವೇತಾರಣ್ಯಮಿತಿ ಸ್ಥಾನಮುಕ್ತಂ ತವ ಮಯಾ ಪುರಾ ।
ಭಗ್ನಮೈರಾವತೋ ದಂತಂ ಭೇಜೇ ಯತ್ರ ಶಿವಾರ್ಚನಾತ್ ॥ ೪೩ ॥
ಸೇತುಬಂಧಮಿತಿ ಸ್ಥಾನಮವೋಚಂ ತತ್ರ ರಾಘವಃ ।
ರಾಮನಾಥಾಖ್ಯಯಾ ದೇವಮಂಹೋಘ್ನಂ ಪ್ರತ್ಯಪಿಷ್ಠಿಪತ್ ॥ ೪೪ ॥
ಗತಪ್ರತ್ಯಾಹ್ವಯಂ ಸ್ಥಾನಂ ವಿದ್ಯತೇ ವೃಷಭಧ್ವಜಃ ।
ಯತ್ರ ಜಂಬುತರೋರ್ಮೂಲಂ ಜಗದ್ರಕ್ಷಾರ್ಥಮಾಶ್ರಿತಃ ॥ ೪೫ ॥
ಮಣಿಮುಕ್ತಾನದೀಮಸ್ಯಕ್ಷೇತ್ರೇ ವೃದ್ಧಾಚಲಾಹ್ವಯೇ ।
ನಿತ್ಯಂ ಸನ್ನಿಹಿತೋ ದೇವ ಇತ್ಯಾಕರ್ಣಿತ ಏವ ತೇ ॥ ೪೬ ॥
ಶ್ರೀಮನ್ಮಧ್ಯಾರ್ಜುನಂನಾಮ ಶ್ರುತಂ ಸ್ಥಾನಮನುತ್ತಮಂ ।
ಯಸ್ಮಿನ್ ವರಪ್ರದೋ ನಿತ್ಯಂ ಗೌರೀಸಹಚರೋ ಹರಃ ॥ ೪೭ ॥
ಆಸ್ಥಿತಂ ಸೋಮನಾಥೇನ ಸೋಮತೀರ್ಥಂ ತ್ವಯಾ ಶ್ರುತಂ ।
ಯತ್ರ ತ್ಯಕ್ತವತಾಂ ದೇಹಂ ನ ಭೂಯೋ ಭವಬಂಧನಂ ॥ ೪೮ ॥

---

೪೨. ತಿಲ್ಲಿವನದ ಮಧ್ಯದಲ್ಲಿ ವ್ಯಾಘ್ರಪುರವೆಂಬ ಕ್ಷೇತ್ರವಿರುವುದು. ಅಲ್ಲಿರುವ ನಟರಾಜಸ್ವಾಮಿಯನ್ನು ಪತಂಜಲಿಮಹರ್ಷಿಯು ಉಪಾಸನೆಮಾಡುತ್ತಿರುವನು.

೪೩. ಶ್ವೇತಾರಣ್ಯವೆಂಬ ಪುಣ್ಯಕ್ಷೇತ್ರದಲ್ಲಿ ದಂತವನ್ನು ಕಳೆದುಕೊಂಡ ಐರಾವತವು ಶಿವಪೂಜೆಯನ್ನು ಮಾಡಿ ಅದನ್ನು ಮರಳಿ ಹೊಂದಿತು.

೪೪. ಸೇತುಬಂಧಕ್ಷೇತ್ರದಲ್ಲಿ ಶ್ರೀರಾಮನು ಪಾಪನಾಶಕನಾದ ಪರಮಶಿವನನ್ನು ರಾಮನಾಥನೆಂಬ ಹೆಸರಿನಿಂದ ಪ್ರತಿಷ್ಠೆಮಾಡಿದನು.

೪೫. ಗತಪ್ರತಿಯೆಂದು ಪ್ರಖ್ಯಾತವಾದ ಕ್ಷೇತ್ರದಲ್ಲಿ ವೃಷಭವಾಹನನು ಲೋಕರಕ್ಷಾರ್ಥವಾಗಿ ಜಂಬೂವೃಕ್ಷದ ಮೂಲವನ್ನಾಶ್ರಯಿಸಿರುವನು.

೪೬. ಮಣಿಮುಕ್ತಾನದಿಯ ತೀರದಲ್ಲಿರುವ ವೃದ್ಧಾಚಲವೆಂಬ ಕ್ಷೇತ್ರದಲ್ಲಿ ಮಹಾದೇವನು ಸದಾ ಸನ್ನಿಹಿತನಾಗಿರುವನೆಂಬುದನ್ನು ನೀನು ಕೇಳಿಯೇ ಇರುವೆ.

೪೭. ವರಪ್ರದನಾದ ಈಶ್ವರನು ನಿತ್ಯವೂ ಗೌರೀಸಮೇತನಾಗಿ ನೆಲಸಿರುವ ಮಧ್ಯಾರ್ಜನವೆಂಬ ಉತ್ತಮವಾದ ಕ್ಷೇತ್ರವನ್ನು ನೀನು ತಿಳಿದಿರುವೆ.

೪೮. ಸೋಮನಾಥೇಶ್ವರನಿಂದ ರಕ್ಷಿತವಾದ ಸೋಮತೀರ್ಥದಲ್ಲಿ ದೇಹತ್ಯಾಗಮಾಡುವವರಿಗೆ ಮತ್ತೆ ಭವಬಂಧನವಿರುವುದಿಲ್ಲ.

ಆಕರ್ಣಿತಂ ಹಿ ಭವತಾ ಕ್ಷೇತ್ರಂ ಸಿದ್ಧವಟಾಹ್ವಯಂ ।
ಯತ್ರ ಸಿದ್ಧಾಃ ಸಮರ್ಚಂತಿ ಜ್ಯೋತಿರ್ಲಿಂಗಮನುತ್ತಮಂ ॥ ೪೯ ॥
ಅಶ್ರಾವಿ ಖಲು ತೇ ಕ್ಷೇತ್ರಂ ಕಮಲಾಲಯಸಂಜ್ಞಕಂ ।
ವಲ್ಮೀಕೇಶಾರ್ಚನಾಲ್ಲೇಭೇ ಯತ್ರ ಶ್ರೀರ್ಜೀವಿತಾ ಹರೇಃ ॥ ೫೦ ॥
ಶ್ರುತವಾನಸಿ ಕಂಕಾದ್ರಿಂ ಯತ್ರ ಸನ್ನಿಹಿತಂ ಹರಂ ।
ಇದಾನೀಮಪ್ಯುಪಾಸಾತೇ ಮೋಕ್ಷಾಯ ಬ್ರಹ್ಮಕೇಶವೌ ॥ ೫೧ ॥
ಶ್ರೀಮದ್ದ್ರೋಣಪುರಂ ವೇತ್ಸಿ ಯಸ್ಮಿನ್ಕಲಿಯುಗಕ್ಷಯೇ ।
ನೌಕಾಮಾರೂಢವಾನಬ್ಧೌ ಕ್ಷುಭಿತೇ ಪಾರ್ವತೀಪತಿಃ ॥ ೫೨ ॥
ಶ್ರುತಂ ಬ್ರಹ್ಮಪುರಂ ನಾಮ ಕ್ಷೇತ್ರಂ ಯತ್ರೇಂದ್ರಜಿತ್ಪುರಾ ।
ಆರ್ಯಪುಷ್ಕರಿಣೀತೀರೇ ಸ್ಥಾಪಯಾಮಾಸ ಧೂರ್ಜಟಿಂ ॥ ೫೩ ॥
ಶ್ರೀಕೋಟಿಕಾಖ್ಯಂ ಜ್ಞಾನಾಭಿಕ್ಷೇತ್ರಂ ಯತ್ರೇಂದುಶೇಖರಃ ।
ಸಮಾರಾಧಯತಾಂ ಪುಂಸಾಂ ಪಾಪಕೋಟೀರ್ವ್ಯಪೋಹತಿ ॥ ೫೪ ॥
ಆಕರ್ಣಿತಂ ಚ ಗೋಕರ್ಣಂ ಶಿವಂ ಯತ್ಸನ್ನಿಧಾನತಃ ।
ಆರಿರಾಧಯಿಷುಃ ಸ್ವರ್ಗಂ ಜಾಮದಗ್ನ್ಯೋ ನ ಕಾಂಕ್ಷತಿ ॥ ೫೫ ॥

---

೪೯. ಸಿದ್ಧವಟವೆಂಬ ಕ್ಷೇತ್ರವನ್ನು ಕೇಳಿರುವೆಯಲ್ಲವೆ. ಅಲ್ಲಿ ಸಿದ್ಧರು ಸರ್ವಕಾಲದಲ್ಲಿಯೂ ಉತ್ತಮವಾದ ಜ್ಯೋತಿರ್ಲಿಂಗವನ್ನು ಅರ್ಚಿಸುತ್ತಿರುವರು.

೫೦. ಕಮಲಾಲಯವೆಂಬ ಅತ್ಯುತ್ತಮವಾದ ಕ್ಷೇತ್ರವು ನಿನ್ನ ಕಿವಿಗೆ ಬಿದ್ದಿರುವುದಲ್ಲವೆ. ಅಲ್ಲಿರುವ ವಲ್ಮೀಕೇಶ್ವರನ ಪೂಜೆಯಿಂದ ಮಹಾಲಕ್ಷ್ಮಿಯು ವಿಷ್ಣುವನ್ನು ಪತಿಯನ್ನಾಗಿ ಪಡೆದಳು.

೫೧. ಕಂಕಾದ್ರಿಯೆಂಬ ಕ್ಷೇತ್ರದಲ್ಲಿ ಸನ್ನಿಹಿತನಾದ ಪರಮೇಶ್ವರನನ್ನು ಇಂದಿಗೂ ಕೂಡ ಬ್ರಹ್ಮವಿಷ್ಣುಗಳು ಮೋಕ್ಷಲಾಭಕ್ಕಾಗಿ ಉಪಾಸಿಸುತ್ತಿರುವರು.

೫೨. ದ್ರೋಣಪುರವೆಂಬ ಕ್ಷೇತ್ರವನ್ನು ನೀನು ಬಲ್ಲೆ. ಹಿಂದಿನ ಪ್ರಳಯ ಕಾಲದಲ್ಲಿ ಸಮುದ್ರವು ಕ್ಷೋಭಗೊಳ್ಳಲು ಪರಮೇಶ್ವರನು ಇಲ್ಲಿ ದೋಣಿಯನ್ನು ಹತ್ತಿದನು.

೫೩–೫೪. ಪೂರ್ವದಲ್ಲಿ ನಿನಗೆ ತಿಳಿಸಿದ ಬ್ರಹ್ಮಪುರವೆಂಬ ಕ್ಷೇತ್ರದಲ್ಲಿ ಇಂದ್ರಜಿತುವು ಆರ್ಯಪುಷ್ಕರಿಣಿಯ ತೀರದಲ್ಲಿ ಶಿವಲಿಂಗವನ್ನು ಪ್ರತಿಷ್ಠೆ ಮಾಡಿದನು. ಶ್ರೀಕೋಟಿಯೆಂಬ ಜ್ಞಾನದಾಯಕವಾದ ಕ್ಷೇತ್ರದಲ್ಲಿ ತನ್ನನ್ನು ಪೂಜಿಸುವ ಭಕ್ತರ ಪಾಪಕೋಟಿಗಳನ್ನು ಚಂದ್ರಶೇಖರನು ನಾಶಮಾಡುವನು.

೫೫. ಶುಭದಾಯಕವಾದ ಗೋಕರ್ಣವನ್ನು ನೀನು ಕೇಳಿರುವೆ. ಪರಶುರಾಮನು ಆ ಕ್ಷೇತ್ರದಲ್ಲಿ ಶಿವನನ್ನು ಪೂಜೆಮಾಡುವವನಾಗಿ ಸ್ವರ್ಗವನ್ನೂ ಅಪೇಕ್ಷಿಸದಿರುವನು.

ತ್ರಿಪುರಾಂತಕಮುಕ್ತಂ ತೇ ಕ್ಷೇತ್ರಂ ಯತ್ರ ತ್ರಿಯಂಬಕಃ ।
ನಿರಾಕರೋತಿ ನಿರಯಾದ್ಭಯಂ ದೃಷ್ಟವತಾಂ ನೃಣಾಂ ॥ ೫೬ ॥
ಉಕ್ತಂ ಕಾಲಾಂಜನಂ ಕ್ಷೇತ್ರಂ ಯದ್ವಾಸೀ ಕಾಲಕಂಧರಃ ।
ನಿರ್ವಾಪಯತಿ ಭಕ್ತಾನಾಂ ಘೋರಸಂಸಾರಸಂಜ್ವರಂ ॥ ೫೭ ॥
ಪ್ರಿಯಾಲವಣಮಾಖ್ಯಾತಂ ಕ್ಷೇತ್ರಂ ಯತ್ರಾಂಬಿಕಾಪತಿಃ ।
ಪಯೋಽರ್ಥಿನೇ ಪಯಃ ಸಿಂಧುಂ ವಿತತಾರೋಪಮನ್ಯವೇ ॥ ೫೮ ॥
ಕ್ಷೇತ್ರಂ ಪ್ರಭಾಸಮುಕ್ತಂ ತೇ ಯತ್ರ ಖಂಡೇಂದುಶೇಖರಃ ।
ಪೂಜಿತಃ ಶೌರಿಸೀರಿಭ್ಯಾಂ ದತ್ತವಾನಕ್ಷಯಂ ಫಲಂ ॥ ೫೯ ॥
ವೇದಾರಣ್ಯಂ ವಿಜಾನೀಷೇ ಯಸ್ಮಿನ್ಪ್ರಮಥನಾಯಕಃ ।
ಅಭ್ಯರ್ಥಿತೋಽಭೂನ್ಮೋಕ್ಷಾರ್ಥಂ ದಕ್ಷೇಣ ಪ್ರಾಕ್ಕೃತಾಗಸಾ ॥ ೬೦ ॥
ಹೇಮಕೂಟಂ ತ್ವಮಶ್ರೌಷೀಃ ಸ್ಥಾನಂ ವಿಷಮಚಕ್ಷುಷಃ ।
ಪುಂಸಾಂ ತಪಸ್ಯತಾಂ ಯತ್ರ ಪುನರ್ಜನನತೋ ನ ಭೀಃ ॥ ೬೧ ॥
ಕ್ಷೇತ್ರಂ ವೇಣುವನಂ ನಾಮ ವಿದ್ಯತೇ ಪಾಪನಾಶನಂ ।
ಯತ್ರ ವಂಶಲತಾಗರ್ಭಾಜ್ಜಾತೋ ಮುಕ್ತಾಮಣಿಃ ಶಿವಃ ॥ ೬೨ ॥

---

೫೬. ತ್ರಿಪುರಾಂತಕಕ್ಷೇತ್ರದಲ್ಲಿ ಈಶ್ವರನನ್ನು ದರ್ಶನಮಾಡುವವರ ನರಕ ಭಯವನ್ನು ತ್ರಿಣೇತ್ರನು ದೂರಮಾಡುವನು.

೫೭. ಕಾಲಾಂಜನವೆಂಬ ಕ್ಷೇತ್ರದಲ್ಲಿ ನೀಲಕಂಠನು ತನ್ನ ಭಕ್ತರ ಸಂಸಾರವೆಂಬ ಘೋರಜ್ವರಕ್ಕೆ ಚಿಕಿತ್ಸೆಮಾಡುವನು.

೫೮. ಪ್ರಿಯಾಲವಣವೆಂಬ ಕ್ಷೇತ್ರದಲ್ಲಿ ಪಾರ್ವತೀಸಹಿತನಾದ ಪರಮೇಶ್ವರನು ಹಾಲನ್ನೆಳಸಿದ ಉಪಮನ್ಯುವಿಗಾಗಿ ಹಾಲಿನ ಕೊಳವನ್ನು ಸೃಷ್ಟಿಸಿದನು.

೫೯. ಪ್ರಭಾಸವೆಂಬ ಸ್ಥಳದಲ್ಲಿ ಕೃಷ್ಣಬಲರಾಮರಿಂದ ಪೂಜಿತನಾಗಿ ಪರಮೇಶ್ವರನು ಅವರಿಗೆ ಅಕ್ಷಯ ಫಲವನ್ನು ಕೊಟ್ಟನು.

೬೦. ಪೂರ್ವದಲ್ಲಿ ವೇದಾರಣ್ಯ ಕ್ಷೇತ್ರದಲ್ಲಿ ಶಿವದ್ರೋಹವನ್ನೆಸಗಿದ ದಕ್ಷನು ಶಿವನ ಪೂಜೆಯನ್ನು ಮಾಡಿ ಮೋಕ್ಷವನ್ನು ಸಂಪಾದಿಸಿದನು.

೬೧. ಹೇಮಕೂಟವೆಂಬ ಸ್ಥಾನವನ್ನು ಕೇಳಿರುವೆ. ಅಲ್ಲಿ ತ್ರಿಣೇತ್ರನ ಸನ್ನಿಧಿಯಲ್ಲಿ ತಪಸ್ಸನ್ನು ಮಾಡುವ ಭಕ್ತರಿಗೆ ಪುನರ್ಜನ್ಮದ ಭಯವಿರುವುದಿಲ್ಲ.

೬೨. ಪಾಪಕ್ಷಯಕಾರಕವಾದ ವೇಣುವನವೆಂಬ ಕ್ಷೇತ್ರವಿರುವುದು. ಅಲ್ಲಿರುವ ಬಿದುರಿನ ಮೆಳೆಯಿಂದ ಮುಕ್ತಾಮಣಿಯೆಂಬ ಶಿವನು ಉದ್ಭವಿಸಿರುವನು.

ಜಾಲಂಧರಮಿತಿ ಸ್ಥಾನಮಂಧಕಾರೇಸ್ತ್ವಯಾ ಶ್ರುತಂ ।
ಲೇಭೇ ಗಾಣಪತ್ಯಾಂ ತತ್ರ ತಪಸ್ಯಾಭಿರ್ಜಲಂಧರಃ ॥ ೬೩ ॥
ಜ್ವಾಲಾಮುಖಮಿತಿ ಸ್ಥಾನಮಜ್ಞಾಸೀಃ ಕಥಿತಂ ಮಯಾ ।
ಯತ್ರ ಜ್ವಾಲಾಮುಖೀ ದೇವೀ ಕಾಲರುದ್ರಮಪೂಜಯತ್ ॥ ೬೪ ॥
ಅಸ್ತಿ ಭದ್ರವಟೋ ನಾಮ ಕ್ಷೇತ್ರಮುಕ್ತಂ ಶ್ರುತಂ ತ್ವಯಾ ।
ತ್ರ್ಯಂಬಕಂ ಯತ್ರ ಹೇರಂಬಃ ಸಂಪದೇ ಪರ್ಯಪೂಜಯತ್ ॥ ೬೫ ॥
ನ್ಯಗ್ರೋಧಾರಣ್ಯಮುಕ್ತಂ ತೇ ಯತ್ರೋಗ್ರೋ ನಿರ್ಮಮೋ ಕಿಲ ।
ಉಚ್ಚಂಡತಾಂಡವಂ ಕಾಲ್ಯಾ ಸಾಕಂ ಸಂಘರ್ಷಮೇಯಿವಾನ್ ॥ ೬೬ ॥
ಗಂಧಮಾದನಸಂಜ್ಞಂ ತತ್ಕ್ಷೇತ್ರಮಾಕರ್ಣಿತಂ ತ್ವಯಾ ।
ಆಂಜನೇಯೇನ ರಚಿತಂ ಯತ್ರ ಮೃತ್ಯುಂಜಯಾರ್ಚನಂ ॥ ೬೭ ॥
ಗೋಪರ್ವತಮಿತಿ ಸ್ಥಾನಂ ಶಂಭೋಃ ಪ್ರಖ್ಯಾಪಿತಂ ಮಯಾ ।
ಯತ್ರ ಪಾಣಿನಿನಾ ಲಬ್ಧಾ ವೈಯಾಕರಣಿಕಾಗ್ರ್ಯತಾ ॥ ೬೮ ॥
ವೀರಕೋಷ್ಠಮಿತಿ ಕ್ಷೇತ್ರಸ್ಥಾನಂ ತನ್ನವಧಾರಿತಂ ।
ಯತ್ರ ಪ್ರಚೇತಸಾ ಲಬ್ಧಾ ತಪಸಾ ಕವಿಮುಖ್ಯತಾ ॥ ೬೯ ॥

---

೬೩. ಜಾಲಂಧರವೆಂಬ ಪುಣ್ಯಕ್ಷೇತ್ರದಲ್ಲಿ ಪರಮೇಶ್ವರನನ್ನು ಕುರಿತು ತಪಸ್ಸನ್ನು ಮಾಡಿದುದರಿಂದ ಜಲಂಧರನು ಪ್ರಮಥಗಣಗಳಿಗೆ ನಾಯಕನಾದನು.

೬೪. ಜ್ವಾಲಾಮುಖವೆಂಬ ಕ್ಷೇತ್ರದಲ್ಲಿ ದೇವಿಯು ಜ್ವಾಲಾಮುಖಿಯೆಂಬ ನಾಮದಿಂದ ಶಿವನನ್ನು ಪೂಜಿಸಿದಳು.

೬೫. ಭದ್ರವಟ ಕ್ಷೇತ್ರದಲ್ಲಿ ಗಣಪತಿಯು ಐಶ್ವರ್ಯಪ್ರಾಪ್ತಿಗಾಗಿ ಶಿವನನ್ನು ಅರ್ಚಿಸಿದನು.

೬೬. ನ್ಯಗ್ರೋಧಾರಣ್ಯದಲ್ಲಿ ಸದಾಶಿವನು ಪ್ರಚಂಡ ತಾಂಡವವನ್ನು ಮಾಡುವವನಾಗಿ ಭದ್ರಕಾಳಿಯೊಡನೆ ಸಮಾಗಮವನ್ನು ಹೊಂದಿದನು.

೬೭. ಗಂಧಮಾದನ ಪರ್ವತದಲ್ಲಿ ಆಂಜನೇಯನು ಮೃತ್ಯುಂಜಯನ ಪೂಜೆಯನ್ನು ಮಾಡಿದುದನ್ನು ನಿನಗೆ ಮೊದಲೇ ತಿಳಿಸಿರುವೆನು.

೬೮. ಗೋಪರ್ವತವನ್ನು ಮೊದಲೇ ಪ್ರಸ್ತಾಪಿಸಿರುವೆನು. ಅಲ್ಲಿ ಪಾಣಿನ್ಯಾಚಾರ್ಯನು ಶಿವಪೂಜೆಯನ್ನು ಮಾಡಿ ವ್ಯಾಕರಣನಿಪುಣನಾದನು.

೬೯. ವೀರಕೋಷ್ಠವೆಂಬುವ ಕ್ಷೇತ್ರವನ್ನು ಕೇಳಿರುವೆಯಲ್ಲವೆ. ಅಲ್ಲಿ ವಾಲ್ಮೀಕಿ ಮಹರ್ಷಿಯು ತಪಸ್ಸನ್ನು ಮಾಡಿ ಆದಿಕವಿಯೆಂಬ ಪದವಿಯನ್ನು ಪಡೆದನು.

ಮಹಾತೀರ್ಥಮಿತಿ ಪ್ರೋಕ್ತಂ ಜಾನೀಷೇ ಯತ್ರ ಶಂಭುನಾ ।
ಅಧ್ಯಾಪಿತಾಸ್ಸುಪರ್ವಾಣಃ ಸರ್ವೇಽಪಿ ದ್ರುಹಿಣಾದಯಃ ॥ ೭೦ ॥
ಮಯೂರಪುರಮುಕ್ತಂ ತೇ ಕ್ಷೇತ್ರಂ ಮಾಹೇಶ್ವರಂ ಮಯಾ ।
ಲಬ್ಧಾ ಯತ್ರ ವ್ರತಸ್ಥೇನ ಹ್ರಾದಿನೀ ವಜ್ರಪಾಣಿನಾ ॥ ೭೧ ॥
ಶ್ರೀಸುಂದರಮಿತಿ ಕ್ಷೇತ್ರಮುಕ್ತಂ ವೇಗವತೀತಟೇ ।
ಕಲಾವಪಿ ಯುಗೇ ಯಸ್ಮಿನ್ದೇವದೇವೇನ ದೀಪ್ಯತೇ ॥ ೭೨ ॥
ಕುಂಭಕೋಣಮಿತಿ ಸ್ಥಾನಂ ಶಂಭೋರ್ವೇತ್ಸಿ ಹಿ ಯತ್ರ ಸಾ ।
ಗಂಗಾಪಿ ಮಾಘೇ ಸಾನ್ನಿಧ್ಯಂ ಕುರುತೇ ಸ್ವಾಘಶಾಂತಯೇ ॥ ೭೩ ॥
ಅನುಗೋದಾವರೀತೀರಂ ತ್ರ್ಯಂಬಕಂ ನಾಮ ತೇ ಶ್ರುತಂ ।
ಶಕ್ತಿಂ ಯತ್ರ ಗುಹೋ ಲೇಭೇ ತಾರಕಾಸುರಘಾತಿನೀಂ ॥ ೭೪ ॥
ಶ್ರೀಪಾಟಲಂ ವ್ಯಾಘ್ರಪುರಮಾಖ್ಯಾತಂ ವೇದವಿತ್ತಮ ।
ತ್ರಿಶಂಕುನಾ ಜಾತಿಶುದ್ಧ್ಯೈ ಯತ್ರ ಗಂಗಾಧರೋಽರ್ಚಿತಃ ॥ ೭೫ ॥
ಕ್ಷೇತ್ರಂ ಕದಂಬಪುರ್ಯಾಖ್ಯಂ ಭವತಾ ಚಾವಧಾರಿತಂ ।
ತ್ವತ್ಕೃತೇ ಯತ್ರ ಶೂಲೇನ ಕೃತಾಂತಂ ಶಂಭುರಕ್ಷಿಣೋತ್ ॥ ೭೬ ॥
ಅವಿನಾಶಾಖ್ಯಮುಕ್ತಂ ತೇ ಕ್ಷೇತ್ರಂ ಯತ್ರ ವೃಷಧ್ವಜಃ ।
ಸಾನ್ನಿಧ್ಯಂ ಪಡಿಕಂಠಾಯ ವಿತತಾರ ಪ್ರಸೇದಿವಾನ್ ॥ ೭೭ ॥

---

೭೦. ಮಹಾತೀರ್ಥದಲ್ಲಿ ಬ್ರಹ್ಮನೇ ಮೊದಲಾದ ಸಕಲ ದೇವತೆಗಳಿಗೆ ಸದಾಶಿವನು ವೇದಾಧ್ಯಯನವನ್ನು ಮಾಡಿಸಿದನು.

೭೧. ಮಯೂರಪುರವೆಂಬ ಉತ್ತಮವಾದ ಶಿವಕ್ಷೇತ್ರದಲ್ಲಿ ವ್ರತನಿಯಮಗಳನ್ನು ಮಾಡಿದುದರಿಂದ ಮಹೇಂದ್ರನಿಗೆ ವಜ್ರಾಯುಧವು ಪ್ರಾಪ್ತವಾಯಿತು.

೭೨–೭೫. ವೇಗವತೀ ನದಿಯ ದಡದಲ್ಲಿ ಶ್ರೀಸುಂದರವೆಂಬ ಕ್ಷೇತ್ರವಿರುವುದು. ಅಲ್ಲಿ ಕಲಿಯುಗದಲ್ಲಿಯೂ ಸಹ ಮಹಾದೇವನು ಪ್ರಕಾಶಿಸುತ್ತಿರುವನು. ಕುಂಭಕೋಣವೆಂಬ ಶಿವಕ್ಷೇತ್ರದಲ್ಲಿ ಮಾಘಮಾಸದಲ್ಲಿ ಗಂಗಾತೀರ್ಥದ ಸಮಾಗಮವಾಗುವುದರಿಂದ ಎಲ್ಲರ ಪಾಪಗಳೂ ನಾಶವನ್ನು ಹೊಂದುವುವು. ಗೋದಾವರೀ ನದಿಯ ದಡದಲ್ಲಿರುವ ತ್ರ್ಯಂಬಕಕ್ಷೇತ್ರದಲ್ಲಿ ಕುಮಾರಸ್ವಾಮಿಯು ತಾರಕಾಸುರನನ್ನು ಸಂಹಾರಮಾಡುವುದಕ್ಕಾಗಿ ಶಕ್ತಿಯನ್ನು ಸಂಪಾದಿಸಿದನು. ಶ್ರೀಪಾಟಲವೆಂಬ ಉತ್ತಮ ನಗರವನ್ನು ನಿನಗೆ ಹೇಳಿರುವೆನು. ತ್ರಿಶಂಕುವು ತನ್ನ ಚಂಡಾಲತ್ವವನ್ನು ಕಳೆದುಕೊಳ್ಳುವುದಕ್ಕಾಗಿ ಇಲ್ಲಿ ಗಂಗಾಧರನನ್ನು ಪೂಜಿಸಿದನು.

೭೬. ಕದಂಬಪುರಿಯೆಂಬ ಕ್ಷೇತ್ರದಲ್ಲಿ ನಿನಗಾಗಿ ಪರಮೇಶ್ವರನು ಯಮನನ್ನು ತನ್ನ ಶೂಲಾಯುಧದಿಂದ ನಿರ್ವಿಣ್ಣನನ್ನಾಗಿ ಮಾಡಿದನು.

೭೭–೭೮. ಅವಿನಾಶ ಕ್ಷೇತ್ರದಲ್ಲಿ ಮಹಾದೇವನು ವೃಷಭವಾಹನನಾಗಿ ಪಡಿಕಂಠನೆಂಬ ಭಕ್ತನಿಗೋಸ್ಕರ ಸಾನ್ನಿಧ್ಯವನ್ನು ಕೊಟ್ಟು ಪ್ರಸನ್ನನಾದನು.

ರಕ್ತಕಾನನಮಾಖ್ಯಾತಂ ಮಯಾ ಕ್ಷೇತ್ರಂ ತವಾನಘ ।
ಮಿತ್ರಾವರುಣಯೋರ್ಯತ್ರ ರುದ್ರೋಽಜನಿ ವರಪ್ರದಃ ॥ ೭೮ ॥
ಶ್ರೀಹಾಟಕೇಶ್ವರಂ ಕ್ಷೇತ್ರಂ ಪಾತಾಲಸ್ಥಂ ತ್ವಯಾ ಶ್ರುತಂ ।
ಯತ್ರ ವೈರೋಚನಿರ್ದೇವಂ ಸ್ವಪದಪ್ರಾಪ್ತಯೇಽರ್ಚತಿ ॥ ೭೯ ॥
ವೇತ್ಸಿ ಶಂಭೋಃ ಪ್ರಿಯಾವಾಸಂ ಕೈಲಾಸಂ ನಿತ್ಯಸೇವಕಃ ।
ಯತ್ರ ಯಕ್ಷೇಶ್ವರ ಸ್ತ್ರ್ಯಕ್ಷಮಭ್ಯರ್ಚಯತಿ ಭಕ್ತಿತಃ ॥ ೮೦ ॥
ಸ್ಥಾನಾನಿ ಖಂಡಪರಶೋರಿತ್ಯುಕ್ತಾನಿ ಮಯಾ ಪುರಾ ।
ತ್ವಯಾಪ್ಯವಧೃತಾನ್ಯೇವ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೮೧ ॥
ಇತ್ಯೂಚಿವಾನೇಷ ಶಿಲಾದನಂದನೋ
ಮುನೇಃ ಮೃಕಂಡೋಸ್ತನಯಂ ಮುನೀಶ್ವರಂ ।
ಭಕ್ತ್ಯಾ ನಮಂತಂ ಪದಯೋಃ ಕರೇಣ
ಪಸ್ಪರ್ಶ ಮೌಳೌ ಕರುಣಾರಸಾರ್ದ್ರಃ ॥ ೮೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ಮಹೀಮಂಡಲಸ್ಥ ವಿವಿಧ ಶಿವಕ್ಷೇತ್ರವರ್ಣನಂ"ನಾಮ ದ್ವಿತೀಯೋಽಧ್ಯಾಯಃ

---

ನಾನು ಹಿಂದೆ ಹೇಳಿದ ರಕ್ತಕಾನನವೆಂಬ ಕ್ಷೇತ್ರದಲ್ಲಿ ಮಿತ್ರಾವರುಣರಿಗೆ ಪ್ರೀತಿಯನ್ನು ಮಾಡುವವನಾಗಿ ರುದ್ರನು ಅಲ್ಲಿಯೇ ಆವಿರ್ಭವಿಸಿದನು.

೭೯. ಪಾತಾಳದಲ್ಲಿರುವ ಹಾಟಕೇಶ್ವರನನ್ನು ಬಲ್ಲೆಯಷ್ಟೆ. ಅಲ್ಲಿ ಬಲಿಚಕ್ರವರ್ತಿಯು ಮೋಕ್ಷೇಚ್ಛೆಯಿಂದ ದೇವದೇವನನ್ನು ಪೂಜಿಸುತ್ತಿರುವನು.

೮೦. ಕೈಲಾಸವೆಂಬ ಪರಮಪ್ರಿಯವಾದ ವಾಸದಲ್ಲಿ ಕುಬೇರನು ನಿತ್ಯಸೇವಕನಾಗಿ ಭಕ್ತಿಯಿಂದ ತ್ರಿಣೇತ್ರನನ್ನು ಪೂಜಿಸುವನು.

೮೧. ಎಲೈ ಮಾರ್ಕಂಡೇಯನೇ! ಈ ರೀತಿಯಾಗಿ ಅನೇಕ ಶಿವಕ್ಷೇತ್ರಗಳನ್ನು ಹೇಳಿರುವೆನು. ನೀನೂ ಆದರದಿಂದ ಕೇಳಿರುವೆ. ಮತ್ತೇನನ್ನು ಕೇಳ ಬಯಸುವೆ?

೮೨. ಬಳಿಕ ಮುನೀಂದ್ರನಾದ ಮಾರ್ಕಂಡೇಯನು ನಂದಿಯ ಮಾತನ್ನು ಕೇಳಿ ಆತನ ಪಾದಗಳಿಗೆ ಭಕ್ತಿಯಿಂದ ನಮಸ್ಕರಿಸಲು ನಂದಿಯು ಕರುಣಾರಸದಿಂದೊಡಗೂಡಿದವನಾಗಿ ಆತನ ತಲೆಯನ್ನು ಹಿಡಿದು ಮೇಲಕ್ಕೆತ್ತಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ಮಹೀಮಂಡಲದ ವಿವಿಧ ಶಿವಕ್ಷೇತ್ರವರ್ಣನ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತೃತೀಯೋಽಧ್ಯಾಯಃ

### ಅರುಣಾಚಲಸ್ಯ ರಹಸ್ಯಸ್ಥಾನ ಕಥನಂ

ಮಾರ್ಕಂಡೇಯ ಉವಾಚ :—

ಭಗವನ್ವಂಚನೇನಾಲಂ ತ್ವದೇಕಪ್ರವಣೇ ಮಯಿ ।
ಕಿಂ ಮಾದೃಶೋಽಸ್ತಿ ತೇ ಶಿಷ್ಯಸ್ತ್ವತ್ಕೃಪೈವಾತ್ರ ಸಾಕ್ಷಿಣೀ ॥ ೧ ॥
ಸ್ಥಾನೇಷು ಪ್ರಾಕ್ತ್ವದುಕ್ತೇಷು ಫಲಾನಿ ಚ ಪೃಥಕ್ಪೃಥಕ್ ।
ಯತ್ರ ಸರ್ವಫಲಪ್ರಾಪ್ತಿಃ ಸ್ಥಾನಂ ತದ್ವದ ಮೇ ವಿಭೋ ॥ ೨ ॥
ಚರಾಚರಾಣಾಂ ಭೂತಾನಾಂ ಜಾನತಾಮಪ್ಯಜಾನತಾಂ ।
ಯಸ್ಯ ಸ್ಮರಣಮಾತ್ರೇಣ ಮುಕ್ತಿಸ್ತದ್ವದ ದೇಶಿಕ ॥ ೩ ॥
ಪಶ್ಯೈತೇನ ಮಯೈಕೇನ ಭಗವನ್ನಾನುರಾಧ್ಯಸೇ ।
ಸರ್ವೈರಪ್ಯೇತದರ್ಥಂ ಹಿ ಮುನಿಭಿಃ ಪರಿವಾರ್ಯಸೇ ॥ ೪ ॥
ಪುಲಹೇನ ಪುಲಸ್ತ್ಯೇನ ವಸಿಷ್ಠೇನ ಮರೀಚಿನಾ ।
ಅಗಸ್ತ್ಯೇನ ದಧೀಚೇನ ನಕ್ರುಣಾ ಭೃಗುಣಾತ್ರಿಣಾ ॥ ೫ ॥

---

## ಕನ್ನಡದ ಅನುವಾದ

### ಅರುಣಾಚಲದ ರಹಸ್ಯಸ್ಥಾನ ಕಥನವು

೧–೨. ಮಾರ್ಕಂಡೇಯನು ಕೇಳುತ್ತಾನೆ:— ಓ ನಂದೀಶ್ವರಾ! ನಿನ್ನನ್ನೇ ಅನನ್ಯಭಾವದಿಂದ ನಂಬಿರುವ ನನ್ನಲ್ಲಿ ನೀನು ಮಾಡುತ್ತಿರುವ ಈ ವಂಚನೆಯು ಸಾಕು. ನನ್ನಂತಹ ಶಿಷ್ಯನು ನಿನಗೆ ಎಲ್ಲಿರುವನು? ನಿನಗೆ ನನ್ನಲ್ಲಿರುವ ಕೃಪೆಯೇ ಇದಕ್ಕೆ ಸಾಕ್ಷಿಯಾಗಿರುವುದಲ್ಲವೆ! ನೀನು ಮುನ್ನ ಹೇಳಿದ ಕ್ಷೇತ್ರಗಳಲ್ಲಿ ಒಂದೊಂದರಲ್ಲಿಯೂ ಒಂದೊಂದು ವಿಧವಾದ ಫಲವಿರುವುದು. ಆದರೆ ಸರ್ವಫಲಗಳನ್ನೂ ಕೊಡುವಂತಹ ಒಂದೇ ಸ್ಥಾನವನ್ನು ನನಗೆ ತಿಳಿಸುವವನಾಗು.

೩. ನೀನು ಭಕ್ತರಿಗೆ ಮಾರ್ಗದರ್ಶಕನಾಗಿರುವೆ. ತಿಳಿದೊ ತಿಳಿಯದೆಯೊ ಯಾವ ಕ್ಷೇತ್ರವನ್ನು ಸ್ಥಾವರಜಂಗಮ ಪ್ರಾಣಿಗಳು ಸ್ಮರಿಸಿದ ಮಾತ್ರದಿಂದ ಮುಕ್ತಿಯನ್ನು ಪಡೆಯುವುವೊ, ಅಂತಹುದನ್ನು ನನಗೆ ಹೇಳುವವನಾಗು.

೪. ಎಲೈ ನಂದೀಶ್ವರನೆ! ನಾನೊಬ್ಬನೇ ನಿನ್ನನ್ನು ಬಲಾತ್ಕಾರಪಡಿಸುತ್ತಿರುವುದಿಲ್ಲ. ಈ ಉದ್ದೇಶದಿಂದಲೇ ನೀನು ಈ ಸಕಲ ಮುನಿಗಳಿಂದಲೂ ಸುತ್ತುವರೆಯಲ್ಪಟ್ಟಿರುವೆ.

೫–೯. ಪುಲಹ, ಪುಲಸ್ತ್ಯ, ವಸಿಷ್ಠ, ಮರೀಚಿ, ಅಗಸ್ತ್ಯ, ದಧೀಚಿ, ನಕ್ರು, ಭೃಗು, ಅತ್ರಿ, ಜಾಬಾಲಿ, ಜೈಮಿನಿ, ಧೌಮ್ಯ, ಜಮದಗ್ನಿ, ಉಪಯಾಜ,

ಜಾಬಾಲಿನಾ ಜೈಮಿನಿನಾ ಧೌಮ್ಯೇನ ಜಮದಗ್ನಿನಾ ।
ಉಪಯಾಜೇನ ಯಾಜೇನ ಭರತೇನಾರ್ವರೀವತಾ ॥ ೬ ॥
ಪಿಪ್ಪಲಾದೇನ ಕಣ್ವೇನ ಕುಮುದೇನೋಪಮನ್ಯುನಾ ।
ಕುಮುದಾಕ್ಷೇಣ ಕುತ್ಸೇನ ವತ್ಸೇನ ವರತಂತುನಾ ॥ ೭ ॥
ವಿಭಾಂಡಕೇನ ವ್ಯಾಸೇನ ಕಣ್ವರೀಕ್ಷೇಣ ಕಂಡುನಾ ।
ಮಾಂಡವ್ಯೇನ ಮತಂಗೇನ ಕುಕ್ಷಿಣಾ ಮಾಂಡಕರ್ಣಿನಾ ॥ ೮ ॥
ಚಂಡಕೌಶಿಕಶಾಂಡಿಲ್ಯಶಕಟಾಯನಕೌಶಿಕೈಃ ।
ಶಾತಾತಪಮಧುಚ್ಛಂದೋಗರ್ಗಸೌಭರಿರೋಮಶೈಃ ॥ ೯ ॥
ಆಪಸ್ತಂಬಪ್ರಥುಸ್ತಂಬಭಾರ್ಗವೋದಂಕಪರ್ವತೈಃ ।
ಭಾರದ್ವಾಜೇನ ದಾಲ್ಭ್ಯೇನ ದಾಂತೇನ ಶ್ವೇತಕೇತುನಾ ॥ ೧೦ ॥
ಕೌಂಡಿನ್ಯಪುಂಡರೀಕಾಭ್ಯಾಂ ರೈಭ್ಯೇಣ ತೃಣಬಿಂದುನಾ ।
ವಾಲ್ಮೀಕಿನಾ ನಾರದೇನ ವಹ್ನಿನಾ ದೃಢಮನ್ಯುನಾ ॥ ೧೧ ॥
ಬೋಧಾಯನಸುಬೋಧಾಭ್ಯಾಂ ಹಾರೀತೇನ ಮೃಕಂಡುನಾ ।
ದುರ್ವಾಸಸಾತಿತೀಕ್ಷ್ಣೇನ ಜಾಲಪಾದೇನ ಶಕ್ತಿನಾ ॥ ೧೨ ॥
ಕಂಕ್ವಾರ್ಯೇಣ ನದನ್ತೇನ ದೇವದತ್ತೇನ ನ್ಯಂಕುನಾ ।
ಸುಶ್ರುತಾ ಚಾಗ್ನಿವೇಶ್ಯೇನ ಗಾಲವೇನ ಮರುತ್ವತಾ ॥ ೧೩ ॥
ಲೋಕಾಕ್ಷಿಣಾ ವಿಶ್ರವಸಾ ಸೈಂಧವೇನ ಸುಮಂತುನಾ ।
ಶಿಶುಪಾಯನಮೌದ್ಗಲ್ಯಪಥ್ಯಚಾವನಮಾತುರೈಃ ॥ ೧೪ ॥
ಋಷ್ಯಶೃಂಗೈಕಪಾತ್ಕ್ರೌಂಚದೃಢಗೋಮುಖದೇವಲೈಃ ।
ಅಂಗಿರೋವಾಮದೇವಾರ್ವಪತಂಜಲಿಕಪಿಂಜಲೈಃ ॥ ೧೫ ॥

---

ಯಾಜ, ಭರತ, ಅರ್ವರೀವಂತ, ಪಿಪ್ಪಲಾದ, ಕಣ್ವ, ಕುಮುದ, ಉಪಮನ್ಯು, ಕುಮುದಾಕ್ಷ, ಕುತ್ಸ, ವತ್ಸ, ವರತಂತು, ವಿಭಾಂಡಕ, ವ್ಯಾಸ, ಕಣ್ವರೀಕ್ಷ, ಕಂಡು, ಮಾಂಡವ್ಯ, ಮತಂಗ, ಕುಕ್ಷಿ, ಮಾಂಡಕರ್ಣಿ, ಚಂಡಕೌಶಿಕ, ಶಾಂಡಿಲ್ಯ, ಶಕಟಾಯನ, ಕೌಶಿಕ, ಶಾತಾತಪ, ಮಧುಚ್ಛಂದ, ಗರ್ಗ, ಸೌಭರಿ, ರೋಮಶ, ಆಪಸ್ತಂಬ, ಪೃಥುಸ್ತಂಬ, ಭಾರ್ಗವ, ಉದಂಕ, ಪರ್ವತ, ಭಾರದ್ವಾಜ, ದಾಲ್ಭ್ಯ, ದಾಂತ, ಶ್ವೇತಕೇತು, ಕೌಂಡಿನ್ಯ, ಪುಂಡರೀಕ, ರೈಭ್ಯ, ತೃಣಬಿಂದು, ವಾಲ್ಮೀಕಿ, ನಾರದ, ವಹ್ನಿ, ದೃಢಮನ್ಯು, ಬೋಧಾಯನ, ಸುಬೋಧ, ಹಾರೀತ, ಮೃಕಂಡು, ದುರ್ವಾಸ, ಜಾಲಪಾದ, ಶಕ್ತಿ, ಕಂಕು, ನದಂತ, ದೇವದತ್ತ, ನ್ಯಂಕು, ಸುಶ್ರುತ, ಅಗ್ನಿವೇಶ್ಯ, ಗಾಲವ, ಮರುತ್ವಂತ, ಲೋಕಾಕ್ಷಿ, ವಿಶ್ರವಸ್ಸು, ಸೈಂಧವ, ಸುಮಂತು, ಶಿಶುಪಾಯನ, ಮೌದ್ಗಲ್ಯ, ಪಥ್ಯಚಾವನ, ಮಾತುರ, ಋಷ್ಯಶೃಂಗ, ಏಕಪಾದ, ಕ್ರೌಂಚ, ದೃಢ,

ಸನತ್ಕುಮಾರಸನಕ ಸನಂದನ ಸನಾತನೈಃ ।
ಹಿರಣ್ಯನಾಭಸತ್ಯಾಖ್ಯ ವಾತಾಶನಸುಹೋತ್ರಭಿಃ ॥ ೧೬ ॥
ಮೈತ್ರೇಯಪುಷ್ಪಜಿತ್ಸತ್ಯತಪಃಶಾಲೀಷ್ಯಶೈಶಿರೈಃ ।
ನಿದಾಘೋತಥ್ಯಸಂವರ್ತಶೌಲ್ಕಾಯನಿಪರಾಶರೈಃ ॥ ೧೭ ॥
ವೈಶಂಪಾಯನಕೌಶಲ್ಯಶಾರದ್ವತಕಪಿಧ್ವಜೈಃ ।
ಕುಶಸ್ವಾರ್ಚಿಕಕೈವಲ್ಯ ಯಾಜ್ಞವಲ್ಕ್ಯಾಶ್ವಲಾಯನೈಃ ॥ ೧೮ ॥
ಕೃಷ್ಣಾತಪೋತ್ತಮಾನಂತಕರುಣಾಮಲಕಪ್ರಿಯೈಃ ।
ಚರಕೇಣ ಪವಿತ್ರೇಣ ಕಪಿಲೇನ ಕಣಾಶಿನಾ ॥ ೧೯ ॥
ನರನಾರಾಯಣಾಭ್ಯಾಂ ಚ ದಿವ್ಯೈಶ್ಚಾನ್ಯೈರ್ಮಹಾತ್ಮಭಿಃ ।
ಮತ್ಪ್ರಶ್ನೋತ್ತರಶುಶ್ರೂಷಾತತ್ಪರೈಃ ಪ್ರತ್ಯವೇಕ್ಷ್ಯಸೇ ॥ ೨೦ ॥
ಮಾಹೇಶ್ವರಾಗ್ರಗಣ್ಯಸ್ತ್ವಂ ಸಮಸ್ತಾಗಮಪಾರಗಃ ।
ವ್ಯಾಪ್ತಶ್ಚ ಸರ್ವಲೋಕೇಷು ಯಸ್ಮಾತ್ತದನುಶಾಧಿ ನಃ ॥ ೨೧ ॥
ತ್ವನ್ಮುಖಾದೇವ ಭಗವನ್ವಯಮೇತೇ ಸುಶಿಕ್ಷಿತಾಃ ।
ಪೂರ್ವಮೇವ ತ್ವಯಾ ದೇವ ಕಿಂ ವಾನ್ಯದುಪಪದ್ಯತೇ ॥ ೨೨ ॥
ದಿವ್ಯಾಗಮಪುರಾಣಾನಾಂ ದ್ರಷ್ಟವ್ಯಃ ಪರಮೇಶ್ವರಃ ।
ಕಾತ್ಯಾಯನೀ ವಾ ಸ್ಕಂದೋ ವಾ ಭಗವಾನ್ನಾಥ ವಾ ಭವಾನ್ ॥ ೨೩ ॥

---

ಗೋಮುಖ, ದೇವಲ, ಅಂಗಿರ, ವಾಮದೇವ, ಔರ್ವ, ಪತಂಜಲಿ, ಕಪಿಂಜಲ, ಸನತ್ಕುಮಾರ, ಸನಕ, ಸನಂದನ, ಸನಾತನ, ಹಿರಣ್ಯನಾಭ, ಸತ್ಯ, ವಾತಾಶನ, ಸುಹೋತ್ರ, ಮೈತ್ರೇಯ, ಪುಷ್ಪಜಿತ್, ಸತ್ಯತಪ, ಶಾಲೀಷ್ಯ, ಶೈಶಿರ, ವೈಶಂಪಾಯನ, ಕೌಶಲ್ಯ, ಶಾರದ್ವತ, ಕಪಿಧ್ವಜ, ಕುಶ, ಸ್ವಾರ್ಚಿಕ, ಕೈವಲ್ಯ, ಯಾಜ್ಞವಲ್ಕ್ಯ, ಆಶ್ವಲಾಯನ, ಕೃಷ್ಣಾತಪ, ಉತ್ತಮ, ಅನಂತ, ಕರುಣಾ ಮಲಕಪ್ರಿಯ, ಚರಕ, ಕಪಿಲ, ಕಣಾದ ಇವರೇ ಮೊದಲಾದ ಮಹರ್ಷಿ ಗಳೆಲ್ಲರೂ ಇಲ್ಲಿರುವರು.

೨೦. ನರನಾರಾಯಣರಿಂದಲೂ, ಇತರ ದೇವರ್ಷಿಗಳಿಂದಲೂ, ನನ್ನ ಪ್ರಶ್ನೆಗೆ ಉತ್ತರವನ್ನು ಕೇಳಲೆಳಸುವ ತತ್ಪರತೆಯಿಂದ ನಿರೀಕ್ಷಿಸಲ್ಪಡುತ್ತಿರುವೆ.

೨೧-೨೩. ನೀನು ಶಿವಭಕ್ತರಲ್ಲಿ ಅಗ್ರಗಣ್ಯನಾಗಿರುವೆ. ಸಕಲ ವೇದ ಗಳಲ್ಲಿಯೂ ನಿಷ್ಣಾತನಾಗಿರುವೆ. ಸರ್ವಲೋಕ ಸಂಚಾರಿಯಾಗಿರುವುದರಿಂದ ನಮಗೆ ಈ ವಿಷಯವನ್ನು ಬೋಧಿಸು. ಪೂರ್ವದಲ್ಲಿ ನಿನ್ನ ಮುಖದಿಂದಲೇ ನಾವೂ ಈ ಮಹರ್ಷಿಗಳೂ ಉಪದೇಶವನ್ನು ಹೊಂದಿರುವೆವು. ಆದುದರಿಂದ ಈಗ ಇತರ ವಾಕ್ಯಗಳು ಸಮಂಜಸಗಳಾಗುವುದಿಲ್ಲ. ಸಕಲಾಗಮ ಪುರಾಣಗಳಲ್ಲಿಯೂ ಜ್ಞೇಯವ್ಯಕ್ತಿಗಳೆಂದರೆ ಪರಮೇಶ್ವರನು, ಜಗದಂಬೆಯು, ಕುಮಾರಸ್ವಾಮಿಯೂ ಅಥವಾ ನೀನೇ ಆಗಿರುವೆ.

ತ್ವಯಿ ಯದ್ಯಸ್ತಿ ನೋ ಭಕ್ತಿರ್ದಯಾ ಚಾಸ್ಮಾಸು ತೇ ಯದಿ ।
ರಹಸ್ಯಮಿದಮುದ್ಘಾಟ್ಯ ಪ್ರಸಾದಂ ಕರ್ತುಮರ್ಹಸಿ ॥ ೨೪ ॥
ಇತ್ಥಂ ಮೃಕಂಡುತನಯೇನ ಸ ನಂದಿಕೇಶೋ
ವಿಜ್ಞಾಪಿತಃ ಸವಿನಯಂ ಸ್ಮಯಮಾನವಕ್ತ್ರಃ ।
ತಂ ಪ್ರಾಹ ಚೋನ್ನತತರಂ ಶಿವಭಕ್ತಿಮುತ್ಸು
ಪ್ರಾಗ್ಭಕ್ತಿತೋಷಿತಶಿವಾಪ್ತಶರೀರಸಿದ್ಧಿಂ ॥ ೨೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ
"ಅರುಣಾಚಲಾಖ್ಯ ರಹಸ್ಯಸ್ಥಾನ ಪ್ರಶ್ನವರ್ಣನಂ" ನಾಮ
ತೃತೀಯೋಽಧ್ಯಾಯಃ

---

೨೪. ನಮ್ಮ ಭಕ್ತಿಯು ನಿನ್ನಲ್ಲಿ ನೆಲಸಿರುವುದಾದರೆ, ನಿನಗೂ ನಮ್ಮಲ್ಲಿ ದಯೆಯಿದ್ದುದಾದರೆ ಈ ರಹಸ್ಯವನ್ನು ಬಿಡಿಸಿ ಹೇಳಿ ನಮಗೆ ಅನುಗ್ರಹವನ್ನು ಮಾಡಬೇಕು.

೨೫. ಹೀಗೆ ವಿನಯಪೂರ್ವಕವಾಗಿ ಮಾರ್ಕಂಡೇಯನಿಂದ ವಿಜ್ಞಪ್ತನಾದ ಆ ನಂದಿಕೇಶ್ವರನು ಭಕ್ತಿಯಿಂದ ಶಿವನನ್ನು ಮೆಚ್ಚಿಸಿ ಚಿರಂಜೀವಿತ್ವವನ್ನು ಪಡೆದ ಆತನನ್ನು ಕಂಡು ಮುಗುಳ್ನಗೆಯಿಂದ ಮುನಿಗಣದ ಮಧ್ಯದಲ್ಲಿ ಈ ಪ್ರಕಾರವಾಗಿ ಹೇಳತೊಡಗಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ
ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ಅರುಣಾಚಲದ ರಹಸ್ಯಸ್ಥಾನ ಕಥಾವರ್ಣನ"
ಎಂಬ ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರ್ಥೋಽಧ್ಯಾಯಃ

## ಅರುಣಾಚಲಸ್ಥಾನಮಾಹಾತ್ಮ್ಯ ವರ್ಣನಂ

ನಂದಿಕೇಶ್ವರ ಉವಾಚ:—

ಮುನೇ ಮನಃಪರೀಕ್ಷಾರ್ಥಂ ತಥಾ ತ್ವಂ ಭಾಷಿತೋ ಮಯಾ ।
ತವ ಚೇನ್ನಾಭಿಧಾಸ್ಯಾಮಿ ಕಸ್ಯ ವಾನ್ಯಸ್ಯ ಕಥ್ಯತೇ ॥ ೧ ॥
ತ್ವಾದೃಗನ್ಯೋಽಸ್ತಿ ಕಿಂ ಲೋಕೇ ಶಿವಧರ್ಮಪರಾಯಣಃ ।
ಯೇನ ಸ್ವಲ್ಪಾಯುಷಾಪ್ಯೇವಂ ನಿತ್ಯೇನಾಭಾವಿ ಭಕ್ತಿತಃ ॥ ೨ ॥
ಕಸ್ಯಾನ್ಯಸ್ಯ ಕೃತೇ ದೇವಃ ಸ್ವಸ್ಯೈವಾಜ್ಞಾಕರಂ ಯಮಂ ।
ಕ್ರುದ್ಧೋ ನಿಯಂತ್ರಯಾಮಾಸ ಚರಣಾಂಗುಷ್ಠಪೀಡಿತಂ ॥ ೩ ॥
ತ್ವಮೇವ ಶಾಂಕರಾನ್ಧರ್ಮಾನ್ಸರ್ವಾನ್ವೇತ್ಸಿ ರಹಸ್ಯತಃ ।
ಯೋಽಗ್ರೇಽಸಿ ಕಾಲವದ್ಭ್ರಾಂತಃ ಪರಿಪಕ್ವೋಽಸಿ ಚೇತಸಾ ॥ ೪ ॥
ತ್ವಯ್ಯೇವಾನ್ಯೇನ ಕೇನಾಹಮೇವಂ ಶುಶ್ರೂಷಿತಶ್ಚಿರಂ ।
ತ್ವಯೀವ ಕಸ್ಮಿನ್ನನ್ಯಸ್ಮಿನ್ಮಮಾಪಿ ಪ್ರೀತಿರೀದೃಶೀ ॥ ೫ ॥

---

## ಕನ್ನಡದ ಅನುವಾದ

### ಅರುಣಾಚಲ ಸ್ಥಾನಮಾಹಾತ್ಮ್ಯವರ್ಣನ

೧. ನಂದಿಕೇಶ್ವರನು ಹೇಳುತ್ತಾನೆ:—ಎಲೈ ಮುನಿಶ್ರೇಷ್ಠನೆ! ನಿನ್ನ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ ಹಾಗೆ ಹೇಳಿದೆನೆ ಹೊರತು ನಿನಗಲ್ಲದೆ ನಾನು ಮತ್ತಾರಿಗೆ ಈ ವಿಷಯವನ್ನು ಹೇಳಬೇಕು?

೨. ಸ್ವಲ್ಪವಾದ ಆಯುಸ್ಸಿನಿಂದಲೇ ಚಿರಂಜೀವಿಯಾದ ನಿನಗಿಂತ ಉತ್ತಮರಾದ ಶಿವಧರ್ಮಪರಾಯಣರು ಯಾರುತಾನೆ ಇರುವರು?

೩. ನಿನಗಲ್ಲದೆ ಯಾರಿಗೋಸ್ಕರವಾಗಿ ಪರಮೇಶ್ವರನು ಕೋಪಗೊಂಡು ಚರಣಸೇವೆಯನ್ನು ಮಾಡುತ್ತ ಆಜ್ಞಾಧಾರಕನಾಗಿರುವ ಯಮನನ್ನೂ ಕೂಡ ನಿಯಮನಮಾಡಿರುವನು?

೪. ಯಮನಂತೆ ಭ್ರಾಂತನಾಗಿ ಶಿವಸಾನ್ನಿಧ್ಯದಲ್ಲಿರುವವನೂ, ಪರಿಪಕ್ವವಾದ ಮನಸ್ಸುಳ್ಳವನೂ ಆದ ನೀನೇ ಸರಹಸ್ಯಗಳಾದ ಶೈವಧರ್ಮಗಳೆಲ್ಲವನ್ನೂ ತಿಳಿದಿರುವೆ.

೫. ನಿನ್ನಿಂದಲ್ಲದೆ ಬೇರೆ ಯಾರಿಂದಲೂ ನಾನು ಕೆಲವು ಕಾಲವೂ ಪರಿಚರ್ಯೆಗೊಳ್ಳಲಿಲ್ಲ. ಆದುದರಿಂದಲೇ ನಿನ್ನಲ್ಲಿರುವಂತಹ ಅಧಿಕ ಪ್ರೀತಿಯು ಇತರರಲ್ಲಿ ನನಗೆ ಇರುವುದೂ ಇಲ್ಲವು.

ಉಪದೇಕ್ಷ್ಯಾಮಿ ತೇ ಕ್ಷೇತ್ರಂ ಗುಪ್ತಂ ತದ್ಧರ್ಮಶಾಸಕೈಃ ।
ಭಕ್ತ್ಯಾವಧಾರಣೀಯಂ ಯದ್ಭಕ್ತೈಕೈವಲ್ಯಕಾಂಕ್ಷಿಭಿಃ ॥ ೬ ॥
ಆದರಾದನುಯುಂಜಾನಂ ಶಿಷ್ಯಂ ಯೋ ದೇಶಿಕಃ ಸ್ವಯಂ ।
ಉಪದೇಶೇನ ಸಂತುಷ್ಟಂ ನ ಕರೋತಿ ಸ ಕಿಂ ಗುರುಃ ॥ ೭ ॥
ಸಮಾಹಿತಮನಾ ಭೂತ್ವಾ ವಿಶ್ವಾಸಂ ಕುರು ಶಾಶ್ವತಂ ।
ಮಯೋಪದಿಶ್ಯಮಾನೇಽಸ್ಮಿನ್ರಹಸ್ಯೇ ಪಾರಮೇಶ್ವರೇ ॥ ೮ ॥
ಸ್ಮರ ಸ್ಮರಾಂತಕಂ ದೇವಂ ವಂದಸ್ವಾದ್ಯಾಯ ಶಾಂಕರೀಂ ।
ಉಪಾಂಶೂಚ್ಚಾರಯೋಂಕಾರಂ ಶ್ರೇಯಸ್ತೇ ಮಹದಾಗತಂ ॥ ೯ ॥
ಅಸ್ತಿ ದಕ್ಷಿಣದಿಗ್ಭಾಗೇ ದ್ರಾವಿಡೇಷು ತಪೋಧನ ।
ಅರುಣಾಖ್ಯಂ ಮಹಾಕ್ಷೇತ್ರಂ ತರುಣೇಂದುಶಿಖಾಮಣೇಃ ॥ ೧೦ ॥
ಯೋಜನತ್ರಯವಿಸ್ತೀರ್ಣಮುಪಾಸ್ಯಂ ಶಿವಯೋಗಿಭಿಃ ।
ತದ್ಭೂಮೇರ್ಹೃದಯಂ ವಿದ್ಧಿ ಶಿವಸ್ಯ ಹೃದಯಂಗಮಂ ॥ ೧೧ ॥
ತತ್ರ ದೇವಃ ಸ್ವಯಂ ಶಂಭುಃ ಪರ್ವತಾಕಾರತಾಂ ಗತಃ ।
ಅರುಣಾಚಲಸಂಜ್ಞಾವಾನಸ್ತಿ ಲೋಕಹಿತಾವಹಃ ॥ ೧೨ ॥

---

೬–೭. ಈಗ ನಿನಗೆ ಧರ್ಮಶಾಸ್ತ್ರಗಳಲ್ಲಿ ಗುಪ್ತವಾಗಿರುವ ಕ್ಷೇತ್ರವನ್ನು ತಿಳಿಸುತ್ತೇನೆ. ಭಕ್ತಿರೂಪವಾದ ಮೋಕ್ಷವನ್ನು ಇಚ್ಛಿಸುವವರು ಇದನ್ನು ಆದರ ದಿಂದ ಕೇಳಬೇಕು. ಆದರಸಹಿತನಾಗಿ ಬಂದ ಶಿಷ್ಯನಿಗೆ ಯಾವ ದೇಶಿಕನು ತನ್ನ ಉಪದೇಶದಿಂದ ಸಂತೋಷಪಡಿಸುವುದಿಲ್ಲವೊ, ಅವನು ಎಂತಹ ಗುರುವು? ಅವನು ಕೇವಲ ಅಪ್ರಯೋಜಕನೇ ಸರಿ!

೮–೯. ಈಗ ನಾನು ಉಪದೇಶಮಾಡುವ ಪರಮೇಶ್ವರ ಸಂಬಂಧವಾದ ರಹಸ್ಯದಲ್ಲಿ ನೀನು ಸಮಾಧಾನಮನಸ್ಕನಾಗಿ ನಿರಂತರವಾದ ವಿಶ್ವಾಸವನ್ನು ಬೆಳಸುವವನಾಗು. ಕಾಮರಿಪುವನ್ನು ಸ್ಮರಿಸಿ ಜಗದಂಬೆಯನ್ನು ಮನಸ್ಸಿನಲ್ಲಿಯೇ ನಮಸ್ಕರಿಸಿ ಪ್ರಣವದ ಉಪಾಂಶುಜಪವನ್ನು ಮಾಡು. ನಿನಗೆ ಶ್ರೇಯಃ ಪ್ರಾಪ್ತಿಯ ಕಾಲವು ಒದಗಿರುವುದು.

೧೦. ಭರತಖಂಡದ ದಕ್ಷಿಣದಲ್ಲಿರುವ ದ್ರಾವಿಡದೇಶದಲ್ಲಿ ಚಂದ್ರಶೇಖರ ನಿಗೆ ಪ್ರಿಯವಾದ ಅರುಣಾಚಲವೆಂಬ ಮಹಾಕ್ಷೇತ್ರವಿರುವುದು.

೧೧. ಈ ಕ್ಷೇತ್ರವು ಮೂರುಯೋಜನ ವಿಸ್ತಾರವುಳ್ಳದ್ದೂ, ಶಿವಯೋಗಿ ಗಳಿಗೆ ನಿವಾಸವಾದದ್ದೂ, ಭೂಮಿಗೆ ಹೃದಯದಂತಿದ್ದು ಶಿವನಿಗೆ ಅತ್ಯಂತ ಹೃದಯಂಗಮವಾಗಿರುವುದು.

೧೨. ಅಲ್ಲಿ ಶಿವನು ಲೋಕಹಿತಕ್ಕಾಗಿ ಪರ್ವತಾಕಾರವನ್ನು ಹೊಂದಿ ಅರುಣಾಚಲನೆಂಬ ಹೆಸರಿನಿಂದ ನೆಲಸಿರುವನು.

ಆವಾಸಃ ಸರ್ವಸಿದ್ಧಾನಾಂ ಮಹರ್ಷೀಣಾಂ ಸುಪರ್ವಣಾಂ ।
ವಿದ್ಯಾಧರಾಣಾಂ ಯಕ್ಷಾಣಾಂ ಗಂಧರ್ವಾಪ್ಸರಸಾಮಪಿ ॥ ೧೩ ॥
ಸುಮೇರೋರಪಿ ಕೈಲಾಸಾದಪ್ಯಸೌ ಮಂದರಾದಪಿ ।
ಮಾನನೀಯೋ ಮಹರ್ಷೀಣಾಂ ಯಃ ಸ್ವಯಂ ಪರಮೇಶ್ವರಃ ॥ ೧೪ ॥
ಸ್ಪೃಹಯಂತಿ ಯದೀಯೇಭ್ಯೋ ಜಂತುಭ್ಯೋಽಪಿ ದಿವೌಕಸಃ ।
ಅಯತ್ನಲಭ್ಯಮುಕ್ತಿಭ್ಯೋ ದಿವಾವಾಸಪ್ರವಂಚಿತಾಃ ॥ ೧೫ ॥
ನ ಕಲ್ಪವೃಕ್ಷಾಃ ಸದೃಶಾ ಯತ್ರತ್ಯಾನಾಂ ಮಹೀರುಹಾಂ ।
ಪತ್ರಪುಷ್ಪಫಲೈರ್ನಿತ್ಯಂ ಯೇಽರ್ಚಯಂತಿ ಗಿತಾ ಹರಂ ॥ ೧೬ ॥
ಹಿಂಸೈಕರುಚಯೋ ವ್ಯಾಧಾ ಅಪಿ ರೂಪಾನುಸಾರತಃ ।
ಅನಂತಾ ಯತ್ರ ದೇವಸ್ಯ ಪ್ರಾದಕ್ಷಿಣ್ಯಫಲಾಸ್ಪದಂ ॥ ೧೭ ॥
ಯದುದ್ದೇಶಚರಾ ಮೇಘಾಃ ಶಿಖರಾಣ್ಯಭಿಬಂಧಕಾಃ ।
ಗಂಗಾವತೋ ಹಿಮವತೋಽಪ್ಯಧಿಕಂ ಸ್ವಂ ವಿಜಾನತೇ ॥ ೧೮ ॥
ಕಲಾರಾವಾಃ ಖಗಾ ಯತ್ರ ಕ್ವಣಂತೋ ಕೀಚಕಾ ಅಪಿ ।
ಯಕ್ಷಕಿನ್ನರಗಂಧರ್ವೈರ್ಲಭ್ಯತೇ ದುರ್ಲಭಂ ಪದಂ ॥ ೧೯ ॥

---

೧೩–೧೪. ಆ ಪರ್ವತವು ಸಕಲ ಸಿದ್ಧರಿಗೂ, ಮಹರ್ಷಿಗಳಿಗೂ, ದೇವತೆಗಳಿಗೂ, ವಿದ್ಯಾಧರರಿಗೂ, ಯಕ್ಷರಿಗೂ, ಗಂಧರ್ವರಿಗೂ, ಅಪ್ಸರಸ್ತ್ರೀಯರಿಗೂ ನಿವಾಸವಾಗಿರುವುದು. ಆ ಶೈಲವು ತಾನೇ ಪರಮೇಶ್ವರನ ರೂಪವಾಗಿರುವುದರಿಂದ ಶಿವನ ನಿವಾಸಗಳಾದ ಮೇರು, ಕೈಲಾಸ ಮತ್ತು ಮಂದರಪರ್ವತಗಳಿಗಿಂತಲೂ ಮಹರ್ಷಿಗಳಿಗೆ ಗ್ರಾಹ್ಯವಾಗಿರುವುದು.

೧೫. ಅಲ್ಲಿ ವಾಸಿಸುವ ಜಂತುಗಳಿಗೆ ನಿಷ್ಪ್ರಯತ್ನವಾಗಿಯೇ ಮುಕ್ತಿಯು ಲಭಿಸುವುದನ್ನು ನೋಡಿ ಸ್ವರ್ಗವಾಸಿಗಳಾದ ದೇವತೆಗಳು ತಾವು ವಂಚಿತರಾದೆವೆಂದು ತಿಳಿದು ಅಲ್ಲಿಯೇ ವಾಸವನ್ನು ಕೋರುತ್ತಿರುವರು.

೧೬. ನಿತ್ಯವೂ ಪರಮೇಶ್ವರನನ್ನು ಪತ್ರಪುಷ್ಪಫಲಗಳಿಂದ ಪೂಜಿಸುವ ಆ ಬೆಟ್ಟದ ವೃಕ್ಷಗಳಿಗೆ ಸ್ವರ್ಗದಲ್ಲಿರುವ ಕಲ್ಪವೃಕ್ಷಗಳೂ ಸದೃಶಗಳಾಗಲಾರವು.

೧೭. ಕೇವಲ ಹಿಂಸಾಕಾರ್ಯಗಳಲ್ಲಿಯೇ ನಿರತರಾದ ಬೇಡರೂ ಕೂಡ ಯಾದೃಚ್ಛಿಕವಾಗಿ ಪರಮಾತ್ಮನ ಪ್ರದಕ್ಷಿಣೆಯ ಫಲವನ್ನು ಅಲ್ಲಿ ಪಡೆಯುವರು.

೧೮–೧೯. ಉದ್ದೇಶಪೂರ್ವಕವಾಗಿಯೇ ಮೇಘಗಳು ಆ ಶೈಲದ ಶೃಂಗಗಳಲ್ಲಿ ನೆಲಸಿ ಗಂಗೆಯು ಉತ್ಪನ್ನವಾಗುವ ಹಿಮವತ್ಪರ್ವತಕ್ಕಿಂತಲೂ ಅದನ್ನು ಹೆಚ್ಚಾಗಿ ತಿಳಿಯುತ್ತವೆ. ಚಿಲಿಪಿಲಿಗುಟ್ಟುವ ಹಕ್ಕಿಗಳೂ, ಶಬ್ದಮಾಡುತ್ತಿರುವ ಬಿದಿರುಮೆಳೆಗಳೂ ಸಹ ಗಾಯಕರಾದ ಯಕ್ಷ, ಕಿನ್ನರ, ಗಂಧರ್ವರಿಗೂ ದುರ್ಲಭವಾದ ಸ್ಥಾನವನ್ನು ಪಡೆಯುತ್ತವೆ.

ಸ್ಫುರಂತೋ ಯತ್ರ ಖದ್ಯೋತಾಃ ಕೃಷ್ಣಪಕ್ಷೇ ನಿಶಾಗಮೇ ।
ಆರಾರ್ತಿಕಪ್ರದಾತೄಣಾಂ ದೇವಸ್ಯಾಶ್ನುವತೇ ಪದಂ ॥ ೨೦ ॥
ನಿಷ್ಪ್ರತ್ಯೂಹಕೃತಾಶ್ಲೇಷಾ ನಿತ್ಯಂ ಯತ್ರ ತಟನೀರುಹಾಃ ।
ಸೌಭಾಗ್ಯಗರ್ವತೋ ದೇವೀಮಪರ್ಣಾಮವಮನ್ವತೇ ॥ ೨೧ ॥
ಯಸ್ಯೋತ್ತುಂಗಸ್ಯ ಶೃಂಗಾಗ್ರಸಂಗಮಾ ಅಪಿ ತಾರಕಾಃ ।
ಆತ್ಮನೋ ಲಬ್ಧಸಾಮಾನ್ಯಾಶ್ಚಂದ್ರೇಣ ಬಹುಮನ್ವತೇ ॥ ೨೨ ॥
ಮೃಗಾಃ ಸರ್ವೇಽಪಿ ಸತತಂ ಚರಂತೋ ಯತ್ರ ಸಾನುಷು ।
ಪ್ರಾಣಪ್ರಣಯಿನಂ ಶಂಭೋರೇಣಮಪ್ಯವಜಾನತೇ ॥ ೨೩ ॥
ಯಸ್ಯ ಪಾದಾಂತಿಕಚರೈಃ ಪ್ರಾಯೇಣ ಶಬರೈರಪಿ ।
ನಿಕುಂಭಕುಂಭಸಾದೃಶ್ಯಮಯತ್ನಾದುಪಲಭ್ಯತೇ ॥ ೨೪ ॥
ಕಿಂ ಬಹೂಕ್ತ್ಯಾಭ್ಯಸೂಯಂತೇ ದ್ವೈಮಾತುರಕುಮಾರಯೋಃ ।
ಯದಂಗರೂಢಾಸ್ತರವಸ್ತಿರ್ಯಂಚಃ ಶಬರಾ ಅಪಿ ॥ ೨೫ ॥
ಸಿಂಹವ್ಯಾಘ್ರದ್ವಿಪಾ ಯಸ್ಮಿನ್ಸ್ಥಲೇ ತ್ಯಕ್ತಕಳೇಬರಾಃ ।
ವಾಸಪ್ರದತ್ವಾನ್ಮಾನ್ಯಂತೇ ಧ್ರುವಂ ಶೋಣಾದ್ರಿಶಂಭುನಾ ॥ ೨೬ ॥

---

೨೦. ಅಲ್ಲಿರುವ ಮಿಂಚುಹುಳುಗಳು ತಮ್ಮ ಬೆಳಕಿನಿಂದ ಕೃಷ್ಣಪಕ್ಷದ ಸಾಯಂಸಮಯಗಳಲ್ಲಿ ಶಿವನನ್ನು ಮೆಚ್ಚಿಸಿ ನಿತ್ಯವೂ ಆರತಿಯನ್ನು ಬೆಳಗುವವರಿಗೆ ದೊರಕುವ ಉತ್ತಮ ಪದವಿಯನ್ನು ಹೊಂದುತ್ತಿರುವುವು.

೨೧. ಆ ಪರ್ವತದಲ್ಲಿನ ಸರಸ್ಸುಗಳಲ್ಲಿ ಕಮಲಗಳು ಎಡಬಿಡದೆ ಅರಳಿ ಹೆಣೆದುಕೊಂಡು ತಮ್ಮ ಸೌಭಾಗ್ಯದ ಗರ್ವದಿಂದ ಪಾರ್ವತೀದೇವಿಯನ್ನೂ ಅಲಕ್ಷ್ಯಮಾಡುತ್ತಿರುವುವು.

೨೨. ಎತ್ತರವಾದ ಆ ಪರ್ವತದ ತುದಿಯಲ್ಲಿ ನೆಲಸಿರುವ ನಕ್ಷತ್ರಗಳನ್ನು ಚಂದ್ರನು ತನಗೆ ಸಮಾನವಾದುವುಗಳೆಂದೆಣಿಸಿ ಮರ್ಯಾದೆ ಮಾಡುವನು.

೨೩. ಆ ಬೆಟ್ಟದ ತಪ್ಪಲುಗಳಲ್ಲಿ ನಿರಂತರವೂ ಸಂಚರಿಸುತ್ತಿರುವ ಜಿಂಕೆಗಳು ಪರಮೇಶ್ವರನ ಕೈಯಲ್ಲಿರುವ ಜಿಂಕೆಯನ್ನೂ ಕೂಡ ಅಲ್ಲಗಳೆಯುತ್ತಿವೆ.

೨೪–೨೫. ಪರ್ವತದ ಕಾಡುಗಳಲ್ಲಿ ಸಂಚರಿಸುತ್ತಿರುವ ಬೇಡರಿಗೂ ಕೂಡ ಸುಲಭವಾಗಿಯೇ ಕುಂಭನಿಕುಂಭರ ಸಾದೃಶ್ಯವು ಒದಗುತ್ತದೆ. ಹೆಚ್ಚಿಗೆ ಹೇಳುವುದೇನು? ಗಣಪತಿಯೂ, ಕುಮಾರಸ್ವಾಮಿಯೂ ಅಲ್ಲಿರುವ ವೃಕ್ಷಗಳು, ತಿರ್ಯಗ್ಜಂತುಗಳು ಮತ್ತು ಬೇಡರನ್ನೂ ಸಹ ಕಂಡು ಅಸೂಯೆಗೊಳ್ಳುತ್ತಿರುವರು.

೨೬. ಸಿಂಹಗಳು, ಹುಲಿಗಳು, ಆನೆಗಳು ಕಾಲಾನುಸಾರವಾಗಿ ದೇಹಗಳನ್ನು ಬಿಟ್ಟು ಅಲ್ಲಿನ ನಿವಾಸಿಗಳಿಗೆ ಅಜಿನಗಳನ್ನು ಕೊಡುವುದರಿಂದ ಅರುಣಾಚಲೇಶ್ವರನಿಗೆ ಅತ್ಯಂತ ಪ್ರಿಯಗಳಾಗಿರುವುವು.

ಅಸ್ಯ ಭಾಸ್ಕರನಾಮಾದ್ರಿಃ ಪೂರ್ವಸ್ಯಾಂ ದಿಶಿ ದೃಶ್ಯತೇ ।
ಯತ್ರ ಸ್ಥಿತಃ ಸದಾ ವಜ್ರೀ ಸೇವತೇ ಶೋಣಪರ್ವತಂ ॥ ೨೭ ॥
ಪ್ರತೀಚ್ಯಾಂ ದಿಶಿ ದಂಡಾದ್ರಿರಿತಿ ಕಶ್ಚಿನ್ಮಹೀಧರಃ ।
ಪ್ರಾಚೇತಸಸ್ತದಗಗಃ ಸೇವತೇಽರುಣಪರ್ವತಂ ॥ ೨೮ ॥
ದಕ್ಷಿಣಸ್ಯಾಂ ಚ ಶೋಣಾದ್ರೇರದ್ರಿರಸ್ತ್ಯಮರಾಚಲಃ ।
ಕಾಲಃ ಶೋಣಾದ್ರಿಸೇವಾರ್ಥಮಧ್ಯಾಸ್ತೇ ತದಧಿತ್ಯಕಾಂ ॥ ೨೯ ॥
ಉತ್ತರೇಽಸ್ಮಿನ್ ಹರಿದ್ಭಾಗೇ ಸಿದ್ಧಾಧ್ಯಾಸಿತಕಂದರಃ ।
ವಿರಾಜತೇ ತ್ರಿಶೂಲಾದ್ರಿಃ ಶ್ರೀದೇನ ಪರಿಪಾಲಿತಃ ॥ ೩೦ ॥
ತತ್ಪರ್ಯಂತಪ್ರಭೂತಾನಾಮನ್ಯೇಷಾಮಪಿ ಭೂಭೃತಾಂ ।
ತಟಿಕೇಷ್ವಪರೇ ಚೈವ ದಿಕ್ಪಾಲಾಃ ಪರ್ಯುಪಾಸತೇ ॥ ೩೧ ॥
ಧಾರಿತಾ ಯೇನ ಸತತಂ ಸರ್ವೇಽಪಿ ಧರಣೀರುಹಾಃ ।
ಆರಾಧನಾದಪ್ಯಧಿಕಮಧಿಗಚ್ಛಂತಿ ವೈಭವಂ ॥ ೩೨ ॥
ಯಸ್ಮಿನ್ಗಿರೀಶೇ ಸಂದೃಷ್ಟೇ ಮೇನಾತುಹಿನಭೂಭೃತೋಃ ।
ಸಮಾನಸಂಬಂಧತಯಾ ಪ್ರಮೋದೋ ವರ್ಧತೇತರಾಂ ॥ ೩೩ ॥

---

೨೭. ಈ ಅರುಣಾಚಲಕ್ಕೆ ಪೂರ್ವದಲ್ಲಿ ಭಾಸ್ಕರ ಪರ್ವತವಿರುವುದು. ಅಲ್ಲಿ ಇಂದ್ರನು ನಿತ್ಯವೂ ಬಂದುನಿಂತು ಅರುಣಾಚಲೇಶ್ವರನನ್ನು ಸೇವಿಸುತ್ತಿರುವನು.

೨೮. ಪಶ್ಚಿಮದಿಕ್ಕಿನಲ್ಲಿ ದಂಡಾದ್ರಿಯೆಂಬ ಪರ್ವತವಿರುವುದು. ಅಲ್ಲಿ ವರುಣನು ನೆಲಸಿ ಅರುಣಾಚಲೇಶ್ವರನನ್ನು ಪೂಜಿಸುತ್ತಿರುವನು.

೨೯. ದಕ್ಷಿಣದಿಶೆಯಲ್ಲಿ ಅಮರಾಚಲವೆಂಬ ಬೆಟ್ಟದಲ್ಲಿ ಯಮನು ಶೋಣಾಚಲೇಶ್ವರನ ಸೇವೆಗಾಗಿ ವಾಸವನ್ನು ಕಲ್ಪಿಸಿಕೊಂಡಿರುವನು.

೩೦. ಉತ್ತರದಿಕ್ಕಿನಲ್ಲಿ ತ್ರಿಶೂಲಪರ್ವತವಿರುವುದು. ಅದರ ಗುಹೆಗಳಲ್ಲಿ ಸಿದ್ಧರು ವಾಸಿಸುತ್ತಿರುವರು. ಅಲ್ಲದೆ ಕುಬೇರನಿಂದ ಆ ಪರ್ವತವು ಸಂರಕ್ಷಿತ ವಾಗಿರುವುದು.

೩೧. ಆಪರ್ಯಂತವಾಗಿರುವ ಪ್ರದೇಶದಲ್ಲಿರುವ ಇತರ ಪರ್ವತಗಳ ತಟಗಳಲ್ಲಿಯೂ ಇತರ ದಿಕ್ಪಾಲಕರು ಅರುಣಾಚಲೇಶ್ವರನನ್ನು ಉಪಾಸಿಸುತ್ತಿರುವರು.

೩೨. ಆ ಪರ್ವತದಲ್ಲಿ ಹುಟ್ಟಿದ ಮಾತ್ರದಿಂದಲೇ ಸಕಲ ವೃಕ್ಷಗಳೂ ಆರಾಧನೆಗಿಂತಲೂ ಹೆಚ್ಚಿನದಾದ ವೈಭವವನ್ನು ಹೊಂದುವುವು.

೩೩. ಸದಾಶಿವನ ಆ ಪರ್ವತಾಕಾರವನ್ನು ನೋಡಿದಮಾತ್ರದಿಂದಲೇ ತಮಗೆ ಸಮಾನನಾದವನೆಂದು ಮೇನಾ-ಹಿಮವಂತರಿಗೆ ಅಧಿಕವಾದ ಸಂತೋಷ ವುಂಟಾಗುವುದು.

ತರುಪಲ್ಲವಲಕ್ಷ್ಮೇಣ ಲಕ್ಷ್ಯಮಾಣಜಟಾಧರಃ ।
ಸ್ಥಾವರೋಽಯಂ ಸ್ವಯಂ ಶಂಭುರಿಹೇಶ ಇವ ಜಂಗಮಃ ॥ ೩೪ ॥
ಜ್ಯೋತಿಷ್ಮತ್ತೋಽಯಶೃಂಗಸ್ಯ ದ್ವಿಪಾರ್ಶ್ವಸ್ಥೇಂದುಭಾಸ್ಕರಃ ।
ವ್ಯನಕ್ತಿ ಸ್ವಸ್ಯ ಲೋಕೇಭ್ಯಸ್ತೇಜಸ್ತ್ರಿತಯನೇತ್ರತಾಂ ॥ ೩೫ ॥
ವರ್ಷಾಸು ಶಿಖರಾಧಸ್ತಾದಭಿನೀಲಬಲಾಹಕಃ ।
ವಿರಾಜತೇ ಯಃ ಕಂಠೇನ ಕಾಲಕೂಟಮಿವೋದ್ವಹನ್ ॥ ೩೬ ॥
ಸಹಸ್ರಪಾದಃ ಸಾಹಸ್ರಶೀರ್ಷೋ ಯಃ ಪರ್ವತೇಶ್ವರಃ ।
ಉಕ್ತೋ ನ ಕೇವಲಂ ಶ್ರುತ್ಯಾ ಸಾಕ್ಷಾದಪ್ಯುಪಲಕ್ಷ್ಯತೇ ॥ ೩೭ ॥
ಶಿರೋಲೀನಾಮರಸರಿತ್ಯೋ ರೀತಾಃ ಪ್ರಾಗಿತಿ ನಾದ್ಭುತಂ ।
ಗಿರೀಶೋಽದ್ಯಾಪಿ ಯಃ ಶೃಂಗಲೀನಾನೇಕಸರಿದ್ಗಣಃ ॥ ೩೮ ॥
ಆಸಾದಿತಾಪಕಟಕಃ ಶಾರದೈರ್ಯಃ ಪಯೋಧರೈಃ ।
ವಿಡಂಬಯತಿ ಗೋಶ್ರೇಷ್ಠಮಾರೂಢವೃಷಪುಂಗವಂ ॥ ೩೯ ॥
ಯತ್ರ ಶೃಂಗಾಗ್ರಸಂಲಗ್ನಸಂಲಗ್ನೋ ನೀಲಲೋಹಿತಃ ।
ಸ್ಥಾಣುತ್ವಂ ಸ್ಥಾವರತ್ವೇನ ಗಹನತ್ವೇನ ಭೀಮತಾಂ ।
ಸುದುರ್ಗಮತ್ವಾದುಗ್ರತ್ವಮಪಿ ಧತ್ತೇ ನ ನಾಮತಃ ॥ ೪೦ ॥

---

೩೪. ಗಿಡಗಳ ಚಿಗುರುಗಳೆಂಬ ಜಡೆಗಳನ್ನು ಧರಿಸಿದವನಾಗಿ ಪರ್ವತವೆಂಬ ಶಂಭುವು ತಾನೇ ಜಂಗಮನಾಗಿರುವಂತೆ ಇಲ್ಲಿ ಕಾಣುತ್ತಿರುವನು.

೩೫. ಎರಡು ಪಾರ್ಶ್ವಗಳಲ್ಲಿಯೂ ಸೂರ್ಯಚಂದ್ರರನ್ನು ಕೂಡಿಕೊಂಡು ತೇಜೋಮಯವಾದ ಶೃಂಗದಿಂದೊಡಗೂಡಿರುವ ಈ ಪರ್ವತವು ಸಕಲ ಜನರಿಗೂ ಪರಮೇಶ್ವರನ ತ್ರಿನೇತ್ರರೂಪವನ್ನು ಸಾಕ್ಷಾತ್ಕರಿಸುತ್ತಿರುವುದು.

೩೬–೩೮. ಮಳೆಗಾಲದಲ್ಲಿ ಕೋಡುಗಲ್ಲಿನ ಕೆಳಭಾಗದಲ್ಲಿ ನೀಲಮೇಘಗಳಿಂದ ಈ ಅರುಣಪರ್ವತವು ಕಾಲಕೂಟವನ್ನು ಕಂಠದಲ್ಲಿ ಧರಿಸಿರುವ ಶಿವನಂತೆ ವಿರಾಜಿಸುತ್ತಿರುವುದು. ಸಹಸ್ರಪಾತ್ ಮತ್ತು ಸಹಸ್ರಶೀರ್ಷನೆಂದು ಪ್ರಸಿದ್ಧನಾಗಿರುವ ಪರಮೇಶ್ವರನು ಕೇವಲ ಶೃತಿಪ್ರತಿಪಾದ್ಯನಲ್ಲವೆಂದೂ ಪ್ರತ್ಯಕ್ಷವಾಗಿಯೂ ನೋಡಬಹುದೆಂದೂ ಅನೇಕ ವನ್ಯಮೃಗಗಳಿಂದೊಡಗೂಡಿದ ಈ ಪರ್ವತವು ಜನರಿಗೆ ಸಾರುವಂತಿರುವುದು. ಪೂರ್ವದಲ್ಲಿ ಈಶ್ವರನ ಜಟಾಜೂಟದಲ್ಲಿ ಗಂಗೆಯು ಲೀನಳಾದುದು ಆಶ್ಚರ್ಯವೇನೂ ಅಲ್ಲ. ಇಂದಿಗೂ ಕೂಡ ಅಗ್ನಿಮಯವಾದ ಈ ಅರುಣಾಚಲದ ಶೃಂಗದಲ್ಲಿ ಅನೇಕ ನದಿಗಳು ಲೀನವಾಗಿವೆ.

೩೯. ತಪ್ಪಲುಗಳಲ್ಲಿ ಕಾಣುತ್ತಿರುವ ಶರತ್ಕಾಲದ ಮೇಘಗಳಿಂದ ವೃಷಭವನ್ನು ಸೇರಿದ ಗೋವಿನ ಭಾವವನ್ನು ಪರ್ವತವು ವಿಡಂಬನಮಾಡುತ್ತಿರುವುದು.

೪೦. ಆ ಪರ್ವತದ ಶೃಂಗದಲ್ಲಿ ಪ್ರತ್ಯಕ್ಷನಾದ ನೀಲಕಂಠನು ಕೇವಲ

ಕ್ಷುದ್ರಾಃ ಸರೀಸೃಪಾ ಯತ್ರ ಕಟಕೇಷು ಕೃತಾಸ್ಪದಾಃ ।
ತಕ್ಷಕಾನಂತ ಸರ್ಪಾದ್ಯೈಃ ಸ್ಪರ್ಧನ್ತೇ ಭುಜಗೇಶ್ವರೈಃ ॥ ೪೧ ॥
ಅಷ್ಟಾಭಿರ್ಯೋಽಭಿತಃ ಕೋಣೈರಾವಿರ್ಭೂತೋ ವಿಭೂತಿಭಿಃ ।
ಸುಸ್ಪಷ್ಟಂ ವಿಶಿನಷ್ಟೀವ ಸ್ವಕೀಯಾಮಷ್ಟಮೂರ್ತಿತಾಂ । ॥ ೪೨ ॥
ಈರ್ಷ್ಯಾಶಕ್ತಿ ತರಂಗಿಣ್ಯೋರಿಡಾಪಿಂಗಳಯೋಃ ಸ್ವಯಂ ।
ಶಿವಸ್ಯ ಶೃಂಗತೋ ಮಧ್ಯೇ ಸುಷುಮ್ನಾ ಕಮಲಾಪಗಾ ॥ ೪೩ ॥
ಜ್ಯೋತಿಃಸ್ತಂಭಸ್ವರೂಪಸ್ಯ ಮೂಲಾಗ್ರೇ ಯತ್ರ ವೀಕ್ಷಿತುಂ ।
ಕೋಲಹಂಸಾಕೃತೀ ನಾಲಂ ಬ್ರಹ್ಮವಿಷ್ಣೂ ಬಭೂವತುಃ ॥ ೪೪ ॥
ತಾಭ್ಯಾಂ ಚ ಪ್ರಾರ್ಥಿತಃ ಶಂಭುಸ್ತಸ್ಮಿನ್ಸಾನ್ನಿಧ್ಯವಾನಭೂತ್ ।
ಅರುಣಾಚಲನಾಥಾಖ್ಯಂ ಪ್ರಪನ್ನಃ ಪ್ರಮುದೈಃ ಸಮಂ ॥ ೪೫ ॥
ಗೌತಮಸ್ತತ್ರ ಯೋಗೀಂದ್ರಃ ಸಹಸ್ರಂ ಪರಿವತ್ಸರಾನ್ ।
ತಪ್ತ್ವಾ ತಪಾಂಸಿ ತೀವ್ರಾಣಿ ಸಾಕ್ಷಾಚ್ಚಕ್ರೇ ಸದಾಶಿವಂ ॥ ೪೬ ॥

---

ನಾಮಮಾತ್ರಗಳಿಂದಲೇ ಅಲ್ಲದೆ ನಿಜವಾಗಿಯೂ, ಅಚಲವಾಗಿರುವುದರಿಂದ ಸ್ಥಾಣುತ್ವವನ್ನೂ, ಗಹನವಾಗಿರುವುದರಿಂದ ಭೀಮತ್ವವನ್ನೂ, ದುರ್ಗಮವಾಗಿರುವುದರಿಂದ ಉಗ್ರತ್ವವನ್ನೂ ಪಡೆದಿರುವನು.

೪೧–೪೨. ಆ ಪರ್ವತದ ಕಟಕಗಳಲ್ಲಿರುವ ಕ್ಷುದ್ರಸರ್ಪಗಳೂ ಕೂಡ ತಮ್ಮೊಂದು ದರ್ಪದಿಂದ ತಕ್ಷಕ, ಅನಂತ ಮುಂತಾದ ಸರ್ಪರಾಜರೊಡನೆ ಸ್ಪರ್ಧೆ ಮಾಡುತ್ತಿರುವುವು. ಎಂಟುಮೂಲೆಗಳಲ್ಲಿಯೂ ಅಷ್ಟಪರ್ವತಗಳನ್ನು ಹೊಂದಿ ಅಷ್ಟೈಶ್ವರ್ಯಗಳಿಂದ ಕೂಡಿದ ಪರಮೇಶ್ವರನ ಅಷ್ಟಮೂರ್ತಿ ಸ್ವರೂಪವನ್ನು ಸ್ಪಷ್ಟವಾಗಿ ತೋರಿಸುವಂತೆ ಈ ಪರ್ವತವು ಶೋಭಿಸುತ್ತಿರುವುದು.

೪೩. ಇಡಾ ಮತ್ತು ಪಿಂಗಳಾ ನಾಡಿಗಳಂತಿರುವ ಈರ್ಷ್ಯಾ ಮತ್ತು ಶಕ್ತಿಗಳೆಂಬ ನದಿಗಳ ಮಧ್ಯದಲ್ಲಿ ಬೆಳಗುತ್ತಿರುವ ಕಮಲಾ ನದಿಯೆಂಬ ಸುಷುಮ್ನಾ ದ್ವಾರದಂತಿರುವ ಶೃಂಗಮಧ್ಯದಿಂದ ಪರ್ವತವು ಶಿವನ ಯೋಗಿರೂಪವನ್ನು ಪ್ರತ್ಯಕ್ಷಗೊಳಿಸುತ್ತಿರುವುದು.

೪೪. ಈ ಅಗ್ನಿಸ್ತಂಭದ ತುದಿಮೊದಲುಗಳನ್ನು ನೋಡಲೆಳಸಿ ಬ್ರಹ್ಮ ವಿಷ್ಣುಗಳು ವರಾಹ ಹಂಸರೂಪಿಗಳಾಗಿ ಪ್ರಯತ್ನಿಸಿದರೂ ಸಫಲರಾಗಲಿಲ್ಲ.

೪೫. ಅವರಿಂದ ಪ್ರಾರ್ಥಿತನಾಗಿ ಪರಮೇಶ್ವರನು ಹರ್ಷಯುಕ್ತನಾಗಿ ಅರುಣಾಚಲೇಶ್ವರನೆಂಬ ಹೆಸರಿನಿಂದ ಈ ಪರ್ವತದಲ್ಲಿ ಸನ್ನಿಹಿತನಾದನು.

೪೬. ಯೋಗೀಂದ್ರನಾದ ಗೌತಮಮಹರ್ಷಿಯೂ ತನ್ನ ಪತ್ನಿಯರೊಡಗೂಡಿ ಅರುಣಾಚಲನಾಥನನ್ನು ಶರಣುಹೊಕ್ಕು ಇಲ್ಲಿ ಅನೇಕ ಸಂವತ್ಸರಗಳ

ಪ್ರಾಲೇಯಶೈಲಕನ್ಯಾಪಿ ತತ್ರ ಕೃತ್ವಾ ತಪಃ ಪುರಾ ।
ಅಲಬ್ಧವಾಮದೇಹಾರ್ಧಂ ಮನ್ಮಥಾರೇಃ ಪ್ರಸೇದುಷಃ ॥ ೪೭ ॥
ಗೌರ್ಯಾ ಪ್ರತಿಷ್ಠಿತಂ ತತ್ರ ಪ್ರವಾಳಾದ್ರೀಶ್ವರಾಭಿಧಂ ।
ಲಿಂಗಂ ಭೋಗಪ್ರದಂ ಪುಂಸಾಂ ಕೈವಲ್ಯಾಯ ಪ್ರಕಲ್ಪತೇ ॥ ೪೮ ॥
ತತ್ರ ಗೌರೀನಿದೇಶೇನ ದುರ್ಗಾ ಮಹಿಷಮರ್ದಿನೀ ।
ಸಾಕ್ಷಾದ್ಭೂಯ ಸತಾಂ ಧತ್ತೇ ಮಂತ್ರಸಿದ್ಧಿಮವಿಘ್ನತಃ ॥ ೪೯ ॥
ಖಡ್ಗತೀರ್ಥಮಿತಿ ಖ್ಯಾತಂ ತತ್ರ ಗೌರ್ಯಾಶ್ರಮೇ ನವಂ ।
ಸಕೃನ್ನಿಮಜ್ಜನಾನ್ನೃಣಾಂ ಪಂಚಪಾತಕನಾಶನಂ ॥ ೫೦ ॥
ದುರ್ಗಯಾ ಚಾರ್ಚಿತಂ ಲಿಂಗಂ ಪಾಪನಾಶನನಾಮಕಂ ।
ಸಕೃತ್ಪ್ರಣಾಮಮಾತ್ರೇಣ ಸರ್ವಪಾಪಪ್ರಣಾಶನಂ ॥ ೫೧ ॥
ತತ್ರ ವಜ್ರಾಂಗದೋ ರಾಜಾ ವಿತ್ತಸಾರೋ ವ್ಯತಿಕ್ರಮಾತ್ ।
ಪುನಸ್ತದ್ಭಕ್ತಿಮಾಹಾತ್ಮ್ಯಾಚ್ಛಿವಸಾಯುಜ್ಯಮಾಪ್ತವಾನ್ ॥ ೫೨ ॥

---

ಕಾಲ ತಪಸ್ಸನ್ನು ಮಾಡಿ ತೀವ್ರವಾದ ಆ ತಪಶ್ಶಕ್ತಿಯಿಂದ ಸದಾಶಿವನನ್ನು ಸಾಕ್ಷಾತ್ಕರಿಸಿಕೊಂಡನು.

೪೭. ಹಿಮವಂತನ ಮಗಳಾದ ಪಾರ್ವತೀದೇವಿಯೂ ಸಹ ಪೂರ್ವದಲ್ಲಿ ತಪಸ್ಸನ್ನು ಮಾಡಿ ಇಲ್ಲಿ ಶಂಕರನ ಪ್ರಸಾದದಿಂದ ಆತನ ಅರ್ಧದೇಹವನ್ನು ಹೊಂದಿದಳು.

೪೮. ಗೌರಿಯಿಂದ ಆ ಪರ್ವತದಲ್ಲಿ ಪ್ರತಿಷ್ಠಿತವಾದ ಪ್ರವಾಳೇಶ್ವರವೆಂಬ ಲಿಂಗವನ್ನು ಪೂಜಿಸುವವರಿಗೆ ಇಹದಲ್ಲಿ ಐಶ್ವರ್ಯವೂ ಪರದಲ್ಲಿ ಮೋಕ್ಷವೂ ದೊರೆಯುವುವು.

೪೯. ಅಲ್ಲಿ ಗೌರೀದೇವಿಯ ಆಜ್ಞಾನುಸಾರವಾಗಿ ಮಹಿಷಾಸುರಮರ್ದಿನಿಯಾದ ದುರ್ಗಾದೇವಿಯು ಪ್ರಸನ್ನಳಾಗಿ ಸತ್ಪುರುಷರಿಗೆ ಮಂತ್ರಸಿದ್ಧಿಯು ನಿರ್ವಿಘ್ನವಾಗಿ ಲಭಿಸುವಂತೆ ಅನುಗ್ರಹಿಸುವಳು.

೫೦. ಪಾರ್ವತಿಯ ಆಶ್ರಮದಲ್ಲಿ ಉತ್ತಮವಾದ ಖಡ್ಗತೀರ್ಥವೆಂಬುದುಂಟು. ಅದರಲ್ಲಿ ಸ್ನಾನಮಾಡುವ ಜನರಿಗೆ ಪಂಚಮಹಾಪಾತಕಗಳೂ ನಾಶವಾಗುವುವು.

೫೧. ಶ್ರೀ ದುರ್ಗಾದೇವಿಯಿಂದ ಪೂಜಿತವಾದ ಪಾಪನಾಶನ ಲಿಂಗವನ್ನು ಒಮ್ಮೆ ನಮಸ್ಕರಿಸಿದ ಮಾತ್ರದಿಂದಲೇ ಸರ್ವಪಾಪಗಳೂ ಕಳೆಯುವುವು.

೫೨. ಅಲ್ಲಿ ವಜ್ರಾಂಗದನೆಂಬ ರಾಜನು ಧನಮದದಿಂದ ಅಪಚಾರವನ್ನು ಮಾಡಿ ಪುನಃ ತನ್ನ ಭಕ್ತಿಯಿಂದ ಶಿವಸಾಯುಜ್ಯವನ್ನು ಪಡೆಯುವನಾದನು.

ತಸ್ಯಪ್ರದಕ್ಷಿಣೇನೈವ ಕಾಂತಿಶಾಲಿಕಲಾಧರೌ ।
ವಿದ್ಯಾಧರೇಶ್ವರೌ ಮುಕ್ತೌ ದುರ್ವಾಸಃ ಶಾಪಬಂಧನಾತ್ ॥ ೫೩ ॥
ನಾಸ್ತಿ ಶೋಣಾದ್ರಿತಃ ಕ್ಷೇತ್ರಂ ನಾಸ್ತಿ ಪಂಚಾಕ್ಷರಾನ್ಮನುಃ।
ನಾಸ್ತಿ ಮಾಹೇಶ್ವರಾದ್ಧರ್ಮೋ ನಾಸ್ತಿದೇವೋ ಮಹೇಶ್ವರಾತ್ ॥ ೫೪ ॥
ನಾಸ್ತಿ ಜ್ಞಾನಂ ಶಿವಜ್ಞಾನಾನ್ನಾಸ್ತಿ ಶ್ರೀರುದ್ರತಃ ಶ್ರುತಿಃ ।
ನಾಸ್ತಿ ಶೈವಾಗ್ರಣೀರ್ವಿಷ್ಣೋರ್ನಾಸ್ತಿ ರಕ್ಷಾ ವಿಭೂತಿತಃ ॥ ೫೫ ॥
ನಾಸ್ತಿ ಭಕ್ತೇಃ ಸದಾಚಾರೋ ನಾಸ್ತಿ ರಕ್ಷಾಕರಾದ್ಗುರುಃ ।
ನಾಸ್ತಿ ರುದ್ರಾಕ್ಷತೋ ಭೂಷಾ ನಾಸ್ತಿ ಶಾಸ್ತ್ರಂ ಶಿವಾಗಮಾತ್ ॥ ೫೬ ॥
ನಾಸ್ತಿ ಬಿಲ್ವದಲಾತ್ಪತ್ರಂ ನಾಸ್ತಿ ಪುಷ್ಪಂ ಸುವರ್ಣಕಾತ್ ।
ನಾಸ್ತಿ ವೈರಾಗ್ಯತಃ ಸೌಖ್ಯಂ ನಾಸ್ತಿ ಮುಕ್ತೇಃ ಪರಂ ಪದಂ ॥ ೫೭ ॥
ನಾರುಣಾದ್ರೇಃ ಸಮೋ ಮೇರುಃ ನ ಕೈಲಾಸೋ ನ ಮಂದರಃ ॥ ೫೮ ॥
ತೇ ನಿವಾಸಾ ಗಿರಿವ್ಯಾಪ್ತಾಃ ಸೋಽಯಂ ತು ಗಿರಿಶಃ ಸ್ವಯಂ ॥ ೫೯ ॥

---

೫೩. ಆ ಲಿಂಗದ ಪ್ರದಕ್ಷಿಣಮಾತ್ರದಿಂದಲೇ ಕಾಂತಿಯುತನೂ ಕಲಾಧರನೂ ಆದ ಇಬ್ಬರು ವಿದ್ಯಾಧರರು ದೂರ್ವಾಸಮುನಿಯ ಶಾಪದಿಂದ ವಿಮುಕ್ತರಾದರು.

೫೪. ಅರುಣಾಚಲದಂತಹ ಕ್ಷೇತ್ರವಿಲ್ಲ. ಪಂಚಾಕ್ಷರೀ ಮಂತ್ರಕ್ಕಿಂತಲೂ ಉತ್ತಮ ಮಂತ್ರವಿಲ್ಲ. ಶಿವಧರ್ಮಕ್ಕೆ ಸಮನಾದ ಧರ್ಮವಿಲ್ಲ. ಶಿವನಿಗಿಂತ ಅನ್ಯ ದೈವವಿಲ್ಲ.

೫೫. ಶಿವನ ಜ್ಞಾನಕ್ಕಿಂತ ಜ್ಞಾನವಿಲ್ಲ. ರುದ್ರಸೂಕ್ತಕ್ಕಿಂತ ಉತ್ತಮವಾದ ವೇದಭಾಗವಿಲ್ಲ. ವಿಷ್ಣುವಿಗಿಂತ ಶಿವಭಕ್ತನಿಲ್ಲ. ವಿಭೂತಿಗಿಂತ ಅನ್ಯರಕ್ಷೋಪಾಯವಿಲ್ಲ.

೫೬. ಭಕ್ತಿಗಿಂತ ಉತ್ತಮವಾದ ಸದಾಚಾರವಿಲ್ಲ. ಸಂರಕ್ಷಕನಾದ ಶಿವನಿಗಿಂತ ಗುರುವು ಬೇರೆಯಿಲ್ಲ. ರುದ್ರಾಕ್ಷಿಗಳಿಗಿಂತ ಮಿಗಿಲಾದ ಭೂಷಣವಿಲ್ಲ. ಶೈವಾಗಮಗಳಿಗಿಂತ ಉತ್ತಮ ಶಾಸ್ತ್ರವಿಲ್ಲ.

೫೭. ಬಿಲ್ವದಳಕ್ಕೆ ಸರಿಯಾದ ಪತ್ರವಿಲ್ಲ. ನಾಗಕೇಸರಕ್ಕಿಂತ ಉತ್ತಮ ಪುಷ್ಪವಿಲ್ಲ. ವೈರಾಗ್ಯಕ್ಕೆ ಸಮಾನವಾದ ಸೌಖ್ಯವಿಲ್ಲ. ಮೋಕ್ಷಕ್ಕಿಂತ ಪರಮ ಪದವಿಲ್ಲ.

೫೮–೫೯. ಮೇರುವೂ, ಕೈಲಾಸವೂ, ಮಂದರವೂ ಅರುಣಾಚಲಕ್ಕೆ ಎಂದಿಗೂ ಸಮವಾಗಲಾರವು. ಅವುಗಳು ಪರಮೇಶ್ವರನ ನೆಲವೀಡುಗಳು. ಅರುಣಾಚಲವು ಮಾತ್ರ ಸಾಕ್ಷಾಚ್ಛಿವರೂಪವೇ ಆಗಿದೆ.

ಇತಿ ವದತಿ ಶಿಲಾದನಂದನೇ
ಮುದಿತಮನಾಃ ಸ ಮೃಕಂಡುನಂದನಃ ।
ಪುನರಪಿ ಬಹುಶಃ ಪ್ರಣಮ್ಯ ತಂ
ಚಕಿತಮನಾ ಭವತೋ ವ್ಯಜಿಜ್ಞಪತ್ ॥ ೬೦ ॥
ಕಿಂ ಕಿಂ ನೃಣಾಂ ಕರ್ಮ ಭವಾಯ ಜಾಯತೇ
ಕಥಂ ನು ತತ್ತನ್ನರಕಾಯ ಕ್ಲ್ರುಪ್ಯತೇ ।
ತೇಷಾಂ ಚ ತೇಷಾಂ ಚ ಕಥಂ ಪ್ರತಿಕ್ರಿಯಾ
ಕಥಂ ನು ತತ್ತನ್ಮಮ ಕಥ್ಯತಾಮಿತಿ ॥ ೬೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ಅರುಣಾಚಲಸ್ಥಾನ ಮಾಹಾತ್ಮ್ಯ ವರ್ಣನಂ" ನಾಮ ಚತುರ್ಥೋಽಧ್ಯಾಯಃ

---

೬೦. ಹೀಗೆ ನಿರೂಪಿಸಿದ ನಂದಿಕೇಶ್ವರನನ್ನು ಕಂಡು ಮಾರ್ಕಂಡೇಯ ಮುನಿಯು ಸಂತುಷ್ಟಮನಸ್ಕನಾಗಿ ಮತ್ತೆ ಮತ್ತೆ ನಮಸ್ಕರಿಸುತ್ತ ಸಂಸಾರ ಸಂತಪ್ತನಾಗಿ ಬಿನ್ನವಿಸಿದನು.

೬೧. "ಎಲೈ ನಂದಿಕೇಶ್ವರನೆ! ಮನುಷ್ಯರು ಮಾಡುವ ಯಾವ ಕರ್ಮಗಳು ಜನನಮರಣಕ್ಕೆ ಕಾರಣಗಳಾಗುವುವು? ಹಾಗೂ ಯಾವ ಕರ್ಮಗಳು ಅವನನ್ನು ನರಕಕ್ಕೆ ಸೆಳೆಯುವುವು? ಇವುಗಳಿಗೆ ಪ್ರತಿಕ್ರಿಯೆಗಳು ಹೇಗೆ? ಅವುಗಳ ಸ್ವರೂಪಗಳನ್ನು ನನಗೆ ತಿಳಿಸುವವನಾಗು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ಅರುಣಾಚಲ ಸ್ಥಾನ ಮಾಹಾತ್ಮ್ಯವರ್ಣನ"ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಮೋಽಧ್ಯಾಯಃ

## ಕರ್ಮವಿಪಾಕವರ್ಣನಂ

ನಂದಿಕೇಶ್ವರ ಉವಾಚ :—

ಶುದ್ಧ ಸತ್ತ್ವಗುಣೋಪೇತೋ ಲೋಕೇಽಸ್ಮಿನ್ದುರ್ಲಭಃ ಪುಮಾನ್ ।
ರಜಸ್ತಮೋಗುಣೋಪೇತಾ ಭವಂತಿ ಸುಲಭಾ ನರಾಃ ॥ ೧ ॥
ಸಾತ್ವಿಕಃ ಪುಣ್ಯಶೀಲತ್ವಾನ್ನಿಃಶ್ರೇಯಸಮವಾಪ್ನುಯಾತ್ ।
ವೈಚಿತ್ರ್ಯಾತ್ಕರ್ಮಣಾಮೇಷಾಮನುಭೋಗಾಯ ವೇಧಸಾ ।
ವೈಚಿತ್ರ್ಯಾಣ್ಯೇವ ಸೃಷ್ಟಾನಿ ನರಕಾಣ್ಯತ್ರ ತತ್ರ ಚ ॥ ೨ ॥
ಮಹಾರೌರವಭಾಗ್ಭೂತ್ವಾ ಖರಃ ಶ್ವಾ ಶೂಕರೋಽಪಿ ವಾ ।
ಚಂಡಾಲೋ ವಾ ಭವೇತ್ಪ್ರೇತ್ಯ ಪುರುಷೋ ಬ್ರಹ್ಮಹತ್ಯಯಾ ॥ ೩ ॥
ಚಿರಂ ರೌರವ ಸಂರುದ್ಧಃ ಕೃಮಿಕೀಟಪತಂಗತಾಂ ।
ಪ್ರಾಪ್ನುಯಾತ್ಕರ್ಮಕರ್ತೃತ್ವಂ ಸುರಾಪಾನೇನ ಚ ದ್ವಿಜಃ ॥ ೪ ॥

---

## ಕನ್ನಡದ ಅನುವಾದ

### ಕರ್ಮವಿಪಾಕವರ್ಣನ

೧. ನಂದಿಕೇಶ್ವರನು ಹೇಳುತ್ತಾನೆ:—ಶುದ್ಧಸತ್ವಗುಣದಿಂದ ಕೂಡಿದ ಮನುಷ್ಯನು ಈ ಲೋಕದಲ್ಲಿ ಅತ್ಯಂತ ದುರ್ಲಭನು. ಸಾಧಾರಣವಾಗಿ ಜನರೆಲ್ಲರೂ ರಜಸ್ತಮೋಗುಣಾವಿಷ್ಟರಾಗಿಯೇ ಇರುವರು.

೨. ಸಾತ್ವಿಕಪುರುಷನು ತನ್ನ ಪುಣ್ಯದ ಬಲದಿಂದ ಮೋಕ್ಷವನ್ನು ಹೊಂದುವನು. ರಾಜಸ ತಾಮಸ ಜೀವರು ವಿವಿಧ ಕರ್ಮಗಳ ಫಲಗಳನ್ನೂ ಅನುಭವಿಸಬೇಕಾಗಿರುವುದರಿಂದ ಬ್ರಹ್ಮನು ಅವರಿಗಾಗಿ ವಿಧವಿಧವಾದ ಅನೇಕ ನರಕಗಳನ್ನು ಇಲ್ಲಿಯೂ, ಅಲ್ಲಿಯೂ ಸಹ ಸೃಷ್ಟಿಮಾಡಿರುವನು.

೩. ಬ್ರಹ್ಮಹತ್ಯೆಯನ್ನು ಮಾಡಿದ ಪುರುಷನು ಮಹಾ ರೌರವ ಯಾತನೆಯನ್ನು ಅನೇಕಕಾಲ ಅನುಭವಿಸಿ ಪುನಃ ಈ ಲೋಕದಲ್ಲಿ ಕತ್ತೆ, ನಾಯಿ, ಹಂದಿ, ಅಥವಾ ಚಂಡಾಲನೊ ಆಗುವನು.

೪. ಬ್ರಾಹ್ಮಣನು ಸುರಾಪಾನವನ್ನು ಮಾಡಿದರೆ ಬಹುಕಾಲ ರೌರವ ನರಕವನ್ನು ಅನುಭವಿಸಿ ತಕ್ಕ ಕರ್ಮಕ್ಕನುಸಾರವಾಗಿ ಕ್ರಿಮಿ, ಕೀಟ, ಪತಂಗಗಳ ಜನ್ಮವನ್ನು ತಾಳುವನು.

ಬ್ರಹ್ಮಸ್ವಹರಣಾದ್ಬ್ರಹ್ಮರಾಕ್ಷಸತ್ವಮವಾಪ್ನುಯಾತ್ ।
ಯದ್ಯತ್ತು ಚೋರಯೇತ್ತತ್ತಚ್ಛೂನ್ಯಂ ಸ್ಯಾದನ್ಯಜನ್ಮನಿ ॥ ೫ ॥
ಅಸಿಪತ್ರವನೇ ಪೀಡಾಮವಾಪ್ಯ ಸುಚಿರಂ ಪುನಃ ।
ನಪುಂಸಕತ್ವಂ ಸಂಗಚ್ಛೇತ್ಪುರುಷೋ ಗುರುತಲ್ಪಗಃ ॥ ೬ ॥
ತಪ್ತೈಃ ಕಾಲಾಯಸೈರ್ದಂಡೈಃ ಪೀಡಿತೋ ಯಮಕಿಂಕರೈಃ ।
ನರಕೇ ಕಾಲಸೂತ್ರಾಖ್ಯೇ ನಿವಸೇತ್ಪರದಾರಗಃ ॥ ೭ ॥
ಅಗ್ನಿದೋ ನಿವಸೇದ್ಘೋರೇ ಸುಘೋರೇ ಗರದಾಯಕಃ ।
ಮಹಾಘೋರೇ ಚ ಪಿಶುನೋಽವೀಚ್ಯಾಂ ಧರ್ಮವಿನಿಂದಕಃ ॥ ೮ ॥
ವಸೇತ್ಕರಾಳೇ ಮಿತ್ರಧ್ರುಗ್ಭೀಮೇ ಹಿಂಸೈಕತತ್ಪರಃ ।
ಸಂಹಾರೇ ಛನ್ನಪಾಪಿಷ್ಠೋ ಮೃಷಾವಾದೀ ಭಯಾನಕೇ ॥ ೯ ॥
ಅಸಿಘೋರೇ ವಸೇದ್ವಾಪೀಕೂಪಕ್ಷೇತ್ರನರಾದಿಹೃತ್ ।
ವಜ್ರೇ ಪರದ್ರೋಹರತೋ ಮಾಂಸಾಶೀ ತರಲೇ ದ್ವಿಜ ॥ ೧೦ ॥

---

೫. ಬ್ರಹ್ಮಸ್ವತ್ತನ್ನು ಅಪಹರಿಸಿದರೆ ಬ್ರಹ್ಮರಾಕ್ಷಸನಾಗುವನು. ಇಲ್ಲಿ ಯಾವ ಯಾವುದನ್ನು ಅಪಹರಿಸುವನೊ ಮುಂದಿನ ಜನ್ಮದಲ್ಲಿ ಆವನಿಗೆ ಆ ವಸ್ತುಗಳ ಪ್ರಾಪ್ತಿಯಾಗುವುದಿಲ್ಲ.

೬. ಗುರುತಲ್ಪಗಾಮಿಯಾದ ಮೂಢನು ನರಕದಲ್ಲಿ ಕತ್ತಿಯ ಅಲುಗಿನಂತೆ ತೀಕ್ಷ್ಣವಾದ ಎಲೆಗಳುಳ್ಳ ಮರಗಳ ವನದಲ್ಲಿ ಬಹುಕಾಲ ವಾಸಮಾಡಿ ಈ ಲೋಕದಲ್ಲಿ ನಪುಂಸಕನಾಗುವನು.

೭–೮. ಪರಸ್ತ್ರೀಯನ್ನು ಸೇರುವವನು ಕಾಲಸೂತ್ರವೆಂಬ ನರಕದಲ್ಲಿ ಯಮದೂತರ ಕೈಗಳಲ್ಲಿರುವ ಕಾದ ಕಬ್ಬಿಣದ ಸಲಾಕೆಗಳಿಂದ ಪೀಡಿತನಾಗಿ ಬಹುಕಾಲ ವಾಸಮಾಡುವನು. ಪರಸ್ವಕ್ಕೆ ಬೆಂಕಿಯನ್ನಿಟ್ಟವನು ಘೋರವೆಂಬ ನರಕದಲ್ಲಿಯೂ, ಇತರರಿಗೆ ವಿಷಪಾನ ಮಾಡಿಸುವವನು ಸುಘೋರದಲ್ಲಿಯೂ, ಲೋಭಿಯಾದವನು ಮಹಾಘೋರದಲ್ಲಿಯೂ, ಧರ್ಮವನ್ನು ನಿಂದಿಸುವವನು ಅವೀಚಿಯಲ್ಲಿಯೂ ವಾಸಿಸುವರು.

೯. ಮಿತ್ರನಿಗೆ ದ್ರೋಹಮಾಡಿದವನು ಕರಾಳ ನರಕದಲ್ಲಿಯೂ, ಇತರರಿಗೆ ಹಿಂಸೆಯನ್ನೇ ಮಾಡುವವನು ಭೀಮ ನರಕದಲ್ಲಿಯೂ, ಪಾಪಿಷ್ಠನಾದರೂ ತನ್ನ ಸ್ವರೂಪವನ್ನು ಮರೆಸಿಕೊಂಡು ತಿರುಗುವವನು ಸಂಹಾರ ನರಕದಲ್ಲಿಯೂ, ಸುಳ್ಳುಹೇಳುವವನು ಭಯಾನಕ ನರಕದಲ್ಲಿಯೂ ವಾಸಮಾಡುವರು.

೧೦. ಕೂಪ, ಕ್ಷೇತ್ರಗಳಲ್ಲಿ ಮನುಷ್ಯರಿಂದ ಅಪಹರಿಸುವವನು ಅಸಿಘೋರದಲ್ಲಿಯೂ, ಇತರರಿಗೆ ದ್ರೋಹಿಯಾದವನು ವಜ್ರದಲ್ಲಿಯೂ, ಮಾಂಸಭಕ್ಷಕನಾದವನು ತರಳವೆಂಬ ನರಕದಲ್ಲಿಯೂ ದುಃಖಪಡುವರು.

ತೀಕ್ಷ್ಣೇ ಮಾತೃಪಿತೃದ್ರೋಹೀ ತಾಪನೇ ಜಪದೂಷಕಃ ।
ಅಶ್ವಘ್ನೋಽಪಿ ನಿರುಚ್ಛ್ವಾಸೇ ವಸೇದ್ಗೋಘ್ನಶ್ಚದಾರುಣೇ ॥ ೧೧ ॥
ಭ್ರೂಣಹಾ ನಿವಸೇಚ್ಚಂಡೇ ಸ್ತ್ರೀಹತ್ಯಾಕೃತ್ಕುಕೂಲಕೇ ।
ದೇವಸ್ವಹಾರೀ ದಹನೇ ಘೋರಘೋರೇ ಪರಸ್ವಹೃತ್ ॥ ೧೨ ॥
ಕೃತಾಂತದೂತಾ ನರಕೇ ಸರ್ವಾನೇವ ಹಿ ಪಾಪಿನಃ ।
ಬಧ್ನಂತಿ ಪಾಶೈರ್ನಿಘ್ನಂತಿ ದಂಡೈರ್ವಿಧ್ಯಂತಿ ಶಂಕುಭಿಃ ॥ ೧೩ ॥
ತೀಕ್ಷ್ಣಯಶ್ಚಂಚವಃ ಕಂಕಾಃ ಕ್ರೂರದಂಷ್ಟ್ರಾ ಮಹೋರಗಾಃ ।
ಕಾಲೇಯಕಾಶ್ಚ ವ್ಯಾಘ್ರಾಶ್ಚ ಹಿಂಸ್ರಾಶ್ಚಾನ್ಯೇ ದಶಂತ್ಯಮೂನ್ ॥ ೧೪ ॥
ಶಕಲೀಕುರ್ವತೇ ಶಸ್ತ್ರೈರ್ದಹಂತೇ ದೇಹಮೇವ ಚ ।
ಖನಂತಿ ಗಹನೇ ಶ್ವಭ್ರೇ ಕಶಾಭಿಸ್ತಾಡಯಂತಿ ಚ ॥ ೧೫ ॥
ತೈಲದ್ರೋಣ್ಯಾಂ ವಿಪಚ್ಯಂತೇ ತುದ್ಯಂತೇ ಸೂಕ್ಷ್ಮಸೂಚಿಭಿಃ ।
ವಾಹ್ಯಂತೇ ದುರ್ವಹಾನ್ಭಾರಾನ್ಯಮದೂತೈರ್ಹಿ ಪಾಪಿನಃ ॥ ೧೬ ॥

---

೧೧. ಮಾತಾಪಿತೃಗಳಿಗೆ ದ್ರೋಹಿಯಾದವನು ತೀಕ್ಷ್ಣದಲ್ಲಿಯೂ, ಜಪ ತಪಗಳನ್ನು ನಿಂದಿಸುವವನು ತಾಪನದಲ್ಲಿಯೂ, ಅಶ್ವವನ್ನು ಕೊಲ್ಲುವವನು ನಿರುಚ್ಛ್ವಾಸದಲ್ಲಿಯೂ, ಗೋವಧೆಯನ್ನು ಮಾಡುವವನು ದಾರುಣ ನರಕದಲ್ಲಿಯೂ ತಪಿಸುವರು.

೧೨. ಶಿಶುಘಾತುಕನು ಚಂಡನರಕದಲ್ಲಿಯೂ, ಸ್ತ್ರೀಹಂತಕನು ಕುಕೂಲಕದಲ್ಲಿಯೂ, ದೇವಸ್ವವನ್ನು ಅಪಹರಿಸಿದವನು ದಹನದಲ್ಲಿಯೂ, ಪರರ ಸ್ವತ್ತನ್ನು ಕದಿಯುವವನು ಘೋರಘೋರದಲ್ಲಿಯೂ ಬೀಳುವರು.

೧೩. ಈ ಎಲ್ಲಾ ಪಾಪಿಗಳನ್ನೂ ಯಮದೂತರು ನರಕದಲ್ಲಿ ಪಾಶಗಳಿಂದ ಬಂಧಿಸಿ, ದಂಡಗಳಿಂದ ಪೀಡಿಸಿ, ತ್ರಿಶೂಲಗಳಿಂದ ತಿವಿದು ಹಿಂಸಿಸುವರು.

೧೪. ತೀಕ್ಷ್ಣವಾದ ಕಬ್ಬಿಣದ ಕೊಕ್ಕುಗಳುಳ್ಳ ಕಂಕಪಕ್ಷಿಗಳೂ, ಕ್ರೂರ ದಂಷ್ಟ್ರಗಳಿಂದ ಕೂಡಿದ ಘಟಸರ್ಪಗಳೂ, ನಾಯಿಗಳೂ, ವ್ಯಾಘ್ರಗಳೂ, ಇತರ ಹಿಂಸ್ರಮೃಗಗಳೂ ಇವರನ್ನು ಕಡಿದು ಸಂಕಟಪಡಿಸುತ್ತವೆ.

೧೫. ಇಂತಹ ಪಾಪಿಗಳನ್ನು ಯಮದೂತರು ಶಸ್ತ್ರಗಳಿಂದ ಕಡಿಯುವರು. ದೇಹಗಳನ್ನು ಸುಡುವರು. ಆಳವಾದ ಗುಳಿಗಳಲ್ಲಿ ಹೂಳುವರು; ಚಾವಟಿಗಳಿಂದ ಹೊಡೆಯುವರು.

೧೬. ಕಾಸಿದ ಎಣ್ಣೆಯ ಪಾತ್ರೆಗಳಲ್ಲಿ ಸುಡುವರು. ಸೂಕ್ಷ್ಮವಾದ ಸೂಜಿಗಳಿಂದ ಚುಚ್ಚುವರು. ಅತ್ಯಂತ ದುಸ್ಸಾಧ್ಯವಾದ ಭಾರಗಳನ್ನು ಹೊರಿಸುವರು. ಇವು ಯಮದೂತರು ಪಾಪಿಗಳಿಗೆ ಮಾಡುವ ಶಿಕ್ಷೆಗಳಾಗಿವೆ.

ಬ್ರಹ್ಮಹಾ ಕ್ಷಯರೋಗೀ ಸ್ಯಾತ್ಸುರಾಪಃ ಶ್ಯಾವದಂತಕಃ ।
ಸ್ವರ್ಣಾಪಹಾರೀ ಕುನಖೀ ದುಶ್ಚರ್ಮಾ ಗುರುತಲ್ಪಗಃ ॥ ೧೭ ॥
ಅಪಸ್ಮಾರೀ ಗುರುದ್ರೋಹೀ ಚಂಡಾಲೋ ವೇದದೂಷಕಃ ।
ಕೂಟಸಾಕ್ಷೀ ಚಾಕ್ಷಿರೋಗೀ ಮಂದಾಗ್ನಿಶ್ಚಾಗ್ರಭೋಜನಃ ॥ ೧೮ ॥
ವಿದ್ಯಾಪಹಾರೀ ಮೂಕಃಸ್ಯಾದಂಧಃ ಪುಸ್ತಕಚೋರಕಃ ।
ಪರದಾರರತಃ ಪಂಗುರ್ಬಧಿರಃ ಪರನಿಂದಕಃ ॥ ೧೯ ॥
ವಿಚ್ವರಾಹೋ ನಿರಾಚಾರೋ ಜಿಹ್ವಾರೋಗೀ ಚ ತಸ್ಕರಃ ।
ಅಭ್ಯಾಗತಾತಿಥಿತ್ಯಾಗೀ ಕಪೋಲಕಂಟಕೋ ಭವೇತ್ ॥ ೨೦ ॥
ಪರ್ವಸು ಸ್ತ್ರೀರತೋ ಮೇಹೀ ಪೂತ್ಯಾಸ್ಯೋ ಭಕ್ಷ್ಯಭಕ್ಷಕಃ ।
ಮರ್ಯಾದಾಭೇದಕೋ ದಾಸಸ್ತಟಾಕಾರಾಮಹೃತ್ಪರಃ ॥ ೨೧ ॥
ಪ್ರತಿಶ್ರುತಾಪ್ರದಾತಾಸ್ಯಾದಲ್ಪಾಯುಃ ಶ್ವಾವಿಕತ್ಥನಃ ।
ವಿಷ್ಣುದ್ರೋಹೀ ಚ ಸರಠಃ ಶಿವದ್ರೋಹೀ ಚ ಮೂಷಕಃ ॥ ೨೨ ॥

---

೧೭. ಈ ಪಾಪಿಗಳು ಮತ್ತೆ ಭೂಲೋಕಕ್ಕೆ ಬಂದರೆ ಬ್ರಹ್ಮಹತ್ಯೆ ಮಾಡಿದವನು ಕ್ಷಯರೋಗಿಯಾಗುವನು. ಮದ್ಯಪಾನ ಮಾಡುವವನು ಶ್ಯಾವದಂತಕನಾಗುವನು. ಸ್ವರ್ಣವನ್ನು ಅಪಹರಿಸಿದವನ ಉಗುರುಗಳು ವಕ್ರಗಳಾಗಿರುವುವು. ಗುರುತಲ್ಪಗಮನ ಮಾಡಿದವನು ಚರ್ಮರೋಗದಿಂದ ನರಳುವನು.

೧೮. ಗುರುದ್ರೋಹಿಯು ಹುಚ್ಚನಾಗುವನು. ವೇದದೂಷಕನು ಚಂಡಾಲನಾಗುವನು. ಸುಳ್ಳು ಸಾಕ್ಷ್ಯವನ್ನು ಹೇಳುವವನು ನೇತ್ರರೋಗವನ್ನು ಅನುಭವಿಸುವನು. ಅತಿಥಿ ಅಭ್ಯಾಗತರಿಗೆ ವುುಂಚಿತವಾಗಿ ಭೋಜನಮಾಡುವವನು ಅಲ್ಪವಾದ ಜೀರ್ಣಶಕ್ತಿಯುಳ್ಳವನಾಗುವನು.

೧೯. ವಿದ್ಯೆಯನ್ನು ಅಪಹರಿಸಿದರೆ ಮೂಕನಾಗುವನು. ಪುಸ್ತಕವನ್ನು ಕದ್ದರೆ ಜಾತ್ಯಂಧನಾಗುವನು. ಪರಸ್ತ್ರೀರತನಾದವನು ಕುಂಟನೂ, ಪರನಿಂದೆ ಮಾಡುವವನು ಕಿವುಡನೂ ಆಗುವರು.

೨೦. ಆಚಾರಹೀನನಾದವನು ಅಮೇಧ್ಯವನ್ನು ತಿನ್ನುವ ಹಂದಿಯಾಗುವನು. ಕಳ್ಳನು ಜಿಹ್ವಾರೋಗಿಯೂ, ಅತಿಥಿ ಅಭ್ಯಾಗತರನ್ನು ಬಿಟ್ಟು ಭೋಜನ ಮಾಡುವವನು ಕಪೋಲರೋಗಿಯೂ ಆಗುತ್ತಾರೆ.

೨೧. ಪರ್ವಕಾಲದಲ್ಲಿ ಸ್ತ್ರೀಸಂಗಮಾಡುವವನು ಮೇಹರೋಗಿಯೂ, ಅಭಕ್ಷ್ಯಭಕ್ಷಕನು ದುರ್ವಾಸನೆಯುಳ್ಳ ಮುಖವುಳ್ಳವನೂ, ಧರ್ಮದ ಎಲ್ಲೆಗಳನ್ನು ಮೀರುವವನು ದಾಸನೂ, ತಟಾಕ, ಆರಾಮಗಳನ್ನು ಕೆಡಿಸುವನು ಕತ್ತೆಯೂ ಆಗುವರು.

೨೨. ತಾನು ಕೇಳಿದ ವಿದ್ಯೆಯನ್ನು ಇತರರಿಗೆ ಕೊಡದವನು ಅಲ್ಪಾಯುವೂ,

ಏವಂ ಪಾಪಫಲಂ ಜ್ಞಾತ್ವಾ ಪ್ರಾಯಶ್ಚಿತ್ತಂ ಸಮಾಚರೇತ್ ॥ ೨೩ ॥
ತಚ್ಚಾಸ್ಮಿನ್ನರುಣಕ್ಷೇತ್ರೇ ಕರ್ತವ್ಯಂ ಸಮ್ಯಗಾಸ್ತಿಕೈಃ ॥ ೨೪ ॥
ಇತಿ ನಿಶಮ್ಯ ಸ ದುಷ್ಕೃತಕಾರಿಣಾಂ
ಬಹುವಿಧಾಂ ನರಕೇಷು ನೃಣಾಂ ವ್ಯಥಾಂ ।
ಚರಣಯೋಃ ಪತಿತಶ್ಚ ತದಾ
ಪುನಃಪುನರಯಾಚತ ತಚ್ಛಮನಕ್ರಿಯಾಂ ॥ ೨೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ಕರ್ಮವಿಪಾಕವರ್ಣನಂ"ನಾಮ ಪಂಚಮೋಧ್ಯಾಯಃ

---

ಬಾಯಿಗೆ ಬಂದಂತೆ ಹರಟುವವನು ನಾಯಿಯೂ, ವಿಷ್ಣುದ್ರೋಹಿಯು ಹೆಂಟೇಗೊದ್ದನೂ, ಶಿವದ್ರೋಹಿಯು ಮೂಷಕನೂ ಆಗಿ ಜನ್ಮಗಳನ್ನು ಪಡೆಯುವರು.

೨೩-೨೪. ಈ ರೀತಿಯಾಗಿ ಪಾಪದ ಫಲವನ್ನು ತಿಳಿದು ಪ್ರಾಯಶ್ಚಿತ್ತವನ್ನು ಮಾಡಬೇಕು. ಅದೂ ಸಹ ಆಸ್ತಿಕರಿಂದ ಚೆನ್ನಾಗಿ ಈ ಅರುಣಾಚಲ ಕ್ಷೇತ್ರದಲ್ಲಿಯೇ ಮಾಡಲ್ಪಡಬೇಕು.

೨೫. ಹೀಗೆ ಪಾಪಗಳನ್ನು ಮಾಡುವ ಮನುಷ್ಯರು ವಿವಿಧವಾದ ನರಕಗಳಲ್ಲಿ ಅನುಭವಿಸುವ ಯಾತನೆಗಳನ್ನು ನಂದಿಕೇಶ್ವರನಿಂದ ಕೇಳಿ ಮಾರ್ಕಂಡೇಯನು ಆತನಿಗೆ ಪ್ರಣಾಮವನ್ನು ಮಾಡಿ ಆ ಪಾಪಗಳ ಪ್ರಾಯಶ್ಚಿತ್ತ ವಿಧಾನಗಳನ್ನು ಕೇಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ಕರ್ಮವಿಪಾಕ ವರ್ಣನ"ವೆಂಬ ಐದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಷ್ಠೋಽಧ್ಯಾಯಃ

### ಪಾಪಾಪನೋದಕ ಪ್ರಾಯಶ್ಚಿತ್ತವರ್ಣನಂ

ನಂದಿಕೇಶ್ವರ ಉವಾಚ :—

ವಿಸ್ತರಾತ್ಕಥಯಾಮ್ಯದ್ಯ ಪ್ರಾಯಶ್ಚಿತ್ತಂ ಮಹಾಂಹಸಾಂ ।
ಸರ್ವೇಷಾಮವಧತ್ಸ್ವತ್ವಮವಲಂಬ್ಯಾಸ್ತಿಕೀಂ ಧಿಯಂ ॥ ೧ ॥
ಬ್ರಹ್ಮಹಾ ಪ್ರಾಪ್ಯ ಶೋಣಾದ್ರಿಂ ನಿಮಗ್ನಃ ಖಡ್ಗತೀರ್ಥಕೇ ।
ಜಪನ್ಪಂಚಾಕ್ಷರಂ ಮಂತ್ರಂ ಭಸ್ಮರುದ್ರಾಕ್ಷಧಾರಕಃ ॥ ೨ ॥
ಕೃತೋಪವಾಸಃ ಸಂಪೂಜ್ಯ ಪ್ರಯತಃ ಪರಮೇಶ್ವರಂ ।
ಬ್ರಾಹ್ಮಣಾನ್ಭೋಜಯೇದ್ವರ್ಷಂ ಭಿಕ್ಷಾಶೀ ನಿಯತೇಂದ್ರಿಯಃ ॥ ೩ ॥
ವಿಶೇಷಪೂಜಾಶುಶ್ರೂಷಾಂ ಕುರ್ಯಾದ್ದೇವಸ್ಯ ಭಕ್ತಿತಃ ।
ಬ್ರಹ್ಮಹತ್ಯಾವಿನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ॥ ೪ ॥
ಸುರಾಪೋಽಪ್ಯರುಣಕ್ಷೇತ್ರೇ ವರ್ಷಮೇಕಂ ವಸನ್ನತಿ ।
ಪ್ರಾಗ್ವತ್ಕೃತಸಮಾಚಾರಃ ಸಂಪೂಜ್ಯೈವಂ ಮಹೇಶ್ವರಂ ॥ ೫ ॥

---

### ಕನ್ನಡದ ಅನುವಾದ

#### ಪ್ರಾಯಶ್ಚಿತ್ತವರ್ಣನೆ

೧. ನಂದಿಕೇಶ್ವರನು ಹೇಳುತ್ತಾನೆ:—ಎಲೈ ಮಾರ್ಕಂಡೇಯನೆ! ನಿನಗೆ ಪ್ರಾಯಶ್ಚಿತ್ತ ವಿಧಾನಗಳನ್ನು ವಿವರಿಸಿ ಹೇಳುತ್ತೇನೆ. ನೀನು ಆಸ್ತಿಕಬುದ್ಧಿಯಿಂದ ಕೇಳುವವನಾಗು.

೨-೩. ಬ್ರಹ್ಮಹತ್ಯೆಯನ್ನು ಮಾಡಿದವನು ಅರುಣಾಚಲಕ್ಕೆ ಬಂದು ಖಡ್ಗತೀರ್ಥದಲ್ಲಿ ಮಿಂದು ಪಂಚಾಕ್ಷರಿಯನ್ನು ಜಪಿಸುತ್ತ ಭಸ್ಮರುದ್ರಾಕ್ಷೆಗಳನ್ನು ಧರಿಸಿ ಉಪವಾಸಪೂರ್ವಕವಾಗಿ ಪ್ರಯತ್ನದಿಂದ ಪರಮೇಶ್ವರನನ್ನು ಪೂಜಿಸಿ ಭಿಕ್ಷಾನ್ನದಿಂದ ಬ್ರಾಹ್ಮಣರನ್ನು ಭೋಜನಮಾಡಿಸಿ ಒಂದು ವರ್ಷ ನಿಯತೇಂದ್ರಿಯನಾಗಿರಬೇಕು.

೪. ಮಹಾದೇವನಿಗೆ ಭಕ್ತಿಯಿಂದ ವಿಶೇಷ ಪೂಜೆಗಳನ್ನೂ ಸೇವೆಗಳನ್ನೂ ನಡೆಸಲು ಬ್ರಹ್ಮಹತ್ಯೆಯಿಂದ ಮುಕ್ತನಾಗಿ ಬ್ರಹ್ಮಲೋಕದಲ್ಲಿ ಸಂಪೂಜ್ಯನಾಗುವನು.

೫-೬. ಸುರಾಪಾನವನ್ನು ಮಾಡಿದವನು ಮೇಲೆ ಹೇಳಿದಂತೆಯೇ ನಿಯಮದಿಂದಿದ್ದು ಒಂದು ವರ್ಷಕಾಲ ಅರುಣಾಚಲದಲ್ಲಿ ವಾಸಮಾಡಿ ಮಹೇಶ್ವರನನ್ನು

ಕ್ಷೀರೇಣ ಸ್ನಾಪಯೇದ್ದೇವಂ ಶತರುದ್ರೀಯಮುಚ್ಚರನ್ ।
ಸುರಾಪಾನೋದ್ಭವೇನಾಶು ಪಾಪೇನ ಪರಿಮುಚ್ಯತೇ ॥ ೬ ॥
ಸುವರ್ಣಸ್ತೇಯಕೃಚ್ಛೋಣಕ್ಷೇತ್ರೇ ಬಿಲ್ವದಳೈರ್ಹರಂ ।
ಅಭ್ಯರ್ಚ್ಯ ಭೋಜಯೇದ್ವಿಪ್ರಾನ್ಪಾಪಾನ್ಮುಚ್ಯೇತ ದುಷ್ಕರಾತ್ ॥ ೭ ॥
ಗುರುದಾರರತಿರ್ಗತ್ವಾ ಕೃತ್ತಿಕಾಸ್ವರುಣಾಚಲಂ ।
ಯಥಾ ಪೂರ್ವಂ ವ್ರತೀ ಭೂತ್ವಾ ಸಹಸ್ರೇಣಪ್ರದೀಪಕೈಃ ॥ ೮ ॥
ಮಾಸತ್ರಯಂ ಸಮಾರಾಧ್ಯ ಶ್ರೀಶೋಣಾಚಲಶಂಕರಂ ।
ಪ್ರದದ್ಯಾದ್ಭೂಷಿತಾಂ ಕನ್ಯಾಂ ಬ್ರಾಹ್ಮಣಾಯ ಸುಧೀಮತೇ ॥ ೯ ॥
ಷಡಕ್ಷರಂ ಜಪೇನ್ನಿತ್ಯಂ ತೇನ ಮುಚ್ಯೇತ ಪಾಪ್ಮನಾ ।
ಶಿವಲೋಕೇಚ ನಿವಸೇದಾಸಂಸಾರಂ ನ ಸಂಶಯಃ ॥ ೧೦ ॥
ಪರದಾರಾಪಹರ್ತಾ ಚ ಕ್ಷೇತ್ರೇಽಸ್ಮಿನ್ ನಿಯತೇಂದ್ರಿಯಃ ।
ಮಾಸಮೇಕಂ ನವೈಃ ಪುಷ್ಪೈರಭ್ಯರ್ಚ್ಯಾರುಣಶಂಕರಂ ॥ ೧೧ ॥
ಮಾಹೇಶ್ವರಾಯ ವಿತರೇದ್ಧನಂ ಶಕ್ತ್ಯಾನುಗುಣ್ಯತಃ ।
ತತ್ಕ್ಷಣೇನ ವಿನಿರ್ಮುಕ್ತಸ್ತಸ್ಮಾತ್ಪಾಪಾತ್ಭವಿಷ್ಯತಿ ॥ ೧೨ ॥

---

ಪೂಜಿಸಿ ಕ್ಷೀರದಿಂದ ಶತರುದ್ರಾಭಿಷೇಕವನ್ನು ಮಾಡಲು ಸುರಾಪಾನದ ದೋಷದಿಂದ ಸದ್ಯದಲ್ಲಿಯೇ ಬಿಡುಗಡೆಯನ್ನು ಹೊಂದುತ್ತಾನೆ.

೭. ಸ್ವರ್ಣಸ್ತೇಯಿಯಾದವನು ಅರುಣಾಚಲದಲ್ಲಿ ಮಹೇಶ್ವರನನ್ನು ಬಿಲ್ವದಳಗಳಿಂದ ಪೂಜಿಸಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಲು ದುರ್ಭರವಾದ ಪಾಪದಿಂದ ಮುಕ್ತಿಯನ್ನು ಹೊಂದುವನು.

೮–೯. ಗುರುತಲ್ಪಗಮನವನ್ನು ಮಾಡುವವನು ಮೇಲಿನಂತೆ ವ್ರತವನ್ನು ಧಾರಣೆಮಾಡಿ ಕೃತ್ತಿಕಾನಕ್ಷತ್ರದ ದಿನದಲ್ಲಿ ಸಹಸ್ರದೀಪಗಳಿಂದ ಅರುಣಾಚಲೇಶ್ವರನನ್ನು ಪೂಜಿಸಿ ಮೂರು ತಿಂಗಳುಗಳಕಾಲ ವಿಶೇಷ ಪೂಜೆಯನ್ನು ಮಾಡಿದ ಬಳಿಕ ಅಲಂಕೃತಳಾದ ಕನ್ಯೆಯನ್ನು ಬುದ್ಧಿವಂತನಾದ ಬ್ರಾಹ್ಮಣಶ್ರೇಷ್ಠನಿಗೆ ಧಾರೆಯನ್ನೆರೆಯಬೇಕು.

೧೦. ನಿತ್ಯದಲ್ಲಿಯೂ ಷಡಕ್ಷರಿಯನ್ನು ಜಪಮಾಡುವುದರಿಂದ ಪಾಪವನ್ನು ಕಳೆದುಕೊಳ್ಳುತ್ತಾನೆ. ಮೋಕ್ಷವಾಗುವವರೆಗೂ ಶಿವಲೋಕದಲ್ಲಿ ವಾಸಮಾಡುವನು.

೧೧–೧೨. ಪರಸ್ತ್ರೀಹರಣಮಾಡಿದ ಮನುಷ್ಯನು ಇಂದ್ರಿಯ ಸಂಯಮದೊಡನೆ ಈ ಕ್ಷೇತ್ರದಲ್ಲಿ ಒಂದು ತಿಂಗಳ ಕಾಲ ಅರುಣಾಚಲೇಶ್ವರನನ್ನು ನೂತನ ಪುಷ್ಪಗಳಿಂದ ಪೂಜಿಸಿ ತನ್ನ ಶಕ್ತ್ಯನುಸಾರವಾಗಿ ಧನವನ್ನು ಶಿವಭಕ್ತನಿಗೆ ದಾನಮಾಡಬೇಕು. ತಕ್ಷಣದಲ್ಲೇ ಅಪಾಯದಿಂದ ಮುಕ್ತನಾಗುವನು.

ಗರದೋಽಪ್ಯರುಣಕ್ಷೇತ್ರೇ ವ್ರತೀ ಭೂತ್ವಾ ಯಥಾಪುರಾ ।
ಕ್ಷೀರೋಪಹಾರಂ ದೇವಾಯ ದತ್ವಾ ದೋಷೇಣ ಮುಚ್ಯತೇ ॥ ೧೩ ॥
ಪಿಶುನೋಽಪ್ಯರುಣಕ್ಷೇತ್ರೇ ವ್ರತೀ ವೇದರತೋ ನರಃ ।
ಅಧ್ಯಾಪಯೇದ್ದ್ವಿಜಾನ್ಮುಖ್ಯಾನ್ಸ್ವತೋ ನಿಷ್ಕಲ್ಮಷೋ ಭವೇತ್ ॥ ೧೪ ॥
ಅಗ್ನಿದೋಽಪ್ಯರುಣಕ್ಷೇತ್ರೇ ತ್ರೀನ್ಮಾಸಾನ್ಪೂರ್ವವದ್ವ್ರತೀ ।
ದದ್ಯಾಚ್ಛೈವಾಯ ನಿರ್ಮಾಯ ಗೃಹಂ ತತ್ಪಾಪಶಾಂತಯೇ ॥ ೧೫ ॥
ಧರ್ಮನಿಂದಾಕರಃ ಶೋಣಕ್ಷೇತ್ರೇ ವರ್ಷಂ ವ್ರತೀ ವಸನ್ ।
ಸತ್ರಾದಿಕಂ ಪ್ರಕುರ್ವೀತ ಯಥಾಶಕ್ತ್ಯಘಶಾಂತಯೇ ॥ ೧೬ ॥
ಪಿತೃದ್ರೋಹ್ಯರುಣಕ್ಷೇತ್ರೇ ತಿಷ್ಠನ್ಮಾಸಮತಂದ್ರಿತಃ ।
ಗಿರೀಶಾಯ ದ್ವಿಜೇಭ್ಯೋಽಪಿ ಪ್ರದದ್ಯಾದ್ಗಾಃ ಸಹಸ್ರಶಃ ॥ ೧೭ ॥
ಗ್ರಹೋಪರಾಗಕಾಲೇಷು ಭೋಜಯಿತ್ವಾ ದ್ವಿಜಾನ್ಬಹೂನ್ ।
ವಿಮುಂಚೇದ್ವೃಷಭಂ ನೀಲಂ ವಿಮುಚ್ಯೇತ ತತೋಽಂಹಸಃ ॥ ೧೮ ॥

---

೧೩. ವಿಷದಾಯಕನು ನಿಯಮದಿಂದಿದ್ದು ಅರುಣಾಚಲದಲ್ಲಿ ಮಹೇಶ್ವರನಿಗೆ ಕ್ಷೀರದ ನೈವೇದ್ಯವನ್ನರ್ಪಿಸುವುದರಿಂದ ಪಾಪರಹಿತನಾಗುವನು.

೧೪. ಲೋಭಿಯು ಈ ಕ್ಷೇತ್ರದಲ್ಲಿ ನಿಯತವ್ಯವಹಾರದಿಂದಲೂ ವೇದಜ್ಞನಾಗಿದ್ದಲ್ಲಿ ಬ್ರಾಹ್ಮಣಶ್ರೇಷ್ಠರಿಗೆ ವೇದೋಪದೇಶಮಾಡುವುದರಿಂದಲೂ ನಿಷ್ಕಲ್ಮಷನಾಗುವನು.

೧೫. ಇತರರ ಮನೆಗೆ ಬೆಂಕಿಯನ್ನಿಟ್ಟವನು ಪೂರ್ವದಂತೆಯೇ ನಿಯಮವನ್ನನುಸರಿಸಿ ಮೂರು ಮಾಸಗಳಿದ್ದು ತನ್ನ ಪಾಪದ ವಿಮೋಚನೆಗಾಗಿ ಶಿವಭಕ್ತನಿಗೆ ಮನೆಯನ್ನು ಕಟ್ಟಿಸಿಕೊಡಬೇಕು.

೧೬. ಧರ್ಮನಿಂದಕನು ಈ ಕ್ಷೇತ್ರದಲ್ಲಿ ಒಂದು ವರ್ಷಕಾಲ ನಿಯಮದಿಂದಿದ್ದು ಯಥಾಶಕ್ತಿಯಾಗಿ ಯಜ್ಞಯಾಗಾದಿಗಳನ್ನು ನಡೆಸಿ ಪಾಪವನ್ನು ಕಳೆದುಕೊಳ್ಳುವನು.

೧೭. ಮಾತಾಪಿತೃಗಳಲ್ಲಿ ದ್ರೋಹವೆಸಗಿದವನು ಒಂದು ತಿಂಗಳಕಾಲ ನಿಯಮದಿಂದಿದ್ದು ಅರುಣಾಚಲದಲ್ಲಿ ಮಹಾದೇವನಿಗೂ ಬ್ರಾಹ್ಮಣರಿಗೂ ಸಾವಿರಾರು ಹಸುಗಳನ್ನು ದಾನಮಾಡಬೇಕು.

೧೮. ಗ್ರಹಣದ ದಿನಗಳಲ್ಲಿ ಅನೇಕ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ನೀಲವಾದ ವೃಷಭವನ್ನು ಉತ್ಸರ್ಜನಮಾಡುವುದರಿಂದ ಪಾಪವಿಮುಕ್ತನಾಗುವನು.

ಸ್ತ್ರೀಘ್ನಶ್ಚಾಪಿ ಶಿಶುಘ್ನೋಽಪಿ ಶೋಣಕ್ಷೇತ್ರಮುಪೇಯಿವಾನ್ ।
ವ್ಯತೀಪಾತೇ ತಿಲಾನ್ದದ್ಯಾತ್ ದ್ವಿಜೇಭ್ಯೋ ದುರಿತಚ್ಛಿದೇ ॥ ೧೯ ॥
ಪ್ರಚ್ಛನ್ನಪಾಪಕೃಚ್ಛೋಣಕ್ಷೇತ್ರೇಽಸ್ಮಿನ್ನಿಯತೇಂದ್ರಿಯಃ ।
ಗುಪ್ತದಾನಾನಿ ಕುರ್ವೀತ ಭವೇದ್ವೈ ಗತಕಲ್ಮಷಃ ॥ ೨೦ ॥
ಮೃಷಾಭಾಷ್ಯರುಣಕ್ಷೇತ್ರೇ ಷಣ್ಮಾಸಾನ್ನಿವಸನ್ವ್ರತೀ ।
ಶೋಣಾಚಲೇಶ್ವರ ಸ್ತೋತ್ರಪಾಠೇನ ಸ್ಯಾದಕಲ್ಮಷಃ ॥ ೨೧ ॥
ಕೂಪಾದಿಭೇದಕೃಚ್ಛೋಣಕ್ಷೇತ್ರಮಾಸಾದ್ಯ ಭಕ್ತಿತಃ ।
ತಟಾಕಾನ್ಖಾನಯೇತ್ತತ್ರ ಧ್ರುವಂ ನಿರ್ವೃಜಿನೋ ಭವೇತ್ ॥ ೨೨ ॥
ಕ್ಷೇತ್ರಾಪಹಾರೀ ದೇವಾಯ ಕ್ಷೇತ್ರಂ ದದ್ಯಾನ್ಮಹಾಫಲಂ ।
ಆರಾಮಕಂಟಕೋಽಪ್ಯಸ್ಮೈ ದದ್ಯಾದುದ್ಯಾನಮುತ್ತಮಂ ॥ ೨೩ ॥
ಗೃಹಾಪಹಾರೀ ಕುರ್ವೀತ ದೇವಸ್ಯಾಯತನಂ ನವಂ ।
ಅಂಹಸಾ ತೇನ ನಿರ್ಮುಕ್ತಃ ಶಿವಸಾಯುಜ್ಯಮಾಪ್ನುಯಾತ್ ॥ ೨೪ ॥

---

೧೯. ಸ್ತ್ರೀಯರನ್ನೂ, ಶಿಶುಗಳನ್ನೂ ಹನನಮಾಡಿದವನು ಪ್ರಾಯಶ್ಚಿತ್ತ ರೂಪವಾಗಿ ಅರುಣಾಚಲದಲ್ಲಿ ವ್ಯತೀಪಾತದ ದಿನದಲ್ಲಿ ಬ್ರಾಹ್ಮಣರಿಗೆ ತಿಲವನ್ನು ದಾನಮಾಡಬೇಕು.

೨೦. ಇತರ ಗುಪ್ತಪಾಪಗಳನ್ನು ಮಾಡಿದವನು ಇಂದ್ರಿಯಸಂಯಮನ ದಿಂದ ಗುಪ್ತದಾನಗಳನ್ನು ಮಾಡಿದರೆ ಪಾಪರಹಿತನಾಗುವನು.

೨೧. ಸುಳ್ಳು ಹೇಳುವವನು ಆರು ತಿಂಗಳಕಾಲ ಅರುಣಾಚಲದಲ್ಲಿ ನಿಯಮದಿಂದ ವಾಸಮಾಡಿ ಮಹೇಶ್ವರನನ್ನು ಸ್ತುತಿಸಿ ಜಪಮಾಡುವುದರಿಂದ ನಿಷ್ಕಲ್ಮಷನಾಗುವನು.

೨೨. ಕೂಪತಟಾಕಾದಿಗಳನ್ನು ನಾಶಮಾಡಿದರೆ ಅರುಣಾಚಲದಲ್ಲಿ ಭಕ್ತಿ ಯಿಂದ ತಟಾಕಗಳನ್ನು ಮಾಡಿಸಲು ಆತನು ನಿಜವಾಗಿಯೂ ಪಾಪರಹಿತ ನಾಗುವನು.

೨೩. ಇತರರ ಭೂಮಿಯನ್ನು ಅಪಹರಿಸಿದವನು ದೇವರಿಗೆ ಉತ್ತಮ ಕ್ಷೇತ್ರವನ್ನು ಬಿಟ್ಟುಕೊಡಬೇಕು. ತೋಟಗಳನ್ನು ಕಡಿಯುವವನು ಉದ್ಯಾನ ವನ್ನು ಬೆಳಸಿಕೊಡಬೇಕು.

೨೪. ಗೃಹಗಳನ್ನು ಅಪಹಾರಮಾಡುವವನು ದೇವರಿಗೆ ನೂತನ ಆಲಯ ವನ್ನು ಕಟ್ಟಿಸುವುದರಿಂದ ಪಾಪನಿಷ್ಕೃತಿಯನ್ನು ಪಡೆದು ಶಿವಸಾಯುಜ್ಯವನ್ನು ಹೊಂದುವನು.

ಪರದ್ರೋಹೀ ವಸನ್ನೋಣಕ್ಷೇತ್ರೇ ಮಾಹೇಶ್ವರಾನ್ಧನೈಃ ।
ಪ್ರೀಣಯಿತ್ವಾ ಪರಾನ್ಲೋಕಾನ್ನಿಸ್ಸಂಶಯಮವಾಪ್ನುಯಾತ್ ॥ ೨೫ ॥
ಪಶ್ವಾದಿ ಮಾಂಸಭುಕ್ಪೋಣ ಕ್ಷೇತ್ರೇ ಪಕ್ಷತ್ರಯಂ ವ್ರತೀ ।
ಪ್ರೀಣಯೇದರುಣೇಶಾನಂ ಸೋಪಹಾರೈರ್ಮನೋಹರೈಃ ।
ತ್ರಿಃ ಶೋಣಾಚಲನಾಥೇತಿ ನಿನದನ್ನನಘೋ ಭವೇತ್ ॥ ೨೬ ॥
ನಿವಸನ್ನರುಣಕ್ಷೇತ್ರೇ ಪೂಜಯೇದರುಣೇಶ್ವರಂ ।
ಅರುಣೇಶ್ವರಮಂತ್ರಂ ಚ ಜಪೇನ್ಮೋಕ್ಷೇಚ್ಛುರಾದರಾತ್ ॥ ೨೭ ॥
ಯದ್ಯಸ್ಯಾಭಿಹಿತಂ ತೇನ ಪದ್ಭ್ಯಾಮೇವ ಪ್ರದಕ್ಷಿಣಾಂ ।
ಕುರ್ವತಾರುಣಶೈಲಸ್ಯ ತತ್ಪ್ರಾಪ್ಯಂ ಶುಭಮಂಜಸಾ ॥ ೨೮ ॥
ಕ್ಷುತೇಷು ಸ್ಖಲಿತೇಷ್ವಸ್ಯಾಹಿತೇ ದುಃಸ್ವಪ್ನ ದರ್ಶನೇ ।
ಪ್ರೀತ್ಯುತ್ಕರ್ಷೇಽಪಿ ಚ ಬುಧೈರುಚ್ಚಾರ್ಯೋಽರುಣ ಶಂಕರಃ ॥ ೨೯ ॥
ಅಪಿ ವರ್ಣಾಶ್ರಮಭ್ರಷ್ಟಃ ಶಿವದ್ರೋಹರತೋಽಪಿ ವಾ ।
ತ್ರೀಣ್ಯಹಾನ್ಯರುಣಕ್ಷೇತ್ರೇ ವಸನ್ಮುಚ್ಯೇತ ಪಾತಕೈಃ ॥ ೩೦ ॥

---

೨೫. ಇತರರಿಗೆ ದ್ರೋಹವನ್ನೆಣಿಸಿದ ಪಾಪಿಯು ಅರುಣಾಚಲದಲ್ಲಿ ವಾಸಮಾಡಿ ಶಿವಭಕ್ತರನ್ನು ದ್ರವ್ಯದಿಂದ ಸಂತೋಷಗೊಳಿಸಲು ನಿಸ್ಸಂಶಯ ವಾಗಿಯೂ ಉತ್ತಮ ಲೋಕವನ್ನು ಪಡೆಯುವನು.

೨೬. ಪಶ್ವಾದಿ ಪ್ರಾಣಿಗಳ ಮಾಂಸವನ್ನು ಭಕ್ಷಿಸಿದವನು ಈ ಕ್ಷೇತ್ರದಲ್ಲಿ ಮೂರು ಪಕ್ಷದ ದಿವಸ ನಿಯಮದಿಂದಿದ್ದು ಮಹೇಶ್ವರನನ್ನು ನಾನಾವಿಧಗಳಿಂದ ಮನೋಹರ ನೈವೇದ್ಯಗಳಿಂದ ಸಂತೋಷಗೊಳಿಸಬೇಕು. ಮೂರು ಸಲ ಅರು ಣಾಚಲೇಶ್ವರನ ನಾಮವನ್ನುಚ್ಚರಿಸುವುದರಿಂದ ಅವನು ನಿಷ್ಪಾಪನಾಗುವನು.

೨೭–೨೮. ಮೋಕ್ಷವನ್ನು ಬಯಸುವವನು ಈ ಕ್ಷೇತ್ರದಲ್ಲಿದ್ದು ಅರುಣಾ ಚಲೇಶ್ವರನನ್ನು ಆದರದಿಂದ ಪೂಜಿಸಿ ಅರುಣೇಶ್ವರನ ಮಂತ್ರವನ್ನು ಜಪಿಸುತ್ತಿರ ಬೇಕು. ಈ ಶೈಲದ ಪ್ರದಕ್ಷಿಣೆಯನ್ನು ಪಾದಚಾರಿಯಾಗಿಯೇ ಮಾಡುವುದ ರಿಂದ ಯಾವ ಮನುಷ್ಯನಿಗೆ ಯಾವ ಇಷ್ಟಾರ್ಥಗಳಿರುವುವೊ ಆ ಶುಭಗಳೆಲ್ಲವೂ ಬೇಗನೆಯೆ ಲಭಿಸುವುವು.

೨೯. ಬುದ್ಧಿವಂತರು ಶೀನುವಾಗಲೂ, ಎಡವಿದಾಗಲೂ, ದುಃಖ ದಲ್ಲಿಯೂ, ದುಸ್ಸ್ವಪ್ನದರ್ಶನದಲ್ಲಿಯೂ, ಸುಖೋತ್ಕರ್ಷದಲ್ಲಿಯೂ ಅರುಣಾ ಚಲೇಶ್ವರನನ್ನೇ ನೆನೆಯುತ್ತಿರುವರು.

೩೦. ವರ್ಣಾಶ್ರಮಾಚಾರಹೀನನಾಗಲಿ, ಶಿವದ್ರೋಹಿಯಾಗಲಿ, ಅರುಣಾಚಲದಲ್ಲಿ ಮೂರು ದಿನ ವಾಸಮಾಡುವುದರಿಂದ ಸಮಸ್ತ ಪಾಪ ಗಳಿಂದಲೂ ಮುಕ್ತನಾಗುವನು.

ಪಾರ್ಥಿವಃ ಶಿವಲೋಕೋಽಯಂ ಮೂರ್ತಮೇತತ್ತ್ರಯೀಶ್ವರಃ ॥ ೩೧ ॥
ಏಷ ದಕ್ಷಿಣಕೈಲಾಸೋ ಯೋಽಸಾವರುಣಪರ್ವತಃ ।
ಅನ್ಯೇಷು ಸಿದ್ಧಕ್ಷೇತ್ರೇಷು ತಪೋಭಿಃ ಸಿದ್ಧಯೋ ನೃಣಾಂ ॥ ೩೨ ॥
ಅಸ್ಮಿನ್ಸ್ಮರಣಮಾತ್ರೇಣ ತಾರತಮ್ಯಂ ವಿಚಿಂತ್ಯತಾಂ ।
ಯದ್ಗಂಗಾಯಾಂ ಪ್ರಯಾಗೇ ಯತ್ಕಾಶ್ಯಾಂ ವೈ ಪುಷ್ಕರೇಷು ಯತ್ ।
ಕರ್ಮ ಸೇತೌ ಚ ಯತ್ಪುಂಸಾಂ ಶೋಣಕ್ಷೇತ್ರೇ ತತೋಽಧಿಕಂ ॥ ೩೩ ॥
ಅಗ್ನಿಷ್ಟೋಮಂ ವಾಜಪೇಯಂ ವೈರಾಜಂ ಸರ್ವತೋಮುಖಂ ।
ರಾಜಸೂಯಾಶ್ವಮೇಧೌ ಚ ಕುರ್ಯಾಚ್ಛೋಣಾಚಲೇ ಬುಧಃ ॥ ೩೪ ॥
ಏಕಾಹಂ ವಾರುಣಕ್ಷೇತ್ರೇ ನರೋ ಯತ್ಸ್ಯಾದುಪೋಷಿತಃ ।
ಸತ್ಯಚಾಂದ್ರಾಯಣಶತಂ ಭವೇತ್ಸಾಂತಪನಾಯುತಂ ॥ ೩೫ ॥
ಷೋಡಶಾನಿ ಮಹಾದಾನಾನ್ಯರುಣಕ್ಷೇತ್ರ ಸನ್ನಿಧೌ ॥ ೩೬ ॥
ಅನುಷ್ಠಿತಾನಿ ಕಲ್ಪೋಕ್ತಂ ಕುರ್ವಂತಿ ದ್ವಿಗುಣಂ ಫಲಂ ॥ ೩೭ ॥

---

೩೧–೩೩. ಈ ಅರುಣಾಚಲವು ಭೂಮಿಯಲ್ಲಿರುವ ಶಿವಲೋಕವು. ಸಾಕ್ಷಾತ್ಕರಿಸಿದ ಪರಮೇಶ್ವರನು. ಈ ಕ್ಷೇತ್ರವೇ ದಕ್ಷಿಣಕೈಲಾಸವೆಂಬುದು. ಇತರ ಕ್ಷೇತ್ರಗಳಲ್ಲಿ ಮನುಷ್ಯರು ತಪಸ್ಸುಗಳಿಂದ ಯಾವ ಸಿದ್ಧಿಗಳನ್ನು ಸಂಪಾದಿಸುವರೊ ಅವುಗಳೆಲ್ಲವೂ ಈ ಕ್ಷೇತ್ರದಲ್ಲಿ ಸ್ಮರಣಮಾತ್ರದಿಂದಲೇ ಪ್ರಾಪ್ತವಾಗುವುವೆಂದಮೇಲೆ ನೀನೇ ಇದರ ಮಾಹಾತ್ಮ್ಯವನ್ನು ಯೋಚಿಸುವವನಾಗು. ಗಂಗೆಯಲ್ಲಿಯೂ, ಪ್ರಯಾಗದಲ್ಲಿಯೂ, ಕಾಶಿಯಲ್ಲಿಯೂ, ಪುಷ್ಕರಕ್ಷೇತ್ರದಲ್ಲಿಯೂ, ಸೇತುವಿನಲ್ಲಿಯೂ ಮಾಡಿದ ಕರ್ಮವು ಯಾವ ಫಲವನ್ನು ಕೊಡುವುದೊ ಅರುಣಾಚಲದಲ್ಲಿ ಮಾಡಿದ ಆ ಕರ್ಮವೇ ಅಧಿಕ ಫಲದಾಯಕವಾಗುವುದು.

೩೪. ಬುದ್ಧಿವಂತರು ಈ ಕ್ಷೇತ್ರದಲ್ಲಿಯೇ ಅಗ್ನಿಷ್ಟೋಮ, ವಾಜಪೇಯ, ವೈರಾಜ, ಸರ್ವತೋಮುಖ, ರಾಜಸೂಯ, ಅಶ್ವಮೇಧ ಮುಂತಾದ ಯಜ್ಞ ಯಾಗಾದಿಗಳನ್ನು ಮಾಡಬೇಕು.

೩೫. ಈ ಕ್ಷೇತ್ರದಲ್ಲಿ ಒಂದು ದಿನದ ಉಪವಾಸವನ್ನು ಮಾಡುವುದರಿಂದ ಒಂದು ನೂರು ಚಾಂದ್ರಾಯಣಗಳನ್ನೂ ಹತ್ತುಸಾವಿರ ಸಂತಪನಗಳನ್ನೂ ಮಾಡಿದ ಫಲವುಂಟಾಗುವುದು.

೩೬–೩೭. ಅರುಣಾಚಲೇಶ್ವರನ ಸನ್ನಿಧಾನದಲ್ಲಿ ಮಾಡಿದ ಷೋಡಶಮಹಾದಾನಗಳು ಆಯಾ ಕರ್ಮಗಳಿಗೆ ಕಲ್ಪಗಳಲ್ಲಿ ಹೇಳಿರುವ ಫಲಗಳನ್ನು ದ್ವಿಗುಣಿತವಾಗಿ ಕೊಡುತ್ತವೆ.

ಇತಿ ನಂದಿಕೇಶ್ವರ ಮುಖೇನ ಶುಶ್ರುವಾ
ನ್ಮುನಿನಂದನೋಽಥ ನಿರಯಪ್ರತಿಕ್ರಿಯಾಂ ।
ಅಭಿನಂದ್ಯ ತಂ ವದ ದಿನರ್ತುವತ್ಸರ
ಪ್ರತಿಮುಖಾರ್ಹಣಕ್ರಮಮಿತಿ ವ್ಯಜಿಜ್ಞಪತ್ ॥ ೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ
"ಪಾಪಾಪನೋದಕ ಪ್ರಾಯಶ್ಚಿತ್ತವರ್ಣನಂ" ನಾಮ
ಷಷ್ಠೋಽಧ್ಯಾಯಃ

---

೩೮. ಈ ರೀತಿಯಾಗಿ ಮಾರ್ಕಂಡೇಯನು ನಂದಿಕೇಶ್ವರನಿಂದ ಅನೇಕ ವಿಧಗಳಾದ ಪಾಪಗಳ ಪ್ರತಿಕ್ರಿಯೆಗಳನ್ನು ಕೇಳುವವನಾದನು. ಮತ್ತು ದಿನ, ಋತು, ಸಂವತ್ಸರಗಳಿಗನುಸಾರವಾಗಿ ವಿಶೇಷ ಪೂಜೆಗಳನ್ನು ಮಾಡುವ ಬಗೆಯನ್ನು ಹೇಳಬೇಕೆಂದು ಆತನಲ್ಲಿ ವಿಜ್ಞಾಪನೆಯನ್ನು ಮಾಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ
ಮಹಾತ್ಮ್ಯದ ಉತ್ತರಾರ್ಧದಲ್ಲಿ "ಪ್ರಾಯಶ್ಚಿತ್ತಗಳ ವರ್ಣನೆ"ಯೆಂಬ
ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಮೋಽಧ್ಯಾಯಃ

## ಕಾಮ್ಯಕರ್ಮವರ್ಣನಂ

ನಂದಿಕೇಶ್ವರ ಉವಾಚ :—

ರಕ್ತೋತ್ಪಲೈರರ್ಕವಾರೇ ಯಃ ಶೋಣಾದ್ರೀಶಮರ್ಚಯೇತ್ ।
ಅವಶ್ಯಂ ತಸ್ಯ ಸಿಧ್ಯಂತಿ ಸಾರ್ವಭೌಮಮುಖಾರ್ಥಯಃ ॥ ೧ ॥
ಸೌಮ್ಯವಾರೇಽರುಣಾದ್ರೀಶಂ ಕಸ್ತೂರೀಕರವೀರಕೈಃ ।
ಯಃ ಪೂಜಯತಿ ತಸ್ಯ ಸ್ಯಾತ್ಸತ್ಯಲೋಕೇ ಸುಖಾಸಿಕಾ ॥ ೨ ॥
ಗುರುವಾರೇ ಸಿತಾಂಭೋಜೈಃ ಶೋಣೇಶಂ ಪರಿವತ್ಸ್ಯತಃ ।
ಜನಲೋಕೇ ಚಿರಂ ವಾಸಃ ಸಿದ್ಧೈಃ ಸಹ ಭವಿಷ್ಯತಿ ॥ ೩ ॥
ಚಂಪಕೈರ್ಮಲ್ಲಿಕಾಭಿಶ್ಚ ಶುಕ್ರವಾರೇ ಸಮರ್ಚಯೇತ್ ।
ತಪೋಲೋಕಂ ಪ್ರಪದ್ಯೇತ ಬ್ರಹ್ಮರ್ಷಿಭಿರಭಿಷ್ಟುತಃ ॥ ೪ ॥
ಸೌರಿವಾರೇ ಚ ಜಾತೀಭಿಸ್ಸಮಾರಾಧ್ಯಾರುಣೇಶ್ವರಂ ।
ನ ಜಾತು ಯಮಲೋಕಾನಾಂ ಪಾಪೀಯಾನಪಿ ಕಲ್ಪತೇ ॥ ೫ ॥

---

## ಕನ್ನಡದ ಅನುವಾದ

### ಕಾಮ್ಯಕರ್ಮವರ್ಣನೆ

೧. ನಂದಿಕೇಶ್ವರನು ಹೇಳುತ್ತಾನೆ:—ಭಾನುವಾರದ ದಿನದಲ್ಲಿ ಅರುಣಾಚಲೇಶ್ವರನನ್ನು ಯಾವನು ಕೆಂದಾವರೆಗಳಿಂದ ಪೂಜಿಸುವನೋ ಅವನಿಗೆ ಚಕ್ರವರ್ತಿಪದವಿಯೇ ಮೊದಲಾದ ಸಕಲ ಸೌಭಾಗ್ಯಗಳೂ ಸಿದ್ಧಿಸುವುವು.

೨. ಸೋಮವಾರದಲ್ಲಿ ಮಹೇಶ್ವರನನ್ನು ಯಾರು ಕಸ್ತೂರಿ ಮತ್ತು ಕರವೀರ ಪುಷ್ಪಗಳಿಂದ ಅರ್ಚನೆ ಮಾಡುವರೋ ಅವರಿಗೆ ಸತ್ಯಲೋಕದಲ್ಲಿ ಸುಖವಸತಿಯು ಶಾಶ್ವತವಾಗಿರುತ್ತದೆ.

೩. ಗುರುವಾರದ ದಿನ ಅರುಣಾಚಲೇಶ್ವರನನ್ನು ಬೆಳುದಾವರೆಗಳಿಂದ ಅರ್ಚಿಸುವ ಭಕ್ತನು ಸಿದ್ಧರೊಡನೆ ಜನಲೋಕದಲ್ಲಿ ಬಹುಕಾಲ ವಾಸಮಾಡುವನು.

೪. ಶುಕ್ರವಾರದಲ್ಲಿ ಶೋಣಾಚಲನನ್ನು ಸಂಪಗೆ, ಮಲ್ಲಿಗೆಗಳಿಂದ ಪೂಜೆ ಮಾಡಿದರೆ ತಪೋಲೋಕವನ್ನು ಸೇರಿ ಬ್ರಹ್ಮರ್ಷಿಗಳಿಂದಲೂ ಅಭಿಪೂಜ್ಯನಾಗುವನು.

೫. ಶನಿವಾರದ ದಿನ ಅರುಣೇಶ್ವರನನ್ನು ಮಾಲತೀ ಪುಷ್ಪಗಳಿಂದರ್ಚಿಸಿದ ಫಲವಾಗಿ ಪಾಪಗಳನ್ನು ಮಾಡಿದವನಾದರೂ ಯಮಲೋಕದ ದರ್ಶನವನ್ನು ಮಾಡುವುದಿಲ್ಲವು.

ಪ್ರಥಮಾಯಾಂ ತಿಥೌ ದೇವಸ್ಯೋಪಹಾರಂ ಸಮರ್ಪಯೇತ್ ।
ಯಃ ಪಾಯಸೇನ ಸ ಭವೇದ್ಧನಧಾನ್ಯಸಮೃದ್ಧಿಮಾನ್ ॥ ೬ ॥
ದ್ವಿತೀಯಸ್ಯಾಂ ತಿಥೌ ಭಕ್ತ್ಯಾ ಯೋ ದಧ್ಯನ್ನಂ ನಿವೇದಯೇತ್ ।
ಸ ಭವೇದ್ಭಾಗ್ಯವಾನ್ಶ್ರೇಷ್ಠಃ ಸೋಮಪಾಶ್ಚ ಭವೇದ್ಧ್ರುವಂ ॥ ೭ ॥
ತೃತೀಯಾಯಾಂ ಚ ಯೋಽಪೂಪೈಃ ಶೋಣೇಶಂ ಪರಿತರ್ಪಯೇತ್ ।
ತಸ್ಯಾವ್ಯಾಹತಮಾರೋಗ್ಯಮಾಶರೀರಂ ಭವಿಷ್ಯತಿ ॥ ೮ ॥
ಚತುರ್ಥ್ಯಾಮರುಣೇಶಾಯ ಪೂರ್ಣಕುಂಭೋತ್ಕರಾದಿಕಂ ।
ನಿವೇದಯತಿ ಯಸ್ತಸ್ಯ ಭವೇತ್ಪೂರ್ಣಮನೋರಥಃ ॥ ೯ ॥
ಮುದ್ಗೌದನಂ ಚ ಪಂಚಮ್ಯಾಮುಪಹಾರಂ ಪ್ರಕಲ್ಪಯೇತ್ ।
ಶೋಣೇಶ್ವರಾಯ ಭಕ್ತ್ಯಾ ಯಃ ಸ ಸ್ಯಾದಕ್ಷಯ್ಯವೈಭವಃ ॥ ೧೦ ॥
ಷಷ್ಠ್ಯಾಂ ಗುಡೌದನಂ ದದ್ಯಾದರುಣಾಚಲ ಶಂಭವೇ ।
ಭಕ್ತ್ಯಾ ಯಸ್ತಸ್ಯ ಸಂತಾನೋ ನ ಕದಾಚಿತ್ಪರಿಹೀಯತೇ ॥ ೧೧ ॥
ತಿಲೌದನಂ ಯಸ್ಸಪ್ತಮ್ಯಾಂ ಶೋಣೇಶಾಯ ಸಮರ್ಪಯೇತ್ ।
ಸ ದೀನೋಽಪ್ಯಧಮರ್ಣತ್ವಮಯತ್ನೇನ ವ್ಯಪೋಹತಿ ॥ ೧೨ ॥

---

೬. ಪಾಡ್ಯಮಿಯ ದಿನ ಮಹಾದೇವನಿಗೆ ಪಾಯಸಾನ್ನವನ್ನು ನಿವೇದನ ಮಾಡಿದರೆ ಧನಧಾನ್ಯಗಳ ಸಮೃದ್ಧಿಯುಳ್ಳವನಾಗುವನು.

೭. ಬಿದಿಗೆಯಲ್ಲಿ ಭಕ್ತಿಯಿಂದ ದಧ್ಯನ್ನವನ್ನು ನಿವೇದಿಸಿದರೆ ಸಕಲೈಶ್ವರ್ಯ ಸಮನ್ವಿತನಾಗಿ ಸೋಮಯಾಜಿಯಾಗಿ ನಿಲ್ಲುವನು.

೮. ತದಿಗೆಯಲ್ಲಿ ಅಪೂಪಗಳಿಂದ ಅರುಣಾಚಲೇಶ್ವರನನ್ನು ತೃಪ್ತಿಗೊಳಿಸಿದರೆ ಯಾವಜ್ಜೀವವೂ ಅವ್ಯಾಹತವಾದ ದೇಹಾರೋಗ್ಯವುಂಟಾಗುವುದು.

೯. ಚತುರ್ಥಿಯ ದಿವಸ ಅನ್ನಪೂರ್ಣವಾದ ಪಾತ್ರೆಯನ್ನು ನಿವೇದನೆ ಮಾಡಿದರೆ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು.

೧೦. ಪಂಚಮಿಯಲ್ಲಿ ಭಕ್ತಿಯುಕ್ತನಾಗಿ ಅರುಣಾಚಲೇಶ್ವರನಿಗೆ ಹೆಸರು ಬೇಳೆಯನ್ನವನ್ನು (ಹುಗ್ಗಿಯನ್ನು) ನಿವೇದನೆಮಾಡಿದರೆ ಅವನ ಐಶ್ವರ್ಯವು ನಾಶರಹಿತವಾಗುವುದು.

೧೧. ಷಷ್ಠಿಯ ದಿನ ಗುಡಾನ್ನದ ನೈವೇದ್ಯವನ್ನು ಮಾಡಲು ಆ ಭಕ್ತನ ವಂಶವು ಕ್ಷಯಿಸದೆ ಶಾಶ್ವತವಾಗಿ ವೃದ್ಧಿಯನ್ನೈದುವುದು.

೧೨. ಸಪ್ತಮಿಯ ದಿವಸದಲ್ಲಿ ಅರುಣಾಚಲನಿಗೆ ತಿಲೌದನವನ್ನು ನಿವೇದಿಸಬೇಕು. ಆ ಭಕ್ತನು ನೀಚಕುಲದವನಾದರೂ ಅಧಮಜನ್ಮದ ಪಾಪವನ್ನು ಕಳೆದುಕೊಳ್ಳುತ್ತಾನೆ.

ಅಷ್ಟಮ್ಯಾಂ ಹಿ ಶಾಲ್ಯನ್ನಂ ಯೋ ದದ್ಯಾಚ್ಛೋಣಶಂಭವೇ ।
ತಸ್ಯ ಸೇವಾಂ ವಿನಾಪಿ ಸ್ಯಾದ್ರಾಜಲೋಕೋ ವಶೀಕೃತಃ ॥ ೧೩ ॥
ಗೋಧೂಮಾನ್ನಂ ನವಮ್ಯಾಂ ಚ ಶೋಣಾದ್ರೀಶಾಯ ಯೋಽರ್ಪಯೇತ್ ।
ರಾಜಯಕ್ಷ್ಮಾದಯಸ್ತಸ್ಯ ನ ಭವಿಷ್ಯಂತಿ ಜಾತು ಚ ॥ ೧೪ ॥
ದಶಮ್ಯಾಂ ಶೋಣನಾಥಾಯ ಯಃ ಕರಂಭಂ ನಿವೇದಯೇತ್ ।
ಸ ಭವೇತ್ಸರ್ವಲೋಕಾನಾಂ ಸದೈವ ಪ್ರೀತಿಭಾಜನಂ ॥ ೧೫ ॥
ಪೃಥುಕೈರುಪಹಾರಾನ್ಯ ಏಕಾದಶ್ಯಾಂ ಪ್ರಕಲ್ಪಯೇತ್ ।
ಅರುಣಾಚಲನಾಥಸ್ಯ ಸ ಭವೇದಕುತೋಭಯಃ ॥ ೧೬ ॥
ದ್ವಾದಶ್ಯಾಂ ಶೋಣನಾಥಾಯ ಸೂಪೌದನನಿವೇದನಂ ।
ಯಃ ಕರೋತಿ ಭವೇತ್ತಸ್ಯ ನಿರ್ವಿಘ್ನಾತೋ ಮನೋರಥಃ ॥ ೧೭ ॥
ಯಃ ಸಕ್ತೂನರುಣೇಶಾಯ ತ್ರಯೋದಶ್ಯಾಂ ಸಮರ್ಪಯೇತ್ ।
ತಸ್ಯಾವ್ಯಾಕುಲ ಚಿತ್ತತ್ವಮಶ್ರಾಂತಮಪಿ ಜಾಯತೇ ॥ ೧೮ ॥
ಅರ್ಪಯೇಚ್ಛೋಣನಾಥಾಯ ಫಲಾನಿ ವಿವಿಧಾನಿ ಯಃ ।
ಚತುರ್ದಶ್ಯಾಂ ಸಮೂಢೋಽಪಿ ಸಿದ್ಧಸಾರಸ್ವತೋ ಭವೇತ್ ॥ ೧೯ ॥

---

೧೩. ಅಷ್ಟಮಿಯಲ್ಲಿ ಯಾವನು ಮಹಾದೇವನಿಗೆ ಶಾಲ್ಯನ್ನವನ್ನು ಅರ್ಪಿಸುವನೋ ಅವನಿಗೆ ಸೇವೆಯಿಲ್ಲದೆಯೇ ರಾಜಲೋಕವು ವಶವಾಗುವುದು.

೧೪. ನವಮಿಯ ದಿನ ಗೋಧಿಯನ್ನವನ್ನು ಅರುಣೇಶ್ವರನಿಗೆ ನಿವೇದನೆ ಮಾಡುವುದರಿಂದ ಕ್ಷಯವೇ ಮುಂತಾದ ಸಕಲ ರೋಗಗಳೂ ಪರಿಹೃತವಾಗುವುವು.

೧೫. ದಶಮಿಯಲ್ಲಿ ಯಾರು ಮಹೇಶ್ವರನಿಗೆ ಹಿಟ್ಟಿನ ಅಪೂಪಗಳನ್ನು ಸಮರ್ಪಿಸುವರೋ ಅವರು ಯಾವಾಗಲೂ ಸಕಲಲೋಕಗಳಿಗೂ ಪ್ರೀತಿಪಾತ್ರರಾಗುವರು.

೧೬. ಏಕಾದಶಿಯಲ್ಲಿ ಅರುಣಾಚಲನಾಥನಿಗೆ ಅವಲಕ್ಕಿಯ ಉಪಹಾರವನ್ನು ಕಲ್ಪಿಸುವುದರಿಂದ ಲೋಕದಲ್ಲಿ ನಿರ್ಭಯನಾಗುವನು.

೧೭. ದ್ವಾದಶಿಯ ದಿನ ಅರುಣಾಚಲನಿಗೆ ಸೂಪಾನ್ನವನ್ನು ಪಾರಣೆಮಾಡಿಸಲು ಭಕ್ತನ ಮನೋರಥಗಳು ನಿರ್ವಿಘ್ನವಾಗಿ ನೆರವೇರುವುವು.

೧೮. ತ್ರಯೋದಶಿಯಲ್ಲಿ ಹುರಿಹಿಟ್ಟನ್ನು ಯಾರು ಭಕ್ತಿಯಿಂದ ನಿವೇದಿಸುವರೋ ಅವರಿಗೆ ಯಾವಾಗಲೂ ಮನಸ್ಸಿನ ಶಾಂತತೆಯುಂಟಾಗುವುದು.

೧೯. ಚತುರ್ದಶಿಯ ದಿನ ಅರುಣಾಚಲೇಶ್ವರನಿಗೆ ವಿವಿಧ ಫಲಗಳನ್ನು ಸಮರ್ಪಿಸಲು ಮೂಢನೂ ಕೂಡ ಪಂಡಿತೋತ್ತಮನಾಗುವನು.

ಯಃ ಪೌರ್ಣಮಾಸ್ಯಾಂ ಶೋಣಾದ್ರಿನಾಥಾಯ ವಿನಿವೇದಯೇತ್ ।
ಪನಸಸ್ಯ ಫಲಂ ತಸ್ಯ ಚಕ್ಷೂರೋಗೋ ನ ಜಾಯತೇ ॥ ೨೦ ॥
ಕುಹ್ವಾಂ ಚ ಸಂಗಮೇ ಭಕ್ತ್ಯಾ ಕಂದಮೂಲಾನಿ ಯೋಽರ್ಪಯೇತ್ ।
ಶೋಣಾಚಲೇಶ್ವರಾಯಾಸ್ಯ ತುಷ್ಯಂತಿ ಪಿತರಃ ಕಿಲ ॥ ೨೧ ॥
ಅಶ್ವಿನ್ಯಾಮರುಣೇಶಾಯ ದದ್ಯಾದ್ವಾಸಾಂಸಿ ಭಕ್ತಿಮಾನ್ ।
ಭರಣ್ಯಾಮರುಣೇಶಾಯ ದದ್ಯಾದಾಭರಣಾನ್ಯಪಿ ॥ ೨೨ ॥
ಕೃತ್ತಿಕಾಸು ಪ್ರದೀಪಾಂಶ್ಚ ರೋಹಿಣ್ಯಾಂ ಪಾಪ್ಯಮರ್ಪಯೇತ್ ।
ಮೃಗಶೀರ್ಷೇ ಮಲಯಜಮಾರ್ದ್ರಾಯಾಂ ಹರಿಚಂದನಂ ॥ ೨೩ ॥
ಪುನರ್ವಸೌ ಮೃಗಮದಂ ಪುಷ್ಯೇ ಕರ್ಪೂರಮರ್ಪಯೇತ್ ।
ಕಾಶ್ಮೀರೋದ್ಭವಮಾಶ್ಲೇಷೇ ಮಘಾಯಾಂ ತುಹಿನೋದಕಂ ॥ ೨೪ ॥
ತಾಂಬೂಲಂ ಪೂರ್ವಫಲ್ಗುನ್ಯಾಂ ಧೂಪಮುತ್ತರಫಾಲ್ಗುನೇ ।
ಕಾಲಾಗುರೂಂಶ್ಚ ಹಸ್ತರ್ಕ್ಷೇ ಚಿತ್ರಾಯಾಂ ಯಕ್ಷಕರ್ದಮಂ ॥ ೨೫ ॥
ಸ್ವಾತ್ಯಾಂ ಸುವಾಸಿನೀವೃಂದಂ ವಿಶಾಖಾಯಾಂ ಪ್ರಕೀರ್ಣಕಂ ।
ಮೈತ್ರೇ ಮುಕ್ತಾತಪತ್ರಂ ಚ ಜ್ಯೇಷ್ಠಾಯಾಂ ಧೇನುಕಾನ್ಯಪಿ ॥ ೨೬ ॥

---

೨೦. ಪೌರ್ಣಮಿಯ ದಿನ ಈಶ್ವರನಿಗೆ ಹಲಸಿನ ಹಣ್ಣನ್ನು ನಿವೇದನ ಮಾಡಿಸಲು ಚಕ್ಷುರೋಗಗಳೆಲ್ಲವೂ ನಿವೃತ್ತಿಯಾಗುವುವು.

೨೧. ಅಮಾವಾಸ್ಯೆಯಲ್ಲಿಯೂ ಗ್ರಹಣಕಾಲದಲ್ಲಿಯೂ ಭಕ್ತಿಯಿಂದ ಕಂದಮೂಲಗಳನ್ನು ಅರ್ಪಿಸುವ ಭಕ್ತನ ಪಿತೃಗಳು ಸಂತುಷ್ಟರಾಗುವರು.

೨೨. ಅಶ್ವಿನೀನಕ್ಷತ್ರದ ದಿನ ವಸ್ತ್ರಗಳನ್ನೂ ಭರಣಿಯಲ್ಲಿ ಆಭರಣ ಗಳನ್ನೂ ಭಕ್ತಿಯಿಂದ ಸಮರ್ಪಿಸಬೇಕು.

೨೩. ಕೃತ್ತಿಕೆಯಲ್ಲಿ ದೀಪಗಳನ್ನೂ, ರೋಹಿಣಿಯಲ್ಲಿ ಪಾಪ್ಯವನ್ನೂ, ಮೃಗಶಿರದಲ್ಲಿ ಶ್ರೀಗಂಧವನ್ನೂ, ಆರ್ದ್ರಾನಕ್ಷತ್ರದಲ್ಲಿ ಹರಿಚಂದವನ್ನೂ ಅರ್ಪಿಸಬೇಕು.

೨೪. ಪುನರ್ವಸುವಿನಲ್ಲಿ ಕಸ್ತೂರಿಯನ್ನೂ, ಪುಷ್ಯನಕ್ಷತ್ರದಲ್ಲಿ ಕರ್ಪೂರ ವನ್ನೂ, ಅಶ್ಲೇಷದಲ್ಲಿ ಕೇಸರಿಯನ್ನೂ, ಮಘಾನಕ್ಷತ್ರದಲ್ಲಿ ಕರ್ಪೂರೋದಕ ವನ್ನೂ ನಿವೇದಿಸಬೇಕು.

೨೫—೨೯. ಪೂರ್ವಫಲ್ಗುಣಿಯಲ್ಲಿ ತಾಂಬೂಲವನ್ನೂ, ಉತ್ತರೆಯಲ್ಲಿ ಧೂಪವನ್ನೂ, ಹಸ್ತೆಯಲ್ಲಿ ಕಾಲಾಗುರುವನ್ನೂ, ಚಿತ್ರಾ ನಕ್ಷತ್ರದಲ್ಲಿ ಅನು ಲೇಪನವನ್ನೂ, ಸ್ವಾತಿಯಲ್ಲಿ ವಾಸನಾದ್ರವ್ಯಗಳನ್ನೂ, ವಿಶಾಖೆಯಲ್ಲಿ ಚಾಮರ ಗಳನ್ನೂ, ಅನೂರಾಧೆಯಲ್ಲಿ ಮುತ್ತಿನ ಸತ್ತಿಗೆಯನ್ನೂ, ಜ್ಯೇಷ್ಠೆಯಲ್ಲಿ ಗೋವ್ಪ್ರ ತಾದಿಗಳನ್ನೂ, ಮೂಲಾ ನಕ್ಷತ್ರದಲ್ಲಿ ಮುತ್ತಿನ ಸರಗಳನ್ನೂ, ಪೂರ್ವಾಷಾಢೆ

ಮೂಲೇ ಮುಕ್ತಾಸರಾನ್ಪೂರ್ವಾಷಾಢೇ ಮುಕುಟಮರ್ಪಯೇತ್ ।
ರತ್ನಾನಿ ಚೋತ್ತರಾಷಾಢೇ ಶ್ರವಣೇ ಭದ್ರಪೀಠಿಕಾಂ ॥ ೨೭ ॥
ಅಷ್ಟಾಪದಂ ಧನಿಷ್ಠಾಯಾಂ ವಾಸಃ ಶತಭಿಷಜ್ಯಪಿ ।
ಪೂರ್ವಾಭಾದ್ರಪದೇ ಭೋಗಾನುತ್ತರಾಯಾಂ ತುರಂಗಮಾನ್ ॥ ೨೮ ॥
ರೇವತ್ಯಾಂ ಚ ರಥಂ ಹೈಮಂ ಪ್ರದದ್ಯಾಚ್ಛೋಣಶಂಭವೇ ।
ದದ್ಯಾತ್ಕೃತ್ವಾ ಮಹಾಪೂಜಾಂ ತತ ಏವಾರ್ಪಯೇನ್ನರಃ ॥ ೨೯ ॥
ಪೂಜ್ಯೋ ರಾಶಿಷು ಮೇಷಾದಿಷ್ವರುಣೇಶೋ ವಿಶೇಷತಃ ।
ಸಿಂದುವಾರೈಃ ಕುರವಕೈಃ ಕಕುಭೈಃ ಪಾಟಲೈಃ ಕ್ರಮಾತ್ ॥ ೩೦ ॥
ಕುಟಜೈರ್ನೀಪಕುಸುಮೈರ್ಜೀವಂತೀಮಲ್ಲಿಕಾದಿಭಿಃ ।
ಸರೋರುಹೈರ್ದಮನಕೈರ್ನಂದ್ಯಾವರ್ತಸರೋರುಹೈಃ ॥ ೩೧ ॥
ಪಂಚಾಮೃತೇನ ಸ್ನಪನಮುಭಯೋರುಪರಾಗಯೋಃ ।
ಪಂಚಾಕ್ಷರೇಣ ಕುರ್ವೀತ ಶೋಣನಾಥಸ್ಯ ಭಕ್ತಿತಃ ॥ ೩೨ ॥
ಸ್ನಪನಂ ಪಂಚಗವ್ಯೇನ ದ್ವಯೋರಯನಯೋರಪಿ ।
ಷಡಕ್ಷರೇಣ ಕುರ್ವೀತ ಗವ್ಯೇನ ಸ್ನಪನಕ್ರಿಯಾಂ ॥ ೩೩ ॥

---

ಯಲ್ಲಿ ಕಿರೀಟವನ್ನೂ ಅರ್ಪಿಸಬೇಕು. ಉತ್ತರಾಷಾಢೆಯಲ್ಲಿ ನವರತ್ನಗಳನ್ನೂ, ಶ್ರವಣದಲ್ಲಿ ಭದ್ರಾಸನವನ್ನೂ, ಧನಿಷ್ಠೆಯಲ್ಲಿ ಚಿನ್ನವನ್ನೂ, ಶತಭಿಷೆಯಲ್ಲಿ ಉತ್ತಮ ವಸ್ತ್ರಗಳನ್ನೂ, ಪೂರ್ವಾಭಾದ್ರೆಯಲ್ಲಿ ಭೋಗವಸ್ತುಗಳನ್ನೂ, ಉತ್ತರಾಭಾದ್ರೆಯಲ್ಲಿ ಕುದುರೆಗಳನ್ನೂ, ರೇವತಿಯಲ್ಲಿ ಚಿನ್ನದ ರಥವನ್ನೂ ಅರುಣಾಚಲೇಶ್ವರನಿಗೆ ಮಹಾಪೂಜೆಯನ್ನು ಮಾಡುವ ಸಮಯದಲ್ಲಿ ಭಕ್ತಿ ಯುಕ್ತನಾಗಿ ಅರ್ಪಿಸಬೇಕು.

೩೦–೩೧. ಮೇಷಾದಿ ರಾಶಿಗಳಲ್ಲಿ ವಿಶೇಷವಾಗಿ ಅರುಣಾಚಲವನ್ನು ಸಿಂಧವಾರ, ಕುರವಕ, ಗಿರಿಮಲ್ಲಿಕೆ, ಪಾಟಲ, ಕುಟಜ, ನೀಪ, ಸೇವಂತಿಗೆ, ಮಲ್ಲಿಗೆ, ಕಮಲ, ದವನ, ನಂದಿಬಟ್ಟಲು, ತಾವರೆ ಹೂವುಗಳಿಂದ ಪೂಜಿಸ ಬೇಕು.

೩೨. ಸೂರ್ಯ ಚಂದ್ರರ ಗ್ರಹಣಕಾಲಗಳಲ್ಲಿ ಅರುಣಾಚಲೇಶ್ವರನಿಗೆ ಪಂಚಾಕ್ಷರೀ ಮಂತ್ರಜಪದೊಡನೆ ಭಕ್ತಿಯಿಂದ ಪಂಚಾಮೃತದ ಅಭಿಷೇಕ ವನ್ನು ಮಾಡಬೇಕು.

೩೩. ಉತ್ತರಾಯಣ ಮತ್ತು ದಕ್ಷಿಣಾಯನ ಪುಣ್ಯಕಾಲಗಳಲ್ಲಿ ಷಡಕ್ಷರೀ ಮಂತ್ರದಿಂದ ಅರುಣಾಚಲೇಶ್ವರನಿಗೆ ಪಂಚಗವ್ಯದ ಸ್ನಾನವನ್ನು ಮಾಡಿಸ ಬೇಕು.

ಪ್ರಣವೇನೈವ ಕುರ್ವೀತ ಕ್ಷೀರೇಣ ಸ್ನಪನಕ್ರಿಯಾಂ ।
ಅರುಣಾಚಲನಾಥಸ್ಯ ಭಕ್ತ್ಯಾ ವಿಷುವಯೋರ್ದ್ವಯೋಃ ॥ ೩೪ ॥
ಪ್ರಾಹ್ಣೇ ಸ್ಯಾದ್ರುದ್ರತುಳಸೀ ಮಧ್ಯಾಹ್ನೇ ಕೃತಮಾಲಕಂ ।
ಅಪರಾಹ್ಣೇ ಮಲ್ಲಿಕಾ ಚ ಶೋಣಾದ್ರೀಶಸ್ಯ ಶಸ್ಯತೇ ॥ ೩೫ ॥
ಅರ್ಧೋದಯೇ ಚ ಸ್ನಪಯೇತ್ಸಹಸ್ರಕಳಶೋದಕೈಃ ।
ಶತರುದ್ರೀಯಮುಚ್ಚಾರ್ಯ ಶ್ರೀಶೋಣಾಚಲಶಂಭವೇ ॥ ೩೬ ॥
ಶಿವರಾತ್ರೌ ವಿಶೇಷೇಣ ತ್ರಿಶಿಖೈರ್ಬಿಲ್ವಪತ್ರಕೈಃ ।
ಕಮಲೈಃ ಕರ್ಣಿಕಾರೈಶ್ಚ ಜಾಗರೂಕೋ ಯತೇಂದ್ರಿಯಃ ॥ ೩೭ ॥
ಗೀತವಾದಿತ್ರ ನೃತ್ಯೈಶ್ಚ ದಿವ್ಯಾಗಮವಿಧಾನತಃ ।
ಪೂಜಯೇದಪವರ್ಗಾರ್ಥಂ ಶೋಣಶೈಲೇ ಮಹೇಶ್ವರಂ ॥ ೩೮ ॥
ಮಾಸಿ ಪೌಷೇ ಚ ದೇವಸ್ಯ ಕುರ್ಯಾದಾಗ್ನೇಯಮುತ್ಸವಂ ।
ನ ವಾನ್ನೈರುಪದಂಶಾದ್ಯೈರ್ವ್ಯಾಹೃತೀರುಚ್ಚರನ್ಪೃಥಃ ॥ ೩೯ ॥
ವೈಶಾಖೇ ಚ ವಿಶಾಖಾಯಾಂ ಶಿವತಂತ್ರಾನುಸಾರತಃ ।
ಶೋಣಾಚಲೇಶ್ವರಸ್ಯಾಸ್ಯ ಕುರ್ಯಾದ್ದಮನಕೋತ್ಸವಂ ॥ ೪೦ ॥

---

೩೪. ವಿಷುವತ್ಪುಣ್ಯಕಾಲಗಳಲ್ಲಿ ಪ್ರಣವವನ್ನುಚ್ಚರಿಸುತ್ತ ಅರುಣಾಚಲನಾಥನಿಗೆ ಕ್ಷೀರದ ಅಭಿಷೇಕವನ್ನು ಮಾಡಸಬೇಕು.

೩೫. ಪ್ರಾತಃಕಾಲದಲ್ಲಿ ರುದ್ರತುಳಸಿಯೂ, ಮಧ್ಯಾಹ್ನದಲ್ಲಿ ಕೃತಮಾಲವೂ, ಅಪರಾಹ್ಣದಲ್ಲಿ ಮಲ್ಲಿಗೆಯೂ, ಮಹೇಶ್ವರನಿಗೆ ಪ್ರಿಯಗಳು.

೩೬. ಅರ್ಧೋದಯ ಪರ್ವಕಾಲದಲ್ಲಿ ಶತರುದ್ರೀಯವನ್ನು ಪಠನಮಾಡಿಕೊಂಡು ಅರುಣಾಚಲೇಶ್ವರನಿಗೆ ಸಾವಿರ ಕಳಶಗಳ ಉದಕದಿಂದ ಅಭಿಷೇಕವನ್ನು ಮಾಡಬೇಕು.

೩೭–೩೮. ಶಿವರಾತ್ರಿಯ ದಿನ ಮೂರೆಲೆಗಳುಳ್ಳ ಬಿಲ್ವದಳಗಳಿಂದಲೂ, ಕಮಲಗಳಿಂದಲೂ, ಕಣಿಗಲುಹೂವುಗಳಿಂದಲೂ, ಗೀತ, ವಾದ್ಯ, ನೃತ್ಯಗಳಿಂದಲೂ ಅರ್ಚನೆಯನ್ನು ಮಾಡಿ ಜಾಗರೂಕನೂ, ಇಂದ್ರಿಯಸಂಯಮಸಹಿತನೂ ಆಗಿ ಶೈವಾಗಮಗಳಲ್ಲಿ ಹೇಳಿರುವ ರೀತಿಯಿಂದ ಅರುಣಾಚಲೇಶ್ವರನ ಸೇವೆಯನ್ನು ಮಾಡಬೇಕು.

೩೯–೪೦. ಪುಷ್ಯಮಾಸದಲ್ಲಿ ಆಗ್ನೇಯೋತ್ಸವವನ್ನು ಮಾಡಿಸಿ ಶಾಲ್ಯನ್ನದಿಂದಲೂ, ಪರಿಕರಗಳಿಂದಲೂ, ವ್ಯಾಹೃತಿಗಳನ್ನುಚ್ಚರಿಸುತ್ತ ನಿವೇದನವನ್ನು ಮಾಡಬೇಕು. ವೈಶಾಖಮಾಸದಲ್ಲಿ ವಿಶಾಖಾ ನಕ್ಷತ್ರದ ದಿನದಲ್ಲಿ ಶಿವತಂತ್ರಗಳಲ್ಲಿ ಹೇಳಿರುವ ಕ್ರಮದಿಂದ ಅರುಣಾಚಲೇಶ್ವರನಿಗೆ ಮರುಗ, ದವನಗಳ ಉತ್ಸವವನ್ನು ಮಾಡಿಸಬೇಕು.

ಪ್ರಾಬೋಧಿಕಂ ಮಾರ್ಗಶೀರ್ಷೇ ಪ್ರಾತರ್ನಿರ್ಮಾಯ ಸಾಮಭಿಃ ।
ಮಹಾಪೂಜಾಂ ಪ್ರಕುರ್ವೀತ ಶೋಣಶೈಲಸ್ಯ ಭಕ್ತಿಮಾನ್ ॥ ೪೧ ॥
ಶನಿಪ್ರದೋಷೇಷ್ವಾರ್ದ್ರಾಸು ವ್ಯತೀಪಾತೇಷು ಪರ್ವಸು ।
ಸೋಮಾರ್ಕವಾರಯೋಃ ಶ್ಚಾರ್ಚ್ಯೇಚ್ಛೋಣಾದ್ರೀಶಂ ಯಥಾಗಮಂ ॥ ೪೨ ॥
ದೀಕ್ಷೋಪನಯನೋದ್ವಾಹಪುತ್ರಜನ್ಮಾದಿಕೇಷ್ವಪಿ ।
ವಿಶೇಷಪೂಜಾಂ ಕುರ್ವೀತ ಶೋಣನಾಥಸ್ಯ ಭಕ್ತಿಮಾನ್ ॥ ೪೩ ॥
ಅಪಿ ಸ್ವಜನ್ಮನಕ್ಷತ್ರೇ ಸಂಪತ್ಸ್ವಾಪತ್ಸು ಭೀತಿಷು ।
ಪ್ರವೇಶನಿರ್ಗಮನಯೋಶ್ಚಾರ್ಚನೀಯೋಽರುಣೇಶ್ವರಃ ॥ ೪೪ ॥
ವ್ರತಚರ್ಯಾಗಮೇ ಪಾದಬಂಧನೇ ನವವೈಭವೇ ।
ಅರುಣೇಶಾರ್ಚನಂ ಕುರ್ಯಾದಭಿಯಾನೇಷು ಚ ದ್ವಿಷಾಂ ॥ ೪೫ ॥
ಸ್ಮರೇದತಿ ದವೀಯಾಂಶ್ಚೇತ್ಪಶ್ಯೇತ್ಪರ್ಯಂತಗೋ ಯದಿ ।
ಸ್ಥಿತಶ್ಚೇದರುಣಕ್ಷೇತ್ರೇ ತ್ರಿಕಾಲಂ ಪೂಜಯೇಚ್ಛಿವಂ ॥ ೪೬ ॥
ಕಿಮನ್ಯದ್ವದ ವತ್ಸೇತಿ ಉದ್ಧೃತ್ಯ ಭುಜಮುಚ್ಯತೇ ।
ಅರುಣಕ್ಷೇತ್ರತೋ ನಾನ್ಯದಲಂ ಸ್ವರ್ಗಾಪವರ್ಗಯೋಃ ॥ ೪೭ ॥

---

೪೧–೪೬. ಮಾರ್ಗಶಿರ ಮಾಸದಲ್ಲಿ ಪ್ರತಿನಿತ್ಯವೂ ಪರಮೇಶ್ವರನಿಗೆ ಸಾಮವೇದದಿಂದ ಪ್ರಾತಃಕಾಲದಲ್ಲಿ ಸುಪ್ರಭೋದವನ್ನು ಮಾಡಿ ಭಕ್ತನಾದವನು ಅರುಣಾಚಲದ ಮಹಾಪೂಜೆಯನ್ನು ಮಾಡಬೇಕು. ಶನಿಪ್ರದೋಷದಲ್ಲಿಯೂ, ಆರ್ದ್ರಾನಕ್ಷತ್ರದಲ್ಲಿಯೂ, ವ್ಯತೀಪಾತ ಯೋಗದಲ್ಲಿಯೂ, ಪರ್ವಕಾಲದಲ್ಲಿಯೂ, ಭಾನುವಾರ ಸೋಮವಾರಗಳಲ್ಲಿಯೂ ಆಗಮೋಕ್ತರೀತಿಯಿಂದ ಪೂಜಿಸಬೇಕು. ದೀಕ್ಷಾ, ಉಪನಯನ, ವಿವಾಹ, ಪುತ್ರೋತ್ಸವ ಮುಂತಾದ ಶುಭಕಾರ್ಯಗಳಲ್ಲಿ ಭಕ್ತನಾದವನು ಅರುಣಾಚಲೇಶ್ವರನಿಗೆ ವಿಶೇಷ ಪೂಜೆಯನ್ನು ಮಾಡಬೇಕು. ಜನ್ಮನಕ್ಷತ್ರದಲ್ಲಿಯೂ, ಸಂಪದ್ವಿಪತ್ಪ್ರಾಪ್ತಿಕಾಲಗಳಲ್ಲಿಯೂ, ಭಯಗೊಂಡಾಗಲೂ, ಪ್ರವೇಶನಿರ್ಗಮನಕಾಲದಲ್ಲಿಯೂ ಅರುಣೇಶ್ವರನನ್ನು ಪೂಜಿಸಬೇಕು. ವ್ರತಾನುಷ್ಠಾನಕಾಲದಲ್ಲಿಯೂ, ನಿರ್ಬಂಧದಲ್ಲಿರುವಾಗಲೂ, ಐಶ್ವರ್ಯವಂತನಾದಾಗಲೂ, ಶತ್ರುಗಳನ್ನು ಎದುರಿಸಲು ಹೊರಡುವಾಗಲೂ ಅರುಣಾಚಲೇಶ್ವರನ ಪೂಜೆಯನ್ನು ಮಾಡಬೇಕು. ದೂರದಲ್ಲಿರುವವನು ಅರುಣಾಚಲವನ್ನು ಸ್ಮರಿಸಬೇಕು. ಹತ್ತಿರದಲ್ಲಿದ್ದರೆ ದರ್ಶನವನ್ನು ಮಾಡಬೇಕು. ಅರುಣಾಚಲದಲ್ಲಿಯೇ ವಾಸಿಸುವವನು ತ್ರಿಸಂಧ್ಯೆಗಳಲ್ಲಿಯೂ ಪೂಜಿಸಬೇಕು.

೪೭. ಎಲೈ ಮಾರ್ಕಂಡೇಯನೆ! ನಿನಗೆ ಇನ್ನೇನು ಬೇಕು? ನಾನು ಕೈಯೆತ್ತಿ ಶಪಥಪೂರ್ವಕವಾಗಿ ಹೇಳುತ್ತೇನೆ. ಸ್ವರ್ಗಮೋಕ್ಷಗಳಿಗೆ ಅರುಣಾಚಲಕ್ಕಿಂತ ಬೇರೊಂದು ಕ್ಷೇತ್ರವು ಆವಶ್ಯಕವಿಲ್ಲ.

ಸ್ಮರಣೇನ ಮನಃಶ್ರೋತ್ರೇ ಶ್ರವಣಾದ್ದರ್ಶನಾದ್ದೃಶೋಃ ।
ಜಿಹ್ವಾಂ ಚ ಕೀರ್ತನಾಚ್ಛೋಣಕ್ಷೇತ್ರಂ ಸದ್ಯಃ ಪುನಾತ್ಯಲಂ ॥ ೪೮ ॥
ಅರುಣೇಽಸ್ಮಿನ್ಮಹಾಕ್ಷೇತ್ರೇ ದೇಹಿಭಿರ್ಲಬ್ಧಜನ್ಮಭಿಃ ।
ಜೀವದ್ಭಿರ್ಲಭ್ಯತೇ ಭೋಗೋ ಮೋಕ್ಷಶ್ಚೋಽಸ್ಮುಕ್ತಜೀವಿತೈಃ ॥ ೪೯ ॥
ಅನ್ಯತ್ರ ಮುಕ್ತದೇಹಾನಾಮತ್ರ ಶ್ರಾದ್ಧಕರ್ಮಣಾ ।
ಅಪಿ ಪಾಪಾತ್ಮನಾಂ ಪುಂಸಾಮಪವರ್ಗೋ ಭವಿಷ್ಯತಿ ॥ ೫೦ ॥
ಅಯೋಧ್ಯಾಂ ಮಥುರಾಂ ಮಾಯಾಂ ಕಾಶೀಂ ಕಾಂಚೀಮವಂತಿಕಾಂ ।
ದ್ವಾರಕಾಂ ಚಾರುಣಕ್ಷೇತ್ರಮತಿಶೇತೇ ನ ಸಂಶಯಃ ॥ ೫೧ ॥

ಇತ್ಯುಕ್ತವಂತಂ ಚ ಶಿಲಾದಪುತ್ರಂ
ಮೃಕಂಡುಸೂನುಃ ಪುನರಪ್ಯುವಾಚ ।
ಮಾಹಾತ್ಮ್ಯಮೇತನ್ಮಹನೀಯಕೀರ್ತೇಃ
ಭೂಯೋಽಪಿ ಪೃಚ್ಛಾಮಿ ವದಸ್ವ ಮಹ್ಯಂ ॥ ೫೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ಕಾಮ್ಯಕರ್ಮವರ್ಣನಂ"ನಾಮ ಸಪ್ತಮೋಽಧ್ಯಾಯಃ

---

೪೮–೪೯. ಈ ಕ್ಷೇತ್ರವು ಸ್ಮರಣದಿಂದ ಮನಸ್ಸನ್ನೂ, ಶ್ರವಣದಿಂದ ಕಿವಿಗಳನ್ನೂ, ದರ್ಶನದಿಂದ ನೇತ್ರಗಳನ್ನೂ, ಸ್ತೋತ್ರದಿಂದ ನಾಲಿಗೆಯನ್ನೂ ಪವಿತ್ರಗೊಳಿಸುತ್ತದೆ. ಈ ಅರುಣಾಚಲಕ್ಷೇತ್ರದಲ್ಲಿ ಜನ್ಮವೆತ್ತಿದ ಜೀವಿಗಳಿಗೆ ಇಹದಲ್ಲಿ ಸಕಲೈಶ್ವರ್ಯಗಳೂ ಪರದಲ್ಲಿ ಮೋಕ್ಷವೂ ಲಭಿಸುವುವು.

೫೦. ಇತರ ಸ್ಥಳಗಳಲ್ಲಿ ದೇಹವಿಯೋಗವಾದ ಪಾಪಾತ್ಮರೂ ಕೂಡ ಇಲ್ಲಿ ಮಾಡಿದ ಶ್ರಾದ್ಧಕರ್ಮಗಳ ಫಲವಾಗಿ ಮೋಕ್ಷವನ್ನು ಹೊಂದುವರು.

೫೧. ಅಯೋಧ್ಯೆ, ಮಥುರೆ, ಮಾಯಾ, ಕಾಶೀ, ಕಾಂಚೀ, ಅವಂತೀ, ದ್ವಾರಕೆ ಮುಂತಾದ ಉತ್ತಮ ಕ್ಷೇತ್ರಗಳೆಲ್ಲವನ್ನೂ ಅರುಣಾಚಲವು ಮೀರಿಸುವುದೆಂಬುದರಲ್ಲಿ ಸಂದೇಹವಿಲ್ಲ.

೫೨. ಹೀಗೆ ಅಪ್ಪಣೆಕೊಡಿಸಿದ ನಂದಿಕೇಶ್ವರನನ್ನು ಕುರಿತು ಮಾರ್ಕಂಡೇಯನು "ಈ ಕ್ಷೇತ್ರದ ಮಾಹಾತ್ಮ್ಯೆಯನ್ನು ಮತ್ತೂ ಹೆಚ್ಚಾಗಿ ಕೇಳಲಿಚ್ಛಿಸುತ್ತೇನೆ. ದಯವಿಟ್ಟು ಹೇಳುವವನಾಗು" ಎಂದು ಹೇಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ಕಾಮ್ಯಕರ್ಮವರ್ಣನ"ವೆಂಬ ಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಅಷ್ಟಮೋಽಧ್ಯಾಯಃ

### ಸೃಷ್ಟಿವರ್ಣನಂ

ನಂದಿಕೇಶ್ವರ ಉವಾಚಃ—

ಅರುಣಾಚಲಮಾಹಾತ್ಮ್ಯಂ ವಿಸ್ತರಾತ್ಪರಿಪೃಚ್ಛತಾ ।
ಮಾರ್ಕಂಡೇಯ ತ್ವಯಾ ಮನ್ಯೇ ಮಯಿ ನ್ಯಸ್ತೋ ಮಹಾನ್ ಭರಃ ॥
ಸ್ಥಾನೇ ಕುತೂಹಲಾಕ್ಷಿಪ್ತಂ ಮನಸ್ತವ ಮಹಾಮತೇ ।
ಯಃ ಶೋಣಾದ್ರೀಶಚರಿತಂ ನ ವೇತ್ತಿ ಸ ನರಃ ಪಶುಃ ॥ ೨ ॥
ಕಥಂ ವಾ ಶ್ರುತಮಪ್ಯೇತದಾಶ್ಚರ್ಯರಸಭಾವಿತೈಃ ।
ಶೋಣಾಚಲಜುಷಃ ಶಂಭೋರ್ಮಾಹಾತ್ಮ್ಯಂ ಮಹಿತೋದಯಂ ॥ ೩ ॥
ಇದಾನೀಂ ಸ್ಮರ ಚಿತ್ರಂ ತು ಚರಿತ್ರಂ ಸ್ಮರವೈರಿಣಃ ।
ಅಶೇಷಮವಧಾರ್ಯೇತ ಪ್ರಜ್ಞಾವತ್ಪ್ರವರೈರಪಿ ॥ ೪ ॥
ಕಥಂ ವಾ ಶಕ್ಯತೇ ವಕ್ತುಂ ಜ್ಞಾನಾನ್ಯೈರಪಿ ಕಾರ್ತ್ಸ್ನ್ಯತಃ ।
ಪರಾಮೃತಾನುಭೂತ್ಯೈವ ಸತ್ಯಂ ನೃತ್ಯತಿ ಮೇ ಮನಃ ॥ ೫ ॥

---

### ಕನ್ನಡದ ಅನುವಾದ

#### ಸೃಷ್ಟಿಯ ವರ್ಣನೆಯು

೧–೨. ನಂದಿಕೇಶ್ವರನು ಹೇಳುತ್ತಾನೆ:—ಅಯ್ಯಾ ಮಾರ್ಕಂಡೇಯನೆ! ಅರುಣಾಚಲಮಾಹಾತ್ಮ್ಯವನ್ನು ವಿಸ್ತಾರವಾಗಿ ತಿಳಿಸಬೇಕೆಂದು ನೀನು ಕೇಳಿದುದರಿಂದ ನನ್ನಲ್ಲಿ ಹಿರಿದಾದ ಭಾರವನ್ನು ಹೊರಿಸಿದಂತಾಯಿತು. ನಿನ್ನ ಮನಸ್ಸು ಉತ್ತಮ ವಿಷಯದಲ್ಲಿಯೇ ಕುತೂಹಲವುಳ್ಳದ್ದಾಗಿರುವುದು. ಅರುಣಾಚಲೇಶ್ವರನ ಮಹಾತ್ಮ್ಯವನ್ನು ತಿಳಿಯದ ಮನುಷ್ಯನು ಪಶುವೇ ಸರಿ.

೩. ವಿದ್ವಾಂಸರಿಂದಲೂ ಕೂಡ ಅರುಣಾಚಲದಲ್ಲಿ ನೆಲಸಿರುವ ಮಹೇಶ್ವರನ ವಿಶಾಲವಾದ ಮಾಹಾತ್ಮ್ಯವನ್ನು ಪೂರ್ತಿಯಾಗಿ ವಿವರಿಸಲು ಹೇಗೆ ಸಾಧ್ಯವಾದೀತು ?

೪. ಹೇಗೆತಾನೆ ಬುದ್ಧಿವಂತರಲ್ಲಿ ಶ್ರೇಷ್ಠರೆನಿಸಿದವರೂ ಕೂಡ ಆಶ್ಚರ್ಯಭರಿತವಾದ ಈ ಮಹಿಮೆಯನ್ನು ಕೇಳಿ ಸಂಪೂರ್ಣವಾಗಿ ಮನಸ್ಸಿನಲ್ಲಿ ಜ್ಞಾಪಕವಿಡಲು ಸಾಧ್ಯವು?

೫. ಸಕಲವನ್ನು ತಿಳಿದವರೂ ಕೂಡ ಹೇಳಲು ಹೇಗೆ ಸಮರ್ಥರಾಗುವರು? ಅದರ ಅಮೃತದ ಸವಿಯಿಂದಲೇ ನನ್ನ ಮನಸ್ಸು ನಿಜವಾಗಿಯೂ ತಾಂಡವವಾಡುತ್ತಿರುವುದು.

ಅದ್ಭುತಂ ಶಿವಚಾರಿತ್ರಮಾಸ್ಕಂದಿತಮನೋಹರಂ ।
ಮಮ ವರ್ಣಯಿತುಂ ಕಾರ್ತ್ಸ್ನ್ಯೇನೈವ ಶಕ್ನೋತಿ ಶೇಮುಷೀ ॥ ೬ ॥
ತಥಾಪ್ಯೇಷ ಪ್ರವಕ್ಷ್ಯೇಽಹಮಂಶಾಂಶೇನ ಯಥಾಮತಿ ।
ಪುಣ್ಯಂ ಶೋಣಾದ್ರಿನಾಥಸ್ಯ ಮಾಹಾತ್ಮ್ಯಂ ಶ್ರೂಯತಾಂ ಮುನೇ ॥ ೭ ॥
ಪುರಾದಿ ದೇವಕಲ್ಪಾದೌ ನಿರ್ವಿಕಲ್ಪೋ ಮಹೇಶ್ವರಃ ।
ಸ್ವೇಚ್ಛಯಾ ಸಕಲಂ ವಿಶ್ವಂ ಪುನರಪ್ಯುದಭಾವಯತ್ ॥ ೮ ॥
ಉದ್ಭಾವಿತಂ ಚ ತದ್ವಿಶ್ವಂ ಸ್ರಷ್ಟುಂ ಪಾತುಂ ಚ ಸರ್ವದಾ ।
ಅನ್ವಿಚ್ಛನ್ನಾದಿದೇವೋಽಸೌ ಬ್ರಹ್ಮವಿಷ್ಣೂ ವಿನಿರ್ಮಮೇ ॥ ೯ ॥
ಅಸೃಜದ್ದಕ್ಷಿಣಾಂಗೇನ ತ್ರ್ಯಂಬಕಃ ಪರಮೇಷ್ಠಿನಂ ।
ವಿಷ್ಟರಶ್ರವಸಂ ದೇವೋ ವಾಮಾಂಗೇನ ಚ ಸೃಷ್ಟವಾನ್ ॥ ೧೦ ॥
ಬ್ರಹ್ಮಾಣಂ ರಜಸಾ ವಿಷ್ಣುಂ ಸತ್ತ್ವೇನ ಸಮಯೂಯುಜತ್ ।
ನಿಯುಕ್ತೌ ದೇವದೇವೇನ ತೌ ವಿರಂಚಸುತಾವುಭೌ ॥ ೧೧ ॥
ಈಶಾತೇ ಸರ್ವಜಗತಾಂ ಸೃಷ್ಟಿರಕ್ಷಾನಿಧಾನಯೋಃ ।
ಮನಸೈವ ಮರೀಚ್ಯಾದೀನ್ಸಸರ್ಜ ಬ್ರಾಹ್ಮಣಾನ್ದಶ ।
ದಕ್ಷಂ ಚ ದಕ್ಷಿಣಾಂಗುಷ್ಠಾತ್ಸೃಷ್ಟ್ವಾ ಪ್ರಾವರ್ತಯದ್ವಿಧಿಃ ॥ ೧೨ ॥

---

೬. ಮನೋಹರಗಳಾದ ವಿಷಯಗಳಿಂದ ಕೂಡಿದ ಅದ್ಭುತವಾದ ಶಿವ ಚರಿತ್ರೆಯನ್ನು ಸಂಪೂರ್ಣವಾಗಿ ವರ್ಣಿಸಲು ನನ್ನ ಮನಸ್ಸಿಗೆ ಸಾಧ್ಯವಿಲ್ಲವು.

೭. ಹಾಗಾದರೂ ನನ್ನ ಶಕ್ತಿಗೆ ಅನುಸಾರವಾಗಿ ಅರುಣಾಚಲೇಶ್ವರನ ಪುಣ್ಯಪ್ರದವಾದ ಮಹಿಮೆಯ ಲವಲೇಶವನ್ನು ಹೇಳುತ್ತೇನೆ, ಕೇಳುವವನಾಗು.

೮. ಪೂರ್ವದಲ್ಲಿ ಕಲ್ಪದ ಉತ್ಪತ್ತಿಸಮಯವೊದಗಲು ನಿರ್ವಿಕಲ್ಪನಾದ ಮಹೇಶ್ವರನು ತನ್ನ ಇಚ್ಛಾಮಾತ್ರದಿಂದಲೇ ಸಕಲ ಲೋಕಗಳನ್ನೂ ಸೃಷ್ಟಿಮಾಡಬೇಕೆಂದು ಭಾವಿಸಿದನು.

೯. ಸಂಕಲ್ಪಮಾಡಿದ ಪ್ರಪಂಚವನ್ನು ನಿತ್ಯದಲ್ಲಿಯೂ ಸೃಷ್ಟಿ ಮತ್ತು ಪಾಲನೆಮಾಡಲು ಇಚ್ಛಿಸುವವನಾಗಿ ಬ್ರಹ್ಮ ಮತ್ತು ವಿಷ್ಣುಗಳನ್ನು ಸೃಷ್ಟಿ ಮಾಡಿದನು.

೧೦. ತನ್ನ ದೇಹದ ಬಲಭಾಗದಿಂದ ಬ್ರಹ್ಮನನ್ನೂ, ಎಡಭಾಗದಿಂದ ಮಹಾವಿಷ್ಣುವನ್ನೂ ಉತ್ಪತ್ತಿಮಾಡಿದನು.

೧೧. ಬ್ರಹ್ಮನನ್ನು ರಜೋಗುಣಯುಕ್ತನನ್ನಾಗಿಯೂ, ವಿಷ್ಣುವನ್ನು ಸತ್ತ್ವಗುಣಾವಿಷ್ಟನನ್ನಾಗಿಯೂ ಮಾಡಿ ಅವರನ್ನು ತಮ್ಮ ತಮ್ಮ ಕೆಲಸಗಳಲ್ಲಿ ನಿಯೋಗಿಸಿದನು.

೧೨. ಇವರಿಬ್ಬರೂ ಸೃಷ್ಟಿ ಮತ್ತು ರಕ್ಷಣಾ ಕಾರ್ಯಗಳಲ್ಲಿ ಶಕ್ತರಾಗಿ

ಮುಖೇನ ಬ್ರಾಹ್ಮಣಾನ್ಬಾಹುಭ್ಯಾಂ ಕ್ಷತ್ರಿಯಾನೂರುತೋ ವಿಶಃ ।
ಶೂದ್ರಾಂಶ್ಚ ಪದ್ಭ್ಯಾಂ ನಿರಮಾತ್ಸ್ವಯಂ ಚ ಕಮಲಾಸನಃ ॥ ೧೩ ॥
ಮರೀಚಿತನಯಾಜ್ಜಜ್ಞುಃ ಕಶ್ಯಪಾದಸುರಾಸ್ಸುರಾಃ ॥ ೧೪ ॥
ಮರುತಃ ಫಣಿನೋ ಗೃಧ್ರಾನ್ ಗಂಧರ್ವಾಪ್ಸರಸೋಽಪಿ ಚ ।
ಮನುಶ್ಚ ಯಸ್ಯ ಸಂತಾನೋ ಮಾನವೋಽಯಂ ಪ್ರವರ್ತತೇ ॥ ೧೫ ॥
ನಾನಾಜ್ಞಾತಿತ್ವಮಾಪಾದ್ಯ ನಾನಾಕರ್ಮಪ್ರವರ್ತಕಾಃ ।
ಅತ್ರೇಶ್ಚ ಸಮಭೂದಾರ್ಷಂ ಕ್ಷಾತ್ರಂ ಚ ದ್ವಿವಿಧಂ ಕುಲಂ ॥ ೧೬ ॥
ಪುಲಸ್ತ್ಯಪುಲಹಾಭ್ಯಾಂ ಚ ಜಜ್ಞಿರೇ ಯಕ್ಷರಾಕ್ಷಸಾಃ ।
ಉತಥ್ಯಗೀಷ್ಪತಿಮುಖಾಃ ಜಜ್ಞಿರೇಽಂಗಿರಸೋ ಮುನೇಃ ॥ ೧೭ ॥
ಭೃಗೋರಗ್ನಿಃ ಸಮುದಭೂಚ್ಚ್ಯವನಾದ್ಯಾಸ್ತಥರ್ಷಯಃ ।
ವಸಿಷ್ಠಪ್ರಮುಖೇಭ್ಯಶ್ಚ ಸಂಬಭೂವುರ್ಮಹರ್ಷಯಃ
ಯತ್ಪುತ್ರಪೌತ್ರೈರ್ಭುವನಮಿದಮಾಪೂರ್ಯತೇಽಖಿಲಂ ॥ ೧೮ ॥

---

ಕಾರ್ಯಮಾಡಲಾರಂಭಿಸಿದರು. ಬ್ರಹ್ಮನು ತನ್ನ ಮನಸ್ಸಿನಿಂದಲೇ ಮರೀಚ್ಯಾದಿ ದಶಬ್ರಾಹ್ಮಣರನ್ನೂ, ಬಲಗೈಯ ಅಂಗುಷ್ಠದಿಂದ ದಕ್ಷಪ್ರಜಾಪತಿಯನ್ನೂ ಸೃಜಿಸಿದನು.

೧೩. ಮುಖದಿಂದ ಬ್ರಾಹ್ಮಣರನ್ನೂ ಬಾಹುಗಳಿಂದ ಕ್ಷತ್ರಿಯರನ್ನೂ ತೊಡೆಗಳಿಂದ ವೈಶ್ಯರನ್ನೂ ಪಾದಗಳಿಂದ ಶೂದ್ರರನ್ನೂ ಬ್ರಹ್ಮನು ತಾನೇ ನಿರ್ಮಿಸಿದನು.

೧೪–೧೫. ಮರೀಚಿಯ ಮಗನಾದ ಕಶ್ಯಪನಿಂದ ದೇವತೆಗಳೂ, ರಾಕ್ಷಸರೂ, ಮರುತ್ತುಗಳೂ, ಸರ್ಪಗಳೂ, ಗೃಧ್ರಗಳೂ, ಗಂಧರ್ವರೂ, ಅಪ್ಸರಸೆಯರೂ ಹುಟ್ಟಿ ಬಳಿಕ ಮನುವೆಂಬುವನು ಹುಟ್ಟಿದನು. ಆತನ ವಂಶವೇ ಮಾನವರೆಂಬುದಾಗಿ ಈಗ ಬೆಳೆಯುತ್ತಿದೆ.

೧೬. ಮನುಷ್ಯರೂ ತಮ್ಮ ತಮ್ಮ ಜ್ಞಾನಕ್ಕನುಸಾರವಾಗಿ ಅನೇಕ ಕರ್ಮಗಳಲ್ಲಿ ನಿರತರಾದರು. ಅತ್ರಿಮಹರ್ಷಿಯಿಂದ ಎರಡು ಶಾಖೆಯಾಗಿ ಕ್ಷತ್ರಿಯ ವಂಶವು ಬೆಳೆಯಿತು.

೧೭. ಪುಲಹ ಮತ್ತು ಪುಲಸ್ತ್ಯರಿಂದ ಯಕ್ಷರಾಕ್ಷಸರು ಹುಟ್ಟಿದರು. ಅಂಗಿರಸ ಮುನಿಯಿಂದ ಉತಥ್ಯ, ಬೃಹಸ್ಪತಿ ಮುಂತಾದವರು ಉತ್ಪನ್ನರಾದರು.

೧೮. ಭೃಗುವಿನಿಂದ ಅಗ್ನಿಯೂ ಚ್ಯವನನೇ ಮೊದಲಾದ ಮಹರ್ಷಿಗಳೂ ಹುಟ್ಟಿದರು. ವಸಿಷ್ಠಪ್ರಮುಖರಿಂದ ಅನೇಕ ಮಹರ್ಷಿಗಳು ಹುಟ್ಟಿದರು. ಅವರ ಪುತ್ರ ಪೌತ್ರ ಸಂತತಿಯಿಂದ ಈ ಸಮಸ್ತ ಭೂಮಂಡಲವೂ ತುಂಬಿರುವುದು.

ಏವಂ ಬ್ರಹ್ಮಾತ್ಮಜೈಃ ಸ್ವೀಯೈರಿದಮಾಪೂರಯಜ್ಜಗತ್ ।
ಕಾಲೇನ ವೈಭವೇನಾಪಿ ವಿಸಸ್ಮಾರ ಮಹೇಶ್ವರಂ ॥ ೧೯ ॥
ಅಚ್ಯುತೋಽಪಿ ಭೃಗೋಃ ಪುತ್ರೀಮುದ್ವಾಹ್ಯ ಕಮಲಾಲಯಾಂ ।
ಮತ್ಸ್ಯಾದಿರೂಪೋ ಜಗತಿ ಭವನ್ನಾಸ್ಮರದೀಶ್ವರಂ ॥ ೨೦ ॥
ಸೃಷ್ಟಿ ಸ್ಥಿತಿಭ್ಯಾಂ ದ್ರುಹಿಣಾಬ್ಜನಾಭೌ
ಸ್ವಾಧೀನತಾಂ ನೂನಮುಪಾಗತಾಭ್ಯಾಂ ।
ಅತೀವ ಗರ್ವಂ ದಧತುರ್ನ ಕಸ್ಯ
ಮದೋಽಧಿಕಾರೇಣ ಭವೇನ್ನರಸ್ಯ ॥ ೨೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ
"ಸೃಷ್ಟಿವರ್ಣನಂ" ನಾಮ ಅಷ್ಟಮೋಽಧ್ಯಾಯಃ

---

೧೯. ಈ ರೀತಿಯಾಗಿ ಬ್ರಹ್ಮನು ತನ್ನ ಮಕ್ಕಳಿಂದ ಬ್ರಹ್ಮಾಂಡವನ್ನು ತುಂಬಿದನು. ಮತ್ತು ಕಾಲದ ಮಹಿಮೆಯಿಂದಲೂ ತನ್ನ ವೈಭವದಿಂದಲೂ ಮಹೇಶ್ವರನನ್ನೇ ಮರೆತನು.

೨೦. ಮಹಾವಿಷ್ಣುವೂ ಭೃಗುಮಹರ್ಷಿಯ ಮಗಳಾದ ಮಹಾಲಕ್ಷ್ಮಿ ಯನ್ನು ಮದುವೆಯಾಗಿ ಜಗತ್ತಿನ ಪಾಲನೆಗಾಗಿ ಮತ್ಸ್ಯಾದಿ ಅವತಾರಗಳನ್ನೆತ್ತುತ್ತ ಮಹೇಶ್ವರನನ್ನು ಸ್ಮರಿಸಲೇ ಇಲ್ಲವು.

೨೧. ಸೃಷ್ಟಿ ಸ್ಥಿತಿಗಳ ಅಧಿಕಾರಗಳು ತಮ್ಮ ಕೈಗಳಲ್ಲಿ ಸಿಕ್ಕಿದುದರಿಂದ ಬ್ರಹ್ಮನೂ ಮಹಾವಿಷ್ಣುವೂ ಅತ್ಯಂತ ಗರ್ವವನ್ನು ಪಡೆದರು. ಅಧಿಕಾರದಿಂದ ಯಾರಿಗೆತಾನೆ ಮದವೇರುವುದಿಲ್ಲ ?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ
ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ಸೃಷ್ಟಿಯ ವರ್ಣನೆ"ಯೆಂಬ
ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ನವಮೋಽಧ್ಯಾಯಃ

### ಶಿವವಿಷ್ಣುವಿವಾದವರ್ಣನಂ

ನಂದಿಕೇಶ್ವರ ಉವಾಚ:—

ಅಹಮೇವ ಪ್ರಭುರಿತಿ ಪ್ರರೂಢಾಧಿಕಗರ್ವಯೋಃ ।
ವಿರಂಚ್ಯಚ್ಯುತಯೋರಾಸೀದ್ವಿವಾದೋ ಮೋಹಸಂಭವಃ ॥ ೧ ॥
ರಜೋವಿಕಾರಾಭ್ಯಧಿಕೋ ಬಾಹ್ಯೇ ನೀಲ ಇವೋತ್ಥಿತಃ ।
ವಿಶ್ವಸೃಷ್ಟಿಕರೋ ವಿಷ್ಣುಂ ವಿರಂಚೋಽಬ್ರೂತ ಗರ್ವತಃ ॥ ೨ ॥

ಬ್ರಹ್ಮೋವಾಚ:—

ಕಥಂ ತ್ವಮಧಿಕಶ್ಚಾಸಿ ವಿಷ್ಣೋ ಜನಯಿತುರ್ಮಮ ।
ಪಿತಾಮಹಸ್ಯ ಲೋಕಾನಾಂ ಕಿಮೇವಮತಿಮೋಹಿತಃ ॥ ೩ ॥
ತ್ವತ್ತ ಏವೋದಿತೌ ದೈತ್ಯೌ ನಿಹತ್ಯ ಮಧುಕೈಟಭೌ ।
ದೈತ್ಯಾರಿರಿತಿ ಮುಗ್ಧತ್ವಂ ಗರ್ವಂ ವಹಸಿ ಕೇಶವ ॥ ೪ ॥
ತ್ವಾಮೇವ ಸೃಜತೋ ನಿತ್ಯಂ ಬಹುಧಾ ಮಮ ವೇಧಸಃ ।
ಅದ್ಯಾಪ್ಯಾಯಾಸಜಾಂ ಪೀಡಾಂ ನ ಪರಿತ್ಯಜತಃ ಕರೌ ॥ ೫ ॥

---

### ಕನ್ನಡದ ಅನುವಾದ

#### ಶಿವ ವಿಷ್ಣು ವಿವಾದ ವರ್ಣನ

೧. ನಂದಿಕೇಶ್ವರನು ಹೇಳುತ್ತಾನೆ:—ಆಗ ಇಬ್ಬರೂ ಮೋಹಗೊಂಡವರಾಗಿ ನಾನು ಹೆಚ್ಚು ತಾನು ಹೆಚ್ಚೆಂದು ಅತ್ಯಂತ ಗರ್ವದಿಂದಿರುವ ಬ್ರಹ್ಮವಿಷ್ಣುಗಳಿಗೆ ವಿವಾದವು ಆರಂಭವಾಯಿತು.

೨. ರಜೋಗುಣ ವಿಶಿಷ್ಟನಾಗಿ ಹೊರಗೆ ನೀಲವರ್ಣದಿಂದೊಡಗೂಡಿದ ಸೃಷ್ಟಿಕರ್ತೃವಾದ ಬ್ರಹ್ಮನು ವಿಷ್ಣುವನ್ನು ಕುರಿತು ಗರ್ವದಿಂದ ಹೇಳತೊಡಗಿದನು.

೩. "ಎಲೈ ವಿಷ್ಣುವೇ! ಲೋಕಪಿತಾಮಹನಾಗಿಯೂ, ನಿನ್ನನ್ನೂ ಸೃಜಿಸಿದವನಾಗಿಯೂ ಇರುವ ನನಗಿಂತ ನೀನು ಹೇಗೆ ಅಧಿಕನಾಗುವೆ? ಈ ಮೋಹವು ನಿನಗೇಕೆ?

೪. ರಾಕ್ಷಸಶ್ರೇಷ್ಠರಾದ ಮದುಕೈಟಭರನ್ನು ನೀನೇ ಕೊಂದೆಯೆಂದು ಮೋಹಗೊಂಡು ದೈತ್ಯಾರಿಯೆಂದು ವೃಥಾ ಜಂಭವನ್ನು ಕೊಚ್ಚಿಕೊಳ್ಳುತ್ತಿರುವೆ.

೫. ನಿನ್ನನ್ನು ಸೃಷ್ಟಿಮಾಡಿದ ಆಯಾಸವು ನನ್ನ ಕೈಗಳಿಗೆ ಇಂದಿಗೂ ಕಳೆದುಹೋಗಿಲ್ಲ.

ಮಮ ಶ್ರಮಾಂಭಸೋದ್ಭೂತೇ ಮಹಾಂಭೋಧೌ ನಿಮಜ್ಜತಃ ।
ನ್ಯಗ್ರೋಧಂ ನ ಚೋತ್ಪನ್ನಂ ಕುತಸ್ತೇಽಸ್ತ್ಯವಲಂಬನಂ ॥ ೬ ॥
ಮದುಪಜ್ಞೇ ಮಹಾಂಭೋಧೌ ಸ್ರವತೇ ಕೋಽಪಿ ಪನ್ನಗಃ ।
ತದಾಶ್ರಯಸ್ತ್ವಮೂರ್ಧ್ವಂ ತೇ ಪದ್ಮಂ ತಚ್ಚಾಸನಂ ಮಮ ॥ ೭ ॥
ಕುತಸ್ತಮೋಮಯೇ ಬ್ರೂಹಿ ತ್ವಯಿ ಸತ್ತ್ವಗುಣೋದಯಃ ।
ಸ ವೇತ್ಸಿ ಕಿಂ ತ್ವಂ ಪ್ರಕೃತಿಂ ನಿದ್ರಾಜಡಿಮನಿರ್ಭರಃ ॥ ೮ ॥
ಜಲಾಶಯೇ ಪ್ರಸ್ವಪತಾ ದೈತ್ಯಭೀತ್ಯಾ ಜನಾರ್ದನ ।
ಕಥಂ ತ್ವಯಾ ರಕ್ಷಿತಾಸೌ ಮದಧೀನಾ ಜಗತ್ತ್ರಯೀ ॥ ೯ ॥
ಚತುರ್ಭ್ಯೋ ಮಮ ವಕ್ತ್ರೇಭ್ಯೋ ವೇದಾಃ ಸಮುದಯಂಗತಾಃ ।
ಚೈತನ್ಯರೂಪಿಣೀ ಶಕ್ತಿಃ ಕಲತ್ರಂ ಮೇ ಸರಸ್ವತೀ ॥ ೧೦ ॥
ಮಯಾ ಹಿ ಸೃಜ್ಯತೇ ವಿಶ್ವಮಿದಂ ಸ್ಥಾವರಜಂಗಮಂ ।
ರಕ್ಷ್ಯತೇ ಚ ತದಿಂದ್ರಾದ್ಯೈರ್ಮಾಮಕೈಃ ಪುತ್ರಪೌತ್ರಕೈಃ ॥ ೧೧ ॥
ತತಃ ಕಥಯ ವೈಕುಂಠ ಮನ್ನಿಯೋಜ್ಯೇಷು ಕಶ್ಚನ ।
ಜಗತಾಮೀಶ್ವರಾನ್ಮತ್ತಃ ಕಥಂ ನಾಮಾತಿರಿಚ್ಯಸೇ ॥ ೧೨ ॥

---

೬. ನನ್ನ ಶ್ರಮದಿಂದ ಉಂಟಾದ ಬೆವರಿನ ಸಮುದ್ರದಲ್ಲಿ ಮುಳುಗುತ್ತಿದ್ದ ನಿನಗೆ ನಾನು ಒಂದು ನ್ಯಗ್ರೋಧವೃಕ್ಷವನ್ನು ಸೃಜಿಸದಿದ್ದರೆ ನಿನಗೆ ಆಲಂಬನ ವೆಲ್ಲಿರುತ್ತಿದ್ದಿತು?

೭–೮. ನನ್ನ ಉಪಜ್ಞೆಯಿಂದುಂಟಾದ ಸಮುದ್ರದಲ್ಲಿ ಒಂದು ಸರ್ಪ ವುಂಟಾಯಿತು. ಅದೇ ನಿನಗೆ ಆಶ್ರಯವಾಯಿತು. ನಿನ್ನ ಆಸನದ ಊರ್ಧ್ವ ದಲ್ಲಿರುವ ಪದ್ಮವೇ ನನಗೆ ಆಸನವಾಯಿತು. ತಮೋಗುಣಾವೃತನಾದ ನಿನ್ನಲ್ಲಿ ಸತ್ತ್ವಗುಣೋದಯವೆಲ್ಲಿ ಬರಬೇಕು? ನಿದ್ರೆಯಿಂದ ಜಡತ್ವವನ್ನು ಹೊಂದಿರುವ ನೀನು ಪ್ರಕೃತಿಯನ್ನು ಹೇಗೆತಾನೆ ತಿಳಿಯಲು ಶಕ್ತನು?

೯. ರಾಕ್ಷಸರ ಭಯದಿಂದ ನೀರನ್ನು ಹೊಕ್ಕು ನಿದ್ರೆಮಾಡುತ್ತಿರುವ ನಿನ್ನಿಂದ ನನ್ನ ಅಧೀನವಾದ ಬ್ರಹ್ಮಾಂಡವು ಹೇಗೆತಾನೆ ರಕ್ಷಿಸಲ್ಪಡುವುದು?

೧೦–೧೧. ನನ್ನ ನಾಲ್ಕು ಮುಖಗಳಿಂದಲೇ ನಾಲ್ಕು ವೇದಗಳೂ ಉಚ್ಚರಿಸ ಲ್ಪಟ್ಟುವು. ಚೈತನ್ಯರೂಪಿಣಿಯಾದ ಶಕ್ತಿಯು ಸರಸ್ವತಿಯೆಂಬ ಹೆಸರಿನಿಂದ ನನಗೆ ಮಡದಿಯಾಗಿರುವಳು. ನನ್ನಿಂದಲೇ ಚರಾಚರಾತ್ಮಕವಾದ ಪ್ರಪಂಚವು ಸೃಷ್ಟವಾಗುವುದು. ನನ್ನ ಪುತ್ರಪೌತ್ರಾದಿಗಳಾದ ಇಂದ್ರಾದಿಗಳಿಂದಲೇ ಅದು ರಕ್ಷಿಸಲ್ಪಡುತ್ತಿರುವುದು.

೧೨. ಆದುದರಿಂದ ನೀನೂ ನನ್ನ ಸೇವಕರಲ್ಲಿ ಒಬ್ಬನಾಗಿರುವೆ. ಎಲೈ ವಿಷ್ಣುವೆ! ಜಗದೊಡೆಯನಾದ ನನಗಿಂತ ನೀನು ಹೇಗೆ ಹೆಚ್ಚಿನವನಾಗಿರುವೆ?

ನಂದಿಕೇಶ್ವರ ಉವಾಚ :—

ಇತ್ಥಂ ಸರೋಷಸಂರಂಭೇ ವಿಧೌ ಪೌರುಷಭಾಷಿಣಿ ।
ನಾರಾಯಣೋಽಪಿ ಸಾಸೂಯಂ ಸ್ಮಿತ್ವೈವ ಸಮಭಾಷತ ॥ ೧೩ ॥

ವಿಷ್ಣುರುವಾಚ :—

ವಿರಂಚೇ ಮುಂಚ ಸಂರಂಭಂ ವೃಥಾ ಖಲು ವಿಕತ್ಥಸೇ ।
ನಾಭೀಸರೋಜಸಂಜಾತೋ ಮಮ ತ್ವಮವಧಾರಯ ॥ ೧೪ ॥
ಯೋಗನಿದ್ರಾಂ ಮಯೋನ್ಮುಚ್ಯ ಪುರಾಹಂ ಮಧುಕೈಟಭೌ ।
ನ ಚೇದುನ್ಮಥಿತೌ ತಾಭ್ಯಾಂ ತಥೈವ ಸ್ಯಾಃ ಪ್ರಣಾಶಿತಃ ॥ ೧೫ ॥
ಸೋಮಕಪ್ರಮುಖಾನ್ದೈತ್ಯಾನ್ಹಂತುಮಾತ್ಮೇಚ್ಛಯಾ ಮಮ ।
ಧೃತಮತ್ಸ್ಯಾದಿರೂಪಸ್ಯ ಕೋ ವಾನ್ಯಃ ಸೃಷ್ಟಿಕಾರಣಂ ॥ ೧೬ ॥
ನ ಕಿಂಚಿದಪಿ ಪಶ್ಯಂತಿ ರಜಸಾರೂಢದೃಷ್ಟಯಃ ।
ರಜೋಮಯೇನ ಭವತಾ ಕಿಂ ನಿರೂಪಯಿತುಂ ಕ್ಷಮಂ ॥ ೧೭ ॥
ಅವಿನಾಭಾವಿನೀ ಶಕ್ತಿರ್ನನು ಮೇ ಪದ್ಮವಾಸಿನೀ ।
ಯಸ್ಯಾಃ ಕಟಾಕ್ಷಮಾತ್ರೇಣ ಜಗತ್ತ್ರಿತಯಮೇಧತೇ ॥ ೧೮ ॥

---

೧೩. ನಂದಿಕೇಶ್ವರನು ಹೇಳುತ್ತಾನೆ:—ಈ ರೀತಿಯಾಗಿ ರೋಷದಿಂದಲೂ ಸಂಭ್ರಮದಿಂದಲೂ ಬ್ರಹ್ಮನು ಕಠಿನೋಕ್ತಿಗಳನ್ನಾಡಲು ನಾರಾಯಣನೂ ಅಸೂಯೆಯಿಂದ ಮಂದಹಾಸಯುಕ್ತನಾಗಿ ಹೇಳಿದನು.

೧೪. ಎಲೈ ಬ್ರಹ್ಮನೆ! ನಿನ್ನ ಸಂಭ್ರಮವನ್ನು ಬಿಡು. ಸುಮ್ಮನೆ ಏಕೆ ಹರಟುತ್ತಿರುವೆ? ನೀನು ನನ್ನ ನಾಭೀಕಮಲದಿಂದಲೇ ಹುಟ್ಟಿದವನೆಂಬುದನ್ನು ಚೆನ್ನಾಗಿ ತಿಳಿದುಕೊ.

೧೫. ನಾನು ಯೋಗನಿದ್ರೆಯಿಂದೆಚ್ಚತ್ತು ಮೊದಲು ಮಧುಕೈಟಭ ರಾಕ್ಷಸರನ್ನು ನಿಗ್ರಹಮಾಡದಿದ್ದಿದ್ದರೆ ಅವರಿಬ್ಬರಿಂದಲೇ ನೀನು ನಾಶವನ್ನು ಹೊಂದುತ್ತಿದ್ದೆ.

೧೬. ಸೋಮಕನೇ ಮೊದಲಾದ ದೈತ್ಯರನ್ನು ಕೊಲ್ಲಲು ನಾನು ಮತ್ಸ್ಯಾದಿ ರೂಪಗಳನ್ನು ಧರಿಸಿದೆನೆ ಹೊರತು ನನಗೆ ಸೃಷ್ಟಿಕರ್ತನುತಾನೆ ಯಾರು ?

೧೭. ರಜಃಪೂರಿತ ನೇತ್ರಗಳುಳ್ಳವರು ಏನನ್ನೂ ಕಾಣಲಾರರು. ಅಂತೆಯೇ ರಜೋಗುಣಮಯನಾದ ನೀನು ಏನನ್ನುತಾನೆ ತಿಳಿಯಲು ಶಕ್ತನಾಗಿರುವೆ?

೧೮. ನಿಜವಾದ ಶಕ್ತಿಯ ಸ್ವರೂಪಳೆಂದರೆ ನನ್ನನ್ನು ಎಡಬಿಡದಿರುವ ಮಹಾಲಕ್ಷ್ಮಿಯೇ ಆಗಿರುವಳು. ಆಕೆಯ ಕಟಾಕ್ಷದಿಂದಲೇ ಮೂರು ಲೋಕಗಳೂ ವೃದ್ಧಿಯನ್ನೈದುವುವು.

ಭೂತಾನ್ಯಮೂನಿ ಕಾಲೋಽಯಮಾತ್ಮಾನೋಽಪ್ಯಹಮೇವ ಹಿ ।
ಮಯಾ ವಿರಹಿತಂ ಕಿಂ ವಾ ತ್ರಿಷು ಲೋಕೇಷು ವಿದ್ಯತೇ ॥ ೧೯ ॥
ಆದಿತ್ಯಾ ವಸವೋ ರುದ್ರಾ ದಿಕ್ಪಾಲಾ ಮನವೋಽಪ್ಯಹಂ ।
ಭೂರ್ಭುವಃ ಸ್ವಸ್ತ್ರಯಾಣಾಮೇಷಾಂ ಮದಧೀನಾಂ ವಿಚಿಂತಯ ॥ ೨೦ ॥
ಮಮೈವ ವಿನಿಯೋಗೇನ ಸೃಷ್ಟಿಶಕ್ತಿಃ ಸ್ವಯಂ ಸ್ಥಿತಾ ।
ತನ್ಮೇ ತ್ರೈಲೋಕ್ಯನಾಥಸ್ಯ ಕಿಂ ತ್ವಂ ಜ್ಯೇಷ್ಠಃ ಸಮೋಽಥವಾ ॥ ೨೦ ॥

ನಂದಿಕೇಶ್ವರ ಉವಾಚ:—

ಏವಂ ಮೋಹಾಂಧಮನಸೋರನ್ಯೋನ್ಯಂ ಪ್ರತಿಗರ್ಜತೋಃ ।
ಯಯಾವನಲ್ಪಸಮಯಃ ಸಂವರ್ತಸದೃಶಸ್ತಯೋಃ ॥ ೨೨ ॥
ಉದಯಾಸ್ತಮಯೌ ಸ್ಯಾತಾಂ ನ ತದಾ ಚಂದ್ರಸೂರ್ಯಯೋಃ ।
ನಕ್ಷತ್ರಾಣಿ ಚ ತಾರಾಶ್ಚ ಗ್ರಹಾಶ್ಚ ಕ್ಷೀಣತಾಂ ಯಯುಃ ॥ ೨೩ ॥
ನಾವವುರ್ಮರುತೋ ವಾ ನ ಜಜ್ವಲುರ್ಜಾತವೇದಸಃ ।
ನಾಂತರಿಕ್ಷಂ ನ ಚ ಕ್ಷೋಣೀ ನ ದಿಶೋಽಪಿ ಚಕಾಶಿರೇ ॥ ೨೪ ॥
ಸಮುದ್ರಾಶ್ಚುಕ್ಷುಭುಸ್ಸರ್ವೇ ಪರ್ವತಾಶ್ಚ ಚಕಂಪಿರೇ ।
ಓಷಧ್ಯಃ ಶೋಷಮಾಸೇದುರವಸೇದುಶ್ಚ ಜಂತವಃ ॥ ೨೫ ॥

---

೧೯–೨೦. ಈ ಪಂಚಭೂತಗಳೂ, ಕಾಲವೂ, ಜೀವರೂ, ಎಲ್ಲವೂ ನಾನೇ ಆಗಿರುವೆನು. ನನ್ನ ವಿನಾ ಯಾವ ವಸ್ತುವೂ ಮೂರು ಲೋಕಗಳಲ್ಲಿಯೂ ಇರುವುದಿಲ್ಲ. ನಾನೇ ಆದಿತ್ಯರು, ವಸುಗಳು, ರುದ್ರರು, ದಿಕ್ಪಾಲಕರು, ಮನುಗಳೂ ಆಗಿರುವೆನು. ಭೂಲೋಕ, ಭುವರ್ಲೋಕ, ಸುವರ್ಲೋಕಗಳೆಲ್ಲವೂ ನನ್ನ ಅಧೀನಗಳೆಂದು ತಿಳಿ.

೨೧. ನನ್ನ ಆಜ್ಞೆಯಿಂದಲೇ ಸೃಷ್ಟಿಶಕ್ತಿಯ ಕಾರ್ಯವಾಗುವುದು. ಅಂತಹ ತ್ರಿಲೋಕನಾಥನಾದ ನನಗೆ ನೀನು ಜ್ಯೇಷ್ಠನಾಗಲಿ ಸಮನಾಗಲಿ ಹೇಗೆ ಆಗುವೆ?

೨೨. ನಂದಿಕೇಶ್ವರನು ಹೇಳುತ್ತಾನೆ:—ಈ ರೀತಿಯಾಗಿ ಇಬ್ಬರೂ ಮೋಹಗೊಂಡು ಒಬ್ಬರನ್ನೊಬ್ಬರು ಜರಿಯುತ್ತಿರಲು ಪ್ರಪಂಚದ ಕಾರ್ಯವು ನಿಂತು ಪ್ರಳಯಕಾಲದಂತೆ ಬಹಳ ದಿನಗಳು ಕಳೆದುಹೋದುವು.

೨೩. ಆಗ ಸೂರ್ಯಚಂದ್ರರ ಉದಯಾಸ್ತಗಳಿರಲಿಲ್ಲ. ನಕ್ಷತ್ರಗಳೂ, ತಾರೆಗಳೂ, ನವಗ್ರಹಗಳೂ ಕ್ಷೀಣದಶೆಯನ್ನು ಹೊಂದಿದುವು.

೨೪. ವಾಯುವು ಸಂಚರಿಸಲಿಲ್ಲ. ಅಗ್ನಿಯು ಜ್ವಲಿತನಾಗಲಿಲ್ಲ. ಅಂತರಿಕ್ಷವಾಗಲಿ, ಭೂಮಿಯಾಗಲಿ, ದಿಕ್ಕುಗಳಾಗಲಿ ಕಣ್ಣುಗಳಿಗೆ ಕಾಣದಾದುವು.

೨೫. ಸಮುದ್ರಗಳು ಕ್ಷೋಭೆಗೊಂಡುವು. ಪರ್ವತಗಳು ನಡುಗಿದುವು. ಓಷಧಿವನಸ್ಪತಿಗಳು ಶೋಷಿಸಿ ಜಂತುಗಳು ಮರಣೋನ್ಮುಖಗಳಾದುವು.

ಪಕ್ಷಮಾಸರ್ತುವರ್ಷಾದಿಕಾಲಸ್ಯ ನಿಯಮೋ ಗತಃ ।
ಅಹೋರಾತ್ರ ವ್ಯವಸ್ಥಾಪಿ ಪ್ರಣಾಶಂ ಸಮುಪಾಯಯೌ ॥ ೨೬ ॥
ಇಂದ್ರಾದಯೋ ಲೋಕಪಾಲಾ ಮರೀಚ್ಯಾದ್ಯಾ ಮಹರ್ಷಯಃ ।
ಸರ್ವೇಽಪ್ಯಕಾಲೇ ಸಂಪ್ರಾಪ್ತಂ ಕಲ್ಪಾಂತಂ ಮೇನಿರೇ ತದಾ ॥ ೨೭ ॥
ಏವಂ ಜಾತೇ ಮಹಾಕ್ಷೋಭೇ ಭೂತಾಕ್ರಂದಪ್ರಚೋದಿತಃ ।
ಭೂತನಾಥೋ ಜಗಜ್ಜಾತಮವಿದ್ಯಾಯಾಮಬುಧ್ಯತ ॥ ೨೮ ॥
ವ್ಯಚಿಂತಯಚ್ಚ ವಿಶ್ವಾತ್ಮಾ ವಿಶ್ವಸಂರಕ್ಷಣೋದ್ಯತಃ ।
ಅಬಾಹ್ಯಯಾ ದೃಶಾ ಪಶ್ಯದನಯೋರ್ಮೋಹಕಾರಣಂ ॥ ೨೯ ॥
ಸ್ವಾಮಿನಂ ಸಕಲೈಶ್ವರ್ಯದಾತಾರಂ ಮಾಂ ಮಹೋದ್ಧತೌ ।
ವಿಸ್ಮೃತ್ಯ ಸ್ವಂ ಸ್ವಮೇವೈತಾವಮಂಸೇತಾಂ ಜಗತ್ಪ್ರಭೂ ॥ ೩೦ ॥
ಅಹೋ ಮೋಹಸ್ಯ ಮಾಹಾತ್ಮ್ಯಂ ಯದಿಮೌ ದ್ರುಹಿಣಾಚ್ಯುತೌ ।
ಜಾನಾನಾವಪಿ ಮಾಂ ಸಮ್ಯಗಭೂತಾಮೇವಮುದ್ಧತೌ ॥ ೩೧ ॥
ಅಜ್ಞಾನತಿಮಿರೋದ್ಭೂತಿದೂಷಿತಾಶಯಲೋಚನಃ ।
ಜನಃ ಪ್ರಾಪ್ತಂ ಸ್ತುತಮಪಿ ಪ್ರಾಯೋ ವಸ್ತು ನ ಪಶ್ಯತಿ ॥ ೩೨ ॥

---

೨೬. ಪಕ್ಷ, ಮಾಸ, ಋತು, ವರ್ಷ, ಅಹೋರಾತ್ರಗಳು ಮುಂತಾದ ಕಾಲವಿಭಜನೆಯೇ ಇಲ್ಲವಾಗಿ ಪ್ರಪಂಚನಿಯಮವೇ ನಾಶವನ್ನು ಹೊಂದಿತು.

೨೭. ಇಂದ್ರಾದಿ ಲೋಕಪಾಲಕರೂ ಮರೀಚಿಯೆ ಮೊದಲಾದ ಮಹರ್ಷಿಗಳೂ ಅಕಾಲದಲ್ಲಿ ಪ್ರಳಯವುಂಟಾಯಿತೆಂದು ಹೆದರಿದರು.

೨೮. ಈ ರೀತಿಯಾಗಿ ಮಹಾಕ್ಷೋಭವುಂಟಾಗಲು ಪ್ರಾಣಿಗಳ ದೀನಾಲಾಪದಿಂದ ಚೋದಿತನಾದ ಮಹೇಶ್ವರನು ಅವಿದ್ಯೆಯಿಂದ ಹುಟ್ಟಿದ ಜಗತ್ತನ್ನು ಕುರಿತು ಚಿಂತಿಸತೊಡಗಿದನು.

೨೯. ವಿಶ್ವಾತ್ಮನಾದ ಪರಮೇಶ್ವರನು ವಿಶ್ವಪಾಲಕನಾಗಿ ಚಿಂತಿಸಿ ಜ್ಞಾನದೃಷ್ಟಿಯಿಂದ ಇವರಿಬ್ಬರ ಅಜ್ಞಾನಕ್ಕೆ ಕಾರಣವನ್ನು ತಿಳಿದುಕೊಂಡನು.

೩೦. "ಸಕಲೈಶ್ವರ್ಯಗಳನ್ನೂ ಕೊಡುವ ನನ್ನನ್ನು ಮರೆತು ಮದೋದ್ಧತರಾಗಿ ಎಚ್ಚರಿಕೆಯಿಲ್ಲದೆ ಇವರಿಬ್ಬರೂ ತಾವೇ ಜಗನ್ನಾಯಕರೆಂದು ತಿಳಿಯುತ್ತಿರುವರು.

೩೧. ನನ್ನನ್ನು ತಿಳಿದಿರುವ ಇವರೂ ಕೂಡ ಇಷ್ಟು ಉದ್ಧತರಾಗಿ ವರ್ತಿಸುತ್ತಿರುವರೆಂದಮೇಲೆ ಮೋಹದ ಬಲವನ್ನು ಎಷ್ಟೆಂದು ಹೇಳಬೇಕು?

೩೨. ಅಜ್ಞಾನವೆಂಬ ಅಂಧಕಾರದಿಂದ ದೂಷಿತವಾದ ದೃಷ್ಟಿಯುಳ್ಳ ಜನರು ಎದುರಿಗೆ ಇರುವ ಉತ್ತಮ ವಸ್ತುವನ್ನೂ ಸಹ ಪ್ರಾಯಶಃ ನೋಡಲಾರರು.

ಕೃತಾಪರಾಧಾವಪ್ಯೇತೌ ನಿಮಗ್ನೌ ಮೋಹಸಾಗರೇ ।
ಮಯಾ ನೋಪೇಕ್ಷಣೀಯೌ ಹಿ ಲೋಕಾನಾಂ ಹಿತಕಾಮ್ಯಯಾ ॥ ೩೩ ॥
ಇತಿ ನಿಶ್ಚಿತ್ಯ ಮನಸಾ ಮಾಯಾಮ್ಯೈವಶ್ಯಮೇತಯೋಃ ।
ದೇವೋ ದಯಾಮಹಾಂಭೋಧಿರ್ವ್ಯಪೋಹಯಿತುಮೈಹತ ॥ ೩೪ ॥
ಅಹೋಽನುಕಂಪಾ ತರುಣೇಂದುಮೌಳೇಃ
ಸ್ವಭಾವಸಿದ್ಧಾ ಭುವನತ್ರಯೇಽಸ್ಮಿನ್ ।
ಅಸೌ ಪ್ರಮೋಹಾಂಬುಧಿ ಮಧ್ಯತೋಽಭೂ
ದಾವಿರ್ನಿರಸ್ತಾವಪಿ ಧಾತೃವಿಷ್ಣೂ ॥ ೩೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ
"ಶಿವವಿಷ್ಣು ವಿವಾದವರ್ಣನಂ" ನಾಮ ನವಮೋಽಧ್ಯಾಯಃ

---

೩೩. ಇವರಿಬ್ಬರೂ ನನ್ನಲ್ಲಿ ಮಹಾಪರಾಧವನ್ನು ಮಾಡಿದವರಾದರೂ, ಮೋಹಾವಿಷ್ಟರಾದ ಇವರನ್ನು ಲೋಕಹಿತೇಚ್ಛೆಯಿಂದ ನಾನು ಕೈಬಿಡಬಾರದು."

೩೪. ಹೀಗೆ ನಿಶ್ಚಯಮಾಡಿಕೊಂಡು ದಯಾಸಮುದ್ರನಾದ ಮಹೇಶ್ವರನು ಇವರಿಬ್ಬರ ಮಾಯಾಪಾರವಶ್ಯತೆಯನ್ನು ಕಳೆಯಬೇಕೆಂದು ಸಂಕಲ್ಪವನ್ನು ಮಾಡಿದನು.

೩೫. ಚಂದ್ರಶೇಖರನು ಸ್ವಭಾವಸಿದ್ಧವಾಗಿ ಮೂರು ಲೋಕಗಳಲ್ಲಿಯೂ ಇಟ್ಟಿರುವ ದಯೆಯು ಎಷ್ಟೆಂದು ಹೇಳಲಿ? ಇವರಿಬ್ಬರ ಮೋಹವೆಂಬ ಸಮುದ್ರದಿಂದ ಉದ್ಧವಿಸಿದಂತೆ ಮಹೇಶ್ವರನು ಪ್ರತ್ಯಕ್ಷನಾಗಲು ಬ್ರಹ್ಮ ನಾರಾಯಣರು ತೇಜೋಹೀನರಾದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ
ಮಾಹಾತ್ಮ್ಯೆಯಲ್ಲಿ "ಶಿವ ವಿಷ್ಣು ವಿವಾದ ವರ್ಣನ"ವೆಂಬ
ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದಶಮೋಽಧ್ಯಾಯಃ

### ಬ್ರಹ್ಮವಿಷ್ಣ್ವೋರ್ಮಧ್ಯೇ ತೇಜೋಮಯಲಿಂಗಪ್ರಾದುರ್ಭಾವವರ್ಣನಂ

ಮಾರ್ಕಂಡೇಯ ಉವಾಚ :—

ಆಜ್ಞಾಪಯ ವಿಭೋ ಮಹ್ಯಂ ಯಥಾ ಶಂಭುಃ ಸನಾತನಃ ।
ಅನುಜಗ್ರಾಹ ಮೋಹಾಂಧೌ ವೈಕುಂಠಪರಮೇಷ್ಠಿನೌ ॥ ೧ ॥

ನಂದಿಕೇಶ್ವರ ಉವಾಚ :—

ಶೃಣುಷ್ವ ಸರ್ವಂ ವಕ್ಷ್ಯಾಮಿ ವಿಸ್ತರೇಣ ಯಥಾತಥಂ ।
ಯ ದೇವದೇವೋ ವಿದಧೇ ದಯಯಾ ಭಕ್ತವತ್ಸಲಃ ॥ ೨ ॥
ಅಥೋದಸ್ಥಾತ್ತಯೋರ್ಮಧ್ಯೇ ತಥಾ ವಿವದಮಾನಯೋಃ ।
ಜ್ಯೋತಿಸ್ತಂಭತ್ವಮಭ್ಯೇತ್ಯ ರೋದೋರಂಧ್ರನಿರೋಧಕಃ ॥ ೩ ॥
ಮಹತಾ ಜೃಂಭಮಾಣೇನ ತಸ್ಯ ಬ್ರಹ್ಮಾಂಡ ಭೇದಿನಃ ।
ಅಂತರಿಕ್ಷಮತಿಶ್ಯಾಮಂ ಸಮುತ್ಕ್ಷಿಪ್ತಮಿವಾಭವತ್ ॥ ೪ ॥
ವಿಷ್ವಗ್ನಿವರ್ಣತಾ ತಸ್ಯ ಜ್ಯೋತಿರ್ಲಿಂಗಸ್ಯ ತೇಜಸಾ ।
ದಿಶೋ ವಿರೇಜಿರೇ ಸದ್ಯೋ ದೂರವಿಸ್ತಾರಿತಾ ಇವ ॥ ೫ ॥

---

## ಕನ್ನಡದ ಅನುವಾದ

### ಬ್ರಹ್ಮವಿಷ್ಣುಗಳ ನಡುವೆ ತೇಜೋಮಯ ಲಿಂಗ ಪ್ರಾದುರ್ಭಾವ ವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:— "ಎಲೈ ಭಕ್ತಾಗ್ರೇಸರನೆ! ಸನಾತನನಾದ ಪರಮೇಶ್ವರನು ಮೋಹಗೊಂಡ ಬ್ರಹ್ಮವಿಷ್ಣುಗಳನ್ನು ಹೇಗೆ ಅನುಗ್ರಹಿಸಿದನೆಂಬುದನ್ನು ವಿವರಿಸು."

೨. ನಂದಿಕೇಶ್ವರನು ಹೇಳುತ್ತಾನೆ:—ಭಕ್ತವತ್ಸಲನಾದ ಮಹಾದೇವನು ದಯೆಯಿಂದೆಸಗಿದ ಮಹಾದ್ಭುತವನ್ನು ವಿಸ್ತಾರವಾಗಿ ನಿನಗೆ ಯಥಾವತ್ತಾಗಿ ತಿಳಿಸುತ್ತೇನೆ ಕೇಳುವವನಾಗು.

೩. ಈ ರೀತಿಯಾಗಿ ವಿವಾದ ಮಾಡುತ್ತಿರುವ ಬ್ರಹ್ಮ ವಿಷ್ಣುಗಳೀರ್ವರ ಮಧ್ಯದಲ್ಲಿ ಭೂಮ್ಯಾಕಾಶಗಳನ್ನು ವ್ಯಾಪಿಸುವಂತಹ ಒಂದು ಜ್ಯೋತಿಯು ಸ್ತಂಭಾಕಾರವಾಗಿ ನಿಂತಿತು.

೪-೫. ಬ್ರಹ್ಮಾಂಡವನ್ನು ಭೇದಿಸುತ್ತಿರುವಂತೆ ಕಾಣುವ ಅದರ ಮಹತ್ತಾದ ಪ್ರಕಾಶದಿಂದ ಶ್ಯಾಮಳವರ್ಣವಾದ ಅಂತರಿಕ್ಷವು ಉತ್ಕ್ಷೇಪವನ್ನು ಹೊಂದಿದಂತಿದ್ದಿತು. ಆ ಜ್ಯೋತಿರ್ಲಿಂಗದ ಅಧಃಪ್ರಸಾರಿಯಾದ ತೇಜಸ್ಸಿನಿಂದ ದೂರಕ್ಕೆ ತಳ್ಳಲ್ಪಟ್ಟಂತೆ ದಿಕ್ಕುಗಳು ಪ್ರಕಾಶಿಸಿದುವು.

ತೀವ್ರೈಸ್ತಸ್ಯ ಮಹಾಜ್ವಾಲೈಃ ಶೋಷಿತಾ ಇವ ಸಾಗರಾಃ ।
ವಿಮುಕ್ತವೀಚಿಸಂಕ್ಷೋಭಾಃ ಸ್ವಾಮೇವ ಪ್ರಕೃತಿಂ ಯಯುಃ ॥ ೬ ॥
ವ್ಯದ್ಯೋತಂತ ದಿವಿ ಪ್ರಾಗ್ವದ್ಗ್ರಹಾಸ್ತಾರಾಗಣೈಃ ಸಹ ।
ತೇಜಸ್ತಂಭಾತ್ಸಮುದ್ಭಿನ್ನಾಃ ಸ್ಫುಲಿಂಗಾ ಇವ ಕೇಚನ ॥ ೭ ॥
ತೇಜಸಾ ತಸ್ಯ ಶೋಣೇನ ಗೈರಿಕೇಣೇವ ರಂಜಿತಾಃ ।
ಭೌಮಂ ರವಿಶ್ರಿಯಂ ಸರ್ವೇಽಪ್ಯವಹನ್ನವನೀಭೃತಃ ॥ ೮ ॥
ಸಮುದ್ರಾಸ್ತತ್ಪ್ರತಿಚ್ಛಾಯಾ ನಿರ್ಝರಾಶ್ಲಿಷ್ಟ ಯಾದಸಃ ।
ಪದ್ಮರಾಗಶಿಲಾಖಂಡೇ ಘಟಿತಾ ಇವ ರೇಜಿರೇ ॥ ೯ ॥
ಪ್ರವಾಲಗುಚ್ಛೈಃ ಪ್ರತ್ಯಗ್ರೈರ್ಲಂಬಿತಾ ಇವ ಪಾದಪಾಃ ।
ನದ್ಯಶ್ಚ ನಿರ್ಝರೋತ್ಫುಲ್ಲ ಕಲ್ಹಾರಾ ಇವ ರೇಜಿರೇ ॥ ೧೦ ॥
ಮಹೀ ಕುಂಕುಮಲಿಪ್ತೇವ ದಿಶಃ ಸಿಂದೂರಿತಾ ಇವ ।
ಸರ್ವಾರುಣಮಿವ ವ್ಯೋಮ ಸಮಂತಾತ್ಪ್ರತ್ಯದೃಶ್ಯತ ॥ ೧೧ ॥
ಬ್ರಹ್ಮಾಂಡ ಕರ್ಪರಮಭೂತ್ತನ್ಮಹಃ ಪೂರಿತಾಂತರಂ ।
ಶೋಣಿತೇನೇವ ಸಂಪೂರ್ಣಂ ಕಪಾಲಂ ಕೃತ್ತಿವಾಸಸಃ ॥ ೧೨ ॥

---

೬. ತೀಕ್ಷ್ಣಗಳಾದ ಆ ಲಿಂಗದ ಮಹಾಜ್ವಾಲೆಗಳಿಂದ ಶೋಷಗೊಂಡಂತೆ ಸಮುದ್ರಗಳು ಅಲೆಗಳನ್ನು ಉಪಸಂಹರಿಸಿಕೊಂಡು ತಮ್ಮ ಪೂರ್ವ ಸ್ಥಿತಿಯನ್ನು ಹೊಂದಿದುವು.

೭. ಈ ಅಗ್ನಿಲಿಂಗದಿಂದ ಹೊರಟ ಕಿಡಿಗಳೆಂಬಂತೆ ಆಕಾಶದಲ್ಲಿ ಎಂದಿನಂತೆಯೇ ಗ್ರಹಗಳೂ ನಕ್ಷತ್ರಗಳೂ ಪ್ರಕಾಶಿಸತೊಡಗಿದುವು.

೮. ಆ ಲಿಂಗದ ಅರುಣವರ್ಣದ ತೇಜಸ್ಸಿನಿಂದ ಆವೃತವಾಗಿ ಪರ್ವತಗಳು ಗೈರಿಕಾದಿ ಧಾತುಗಳಿಂದೊಡಗೂಡಿದಂತೆ ಕಾಣುತ್ತ ಭೂಮಿಗೆ ಇಳಿದುಬಂದ ಸೂರ್ಯರಂತೆ ತೋರುತ್ತಿದ್ದುವು.

೯. ಅದರ ಪ್ರತಿಬಿಂಬವನ್ನು ಹೊಂದಿದ ಸಪ್ತಸಮುದ್ರಗಳು ಅರುಣವಾದ ನೀರಿನಿಂದ ಕೂಡಿ ಪದ್ಮರಾಗಶಿಲೆಯಲ್ಲಿ ನಿರ್ಮಿಸಿದ ತಟಾಕಗಳಂತೆ ಕಾಣುತ್ತಿದ್ದವು.

೧೦. ಮರಗಳೆಲ್ಲವೂ ಹವಳಗಳ ಗೊಂಚಲುಗಳನ್ನು ಧರಿಸುತ್ತಿರುವಂತೆ ಕಂಡುವು. ನದಿಗಳು ಅರಳಿದ ಕಲ್ಹಾರ ಪುಷ್ಪಗಳಿಂದ ತುಂಬಿದಂತೆ ಪ್ರಕಾಶಿಸಿದವು.

೧೧–೧೨. ಭೂಮಿಯು ಕುಂಕುಮ ಲಿಪ್ತಗಳಂತೆಯೂ, ದಿಕ್ಕುಗಳು ಸಿಂದೂರವನ್ನು ಚಲ್ಲಿದಂತೆಯೂ, ಆಕಾಶವು ಎಲ್ಲೆಡೆಯೂ ಅರುಣತ್ವವನ್ನು ಪಡೆದಂತೆಯೂ ಕಾಣುತ್ತಿದ್ದುವು. ಬ್ರಹ್ಮಾಂಡದ ಚಿಪ್ಪುಗಳು ಅದರ ತೇಜಸ್ಸಿನಿಂದ ತುಂಬಿದಂತಾದುವು. ಅಲ್ಲದೆ ಮಹೇಶ್ವರನ ಕೈಯೊಳಗಿನ ಕಪಾಲವು ಅರುಣರಾಗವನ್ನು ಸ್ವೀಕರಿಸಿದಂತೆ ಕಾಣುತ್ತಿದ್ದಿತು.

ಏವಂ ಪ್ರವರ್ಧಮಾನೇನ ತೇಜಃಸ್ತಂಭೇನ ತೇನಚ ।
ಅರುಣಾಕಾರತಾಂ ಭೇಜೇ ವಿಶ್ವಂ ಸ್ಥಾವರಜಂಗಮಂ ॥ ೧೩ ॥
ತೇಜೋಲಿಂಗಂ ತದಾಶ್ಚರ್ಯಂ ದೃಷ್ಟ್ವಾ ತ್ಯಕ್ತ್ವಾಮಿಥಃ ಕೃಧೌ ।
ಅಚಿಂತಯೇತಾಮೇಕೈಕಂ ಚತುರ್ಮುಖಚತುರ್ಭುಜೌ ॥ ೧೪ ॥
ಕಿಮೇಷ ವಸುಧಾಂ ಭಿತ್ವಾ ಶೇಷಾದೀನಾಂ ಫಣಾಭೃತಾಂ ।
ಫಣಾಮಾಣಿಕ್ಯಮಹಸಾಂ ರಾಶಿರುನ್ಮುಖತಾಂ ಗತಃ ॥ ೧೫ ॥
ಕಿಂ ವಾ ಕಲ್ಪಾಂತಸುಲಭಪ್ರಾದುರ್ಭಾವಾಃ ಪ್ರಭಾಕರಾಃ ।
ದ್ವಾದಶಾಪಿ ನಭೋಭೂಮ್ಯೋರ್ಮಧ್ಯೇ ಯುಗಪದುತ್ಥಿತಾಃ ॥ ೧೬ ॥
ಆಹೋಸ್ವಿನ್ಮೇಘ ಸಂಘರ್ಷಾದ್ವಿತತಾ ವ್ಯೋಮಮಧ್ಯತಃ ।
ಅನ್ಯೋನ್ಯಂ ಮಿಲಿತಾಃ ಕ್ಷಿಪ್ರಾ ನಿಪತಂತ್ಯವನೀತಲೇ ॥ ೧೭ ॥
ಪ್ರತಿಘ್ನನ್ನೇಷ ತೇಜೋಭಿರಕ್ಷ್ಣೋಃ ಶಕ್ತಿಮನುಕ್ಷಣಂ ।
ಸ್ವನಿರ್ವಿಶೇಷಿತಾಶೇಷಭೂತಜಾಲಃ ಪ್ರವರ್ಧತೇ ॥ ೧೮ ॥
ಏಷ ಉದ್ದೀಪ್ಯಮಾನೋಽಪಿ ಸಂತಾಪಾಯ ನ ಕಲ್ಪತೇ ।
ನೇದೀಯಾಂಸ್ಯಪಿ ಭೂತಾನಿ ನ ನಿರ್ದಹತಿ ವಹ್ನಿವತ್ ॥ ೧೯ ॥

---

೧೩. ಈ ರೀತಿಯಾಗಿ ವೃದ್ಧಿಯನ್ನೈದುತ್ತಿರುವ ಅಗ್ನಿಸ್ತಂಭದಿಂದ ಸ್ಥಾವರ ಜಂಗಮಾತ್ಮಕವಾದ ಸಕಲ ಪ್ರಪಂಚವೂ ಅರುಣವರ್ಣವಿಶಿಷ್ಟವಾಯಿತು.

೧೪. ಈ ಆಶ್ಚರ್ಯಯುಕ್ತವಾದ ತೇಜೋಲಿಂಗವನ್ನು ಕಂಡು ಬ್ರಹ್ಮ ವಿಷ್ಣುಗಳು ತಮ್ಮ ವಿವಾದವನ್ನು ಬಿಟ್ಟು ಇದೇನೆಂದು ಯೋಚಿಸತೊಡಗಿದರು.

೧೫. "ಇದು ಏನು ? ಭೂಮಿಯನ್ನು ಹೊತ್ತಿರುವ ಆದಿಶೇಷನ ಹೆಡೆಗಳಲ್ಲಿ ಇರುವ ಮಾಣಿಕ್ಯಗಳ ಕಾಂತಿಯು ಒಮ್ಮೆಯೇ ಭೂಮಿಯನ್ನು ಭೇದಿಸಿಕೊಂಡು ಬಂದುದೆ ?

೧೬. ಅಥವಾ ಪ್ರಳಯಕಾಲದಲ್ಲಿ ಸಹಜವಾಗಿ ಬೆಳಗುವ ದ್ವಾದಶಾದಿತ್ಯರೂ ಏಕಕಾಲದಲ್ಲಿಯೇ ಭೂಮ್ಯಾಕಾಶಗಳ ಮಧ್ಯದಲ್ಲಿ ಮೂರ್ತಿವಂತರಾಗಿ ನಿಂತಿದ್ದಾರೆಯೇ ?

೧೭. ಅಲ್ಲದೆ ಆಕಾಶದಲ್ಲಿ ಮೇಘಗಳ ಸಂಘಟ್ಟನದಿಂದುಂಟಾದ ಸಿಡಿಲುಗಳು ಒಟ್ಟುಗೂಡಿ ಭೂಲೋಕದಲ್ಲಿ ಬೀಳುತ್ತಿರುವುವೊ ?

೧೮. ಈ ತೇಜಸ್ಸು ಕಣ್ಣುಗಳ ಶಕ್ತಿಯನ್ನು ಪ್ರತಿಹತಮಾಡುವುದಾಗಿ ಪ್ರತಿಕ್ಷಣದಲ್ಲಿಯೂ ಸಕಲ ಭೂತಗ್ರಾಮವನ್ನೂ ನಿರ್ವಿಶೇಷವನ್ನಾಗಿ ಮಾಡಿ ವೃದ್ಧಿಯನ್ನು ಹೊಂದುತ್ತಿರುವುದು.

೧೯. ಈ ಅಗ್ನಿಲಿಂಗವು ಜ್ವಲಿಸುತ್ತಿದ್ದರೂ ತಾಪವನ್ನುಂಟುಮಾಡುವುದಿಲ್ಲ. ಹತ್ತಿರದಲ್ಲಿರುವ ಭೂತಗಳನ್ನೂ ಸಹ ಅಗ್ನಿಯಂತೆ ಸುಡುವುದಿಲ್ಲ.

ಏತಸ್ಯ ಕಾಂತಿಸಂಕ್ರಾಂತ್ಯಾ ಜಗದೇವ ನ ಕೇವಲಂ ।
ಮದೀಯಮಪಿ ಶೋಣತ್ವಮನುಪ್ರಾಪ್ತಮಹೋ ವಪುಃ ॥ ೨೦ ॥
ಕಸ್ಮಾದೇಷ ಸಮುತ್ಪನ್ನಃ ಕಿಂ ಮೂಲಃ ಕಿಮುಪಾಧಿಕಃ ।
ಕುತಸ್ತ್ಯಃ ಕಿಮುಪಾದಾನಃ ಕಯಾ ಶಕ್ತ್ಯಾ ಪ್ರಕಾಶತೇ ॥ ೨೧ ॥
ಕಿಯಾನವಧಿರೇತಸ್ಯ ವಿಷ್ವಕ್ತಿರ್ಯಗಧೋರ್ಧ್ವತಃ ।
ಅವಗಾಢಶ್ಚ ಪಾತಾಲಂ ಕಿಯನ್ಮಾತ್ರಮಸಾವಿತಿ ॥ ೨೨ ॥
ತದೇತದಖಿಲಂ ಜ್ಞಾತುಂ ಮನಃ ಪರ್ಯುತ್ಸುಕಂ ಮುಹುಃ ।
ಇಚ್ಛತ್ಯುತ್ಪತಿತುಂ ವ್ಯೋಮ ಪ್ರವೇಷ್ಟುಂ ಚ ರಸಾತಲಂ ॥ ೨೩ ॥
ಇತಿ ಚಿಂತಾಭರಾಕ್ರಾಂತೌ ತೇಜಸ್ತಂಭಾವಲೋಕನಾತ್ ।
ಉಭಾವಪ್ಯಾಕುಲಿತೌ ವೈಕುಂಠಪರಮೇಷ್ಠಿನೌ ॥ ೨೪ ॥
ಅಭಾಷತ ಚ ಗೋವಿಂದಃ ಸುತರಾಮೇವ ಗರ್ವಿತಂ ।
ಹಿರಣ್ಯಗರ್ಭಮಾಲೋಕ್ಯ ಸ್ಮಯಮಾನಮುಖಾಂಬುಜಃ ॥ ೨೫ ॥

ವಿಷ್ಣುರುವಾಚ :—

ಅಯಮೇವಾವಯೋರ್ಬ್ರಹ್ಮನ್ನನ್ಯೋನ್ಯೋತ್ಕರ್ಷ ಕಾಂಕ್ಷಿಣೋಃ ।
ಸತ್ಯಮೇವ ಪರೀಕ್ಷಾಯೈ ನಿಕಷಃ ಸಮುಪಸ್ಥಿತಃ ॥ ೨೬ ॥

---

೨೦–೨೩. ಈ ತೇಜಸ್ಸಿನ ಅರುಣಕಾಂತಿಯಿಂದ ಕೇವಲ ಪ್ರಪಂಚವೇ ಆವೃತವಾಗಿರುವುದಿಲ್ಲ. ನನ್ನ ಶರೀರವೂ ಕೆಂಪು ಛಾಯೆಯನ್ನು ಹೊಂದಿರುವುದು ಆಶ್ಚರ್ಯವೇ ಸರಿ. ಈ ಲಿಂಗವು ಎಲ್ಲಿಂದ ಹುಟ್ಟಿತು? ಇದರ ಮೂಲವಾವುದು? ಉಪಾಧಿಗಳು ಯಾವುವು? ಎಲ್ಲಿಂದ ಬಂದಿತು? ಉಪಾದಾನ ಕಾರಣ ವಾವುದು? ಇದು ಯಾವ ಶಕ್ತಿಯಿಂದ ಪ್ರಕಾಶವಾಗುತ್ತದೆ? ಇದಕ್ಕೆ ಸುತ್ತಲೂ, ಮೂಲೆಗಳಲ್ಲಿಯೂ, ಕೆಳಗೂ, ಮೇಲೂ ಎಲ್ಲೆಗಳೆಲ್ಲಿ? ಪಾತಾಳದಲ್ಲಿ ಇದು ಎಷ್ಟುಮಾತ್ರ ಪ್ರಸರಿಸಿರುವುದು? ಈ ಎಲ್ಲ ವಿಷಯಗಳನ್ನೂ ತಿಳಿದು ಕೊಳ್ಳಲು ಮನಸ್ಸು ಅತ್ಯಂತ ಉತ್ಸುಕವಾಗಿರುವುದು. ಇದು ಆಕಾಶಕ್ಕೆ ಹಾರುವುದಕ್ಕೂ ರಸಾತಲವನ್ನು ಶೋಧಿಸುವುದಕ್ಕೂ ಇಚ್ಛಿಸುತ್ತಿರುವುದು.''

೨೪. ಈ ರೀತಿಯಾಗಿ ತೇಜಸ್ತಂಭದ ದರ್ಶನದಿಂದ ವ್ಯಾಕುಲಿತರಾಗಿ ಬ್ರಹ್ಮವಿಷ್ಣುಗಳು ಚಿಂತೆಗೊಳಗಾದರು.

೨೫. ಆಗ ನಾರಾಯಣನು ನಗೆಮೊಗವುಳ್ಳವನಾಗಿ ಅತ್ಯಂತ ಗರ್ವಿಷ್ಠ ನಾದ ಬ್ರಹ್ಮನನ್ನು ಕುರಿತು ಇಂತು ಹೇಳತೊಡಗಿದನು.

೨೬. ವಿಷ್ಣುವು ಹೇಳುತ್ತಾನೆ:—'' ಎಲೈ ಬ್ರಹ್ಮನೆ! ನಮ್ಮ ನಮ್ಮ ಹೆಚ್ಚುಗಾರಿಕೆಯನ್ನು ಹೇಳಿಕೊಳ್ಳುತ್ತಿರುವ ನಮ್ಮಿಬ್ಬರ ಪರೀಕ್ಷಾರ್ಥವಾಗಿಯೇ ಈ ಲಿಂಗವು ನಿಜವಾಗಿಯೂ ನಮ್ಮಿಬ್ಬರ ಮಧ್ಯೆ ನಿಂತಿರುವುದು.

ಅಮುಷ್ಯ ತೇಜಸಾಂ ರಾಶೇರಪರಿಚ್ಛೇದ್ಯಸಂಪದಃ ।
ಆದ್ಯಂತೌ ಜ್ಞಾತುಮೇಕೇನ ನ ಶಕ್ಯಂ ಧ್ರುವಮಾವಯೋಃ ॥ ೨೭ ॥
ಯಃ ಪಶ್ಯೇನ್ಮೂಲಮಗ್ರಂ ವಾ ತೇಜಸೋಽಸ್ಯ ಸ್ವಯಂಭುವಃ ।
ಸ ಏವ ನಾವಭ್ಯಧಿಕೋ ಜಗತಾಂ ನಾಥಕೋಽಪಿ ಸಃ ॥ ೨೮ ॥

ನಂದಿಕೇಶ್ವರ ಉವಾಚ :—

ಇತ್ಯುಭಾವಪಿ ವಿನಿಶ್ಚಿತಾಶಯೌ
ಮೂಲಮಗ್ರಮಪಿ ತಸ್ಯ ವೀಕ್ಷಿತುಂ ।
ತೇಜಸೋಽತಿ ಮಹತೋ ಬಭೂವತುಃ
ಸ್ಪರ್ಧಯಾ ವಿರಚಿತೋದ್ಯಮೌ ಮಿಥಃ ॥ ೨೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಪೂರ್ವಾರ್ಧೇ "ಬ್ರಹ್ಮವಿಷ್ಣ್ವೋರ್ಮಧ್ಯೇ ತೇಜೋಮಯಲಿಂಗ ಪ್ರಾದುರ್ಭಾವವರ್ಣನಂ" ನಾಮ ದಶಮೋಽಧ್ಯಾಯಃ

---

೨೭. ಈ ಅನಂತೈಶ್ವರ್ಯಯುಕ್ತವಾದ ತೇಜೋರಾಶಿಯ ತುದಿಮೊದಲುಗಳನ್ನು ತಿಳಿಯುವುದಕ್ಕೆ ನಮ್ಮಿಬ್ಬರಲ್ಲಿಯೂ ಒಬ್ಬನಿಂದ ಖಂಡಿತವಾಗಿ ಆಗುವುದಿಲ್ಲ.

೨೮. ನಮ್ಮಿಬ್ಬರಲ್ಲಿ ಯಾವನು ಈ ತೇಜೋಲಿಂಗದ ಮೂಲವನ್ನೋ ಅಗ್ರವನ್ನೋ ಕಂಡುಹಿಡಿಯುತ್ತಾನೆಯೋ ಅವನೇ ಉತ್ತಮನು. ಅಲ್ಲದೆ ಜಗತ್ತಿಗೆ ಅವನೇ ಒಡೆಯನು."

೨೯. ಹೀಗೆ ಇಬ್ಬರೂ ಪಣವನ್ನು ನಿಶ್ಚಯಮಾಡಿಕೊಂಡು ಆ ಲಿಂಗದ ಮೂಲಾಗ್ರಗಳನ್ನು ಹುಡುಕುವುದಕ್ಕಾಗಿ ಸ್ಪರ್ಧಿಸಿ ಮಹತ್ತರವಾದ ಅದರ ತೇಜಸ್ಸಿನ ವಿಷಯದಲ್ಲಿ ಪ್ರಯತ್ನಿಸುವವರಾದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲಮಾಹಾತ್ಮ್ಯದಲ್ಲಿ "ಬ್ರಹ್ಮ ವಿಷ್ಣುಗಳ ನಡುವೆ ತೇಜೋಮಯ ಲಿಂಗದ ಪ್ರಾದುರ್ಭಾವ"ವೆಂಬ ಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಾದಶೋಽಧ್ಯಾಯಃ

### ವಿಷ್ಣುನಾ ಲಿಂಗಾಧೋಭಾಗಶೋಧನವರ್ಣನಂ

ನಂದಿಕೇಶ್ವರ ಉವಾಚ :—

ಅಥ ಹಂಸಾಕೃತಿಂ ವ್ಯೋಮಪದವೀಲಂಘನಕ್ಷಮಾಂ ।
ಭೇಜೇ ವಿರಂಚಿಸ್ತಸ್ಯಾಗ್ರಂ ದ್ರಕ್ಷ್ಯಾಮೀತಿ ಕೃತೋದ್ಯಮಃ ॥ ೧ ॥
ಜಗ್ರಾಹ ವಿಷ್ಣುರ್ವಾರಾಹಂ ವಿಗ್ರಹಂ ದೃಢವಿಗ್ರಹಃ ।
ವಿಶ್ವಂಭರಾವಿನಿರ್ಭೇದ ಕ್ರೀಡಾಸುಲಭವೈಭವಂ ॥ ೨ ॥
ಮೂಲಂ ತಸ್ಯ ಪರಿಜ್ಞಾಯ ಪ್ರತ್ಯಾವರ್ತಿತುಮುತ್ಸುಕಃ ।
ಕೃತ್ರಿಮಸ್ತಬ್ಧರೋಮ್ಣೈಷ ದಂಷ್ಟ್ರಾಭ್ಯಾಮಭಿನನ್ಮಹೀಂ ॥ ೩ ॥
ವಿದಾರಯನ್ಸ ಪೋತ್ರೇಣ ಭೂತಧಾತ್ರೀಮವಾಙ್ಮುಖಃ ।
ಮಹಾವರಾಹೋ ದದೃಶೇ ತೇಜಸ್ತಂಭಂ ನಮನ್ನಿವ ॥ ೪ ॥
ಕ್ರೀಡಾಕ್ರೋಡಕಠೋರೇಣ ಕಂಠಘೋಷೇಣ ಪೂರಯನ್ ।
ಪಾತಾಲಂ ಬಹುಲೋತ್ಸಾಹಃ ಪ್ರವೇಷ್ಟುಮುಪಚಕ್ರಮೇ ॥ ೫ ॥

---

### ಕನ್ನಡದ ಅನುವಾದ

#### ವಿಷ್ಣುವು ಅಗ್ನಿಲಿಂಗದ ಮೂಲವನ್ನು ಹುಡುಕಿದುದು

೧. ನಂದಿಕೇಶ್ವರನು ಹೇಳುತ್ತಾನೆ:—ಆಗ ಬ್ರಹ್ಮನು ಈ ಲಿಂಗದ ತುದಿಯನ್ನು ನೋಡಬೇಕೆಂದು ಪ್ರಯತ್ನಿಸುವವನಾಗಿ ಆಕಾಶದಲ್ಲಿ ಹಾರಲು ಅನುಕೂಲವಾದ ಹಂಸದ ರೂಪವನ್ನು ಹೊಂದಿದನು.

೨. ಮಹಾವಿಷ್ಣುವು ಸ್ತಂಭಮೂಲವನ್ನು ಶೋಧಿಸುವುದಕ್ಕೆ ಸಾಧಕವಾದ ವರಾಹರೂಪವನ್ನು ಸ್ವೀಕರಿಸಿ ಭೂಮಿಯನ್ನು ಬಗೆಯಲು ಸುಲಭವಾದ ವೈಭವವುಳ್ಳ ದೃಢಕಾಯವನ್ನು ಹೊಂದಿದನು.

೩–೪. ಆ ಲಿಂಗದ ಮೂಲವನ್ನು ತಿಳಿದುಬರಲು ಉತ್ಸುಕನಾಗಿ ಕೃತ್ರಿಮದಿಂದ ಕೂದಲುಗಳನ್ನು ಸ್ತಬ್ಧಮಾಡಿಕೊಂಡು ತನ್ನ ಕೋರೆದಾಡೆಗಳಿಂದ ಭೂಮಿಯನ್ನು ಬಗೆಯತೊಡಗಿದನು. ಮುಖವನ್ನು ಕೆಳಗೆ ಮಾಡಿಕೊಂಡು ಮುಸುಡಿಯಿಂದ ಭೂಮಿಯನ್ನು ಬಗೆಯುತ್ತಿರುವ ಮಹಾವಿಷ್ಣುವು ಆ ಲಿಂಗಕ್ಕೆ ನಮಸ್ಕರಿಸುತ್ತಿರುವಂತೆ ಕಾಣುತ್ತಿದ್ದನು.

೫. ಮಾಯಾಮಯವಾದ ವರಾಹದ ರೂಪವನ್ನು ಹೊಂದಿ ಕರ್ಣಕಠೋರವಾದ ಧ್ವನಿಯಿಂದ ಪಾತಾಳಲೋಕವನ್ನು ತುಂಬುತ್ತ ಆತನು ಬಹಳ ಉತ್ಸಾಹದಿಂದ ಕೆಳಕ್ಕೆ ಹೋಗುತ್ತಿದ್ದನು.

ವಿವೇಶ ಯತ್ರ ಯತ್ರಾಸೌ ತತ್ರ ತತ್ರ ತಥಾ ಸ್ಥಿತಂ ।
ಅದ್ವೈಕ್ಷಿಷ್ಟಾನಲಸ್ತಂಭಂ ತಮೇವ ಕುಹನಾಕಿಟಿಃ ॥ ೬ ॥
ವಿದಾರಿತಾನ್ಮಹೀರಂಧ್ರಾತ್ಪ್ರತ್ಯದೃಶ್ಯಂತ ಭೋಗಿನಃ ।
ಪ್ರರೋಹಾ ಇವ ಶೇಷಾದ್ಯಾಸ್ತೇಜಸ್ತಂಭಸ್ಯ ಕೇಚನ ॥ ೭ ॥
ಪ್ರತ್ಯದೃಶ್ಯತ ಹೇಮಾದ್ರೇರ್ಮೂಲಕಂದ ಇವ ಸ್ಥಿತಃ ।
ಆಧಾರತಾಂ ಗತೋ ದೃಷ್ಟೋ ಹ್ಯಚ್ಯುತೇನಾದಿಕಚ್ಛಪಃ ॥ ೮ ॥
ಆರಾದ್ವಾಸುಂಧರಾಗುಲ್ಫೇ ಧುರಂಧರತಯಾ ಸ್ಥಿತಾಃ ।
ದಿಕ್ಸಿಂಧುರಾಶ್ಚ ದೃಶ್ಯಂತೇ ಮದಮಂಥರಬಂಧುರಾಃ ॥ ೯ ॥
ಮಧುದ್ವಿಷಾ ಚ ಸ ಮಹಾನ್ಮಂಡೂಕೋಽಪಿ ವಿಲೋಕಿತಃ ।
ಅಖಂಡಮಂಡಲಂ ಭೂಮೇರ್ಯಸ್ಯ ಪೃಷ್ಠೇ ಪ್ರತಿಷ್ಠಿತಂ ॥ ೧೦ ॥
ಆಧಾರಶಕ್ತಿಮಪಿ ತಾಮಭ್ಯಪಶ್ಯದಧೋಕ್ಷಜಃ ।
ಯದನುಗ್ರಹತಃ ಶೇಷಕೂರ್ಮಾದ್ಯಾ ಅಪಿ ಧೂರ್ವಹಾಃ ॥ ೧೧ ॥
ಅತಲಂ ವಿತಲಂ ಚೈವ ಸುತಲಂ ನಿತಲಂ ತಥಾ ।
ತಲಾತಲಂ ಚ ಪ್ರತಲಂ ಮಹಾತಲಮಿತಿಕ್ರಮಾತ್ ॥ ೧೨ ॥

---

೬. ಎಲ್ಲೆಲ್ಲಿ ತಾನು ಪ್ರವೇಶಮಾಡಿದನೋ ಅಲ್ಲೆಲ್ಲ ಆ ಅಗ್ನಿಸ್ತಂಭವು ಏಕಪ್ರಕಾರವಾಗಿದ್ದುದನ್ನು ಆ ವರಾಹರೂಪಿಯಾದ ವಿಷ್ಣುವು ನೋಡಿದನು.

೭. ಆ ವರಾಹವು ಮಾಡಿದ ರಂಧ್ರದ ಮೂಲಕ ಶೇಷನೇ ಮೊದಲಾದ ಅನೇಕ ಸರ್ಪಗಳು ಹೊರಟು ಆ ಲಿಂಗದಿಂದ ಹೊರಹೊರಟ ಕೊಂಬೆಗಳಂತೆ ಕಾಣುತ್ತಿದ್ದುವು.

೮. ಮೇರುಪರ್ವತಕ್ಕೆ ಆಧಾರಪೀಠದಂತಿದ್ದು ಪ್ರಪಂಚಕ್ಕೆ ಮೂಲಭೂತವಾದ ಆದಿಕಚ್ಛಪವನ್ನು ವರಾಹರೂಪಿಯಾದ ವಿಷ್ಣುವು ನೋಡಿದನು.

೯. ಬಳಿಕ ಭೂಲೋಕದ ಅಧೋಭಾಗದಲ್ಲಿ ಭದ್ರವಾದ ಸ್ಥಾನವುಳ್ಳವುಗಳೂ, ಮದವೆಂಬ ಐಶ್ವರ್ಯದಿಂದ ಮೆರೆಯುವವುಗಳೂ ಆದ ಅಷ್ಟದಿಗ್ಗಜಗಳನ್ನು ನೋಡಿದನು.

೧೦. ಮತ್ತು ಸಕಲ ಭೂಮಂಡಲವೂ ಯಾರ ಪೃಷ್ಠದ ಆಧಾರದಿಂದ ನಿಂತಿದೆಯೋ ಅಂತಹ ಮಹಾಮಂಡೂಕವೂ ಸಹ ಮಧುರಿಪುವಿನ ದೃಷ್ಟಿಗೆ ಬಿದ್ದಿತು.

೧೧. ಆದಿಶೇಷ, ಮಹಾಕೂರ್ಮಗಳು ಯಾರ ಅನುಗ್ರಹಬಲದಿಂದ ಭೂಭಾರವನ್ನು ಹೊತ್ತಿರುವರೊ ಅಂತಹ ಆಧಾರಶಕ್ತಿಯನ್ನೂ ಮಹಾವಿಷ್ಣುವು ಕಂಡನು.

೧೨-೧೩. ಅತಲ, ವಿತಲ, ಸುತಲ, ನಿತಲ, ತಲಾತಲ, ಪ್ರತಲ ಮತ್ತು

ದದರ್ಶ ಸಪ್ತಪಾತಾಲಾನಪಿ ವಾರಿಜಲೋಚನಃ ।
ತತ್ರತ್ಯಾನ್ವಿವಿಧಾಕಾರಾನ್ಸರ್ವಾನಪಿ ಸವಿಸ್ಮಯಃ ॥ ೧೩ ॥
ಅತ್ಯಗಾದ್ಭೋಗವತ್ಯಾಖ್ಯಾಂ ಪುರೀಂ ವೈರೋಚನೀಮಪಿ ।
ಜಗಾಹೇಽನ್ಯಾಂಶ್ಚ ದೈತ್ಯಾನಾಮಾವಾಸಾನತಿಗಹ್ವರಾನ್ ॥ ೧೪ ॥
ಇದಂ ದೃಷ್ಟಮಿದಂ ದೃಷ್ಟಮಿತ್ಯುಪಾರೂಢಕೌತುಕಃ ।
ಮೂಲಂ ಮುಗ್ಧಾಶಯಸ್ತಸ್ಯ ವಿಚಿನೋತಿಸ್ಮ ಮಾಧವಃ ॥ ೧೫ ॥
ಅಧಸ್ತಾದಪಿ ಗಾಢೇನ ಪಯೋಧೇಸ್ತೇನ ಪೋತ್ರಿಣಾ ।
ತಥೈವ ತೇಜಸ್ತಂಭಃ ಸ ನಿರ್ವಿಕಾರಮವೈಕ್ಷತ ॥ ೧೬ ॥
ದಳಿತಾ ಕೇವಲಂ ಪೃಥ್ವೀ ಪಾಥೋರಾಶಿರ್ವಿಲೋಲಿತಃ ।
ನೈವಾಲೋಕ್ಯತ ತನ್ಮೂಲಂ ಕೋಲರೂಪೇಣ ವಿಷ್ಣುನಾ ॥ ೧೭ ॥
ಇತ್ಥಂ ವರ್ಷಸಹಸ್ರಾಣಿ ಭ್ರಾಂತ್ವಾ ಸಂಭ್ರಾಂತಮಾನಸಃ ।
ನಾಲಂಬಭೂವ ತನ್ಮೂಲಂ ಲೀಲಾಕ್ರೋಡೋ ವಿಲೋಕಿತುಂ ॥ ೧೮ ॥
ಅವರುಗ್ಣಖುರಃ ಕ್ಷುಣ್ಣದಂಷ್ಟ್ರೋ ವಿಧ್ವಸ್ತವಿಗ್ರಹಃ ।
ಭಗ್ನಪೋತ್ರಃ ಸಭೂದಾರೋ ಜಗಾಹೇ ಬಹುಲಂ ಶ್ರಮಂ ॥ ೧೯ ॥

---

ಮಹಾತಲಗಳೆಂಬ ಅಧೋಲೋಕಗಳನ್ನೂ ಅವುಗಳಲ್ಲಿ ವಾಸಮಾಡುವ ಪ್ರಾಣಿ ವಿಶೇಷಗಳನ್ನೂ ಕಂಡು ಆತನು ವಿಸ್ಮಯಗೊಂಡನು.

೧೪. ಬಲಿಚಕ್ರವರ್ತಿಯ ರಾಜಧಾನಿಯಾದ ಭೋಗವತೀ ನಗರವನ್ನೂ ಬಹಳ ಗಹ್ವರಗಳಾದ ಇತರ ರಾಕ್ಷಸ ನಿವಾಸಗಳನ್ನೂ ದಾಟಿ ಹೋದನು.

೧೫–೧೭. ಇದನ್ನು ನೋಡಿದಿದನ್ನು ನೋಡಿದೆನೆಂಬುದಾಗಿ ಕೌತುಕ ಪಡುತ್ತ ನಾರಾಯಣನು ಮುಗ್ಧನಾಗಿ ಆ ತೇಜೋಲಿಂಗದ ಮೂಲವನ್ನು ಹುಡುಕುತ್ತಲೇ ಇದ್ದನು. ಆ ವರಾಹದಿಂದ ಆಲೋಡಿತವಾದ ಸಮುದ್ರದ ಕೆಳಗೂ ಸಹ ಆ ತೇಜಸ್ತಂಭವು ನಿರ್ವಿಕಾರವಾಗಿಯೇ ಆ ಮಹಾವಿಷ್ಣುವಿಗೆ ಕಾಣುತ್ತಿದ್ದಿತು. ಭೂಮಿಯೆಲ್ಲವೂ ಬಗೆಯಲ್ಪಟ್ಟಿತು. ಸಮುದ್ರವನ್ನು ಶೋಧಿಸಿದ್ದಾಯಿತು. ಹಂದಿಯ ರೂಪವನ್ನು ಹೊಂದಿದ ವಿಷ್ಣುವಿಗೆ ಆ ಲಿಂಗದ ಮೂಲವು ತಿಳಿಯಲೇ ಇಲ್ಲವು.

೧೮. ಈ ರೀತಿಯಾಗಿ ಅನೇಕಸಾವಿರವರ್ಷಗಳಕಾಲ ಹುಡುಕಿ ದಿಗ್ಭ್ರಾಂತಿಯನ್ನು ಹೊಂದಿದ ಆ ವಿಷ್ಣುವಿಗೆ ಅದರ ಮೂಲವನ್ನು ಶೋಧಿಸಲು ಸಾಧ್ಯವಾಗಲೇ ಇಲ್ಲ.

೧೯. ಗೊರಸುಗಳನ್ನು ಸವೆಸಿಕೊಂಡು, ಕೋರೆ ಹಲ್ಲುಗಳನ್ನು ಮುರಿದುಕೊಂಡು, ಅವಯವಗಳೆಲ್ಲವೂ ಶಿಥಿಲಗಳಾಗಲು ಮುಖಗೆಟ್ಟು ಆ ವಿಷ್ಣು ವರಾಹವು ಬಹಳ ಆಯಾಸವನ್ನು ಹೊಂದಿತು.

ಶ್ರಾಂತ್ಯಾ ನಿಶ್ವಸತಸ್ತಸ್ಯ ತಾದೃಗ್ದರ್ಪೋ ವಿಶೃಂಖಲಃ ।
ನನಾಶ ತತ್ಕ್ಷಣಾತ್ಸಾಕಂ ತನ್ಮೂಲಾವೇಕ್ಷಣೇಚ್ಛಯಾ ॥ ೨೦ ॥
ಅನಿರ್ವ್ಯೂಢಪ್ರತಿಜ್ಞೋಽಪಿ ಪ್ರತ್ಯಾವರ್ತಿತುಮುತ್ಸುಕಃ ।
ನ ಚಕ್ಷಮೇ ಸರೋಜಾಕ್ಷಶ್ಚಲಿತುಂ ಚ ಪದಾತ್ಪದಂ ॥ ೨೧ ॥
ಶ್ರಮಾಂಧಚಕ್ಷುಷಸ್ತಸ್ಯ ಪಾತಾಲಾಂತರವರ್ತಿನಃ ।
ತತ್ತೇಜ ಏವ ಪಂಥಾನಂ ಪುನರಪ್ಯುದಭಾವಯತ್ ॥ ೨೨ ॥
ಕಥಂ ಕಥಂಚಿದುತ್ತೀರ್ಣೋಽಪ್ಯಕೂಪಾರಾದಪಾರತಃ ।
ಸ್ವೇದಾಂಭಃ ಸಾಗರಸ್ರಾವೇ ಮಗ್ನೋಽಭೂಚ್ಛದ್ಮಶೂಕರಃ ॥ ೨೩ ॥
ರಜ್ಜ್ವೇವ ತೇಜಸ್ತಂಭಸ್ಯಪ್ರಭಯಾ ಸಾನುಬದ್ಧಯಾ ।
ಲಬ್ಧ್ವಾಚಲಂ ವನಂ ಕಷ್ಟಂ ನ್ಯವರ್ತಿಷ್ಟ ಜನಾರ್ದನಃ ॥ ೨೪ ॥
ನಾನ್ವೈಕ್ಷಿ ಯನ್ಮಯಾ ಮೂಲಮಮುಷ್ಯ ಮಹಸಾಂ ನಿಧೇಃ ।
ತತಃ ಸ್ರಷ್ಟ್ರಾಪಿ ನೋ ದೃಷ್ಟಃ ಶಿರೋಭಾಗಃ ಕಥಂ ಚ ನ ॥ ೨೫ ॥
ಅಮುಷ್ಯ ಮಹಸಾಂ ರಾಶೇಃ ಪ್ರಾಗಭೂದ್ಯತ್ರ ಸಂಭವಃ ।
ತತೋ ನಿವೃತ್ಯ ಯಾಸ್ಯಾಮಿ ಶರಣಂ ಶಿವಮೀಶ್ವರಂ ॥ ೨೬ ॥

---

೨೦. ಈ ರೀತಿಯಾಗಿ ಬಸವಳಿದ ವಿಷ್ಣುವಿನ ಆಯಾಸದಿಂದ ಲಿಂಗ ಮೂಲಾನ್ವೇಷಣೇಚ್ಛೆಯೊಡನೆಯೇ ಅವನಿಗಿದ್ದ ಅತ್ಯಂತ ಗರ್ವವೂ ನಾಶವನ್ನು ಹೊಂದಿತು.

೨೧. ತನ್ನ ಪ್ರತಿಜ್ಞೆಯು ನೆರವೇರದಿದ್ದರೂ ಹಿಂತಿರುಗಬೇಕೆಂಬ ಇಚ್ಛೆಯು ವಿಷ್ಣುವಿಗೆ ಉಂಟಾಯಿತು. ಆದರೂ ಆಯಾಸದಿಂದ ಒಂದು ಹೆಜ್ಜೆಯನ್ನು ಇಡುವುದಕ್ಕೂ ಸಾಧ್ಯವಾಗಲಿಲ್ಲ.

೨೨–೨೩. ಪಾತಾಲದಲ್ಲಿ ಸಿಕ್ಕಿಕೊಂಡು ಆಯಾಸದಿಂದ ಕಣ್ಣುಮುಚ್ಚಿಕೊಂಡಿರುವ ವಿಷ್ಣುವಿಗೆ ಆ ತೇಜಸ್ತಂಭವೇ ಮತ್ತೆ ಮೇಲಕ್ಕೆ ಬರುವ ದಾರಿಯನ್ನು ತೋರಿಸಿತು. ಆಗಲಾ ವರಾಹವು ಬಹಳ ಕಷ್ಟದಿಂದ ಅಪಾರವಾದ ಆ ಬಿಲದಿಂದ ಹೊರಬಿದ್ದು ತನ್ನ ಬೆವರೆಂಬ ಸಮುದ್ರದಲ್ಲಿಯೇ ಮುಳುಗಿತು.

೨೪. ಹಗ್ಗದಂತಿದ್ದ ಆ ಲಿಂಗದ ಪ್ರಭೆಯಿಂದ ಬಂಧಿತನಾಗಿ ಅಚಲವಾದ ಪದವಿಯನ್ನು ಹೊಂದಿ ಆ ಮಹಾವಿಷ್ಣುವು ತನ್ನ ದುಃಖವನ್ನು ಕಳೆದುಕೊಂಡನು.

೨೫. "ಈ ಮಹಾಲಿಂಗದ ಮೂಲವನ್ನು ನಾನು ನೋಡದಿರುವುದರಿಂದ ಇದರ ಶಿರೋಭಾಗವೂ ಸಹ ಬ್ರಹ್ಮನಿಗೆ ಸಿಕ್ಕಲಿಲ್ಲವೆಂಬುದು ನಿಶ್ಚಯವು.

೨೬. ಈ ತೇಜಸ್ಸಿನ ರಾಶಿಯ ಉದ್ಭವವು ಮೊದಲು ಯಾರಿಂದುಂಟಾಯಿತೋ ಆ ಮಹೇಶ್ವರನನ್ನೇ ಶರಣುಹೊಕ್ಕು ಈ ಪ್ರಯತ್ನವನ್ನು ಸಾಕು ಮಾಡುತ್ತೇನೆ.

ಸ ಹಿ ವಿಶ್ವಾಧಿಕೋ ದೇವಶ್ಚಿರಂ ಮೋಹಾಂಧಚಕ್ಷುಷಾ ।
ಯದ್ವಿಸ್ಮೃತೋ ಮಯಾ ತಸ್ಮಾದ್ದುರ್ವಿಪಾಕೋಽಜನೀದೃಶಃ ॥ ೨೭ ॥
ಏವಂ ವಿನಿರ್ಧಾರ್ಯ ವಿಮುಕ್ತದರ್ಪೋ
ನಿವೃತ್ತಯಾನಾತು ಸರೋರುಹಾಕ್ಷಃ ।
ತಮೇವ ದೇಶಂ ಪ್ರಬಭೂವ ಯತ್ರ
ಸ್ತಂಭಃ ಸ ತೇಜೋಮಯತಾಂ ದಧಾನಃ ॥ ೨೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ವಿಷ್ಣುನಾ ಲಿಂಗಾಧೋಭಾಗ ಶೋಧನ ವರ್ಣನಂ" ನಾಮ ಏಕಾದಶೋಽಧ್ಯಾಯಃ

---

೨೭. ಆತನೇ ವಿಶ್ವಾಧಿಕನಾದ ಮಹಾದೇವನು. ಮೋಹದಿಂದ ಜ್ಞಾನ ಹೀನನಾಗಿ ಆತನನ್ನು ಮರೆತುದರಿಂದಲೇ ನನಗೆ ಈ ವಿಧವಾದ ಪರಾಭವ ವುಂಟಾಯಿತು."

೨೮. ಈ ರೀತಿಯಾಗಿ ನಿಶ್ಚಯಿಸಿ ಮದವನ್ನು ಕಳೆದುಕೊಂಡು ಪ್ರಯತ್ನ ವಿಮುಖನಾಗಿ ಮಹಾವಿಷ್ಣುವು ತನಗೆ ಮೊದಲು ತೇಜೋಲಿಂಗದ ದರ್ಶನವು ಎಲ್ಲಿ ಆಗಿದ್ದಿತೋ ಆ ಪ್ರದೇಶವನ್ನೇ ಕುರಿತು ತೆರಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯೆಯಲ್ಲಿ "ವಿಷ್ಣುವು ಅಗ್ನಿಲಿಂಗದ ಮೂಲವನ್ನು ಹುಡುಕಿದು"ದೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾದಶೋಽಧ್ಯಾಯಃ

### ಬ್ರಹ್ಮಕೃತ ಲಿಂಗೋಪರಿಭಾಗಶೋಧನವರ್ಣನಂ

ನಂದಿಕೇಶ್ವರ ಉವಾಚ :—

ತತಸ್ತೇಜೋಮಯಂ ಸ್ತಂಭಮನುಸೃತ್ಯ ಪಿತಾಮಹಃ ।
ಉತ್ಪಪಾತೋನ್ಮುಖೋ ವೇಗಾನ್ನಿರಾಲಂಬೇ ನಭಸ್ತಲೇ ॥ ೧ ॥
ದೃಶಮುತ್ಪತತಸ್ತಸ್ಯ ಪಕ್ಷವೇಗೇನ ವಾತಿತಾಃ ।
ವ್ಯಶೀರ್ಯಂತ ಸಮುದ್ವರ್ತಾಃ ಪ್ರಣುನ್ನಾ ಇವ ವಾಯುಭಿಃ ॥ ೨ ॥
ಸ ವೇಗಾದುತ್ಪತನ್ನೂರ್ಧ್ವಂ ನಾಕ್ಷ್ಣೋರ್ವಿಷಯತಾಮಗಾತ್ ।
ಕೇವಲಂ ದೀರ್ಘದೀರ್ಘೈವ ರೇಖಾ ವ್ಯೋಮ್ನಿ ವ್ಯಭಾವ್ಯತ ॥ ೩ ॥
ಮಾಯಾಮರಾಳೋ ದದೃಶೇ ತೇಜಸ್ತಂಭಸ್ಯ ಪಾರ್ಶ್ವತಃ ।
ಸಂಧ್ಯಾಪಯೋಧರಾಭ್ಯರ್ಣಚಾರೀವ ರಜನೀಕರಃ ॥ ೪ ॥
ಪ್ರಾಗತ್ಯಗಾದುತ್ಪತತಾಂ ತತೋಽಧ್ವಾನಂ ಪಯೋಮುಚಾಂ ।
ವಿಮಾನಪದವೀಂ ಪಶ್ಚಾತ್ತಾರಾವರ್ತಂ ತತಃ ಪರಂ ॥ ೫ ॥

---

### ಕನ್ನಡದ ಅನುವಾದ

#### ಬ್ರಹ್ಮನು ಲಿಂಗದ ಶಿರೋಭಾಗವನ್ನು ಹುಡುಕಿದುದು

೧. ನಂದೀಶ್ವರನು ಹೇಳುತ್ತಾನೆ:— ಆ ಬಳಿಕ ಬ್ರಹ್ಮನು ಲಿಂಗದ ಆಕಾರವನ್ನೇ ಅನುಸರಿಸಿ ನಿರಾಲಂಬವಾದ ಆಕಾಶದಲ್ಲಿ ವೇಗದಿಂದ ಊರ್ಧ್ವಮುಖನಾಗಿ ಹಾರಿದನು.

೨. ವೇಗವಾಗಿ ಮೇಲಕ್ಕೆ ಹಾರುತ್ತಿರುವ ಹಂಸದ ಪಕ್ಷಗಳ ವೇಗದಿಂದ ವಾರಿತಗಳಾಗಿ ವಾಯುಗಳಿಂದ ತಳ್ಳಲ್ಪಟ್ಟಂತೆ ಉದ್ವರ್ತಗಳು ಬೆದರುತ್ತಿದ್ದುವು.

೩. ಆ ಬ್ರಹ್ಮನು ವೇಗವಾಗಿ ಹಾರುತ್ತ ದೃಷ್ಟಿಪಥವನ್ನು ಅತಿಕ್ರಮಿಸಿದನು. ಮತ್ತು ಕೇವಲ ದೀರ್ಘವಾದ ಒಂದು ರೇಖೆಯನ್ನು ಆಕಾಶದಲ್ಲಿ ಎಳೆದಂತೆ ಕಾಣುತ್ತಿದ್ದನು.

೪. ಆ ಹಂಸವು ಅಗ್ನಿಸ್ತಂಭದ ಪಕ್ಕದಲ್ಲಿದ್ದುಕೊಂಡು ಸಂಧ್ಯಾಕಾಲದ ಮೇಘದ ಮಧ್ಯೆ ರಂಜಿಸುತ್ತಿರುವ ಚಂದ್ರಮಂಡಲದಂತೆ ಕಾಣುತ್ತಿದ್ದಿತು.

೫. ಮೊದಲು ಪಕ್ಷಿಗಳ ಪ್ರದೇಶವನ್ನೂ, ಬಳಿಕ ಮೇಘಮಂಡಲವನ್ನೂ, ಆಮೇಲೆ ದೇವವಿಮಾನಗಳು ಓಡಾಡುವ ಪ್ರದೇಶವನ್ನೂ, ಬಳಿಕ ನಕ್ಷತ್ರಮಂಡಲವನ್ನೂ ದಾಟಿದನು.

ತೇಜಸಾಂ ಯಾನಿ ಧಾಮಾನಿ ಹ್ಯತ್ಯುಚ್ಚಾನ್ಯೂರ್ಧ್ವಚಾರಿಣಾಂ ।
ಅತಿಚಕ್ರಾಮ ವೇಗೇನ ತಾನ್ಯಸೌ ಕುಹನಾಖಗಃ ॥ ೬ ॥
ಮರುತೋ ಮನಸೋ ವಾಪಿ ಜವಃ ಸೂಕ್ಷ್ಮತರಾಕೃತೇಃ ।
ಸೋಽಭೂದಧಃ ಕೃತಸ್ತೇನ ಹಂಸೇನ ಗಮನಾದಿನಾ ॥ ೭ ॥
ಯಥಾ ಯಥಾ ಚೋತ್ಪಪಾತ ಸುದೂರಂ ಶ್ರಮಿತಚ್ಛದಃ ।
ತಥಾ ತಥಾ ಚ ದದೃಶೇ ತೇಜಸ್ತಂಭಃ ಸಮುನ್ನತಃ ॥ ೮ ॥
ಅತೀತ್ಯ ಮರುತಾಂ ಸ್ಕಂಧಾನ್ಸಪ್ತ ಸಂಪ್ರಾಪ್ತ ವಿಸ್ಮಯಃ ।
ಬಿಭೇದಾಂಡಕಟಾಹಂ ಚ ಜ್ವಲಂತಂ ತಮುದೈಕ್ಷತ ॥ ೯ ॥
ಕಥಂ ವಾ ದೃಷ್ಟಮೂಲಸ್ಯ ಸ್ಥಾತವ್ಯಂ ಪುರತೋ ಹರೇಃ ।
ಅವಿಮೋಚಯತಃ ಶೌರೇರಸಮಾನಮಶೀರ್ಷತಾಂ ॥ ೧೦ ॥
ಅನಿರ್ವ್ಯೂಢ ಪ್ರತಿಜ್ಞಸ್ಯ ದೀರ್ಘೈಃ ಕಿಂ ವಾ ಮಮಾಸುಭಿಃ ।
ತದತ್ಯೌಪಯಿಕಂ ಕಿಂ ಸ್ಯಾತ್ಕಾರ್ಯಂ ಕಾ ವಾ ಗತಿರ್ಮಮ ॥ ೧೧ ॥
ಅತಿ ಸಂಧಿತ್ಸತೋ ವಿಷ್ಣುಂ ಕಸ್ಸಹಾಯೋ ಭವಿಷ್ಯತಿ ।
ಆರ್ಜವೇನೈವ ನಿರ್ಜೇತುಂ ಪ್ರತಿವಾದಿನಮಕ್ಷಮಃ ॥ ೧೨ ॥

---

೬. ಗಗನಸಂಚಾರಿಗಳಾದ ಗ್ರಹಗಳ ನಿವಾಸಸ್ಥಳಗಳನ್ನೂ ಸಹ ತನ್ನ ವೇಗದಿಂದ ಆ ಮಾಯಾಹಂಸವು ಅತಿಕ್ರಮಿಸಿತು.

೭. ಸೂಕ್ಷ್ಮವಾದ ಆಕಾರವುಳ್ಳ ಹಂಸದ ಪ್ರಯಾಣದ ವೇಗವು ವಾಯು ವೇಗ ಮನೋವೇಗಗಳನ್ನೂ ಸಹ ತಿರಸ್ಕರಿಸುತ್ತಿದ್ದಿತು.

೮. ತಾನು ಆಯಾಸಗೊಂಡ ರೆಕ್ಕೆಗಳಿಂದ ಮೇಲಕ್ಕೆ ಹೋದಷ್ಟೂ ಆ ತೇಜೋಲಿಂಗವು ಮತ್ತೂ ಎತ್ತರವಾಗಿರುವಂತೆಯೇ ಕಾಣುತ್ತಿದ್ದಿತು.

೯. ಬಳಿಕ ದೇವಲೋಕವನ್ನೂ ದಾಟಿ ಸಪ್ತ ಊರ್ಧ್ವಲೋಕಗಳನ್ನೂ ಅತಿಕ್ರಮಿಸಿ, ವಿಸ್ಮಯಗೊಂಡು ಬ್ರಹ್ಮಾಂಡಕಟಾಹವನ್ನು ಬೇಧಿಸಿದರೂ ಆ ತೇಜೋಲಿಂಗವು ಹಾಗೆಯೇ ಕಾಣುತ್ತಿದ್ದಿತು.

೧೦. "ಮಹಾವಿಷ್ಣುವು ಇಷ್ಟರೊಳಗೆ ಇದರ ಮೂಲವನ್ನು ಕಂಡಿರ ಬಹುದು. ನಾನು ಹೇಗೆತಾನೆ ನನ್ನ ಪ್ರತಿಜ್ಞೆಯನ್ನು ನೆರವೇರಿಸದೆ ಆತನಿಗೆ ಮುಖವನ್ನು ತೋರಿಸಲಿ?

೧೧. ಇದರ ತುದಿಯನ್ನು ನೋಡದಿದ್ದಮೇಲೆ ನನ್ನ ದೀರ್ಘ ಜೀವಿತ ದಿಂದೇನುಪ್ರಯೋಜನ? ಈಗ ಉಪಾಯವೇನು! ಕಾರ್ಯವೇನು ಮಾಡ ಬೇಕು. ನನ್ನ ಗತಿಯುತಾನೆ ಏನು?

೧೨. ವಿಷ್ಣುವನ್ನು ಎದುರಿಸಲು ನನಗೆ ಯಾರು ಸಹಾಯಮಾಡುವರು? ಪ್ರತಿವಾದಿಯಾದ ಆತನನ್ನು ಋಜುಭಾವದಿಂದ ಜಯಿಸಲು ನನಗೆ ಸಾಧ್ಯವಿಲ್ಲ.

ಛದ್ಮನಾ ವಾ ತಿರಸ್ಕುರ್ವನ್ಮಾನೋ ಹಿ ಮಹತಾಂ ಧನಂ ।
ಇತಿ ಸಂಚಿಂತಯತ್ಯೇವ ವಿರಂಚೌ ವ್ಯಾಕುಲಾತ್ಮನಿ ।
ಆಕಾಶೇ ದದೃಶೇ ನಾತಿದೂರೇ ಕಿಮಪಿ ನಿರ್ಮಲಂ ॥ ೧೩ ॥
ಐಂದವೀ ಕಿಮಯಂ ರೇಖಾ ತಸ್ಯಾಃ ಕಥಮಿಹಾಗಮಃ ।
ಯದ್ವಾ ಮೃಣಾಲಂ ತತ್ಸಿಂಧೌ ವಿಯತ್ಯಸ್ಯಾಂ ಕುತಸ್ತು ಸಃ ॥ ೧೪ ॥
ಇತಿ ತಸ್ಮಿನ್ಸಸಂದೇಹೇ ನೇದೀಯಸ್ತ್ವಂ ತದಾಗತಂ।
ಅಬೋಧಿ ಕೇತಕೀ ಬರ್ಹಮಿತಿ ರಾಜೀವಜನ್ಮನಾ ॥ ೧೫ ॥
ತತ್ಪರ್ಯುಷಿತಮಪ್ಯುದ್ಯತ್ಸೌರಭಂ ವಸ್ತುಶಕ್ತಿತಃ ।
ಹಿರಣ್ಯಗರ್ಭೋ ವಿಮಲಮಗೃಹ್ಣಾತ್ಕೇತಕಛದಂ ॥ ೧೬ ॥
ಗೃಹೀತ ಮಾತ್ರಂ ತೇನೈತತ್ಸಚೈತನ್ಯಂ ಕಿಲಾಬ್ರವೀತ್ ॥ ೧೭ ॥

ಕೇತಕ ಉವಾಚ:—

ಭೋ ಗೃಹ್ಣಾಸಿ ಕಿಮರ್ಥಂ ತ್ವಂ ಮುಂಚ ಮಾಂ ವಿಶ್ರಮೋದ್ಯತಂ ।
ವರ್ಷಾಣಾಂ ಶತಸಾಹಸ್ರಮುತ್ಪತ್ಯೈವಂ ವಿಹಾಯಸಾ ॥ ೧೮ ॥

ನಂದೀಶ ಉವಾಚ:—

ತಥಾ ಸಮೇಧಮಾನಂ ತಂ ದೃಷ್ಟ್ವಾ ಶ್ರಮಮುಖಿದ್ಯತ ।
ಅಚಿಂತಯತ್ಪದ್ಮಸೂತಿರತ್ಯಂತಂ ವಿಹತಾಶಯಃ ॥ ೧೯ ॥

---

೧೩. ಅಥವಾ ಅವನೇ ಮೋಸದಿಂದ ನನ್ನನ್ನು ತಿರಸ್ಕರಿಸುವನು. ಸತ್ಪುರುಷರಿಗೆ ಮಾನವೇ ಧನವಲ್ಲವೆ?'' ಈ ರೀತಿಯಾಗಿ ಬ್ರಹ್ಮನು ವ್ಯಾಕುಲನಾಗಿ ಚಿಂತಿಸುತ್ತಿರಲು ಹತ್ತಿರದಲ್ಲಿ ಆಕಾಶದಲ್ಲಿಯೇ ಒಂದು ನಿರ್ಮಲವಾದ ವಸ್ತುವು ಬೀಳುತ್ತಿರುವುದನ್ನು ಕಂಡನು.

೧೪. ಇದೇನು ಚಂದ್ರಬಿಂಬವೋ, ಇಲ್ಲಿಗೆ ಹೇಗೆ ಬಂದಿತು? ಅಥವಾ ಸಮುದ್ರದೊಳಗಿನ ಮೃಣಾಳವೋ, ಆಕಾಶದಲ್ಲಿ ಹೇಗೆ ಬಂದಿತು?''

೧೫. ಹೀಗೆ ಸಂದೇಹಪಡುತ್ತಿರಲು ಅದು ಸಮಿಾಪಕ್ಕೆ ಬಂದಿತು. ಆಗ ಬ್ರಹ್ಮನು ಅದನ್ನು ಕೇತಕಿಪುಷ್ಪವನ್ನಾಗಿ ತಿಳಿದುಕೊಂಡನು.

೧೬. ಅದು ಅನೇಕ ದಿವಸಗಳಾದರೂ ತನ್ನ ಶಕ್ತಿಯಿಂದ ಸುವಾಸನಾಯುಕ್ತವಾಗಿರುವುದನ್ನು ಕಂಡು ಬ್ರಹ್ಮನು ಅದನ್ನು ಸ್ವೀಕರಿಸಿದನು.

೧೭–೧೮. ಬ್ರಹ್ಮನಿಂದ ಸ್ವೀಕೃತವಾದಕೂಡಲೇ ಆ ಪುಷ್ಪವು ಜೀವಸಹಿತವಾಗಿ ಆತನಿಗೆ ಹೇಳತೊಡಗಿತು:—"ಎಲೈ ಬ್ರಹ್ಮನೆ! ನಾನು ಅನೇಕ ಲಕ್ಷ ವರ್ಷಗಳಿಂದ ಕೆಳಕ್ಕೆ ಬೀಳುತ್ತ ವಿಶ್ರಾಂತಿಯನ್ನು ಪಡೆಯಬೇಕೆಂದು ಕಾತುರವಾಗಿರುವೆನು ನನ್ನನ್ನೇಕೆ ತಡದೆ?''

೧೯. ಈ ರೀತಿಯಾದ ಮಾತುಗಳನ್ನು ಕೇಳಿ ಆ ಪುಷ್ಪದ ಆಯಾಸಕ್ಕಾಗಿ

ಅನಿರ್ವ್ಯೂಢಪ್ರತಿಜ್ಞ್ಯಾವಾನ್ನೀಚತಾಮುಪಿಸಂಶ್ರಿತಃ ॥
ಆಕ್ರಾಂತರೋದೋವಿವರಃ ಕ್ವರಾಶಿಸ್ತೇಜಸಾಮುಸೌ ।
ಅಹಮೇತತ್ಪರೀಕ್ಷ್ಯಾಯಾಂ ಕ್ವ ಪರಿಚ್ಛಿನ್ನಪೌರುಷಃ ॥ ೨೦ ॥
ಭಜ್ಯೇತೇ ಇವ ಮೇ ಪಕ್ಷೌ ದೃಶೌ ಚಾಂಧಾಯತೇ ಇವ
ಪ್ರಧ್ವಂಸಂತ ಇವಾಂಗಾನಿ ಪತಾಮಿಽವಾಹಮುಪ್ಯಧಃ ॥ ೨೧ ॥
ಕಿಂ ವಾನ್ಯದ್ಬಹುನೋಕ್ತೇನ ಸಹ ನಿಶ್ವಾಸವಾಯುಭಿಃ ।
ಮಮ ಪ್ರಾಣಶ್ಚ ನಿಯತಂ ನಿರ್ಗಚ್ಛಂತೀವ ಸಾಂಪ್ರತಂ ॥ ೨೨ ॥
ಅಹಂಕಾರಮದಗ್ರಂಥಿರಯಂ ತ್ರುಟತು ಚಿತ್ತತಃ ।
ಮುಕುಂದೇನ ಸಹ ಸ್ಪರ್ಧಾ ಸಾ ಚ ಶೀಘ್ರಂ ಪ್ರಣಶ್ಯತು ॥ ೨೩ ॥
ಯದೇಷ ರೋದಃಕುಹರಪರಿಣಾಹಾಧಿಕೋದ್ಯಮಃ ।
ಔನ್ನತ್ಯಮಯತೇಽದ್ಯಾಪಿ ತೇಜಸ್ತಂಭೋ ಯಥಾ ಪುರಾ ॥ ೨೪ ॥
ತದಸ್ಯ ತೇಜಸಾಂ ರಾಶೇರ್ನಾಹಂ ನಾರಾಯಣೋಽಥವಾ ।
ಕಾರಣಂ ದೂರತಶ್ಚಾನ್ಯೇ ಮಹೇಂದ್ರಪ್ರಮುಖಾಃ ಸುರಾಃ ॥ ೨೫ ॥

---

ಖೇದವನ್ನು ಹೊಂದಿದನು. ಅಲ್ಲದೆ ಮನಃಖೇದವುಳ್ಳವನಾಗಿ ತನ್ನ ಪ್ರತಿಜ್ಞೆಯು ನೆರವೇರದೆಹೋದುದರಿಂದ ನೀಚತ್ವವನ್ನು ಹೊಂದಿ ಆ ಬ್ರಹ್ಮನು ಈ ರೀತಿ ಯೋಚಿಸತೊಡಗಿದನು :—

೨೦. "ಭೂಮ್ಯಾಕಾಶಗಳ ಅಂತರಾಯವನ್ನು ತುಂಬಿರುವ ಈ ತೇಜೋರಾಶಿಯು ಎಲ್ಲಿಯದು ? ಇದರ ಪರೀಕ್ಷೆಯನ್ನು ಮಾಡಲು ಮಿತವಾದ ಪೌರುಷವುಳ್ಳ ನಾನು ಹೇಗೆತಾನೆ ಸಮರ್ಥನಾದೇನು ?

೨೧. ನನ್ನ ಪಕ್ಷಗಳು ಭಂಗವನ್ನು ಹೊಂದಿದುವು. ಕಣ್ಣುಗಳು ಕತ್ತಲೆ ಕವಿಯುತ್ತಿವೆ. ಅವಯವಗಳು ನಾಶವಾಗುವಂತಿವೆ. ನಾನು ಕೆಳಕ್ಕೆ ಬೀಳುತ್ತಿರುವಂತೆ ಭಾಸವಾಗುತ್ತಿರುವುದು.

೨೨. ಹೆಚ್ಚು ಹೇಳುವುದೇನು ? ಪ್ರತಿಕ್ಷಣದಲ್ಲಿಯೂ ನನ್ನ ನಿಶ್ವಾಸವಾಯುವಿನೊಡನೆ ಬಲವಂತವಾಗಿ ನನ್ನ ಪ್ರಾಣವಾಯುಗಳೂ ಹೊರಹೊರಡುತ್ತಿರುವಂತೆ ತೋರುವುದು.

೨೩. ಅಹಂಕಾರದ ಮದವೆಂಬ ಗ್ರಂಥಿಯು ನನ್ನ ಮನಸ್ಸಿನಿಂದ ಕಳೆದು ಹೋಗಲಿ. ಮಹಾವಿಷ್ಣುವಿನೊಡನೆ ನನ್ನ ಸ್ಪರ್ಧೆಯು ತಕ್ಷಣದಲ್ಲಿಯೇ ನಾಶವನ್ನು ಹೊಂದಲಿ.

೨೪. ಬ್ರಹ್ಮಾಂಡವನ್ನೆಲ್ಲ ಶೋಧಿಸಿ ಬಹಳ ಪ್ರಯತ್ನಪಟ್ಟರೂ ಈ ತೇಜೋಲಿಂಗವು ಮೊದಲಿನಂತೆಯೇ ಔನ್ನತ್ಯವನ್ನು ಹೊಂದಿರುವುದು.

೨೫. ಆದುದರಿಂದ ಈ ತೇಜೋರಾಶಿಗೆ ನಾನಾಗಲಿ, ನಾರಾಯಣ

ಇತೋ ನೋತ್ಪತಿತುಂ ಶಕ್ತಿರಸ್ತಿ ಮೇ ತನ್ನಿವರ್ತಯೇ ।
ಇತಿ ನಿಶ್ಚಿತ್ಯ ಮನಸಾ ವಿಧಾತಾ ಜಾತವಿಸ್ಮಯಃ ।
ಪ್ರತ್ಯಭಾಷತ ತಂ ಕಸ್ತ್ವಂ ಕುತೋ ವಾ ಪ್ರಾಪ್ತವಾನಿತಿ ॥ ೨೬ ॥
ಸ ಚ ಪ್ರತ್ಯಬ್ರವೀದೇನಂ ವೇಧಸಂ ಕೇತಕಛದಃ ।
ಕೇತಕಛದ ಏವಾಸಂ ಸಚ್ಚೈತನ್ಯಃ ಶಿವಾಜ್ಞಯಾ ॥ ೨೭ ॥
ತೇಜಃಸ್ತಂಭಾತ್ಮನಃ ಶಂಭೋರಸ್ಯ ಮೂರ್ಧ್ನಿ ಚಿರಂ ಸ್ಥಿತಃ ॥ ೨೮ ॥
ಭೂಲೋಕ ಇಚ್ಛಯಾ ವಸ್ತುಂ ತತಃ ಸಂಪ್ರಾಪ್ತವಾನಹಂ ॥ ೨೯ ॥

ಇತ್ಥಂ ಶ್ರುತ್ವಾ ಕೇತಕೀಬರ್ಹವಾಚಂ
ಲಬ್ಧ್ವಾಶ್ವಾಸಂ ತಂ ಕಿಲಾಂಭೋಜಭೂತಿಃ ।
ಬ್ರೂಹಿ ತ್ವಂ ಮೇ ತತ್ಕಿಯತ್ಯಂತರೇವಾ
ತೇಜಃಸ್ತಂಭಸ್ಯಾಗ್ರವಿತಾಬಭಾಷೇ ॥ ೩೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ಬ್ರಹ್ಮಣಾ ಲಿಂಗೋಪರಿಭಾಗ ಶೋಧನ ವರ್ಣನಂ"ನಾಮ ದ್ವಾದಶೋಽಧ್ಯಾಯಃ

---

ನಾಗಲಿ, ಮಹೇಂದ್ರನೇ ಮೊದಲಾದ ಇತರ ದೇವತೆಗಳಾಗಲಿ ಯಾರೂ ಕಾರಣರಲ್ಲವು.

೨೬. ಇನ್ನು ಮೇಲಕ್ಕೆ ಹಾರಲು ನನಗೆ ಶಕ್ತಿಯಿಲ್ಲದುದರಿಂದ ನಾನು ಹಿಂತಿರುಗುತ್ತೇನೆ." ಹೀಗೆ ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡು ಅತ್ಯಂತ ವಿಸ್ಮಯಾವಿಷ್ಟನಾಗಿ ಆ ಬ್ರಹ್ಮನು ಕೇತಕಿಯನ್ನು ಕುರಿತು "ನೀನು ಯಾರು? ಎಲ್ಲಿಂದ ಬರುತ್ತಿರುವೆ" ಎಂಬುದಾಗಿ ಕೇಳಿದನು.

೨೭. ಆ ಕೇತಕಿಯು ಆತನನ್ನು ಕುರಿತು ಹೇಳಿತು:—"ನಾನು ಶಿವಾಜ್ಞಾನುಸಾರವಾಗಿ ಜೀವಸಹಿತವಾದ ಕೇತಕೀಪತ್ರವಾಗಿರುವೆನು.

೨೮–೨೯. "ತೇಜೋಮಯವಾದ ಈ ಶಂಭುಲಿಂಗದ ತಲೆಯಲ್ಲಿ ಬಹು ಕಾಲವಿದ್ದು ಭೂಲೋಕದಲ್ಲಿ ವಾಸಮಾಡಬೇಕೆಂಬ ಇಚ್ಛೆಯಿಂದ ಬರುತ್ತಿದ್ದೇನೆ."

೩೦. ಇದನ್ನು ಕೇಳಿ ಕೇತಕೀಪತ್ರದ ಮಾತುಗಳಿಂದ ಸ್ವಲ್ಪ ಚೇತರಿಸಿಕೊಂಡವನಾಗಿ ಚತುರ್ಮುಖನು ಅದನ್ನು ಕುರಿತು "ಆ ಲಿಂಗದ ತುದಿಯು ಎಷ್ಟುದೂರದಲ್ಲಿರುವುದೆಂಬುದನ್ನು ಹೇಳು" ಎಂದು ಕೇಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಹಾತ್ಮ್ಯೆಯಲ್ಲಿ "ಬ್ರಹ್ಮನು ಲಿಂಗದ ಶಿರೋಭಾಗವನ್ನು ಹುಡುಕಿದು"ದೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋದಶೋಽಧ್ಯಾಯಃ

**ಬ್ರಹ್ಮಣಾ ಅಸತ್ಯಸಾಕ್ಷ್ಯಾರ್ಥಂ ಕೇತಕೀಛದಪ್ರಾರ್ಥನಾವರ್ಣನಂ**

ನಂದಿಕೇಶ್ವರ ಉವಾಚ :—

ಕೇತಕೀಬರ್ಹಮುಷ್ಯೇನಂ ವಿಹಸ್ಯ ಪುನರಬ್ರವೀತ್ ।

ಕೇತಕ್ಯುವಾಚ :—

ಅಪಿ ಮೂಢ ನ ಕಿಂಚಿತ್ತ್ವಂ ವೇತ್ಸಿ ಕಸ್ತ್ವಂ ಕುತೋ ನ ತತ್ ॥ ೧ ॥
ಈ ದೃಶ್ಯಃ ಪರಿತೋ ಲಗ್ನಾ ಯಸ್ಮಿನ್ಬ್ರಹ್ಮಾಂಡಕೋಟಯಃ ।
ತಸ್ಯ ಪ್ರಮಾಣಮೇತಾವದಿತಿ ಕೋ ವೇದಿತುಂ ಕ್ಷಮಃ ॥ ೨ ॥
ಚತುರ್ಯುಗಾಯುತೈರ್ಯಾತಂ ತತೋ ನಿಪತತೋ ಮಮ ।
ಇದಾನೀಮಪಿ ನಾಪ್ನೋತಿ ತನ್ಮಧ್ಯಂ ಕಿಲ ಭೂತಲಂ ॥ ೩ ॥
ಇತಿ ಬ್ರುವಾಣಮೇನಂ ಚ ನಮಸ್ಕೃತ್ಯ ಸರೋಜಭೂಃ ।
ಹಿತ್ವಾ ನಿಜಮಹಂಕಾರಮಭಾಷತ ಕೃತಾಂಜಲಿಃ ॥ ೪ ॥

ಬ್ರಹ್ಮೋವಾಚ :—

ಮಹಾತ್ಮನ್ಸತ್ಯಮೇವಾಸ್ಮಿ ಮೂಢೋಽಹಂ ಕೇತಕಛದ ।
ಬ್ರಹ್ಮಣಾ ಹಿ ಮಯಾ ಸ್ಪರ್ಧಾ ವಿಷ್ಣುನಾ ಸಹ ನಿರ್ಮಿತಾ ।
ದ್ವಾಭ್ಯಾಮಪೀದಮಾವಾಭ್ಯಾಂ ವಿಸ್ಮೃತಂ ಶಿವವೈಭವಂ ॥ ೫ ॥

---

## ಕನ್ನಡದ ಅನುವಾದ

**ಬ್ರಹ್ಮನು ಕೇತಕೀಪತ್ರವನ್ನು ಕೂಟಸಾಕ್ಷ್ಯಕ್ಕಾಗಿ ಕರೆದುದು**

೧–೩. ನಂದಿಕೇಶ್ವರನು ಹೇಳುತ್ತಾನೆ:—ಕೇತಕೀಪತ್ರವು ನಗುತ್ತ ಬ್ರಹ್ಮನಿಗೆ ಇಂತೆಂದಿತು:— "ಅಯ್ಯೋ ಮೂಢ! ಇಷ್ಟು ಅಜ್ಞಾನಿಯಾದ ನೀನು ಯಾರು? ಈ ಲಿಂಗವು ಇಲ್ಲದ ಸ್ಥಳವೆಲ್ಲಿ? ಯಾವುದರ ಅಂಶಾಂಶಗಳಲ್ಲಿಯೂ ಇಂತಹ ಬ್ರಹ್ಮಾಂಡ ಕೋಟಿಗಳು ಕಾಣುತ್ತಿರುವುವೋ, ಅದರ ಪ್ರಮಾಣವನ್ನು ಇಷ್ಟೆಂದು ಹೇಳಲು ಯಾರಿಗೆತಾನೆ ಸಾಧ್ಯವು? ನಾನು ಕೆಳಕ್ಕೆಬೀಳಲು ಮೊದಲು ಮಾಡಿ ಒಂದುಸಾವಿರ ಚತುರ್ಯುಗಗಳಾದುವು. ಇನ್ನೂ ಈ ಲಿಂಗದ ಮಧ್ಯಭಾಗವಾದ ಭೂಲೋಕವೆ ಸಿಕ್ಕಲಿಲ್ಲವು."

೪. ಹೀಗೆಂದ ಕೇತಕೀಪತ್ರವನ್ನು ಕಂಡು ಬ್ರಹ್ಮನು ನಮಸ್ಕರಿಸಿ ಅಂಜಲಿಬಂಧವನ್ನು ಮಾಡಿ ತನ್ನ ಅಹಂಕಾರವನ್ನು ಬಿಟ್ಟು ಹೇಳತೊಡಗಿದನು:—

೫. "ಎಲೈ ಮಹಾಮಹಿಮೆಯುಳ್ಳ ಕೇತಕಿಯೇ! ನಾನು ನಿಜವಾಗಿಯೂ ಮೂಢನೇಸರಿ. ಬ್ರಹ್ಮನಾದ ನನಗೂ ಮಹಾವಿಷ್ಣುವಿಗೂ ಸ್ಪರ್ಧೆಯುಂಟಾಯಿತು.

ಯನ್ನೌ ಮಹಾನಭೂದ್ಗರ್ವಸ್ಸರ್ಗಸಂತ್ರಾಣ ಮಾತ್ರತಃ ।
ಹ್ರೇಪಣೀ ಸಂಕಥಾ ತಾವದಾಸ್ತಾಮದ್ಯಾಪ್ಯಹಂ ಯತಃ ॥ ೭ ॥
ಸ್ಪರ್ಧಯಾ ನ ವಿಮುಕ್ತೋಽಸ್ಮಿ ಬದ್ಧಯಾ ಗರುಡಧ್ವಜೇ ॥ ೭ ॥
ಸಖ್ಯಂ ಸಾಪ್ತಪದೀನಂ ಹಿ ಕಥ್ಯತೇ ತದ್ಭವಾನ್ಮಯಿ ।
ಅಸಂಸ್ತುತಧಿಯಂ ಹಿತ್ವಾ ಕರ್ತುಮರ್ಹಸ್ಯನುಗ್ರಹಂ ॥ ೮ ॥
ಅಹಂ ವಿಷ್ಣುಶ್ಚ ಮೋಹಾಂಧೌ ತೇಜಸ್ತಂಭಸ್ಯ ವೀಕ್ಷಣಾತ್ ।
ಹಂಸಕೋಲಾಕೃತೀ ದಧ್ವೋ ಮಿಥಃ ಸಾಮ್ಯಂ ವ್ಯಪೋಹಿತುಂ ॥ ೯ ॥
ಮೂಲಂ ದಿದೃಕ್ಷುಃ ಸ ದಶಾಂ ಕೀದೃಶೀಂ ಯಾತವಾನಿತಿ ।
ನ ಜಾನೇ ಮಮ ಚಾಸ್ಯಾಗ್ರಂ ದಿದೃಕ್ಷೋರೀದೃಶೀ ದಶಾ ॥ ೧೦ ॥
ಗತಮುಡ್ಡೀಯಮಾನಸ್ಯ ಮೇ ಸಹಸ್ರೇಣ ಹಾಯನೈಃ ।
ಜಾತಶ್ರಮೋಽಸ್ಮಿ ನಿತರಾಂ ವಿಯುಜ್ಯ ಇವ ಚಾಸುಭಿಃ ॥ ೧೧ ॥

---

೬. ಸರ್ಗದ ಸೃಷ್ಟಿ ಮತ್ತು ಪಾಲನಗಳಿಗೆ ಮಾತ್ರ ನಾಯಕರಾದ ನಮ್ಮಿಬ್ಬರಿಗೂ ಹೆಚ್ಚಾದ ಗರ್ವವುಂಟಾದುದರಿಂದ ಈ ಮಹೇಶ್ವರನ ವೈಭವವು ನಮ್ಮಿಬ್ಬರಿಗೂ ಜ್ಞಾಪಕಕ್ಕೆ ಬರಲಿಲ್ಲ.

೭. ನಮಗೆ ಲಜ್ಜೆಯನ್ನುಂಟುಮಾಡುವ ಈ ಕಥೆಯು ಅಂತಿರಲಿ. ಇಂದಿಗೂ ಸಹ ನಾರಾಯಣನೊಡನೆ ಮಾಡಿದ ಸ್ಪರ್ಧೆಯಿಂದ ನಾನು ವಿಮುಕ್ತನಾಗಲಿಲ್ಲ.

೮. ಏಳು ಹೆಜ್ಜೆಗಳ ಸಂಗಮನದಿಂದ ಸಖ್ಯವೆಂದು ಹೇಳಲ್ಪಟ್ಟಿದೆ. ಆದುದರಿಂದ ನೀನು ನನ್ನ ಬುದ್ಧಿಗೇಡಿತನವನ್ನು ಮನ್ನಿಸಿ ನನ್ನಲ್ಲಿ ಅನುಗ್ರಹವನ್ನು ಮಾಡಬೇಕು.

೯. ಮೋಹದಿಂದ ಅಂಧರಾಗಿ ನಾನೂ, ಮಹಾವಿಷ್ಣುವೂ ಹಂಸ ವರಾಹ ರೂಪಗಳನ್ನು ಧರಿಸಿ ಈ ತೇಜೋಲಿಂಗದ ಪರಿಶೋಧನದಿಂದ ನಮ್ಮಿಬ್ಬರ ಸಾಮ್ಯಾವಸ್ಥೆಯನ್ನು ಕಳೆದುಕೊಳ್ಳಲೆಳಸಿದೆವು.

೧೦. ಮೂಲವನ್ನು ನೋಡಲು ಹೋದ ನಾರಾಯಣನು ಯಾವ ಅವಸ್ಥೆಗೊಳಗಾದನೆಂದು ನಾನು ತಿಳಿಯೆ. ತುದಿಯನ್ನು ನೋಡಲೆಳಸಿದ ನನಗೆ ಈ ದುರವಸ್ಥೆಯುಂಟಾಯಿತು.

೧೧. ಮೇಲಕ್ಕೆ ಹಾರಲು ಮೊದಲುಮಾಡಿ ಒಂದುಸಾವಿರ ವರ್ಷಗಳಾದುವು. ಬಹಳ ಬಳಲಿದವನಾಗಿದ್ದೇನೆ. ನನ್ನ ಪ್ರಾಣಗಳೇ ಹಾರಿಹೋಗುವಂತೆ ತೋರುವುದು.

ದಿಷ್ಟ್ಯಾಽದ್ಯ ಭದ್ರ ಲಬ್ಧಸ್ತ್ವಂ ಮಯಾಲಂಬೋಽವಸೀದತಾಂ ।
ತನ್ಮೇ ಕುರುಷ್ವ ಮಿತ್ರಸ್ಯ ಸಫಲಾಂ ಯಾಚನಾಮಿಮಾಂ ॥ ೧೨ ॥
ಸಖಾಹಂ ಸಹಸಂಜಲ್ಪಾದಸ್ಮಿ ದಾಸೋಽನುಷಂಜನಾತ್ ।
ತತ್ತ್ವಯಾ ಕರಣೀಯೈವಂ ಪ್ರಾರ್ಥನೈಷಾ ಕೃತಾಂಜಲೇಃ ॥ ೧೩ ॥
ಯದಿ ಪಶ್ಯತಿ ಮೂಲಂ ಸ ಜಿತೋಽಹಮಮುನಾ ತದಾ ।
ಯದ್ವಾ ನ ಪಶ್ಯತಿ ತದಾಪ್ಯಸ್ಮಿ ಸಾಮ್ಯಮುಪೇಯಿವಾನ್ ॥ ೧೪ ॥
ಇದಂ ದ್ವಯಮಪಿ ಪ್ರಾಯೋ ಮಮಾತಿಹ್ರೇಪಣಂ ಸಖೇ ।
ತ್ವಯೈವ ಪರಿಹಾರ್ಯಸ್ತತ್ವಮಿದಾನೀಂ ಸಮುಪಾಗತಂ ॥ ೧೫ ॥
ಅನೃತಾಮಭಿಭಾಷತ್ವಮುಚಿತಾಂ ಚ ಸುಹೃತ್ಕೃತೇ ।
ಗಿರಮೇತಾಮಿಮಾಮಗ್ರೇ ಚಕ್ರಪಾಣೇರುದೀರಯ ॥ ೧೬ ॥
ಏಷ ಹಂಸಾಕೃತಿರ್ಬ್ರಹ್ಮಾ ತೇಜಃಸ್ತಂಭಸ್ವರೂಪಿಣಃ ।
ಅತ್ಯುಚ್ಚಂ ದೃಷ್ಟವಾನಗ್ರಮತ್ರ ಸಾಕ್ಷ್ಯೇ ಸ್ಥಿತೋಽಸ್ಮ್ಯಹಂ ॥ ೧೭ ॥
ತೇನಾಪಿ ತೇಜಃಸ್ತಂಭತ್ವಮೇಯುಷಾ ಚಂದ್ರಮೌಳಿನಾ ।
ಸಂಭಾವಿತೋಽಯಂ ಸುತರಾಂ ಪಿತ್ರೇವ ಹಿ ಪಿತಾಮಹಃ ॥ ೧೮ ॥

---

೧೨–೧೩. ಎಲೈ ಮಂಗಳಮೂರ್ತಿಯೇ ! ನನ್ನ ಅದೃಷ್ಟದಿಂದಲೇ ನೀನು ಭೇಟಿಯಾದೆ. ನನ್ನ ಅವಲಂಬನವಾಗಿ ನಿಲ್ಲುವವನಾಗು. ಮಿತ್ರನ ಈ ಯಾಚನೆಯನ್ನು ಸಫಲಗೊಳಿಸು. ನಿನ್ನೊಡನೆ ಮಾತನಾಡಿದುದರಿಂದ ನಿನ್ನ ಮಿತ್ರನಾಗಿರುವೆನು. ಸಹವಾಸದಿಂದ ದಾಸನಾಗಿರುವೆನು. ನಾನು ಅಂಜಲಿಬದ್ಧನಾಗಿ ಕೇಳಿಕೊಳ್ಳುವ ಈ ಪ್ರಾರ್ಥನೆಯನ್ನು ನಡೆಸಿಕೊಡು.

೧೪. ಆ ವಿಷ್ಣುವು ಲಿಂಗದ ಮೂಲವನ್ನು ಶೋಧಿಸಿದವನಾದರೆ, ಅವನಿಂದ ನಾನು ಪರಾಜಯವನ್ನು ಹೊಂದುವೆನು. ಅಥವಾ ಆತನು ಕೃತಕೃತ್ಯನಾಗದಿದ್ದರೂ ನಾನು ಸಮಾನನಾಗಿಯೇ ಇರುವೆನು.

೧೫. ಈ ಎರಡರಲ್ಲಿ ಯಾವುದಾದರೂ ನನಗೆ ಲಜ್ಜಾಸ್ಪದವೇ ಸರಿ. ಈ ನನ್ನ ಅವಸ್ಥೆಯು ನಿನ್ನಿಂದಲೇ ಪರಿಹರಿಸಲ್ಪಡಬೇಕಾಗಿರುವುದು.

೧೬. ನೀನು ಸ್ನೇಹಿತನಾದ ನನಗೋಸ್ಕರ ಸುಳ್ಳನ್ನು ಹೇಳಬೇಕು. ವಿಷ್ಣುವಿನೆದುರಿನಲ್ಲಿ ನೀನು ಈ ಮುಂದೆ ಹೇಳುವಂತೆ ಸಾಕ್ಷ್ಯವನ್ನು ನುಡಿಯುವನಾಗು.

೧೭. 'ಹಂಸಾಕಾರದಿಂದಿದ್ದ ಈ ಬ್ರಹ್ಮನು ಈ ತೇಜಸ್ತಂಭದ ಅಗ್ರಭಾಗವನ್ನು ನೋಡಿರುವನು. ಇದಕ್ಕೆ ನಾನೇ ಸಾಕ್ಷಿಯಾಗಿರುವೆನು.

೧೮. ತೇಜೋರೂಪವನ್ನು ಹೊಂದಿದ ಚಂದ್ರಶೇಖರನಿಂದಲೂ ಸಹ ಈ ಬ್ರಹ್ಮನು ಬಹು ವಿಧಗಳಲ್ಲಿ ತಂದೆಯಿಂದ ಮಗನು ಪ್ರೀತಿಸಲ್ಪಡುವಂತೆ ಉಪಚಾರವನ್ನು ಪಡೆದಿರುತ್ತಾನೆ.

ಅತೋಽಯಮೇವಾಭ್ಯಧಿಕೋ ಭವತೋ ವಿಷ್ಟರಶ್ರವಾಃ ॥ ೧೯ ॥
ಇತ್ಯುಕ್ತ್ವಾ ಮಮ ಸಾಹಾಯ್ಯಂ ಸುಮಹತ್ಕ್ರಿಯತಾಂ ತ್ವಯಾ ॥

ನಂದಿಕೇಶ್ವರ ಉವಾಚ :—

ಏವಂ ಭೂಯಃ ಪ್ರಾರ್ಥಿತೋಽಯಂ ವಿಧಾತ್ರಾ
ದಾಕ್ಷಿಣ್ಯಾದ್ರ್ರಂ ಕೇತಕೀ ಬರ್ಹಕೋಽಪಿ ।
ತೇಜಃ ಸ್ತಂಭಾಭ್ಯರ್ಣಭಾಜೇ ತಥೈವ
ಸ್ವಾಹಾಶೇಷಂ ವಿಷ್ಣವೇ ಬ್ರಹ್ಮವಾಕ್ಯಂ ॥ ೨೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ಬ್ರಹ್ಮಣಾ ಅಸತ್ಯಸಾಕ್ಷ್ಯಾರ್ಥಂ ಕೇತಕಛದಪ್ರಾರ್ಥನಾವರ್ಣನಂ" ನಾಮ ತ್ರಯೋದಶೋಽಧ್ಯಾಯಃ

---

೧೯–೨೦. ಆದುದರಿಂದ ಈ ಬ್ರಹ್ಮನೇ ನಿನಗಿಂತಲೂ ಅಧಿಕನಾಗಿರುವನು.' ಹೀಗೆಂದು ಹೇಳಿ ನೀನು ನನಗೆ ಮಹತ್ತರವಾದ ಸಹಾಯವನ್ನು ಮಾಡು."

೨೧. ನಂದಿಕೇಶ್ವರನು ಹೇಳುತ್ತಾನೆ:— ಈ ರೀತಿಯಾಗಿ ಬ್ರಹ್ಮನಿಂದ ಮತ್ತೆ ಮತ್ತೆ ಪ್ರಾರ್ಥಿತವಾಗಿ ದಯಾದ್ರ್ರಹೃದಯದಿಂದ ಕೇತಕೀಪತ್ರವು ಆ ತೇಜಸ್ತಂಭದ ನೆಲೆಯನ್ನು ತಿಳಿಯಲಿಚ್ಛಿಸುತ್ತಿದ್ದ ವಿಷ್ಣುವಿಗೆ ಬ್ರಹ್ಮನ ಮಾತುಗಳ ಅನುಸಾರವಾಗಿಯೇ ಸಾಕ್ಷ್ಯವನ್ನು ಹೇಳಿತು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ಬ್ರಹ್ಮನು ಕೇತಕೀಪತ್ರವನ್ನು ಕೂಟಸಾಕ್ಷ್ಯಕ್ಕಾಗಿ ಕರೆದು"ದೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ದಶೋಽಧ್ಯಾಯಃ

### ಶಂಕರಪ್ರಾದುರ್ಭಾವ ವರ್ಣನಂ

ನಂದಿಕೇಶ್ವರ ಉವಾಚ:—

ಸೋಽಪಿ ಬ್ರಹ್ಮಾಣಮುದ್ವೀಕ್ಷ್ಯ ತಾವತಾ ದ್ವಿಗುಣಂ ಸ್ಮಯನ್ ।
ನಾಗ್ರಂ ದೃಷ್ಟಮನೇನೇತಿ ನಿಶ್ಚಿಕಾಯ ವಿವೇಕವಾನ್ ॥ ೧ ॥
ಅನುಗ್ರಹೀತುಂ ಮಾಂ ಮುಗ್ಧಂ ಹಂತುಂ ಚಾಸ್ಯ ವಿಧೇರ್ಮದಂ ।
ದೇವದೇವಃ ಸ ಏವಾಲಂ ಭೂತಭರ್ತೇತ್ಯಮನ್ಯತ ॥ ೨ ॥
ಮೂಲಸಂದರ್ಶನಾಶಕ್ತ್ಯಾ ತೇಜಃಸ್ತಂಭಸ್ಯ ಮೇ ಮದಃ ।
ವ್ಯಪೇತ ಏವ ಮನ್ಯೇಽದ್ಯ ಯದ್ಭಕ್ತಿಸ್ತ್ರ್ಯಂಬಕೇಽಜನಿ ॥ ೩ ॥
ಸ್ತೂಯತೇ ವೀತಗರ್ವತ್ವಾತ್ಸ ಇದಾನೀಂ ಮಹೇಶ್ವರಃ ।
ಯಸ್ಯ ದಕ್ಷಿಣವಾಮಾಭ್ಯಾಮಂಗಾಭ್ಯಾಂ ನೌ ಸಮುದ್ಭವೌ ॥ ೪ ॥
ಆದ್ಯಾಪ್ಯವೀತಗರ್ವತ್ವಾಲ್ಲಬ್ಧ್ವಾಸೌ ಕೂಟಸಾಕ್ಷಿಣಂ ।
ಹಿರಣ್ಯಗರ್ಭೋ ಮಾಮೇವಮತಿಸಂಧಾತುಮಿಚ್ಛತಿ ॥ ೫ ॥

---

### ಕನ್ನಡದ ಅನುವಾದ

#### ಶಂಕರನು ಬ್ರಹ್ಮ ವಿಷ್ಣುಗಳಿಗೆ ಪ್ರತ್ಯಕ್ಷನಾದುದು

೧. ನಂದಿಕೇಶ್ವರನು ಹೇಳುತ್ತಾನೆ:—ಆ ನಾರಾಯಣನೂ ಸಹ ಬ್ರಹ್ಮನ ಮುಖವನ್ನು ನೋಡಿದಮಾತ್ರದಿಂದಲೇ ಮಂದಹಾಸಯುಕ್ತನಾಗಿ ವಿವೇಕಿಯಾದುದರಿಂದ ಆತನು ಖಂಡಿತವಾಗಿಯೂ ಲಿಂಗದ ಅಗ್ರಭಾಗವನ್ನು ನೋಡಲೇ ಇಲ್ಲವೆಂಬುದನ್ನು ನಿಶ್ಚಯಿಸಿಕೊಂಡನು.

೨. ಮತ್ತು "ನನ್ನನ್ನು ಅನುಗ್ರಹಿಸುವುದಕ್ಕೂ ಬ್ರಹ್ಮನ ಮದವನ್ನು ಮುರಿಯಲಿಕ್ಕೂ ಭೂತಪತಿಯಾದ ಪರಮೇಶ್ವರನೊಬ್ಬನೇ ಸರಿ" ಎಂದು ಯೋಚಿಸಿದನು.

೩. "ಇದರ ಮೂಲವನ್ನು ನೋಡಲಾರದುದರಿಂದಲೇ ನನ್ನ ಮದವು ನಷ್ಟವಾಯಿತು. ಆದುದರಿಂದಲೇ ನನಗೆ ಪರಮೇಶ್ವರನಲ್ಲಿ ಭಕ್ತಿಯೂ ಉದ್ಭವಿಸಿತು.

೪. ಆ ಮಹೇಶ್ವರನನ್ನೇ ನಾನು ಗರ್ವರಹಿತನಾಗಿ ಈಗ ಸ್ತೋತ್ರಮಾಡುತ್ತೇನೆ. ಆತನ ಎಡಬಲಪಾರ್ಶ್ವಗಳಿಂದಲೇ ನಾವೀರ್ವರೂ ಹುಟ್ಟಿದೆವು.

೫. ಈ ಬ್ರಹ್ಮನಾದರೊ ಇನ್ನೂ ತನ್ನ ಗರ್ವವನ್ನು ಕಳೆದುಕೊಳ್ಳದೆ ಈ ಕೇತಕೀಪತ್ರದ ಸುಳ್ಳುಸಾಕ್ಷ್ಯವನ್ನು ಹೊಂದಿ ನನ್ನನ್ನು ಕಡೆಗಾಣುತ್ತಿದ್ದಾನೆ.

ತದದ್ಯ ಸಕಲಸ್ಯಾಪಿ ದುಃಖಸ್ಯಾಪನಯೇ ಕ್ಷಮಂ ।
ಸ ಏವ ಶರಣತ್ವೇನ ಪ್ರಾಪ್ತವ್ಯಃ ಶಂಕರೋ ಮಯಾ ॥ ೬ ॥
ತಥಾ ಕೃತಾಪರಾಧಸ್ಯ ಕೃತಘ್ನಸ್ಯ ಗುರುದ್ರುಹಃ ।
ತಮೃತೇ ರಕ್ಷಿತಾ ಕೋಽನ್ಯಸ್ತಮೇವ ಸ್ತೌಮಿ ಶಂಕರಂ ॥ ೭ ॥

ವಿಷ್ಣುರುವಾಚ:—

ಜಯ ಪೃಥ್ವೀಮಯಾಕಾರ ಜಯಚಾಪೋಮಯಾಕೃತೇ ।
ಜಯ ಪ್ರಭಾಕರಾಕಾರ ಜಯಾಮೃತಕರಾಕೃತೇ ॥ ೮ ॥
ಜಯ ವೈಶ್ವಾನರಾಕಾರ ಜಯ ಗಂಧವಹಾಕೃತೇ ।
ಜಯಹೋತೃಮಯಾಕಾರ ಜಯಾಕಾಶಮಯಾಕೃತೇ ॥ ೯ ॥
ರಕ್ಷ ಮಾಂ ತ್ರಿಗುಣಾತೀತ ರಕ್ಷಮಾಂ ಕಾಲವಿಗ್ರಹ ।
ರಕ್ಷ ಮಾಮಕ್ಷಯೈಶ್ವರ್ಯ ರಕ್ಷ ಮಾಂ ಕರುಣಾಕರ ॥ ೧೦ ॥
ಸ್ರಷ್ಟಾ ತ್ವಂ ಸರ್ವಜಗತಾಂ ರಕ್ಷಿತಾ ಸರ್ವದೇಹಿನಾಂ ।
ಹರ್ತಾ ಚ ಸರ್ವಭೂತಾನಾಂ ತ್ವಾಂ ವಿನೈವಾಸ್ತಿ ಕೋಽಪರೇ ॥ ೧೧ ॥
ಅಣೂನಾಮಪ್ಯಣೀಯಾನ್ಸ್ತ್ವಂ ಮಹತಾಂ ಮಹತಾಮಪಿ ।
ಅಂತರ್ಬಹಿಸ್ತ್ವಮೇವೈತಜ್ಜಗದಾಕ್ರಮ್ಯ ವರ್ತಸೇ ॥ ೧೨ ॥

---

೬. ಈ ಸಕಲ ದುಃಖಗಳ ನಿವೃತ್ತಿಗಾಗಿ ಸರ್ವಶಕ್ತನಾದ ಶಂಕರನನ್ನೇ ನಾನು ಶರಣುಹೊಗಬೇಕು.

೭. ಅಪರಾಧವನ್ನು ಮಾಡಿ ಕೃತಘ್ನನೂ ಗುರುದ್ರೋಹಿಯೂ ಆದ ನನಗೆ ಆತನಲ್ಲದೆ ರಕ್ಷಕರು ಯಾರು? ಆದುದರಿಂದ ಆತನನ್ನೇ ಸ್ತುತಿಸುತ್ತೇನೆ.

೮-೯. ವಿಷ್ಣುವು ಹೇಳುತ್ತಾನೆ:—ಪೃಥ್ವಿಯ ಆಕಾರವುಳ್ಳವನೂ, ಅಪೋಮಯಶರೀರಿಯೂ, ಸೂರ್ಯಚಂದ್ರರ ಆಕೃತಿಯುಳ್ಳವನೂ ಆದ ನಿನಗೆ ಜಯವು. ಅಗ್ನಿ, ವಾಯು, ಆಕಾಶ ಮತ್ತು ಹೋತೃಗಳ ಆಕಾರವನ್ನು ಹೊಂದಿರುವ ನಿನಗೆ ಜಯಜಯ.

೧೦. ಸತ್ವರಜಸ್ತಮೋಗುಣಗಳಿಗೆ ಅತೀತನೂ, ಕಾಲರೂಪಿಯೂ, ಅನಂತೈಶ್ವರ್ಯವಂತನೂ, ಕರುಣಾಸಮುದ್ರನೂ ಆದ ನೀನೇ ನನ್ನನ್ನು ರಕ್ಷಿಸಬೇಕು.

೧೧. ಸಕಲ ಲೋಕಗಳ ಸೃಷ್ಟಿಕರ್ತನೂ, ಸಕಲ ಜೀವಪರಿಪಾಲಕನೂ, ಸಕಲ ಭೂತಗ್ರಾಮಗಳ ಸಂಹಾರಕನೂ ನೀನೇ ಅಲ್ಲದೆ ಅನ್ಯರು ಯಾರೂ ಇಲ್ಲ.

೧೨. ಅಣುಗಳಿಗಿಂತ ಸೂಕ್ಷ್ಮನೂ, ಮಹತ್ತಿಗಿಂತ ಮಹತ್ತರನೂ, ಈ ಬ್ರಹ್ಮಾಂಡದ ಒಳಗೂ ಹೊರಗೂ ವ್ಯಾಪಿಸಿರುವವನೂ ಆಗಿ ನೀನೇ ಇದನ್ನು ವಿವರಿಸುತ್ತಿರುವೆ.

ನಿಗಮಾಸ್ತವ ನಿಶ್ವಾಸಾ ವಿಶ್ವಂ ತೇ ಶಿಲ್ಪನೈಭವಂ ।
ಸ ತ್ವಂ ತ್ವದೀಯ ಏವಾಸಿ ಜ್ಞಾನಮಾತ್ಮಾ ತವ ಪ್ರಭೋ ॥ ೧೩ ॥
ಅಮರಾ ದಾನವಾ ದೈತ್ಯಾಃ ಸಿದ್ಧಾ ವಿದ್ಯಾಧರಾ ನರಾಃ ।
ಪ್ರಾಣಿನಃ ಪಕ್ಷಿಣಃ ಶೈಲಾಃ ಶಿಖಿನೋಽಪಿ ತ್ವಮೇವ ಹಿ ॥ ೧೪ ॥
ಸ್ವರ್ಗಸ್ತ್ವಮಪವರ್ಗಸ್ತ್ವಂ ತ್ವಮೋಂಕಾರಸ್ತ್ವಮಧ್ವರಃ ।
ತ್ವಂ ಯೋಗಸ್ತ್ವಂ ಪರಾಸಂವಿತ್ಕಿಂ ತ್ವಂ ನ ಭವಸೀಶ್ವರ ॥ ೧೫ ॥
ತ್ವಮಾದಿರ್ಮಧ್ಯಮಂತಶ್ಚ ತಸ್ಥುಷಾಂ ಜಗ್ಮುಷಾಮಪಿ ।
ಕಾಲಸ್ವರೂಪತಾಂ ಪ್ರಾಪ್ಯ ಕಲಯಸ್ಯಖಿಲಂ ಜಗತ್ ॥ ೧೬ ॥
ಪರೇಶಃ ಪರತಃ ಶಾಸ್ತಾ ಸರ್ವಾನುಗ್ರಾಹಕಃ ಶಿವಃ ।
ಸ ಏಷ ಮೇ ಕಥಂಕಾರಂ ಸಾಕ್ಷಾದ್ಭವತಿ ಧೂರ್ಜಟಿಃ ॥ ೧೭ ॥
ಯಂ ದೃಷ್ಟ್ವಾ ಶರಣಂ ಪ್ರಾಪ್ತೋ ನಿಃಶ್ರೇಯಸಮವಾಪ್ನುಯಾತ್ ।
ಅಥವಾ ಸ್ತೌಮಿ ತದ್ಧಾಮ ಜಾತಮಾತ್ರಂ ಯಥಾಮತಿ ॥ ೧೮ ॥

---

೧೩. ವೇದಗಳೇ ನಿನ್ನ ನಿಶ್ವಾಸಗಳು. ಬ್ರಹ್ಮಾಂಡವು ನಿನ್ನ ಶಿಲ್ಪಕೌಶಲದ ನೆಲೆವೀಡು. ನೀನು ನಿನ್ನವನೆ ಹೊರತು, ನಿನ್ನ ಆತ್ಮವು ಕೇವಲ ಜ್ಞಾನ ಸ್ವರೂಪವೇ ಆಗಿರುವುದು.

೧೪. ದೇವತೆಗಳು, ದಾನವರು, ದೈತ್ಯರು, ಸಿದ್ಧರು, ವಿದ್ಯಾಧರರು, ಮನುಷ್ಯರು, ತಿರ್ಯಗ್ಜಂತುಗಳು, ಪಕ್ಷಿಗಳು, ವೃಕ್ಷಗಳು— ಎಲ್ಲವೂ ನೀನೇ ಆಗಿರುವೆ.

೧೫. ನೀನೆ ಸ್ವರ್ಗವೂ, ಮೋಕ್ಷವೂ, ಪ್ರಣವವೂ, ಯಜ್ಞವೂ, ಯೋಗವೂ, ಪರಾವಿದ್ಯೆಯೂ ಆಗಿರುವೆ. ನೀನು ಆಗಿಲ್ಲದ ವಸ್ತುವು ಯಾವುದುತಾನೆ ಇರುವುದು ?

೧೬. ನೀನೇ ಸಕಲ ಚರಾಚರ ವಸ್ತುಗಳಿಗೂ ಆದಿಯೂ, ಮಧ್ಯವೂ, ಅಂತವೂ ಆಗಿರುವೆ. ನೀನೇ ಕಾಲಸ್ವರೂಪನಾಗಿ ಸಕಲ ಜಗತ್ತನ್ನೂ ಲಯಗೊಳಿಸುವೆ.''

೧೭. ಹೀಗೆಂದು ಸ್ತುತಿಸಿ ಆ ಮಹಾವಿಷ್ಣುವು ಮತ್ತೆ ಚಿಂತಿಸತೊಡಗಿದನು:— "ಪರಾತ್ಪರನೂ, ಜಗನ್ನಿಯಾಮಕನೂ, ಸರ್ವಭೂತಗಳಲ್ಲಿಯೂ ಅನುಗ್ರಹವುಳ್ಳವನೂ ಆದ ಸದಾಶಿವನು ನನಗೆ ಹೇಗೆ ಸಾಕ್ಷಾತ್ಕಾರವನ್ನು ಕೊಡುವನು ?

೧೮. ಯಾರನ್ನು ನೋಡಿ ಶರಣುಹೊಕ್ಕರೆ ಮೋಕ್ಷವನ್ನು ಹೊಂದಬಹುದೊ, ಅಂತಹ ಮಹಾದೇವನ ನೆಲೆಯಾಗಿ ಉದ್ಭವಿಸಿರುವ ಈ ಲಿಂಗವನ್ನೇ ಸ್ತೋತ್ರಮಾಡುತ್ತೇನೆ.

ತಚ್ಛೃತ್ವೈಷ ಕೃಪಾಂ ಕುರ್ಯಾದವಶ್ಯಂ ಸರ್ವತಃಶ್ರುತಿಃ ।
ಇತಿ ನಿಶ್ಚಿತ್ಯ ವೈಕುಂಠಃ ಸ್ತೋತುಂ ಸಮುಪಚಕ್ರಮೇ ॥ ೧೯ ॥
ತಮೇವ ತೈಜಸಂ ಸ್ತಂಭಂ ಪ್ರಣಮ್ಯ ಪರಮೇಶ್ವರಂ ।
ಆದಿಮಧ್ಯಾಂತರಹಿತಂ ಮತ್ವಾ ತಂ ಜಗದೀಶ್ವರಂ
ಹಠಾತ್ತೇನ ವಿರಿಂಚೇನ ವಾರ್ಯಮಾಣೋಽಪಿ ಸಸ್ಮಿತಂ ॥ ೨೦ ॥

ವಿಷ್ಣುರುವಾಚ :—

ಜಯ ದೇವ ಮಹಾದೇವ ವಾಮದೇವ ವೃಷಧ್ವಜ ।
ಕಾಲಾಂತಕ ಕ್ರತುಧ್ವಂಸಿನ್ನೀಲಕಂಠೇಂದುಶೇಖರ ॥ ೨೧ ॥
ಜಯ ಶಂಭೋ ಶಿವೇಶಾನ ಶರ್ವ ತ್ರ್ಯಂಬಕ ಧೂರ್ಜಟೇ ।
ಸ್ಮರವೈರಿನ್ಪುರಾರಾತೇ ಸ್ಥಾಣೋ ಭವ ಮಹೇಶ್ವರ ॥ ೨೨ ॥
ಜಯೇಶ ಖಂಡಪರಶೋ ಶೂಲಿನ್ಪಶುಪತೇ ಹರ ।
ಸರ್ವಜ್ಞ ಭರ್ಗ ಭೂತೇಶ ಕಪಾಲಿನ್ನೀಲಲೋಹಿತ ॥ ೨೩ ॥
ಜಯ ರುದ್ರ ಮಖಾರಾತೇ ಪಿನಾಕಿನ್ಪ್ರಮಥಾಧಿಪ ।
ಗಂಗಾಧರ ವ್ಯೋಮಕೇಶ ಗಿರೀಶ ಪರಮೇಶ್ವರ ॥ ೨೪ ॥

---

೧೯. ನನ್ನ ಸ್ತೋತ್ರವನ್ನು ಕೇಳಿಯೇ ಸರ್ವತ್ರ ಶ್ರೋತ್ರಗಳುಳ್ಳ ಮಹೇಶ್ವರನು ಕೃಪೆಮಾಡುವನು.'' ಎಂದು ನಿಶ್ಚಯಿಸಿ ವಿಷ್ಣುವು ಮತ್ತೆ ಸ್ತುತಿಸತೊಡಗಿದನು.

೨೦. ಆದಿಮಧ್ಯಾಂತರಹಿತವಾದ ಆ ತೇಜಸ್ತಂಭವನ್ನೇ ಪರಮೇಶ್ವರನನ್ನಾಗಿ ತಿಳಿದು ಮೂರ್ಖತನದಿಂದ ಬ್ರಹ್ಮನು ಹಾಸ್ಯಮಾಡುವುದನ್ನು ಗಣಿಸದೆ ಈ ರೀತಿ ಸ್ತೋತ್ರಮಾಡತೊಡಗಿದನು.

೨೧. "ಮಹಾದೇವನೂ, ವಾಮದೇವನೂ, ವೃಷಭಧ್ವಜನೂ, ಯಮನಿಗೆ ಯಮನೂ, ದಕ್ಷಯಜ್ಞ ಧ್ವಂಸಕನೂ, ನೀಲಕಂಠನೂ, ಚಂದ್ರಶೇಖರನೂ ಆದ ದೇವನಿಗೆ ಜಯವು.

೨೨. ಶಂಭುವು, ಶಿವನು, ಈಶಾನನು, ಶರ್ವನು, ತ್ರಿನೇತ್ರನು, ಧೂರ್ಜಟಿಯು, ಕಾಮಧ್ವಂಸಿಯು, ತ್ರಿಪುರಗಳನ್ನು ದಹಿಸಿದವನು, ಸ್ಥಾಣುವು, ಭವನು, ಮಹೇಶ್ವರನೂ ಆದ ನಿನಗೆ ಜಯಜಯ.

೨೩–೨೪. ಈಶ್ವರನೂ, ಖಂಡಪರಶುವೂ, ಶೂಲಾಯುಧವುಳ್ಳವನೂ, ಪಶುಪತಿಯೂ, ಹರನೂ, ಸರ್ವಜ್ಞನೂ, ಭರ್ಗನೂ, ಭೂತನಾಥನೂ, ಬ್ರಹ್ಮಕಪಾಲವನ್ನು ಹಿಡಿದವನೂ, ನೀಲಲೋಹಿತನೂ, ರುದ್ರನೂ, ದಕ್ಷಯಜ್ಞಧ್ವಂಸಿಯೂ, ಪಿನಾಕಪಾಣಿಯೂ, ಪ್ರಮಥಾಧಿಪನೂ ಆದ ನಿನಗೆ ಜಯವು. ಗಂಗಾಧರನೂ, ವ್ಯೋಮಕೇಶನೂ, ಗಿರೀಶನೂ, ಪರಮೇಶ್ವರನೂ ಆದ ನಿನಗೆ ಜಯವುಂಟಾಗಲಿ.

ಜಯ ಭೀಮ ಮೃಗವ್ಯಾಧ ಕೃತ್ತಿವಾಸಃ ಕೃಪಾನಿಧೇ ।
ಕೃಶಾನುರೇತಃ ಕೈಲಾಸೇ ನಿತ್ಯಮೇವ ಹಿ ವರ್ತಸೇ ॥ ೩೫ ॥
ತ್ವದಾಜ್ಞಯಾ ಮರುದ್ವಾತಿ ಫಣೀ ವಹತಿ ಭೂಭರಂ ।
ದೀಪ್ಯತಃ ಸೂರ್ಯಶಶಿನೌ ಬ್ರಹ್ಮಾಂಡಂ ಪ್ಲವತೇಽಂಬುಧೌ ॥ ೩೬ ॥
ಜ್ಯೋತೀಂಷಿ ಸಂಚರಂತೇ ಖೇ ಸರ್ವಂ ತ್ವಚ್ಛಾಸನಾತ್ಪ್ರಭೋ ।
ಅಹಂ ಬ್ರಹ್ಮಾ ಚ ಜಗತಾಂ ಸರ್ಗಸಂತ್ರಾಣಯೋರಲಂ ॥ ೩೭ ॥
ವಿಧಾಯ ಕಲ್ಪನೇ ಪುಷ್ಟ್ಯೈ ಸೂತೇ ಸಸ್ಯಾನಿ ಮೇದಿನೀ ।
ನಾಕ್ರಾಮಂತ್ಯಬ್ಧಯಃ ಸೀಮಾಂ ಯುಷ್ಮ ತ್ವನ್ಮಹಿರೇವ ನಃ ॥ ೩೮ ॥
ಅಣಿಮಾದಿಮಹಾಸಿದ್ಧಿನಿಃಸಾಧಾರಣವೈಭವಃ ।
ಕಥಂ ತ್ವಾಮಮರೈರನ್ಯೈರುಪೇಕ್ಷೇ ಸಮಭಿಷ್ಟುತಂ ॥ ೩೯ ॥
ವಿಶುಕ್ತ್ವೇ ವಿಸ್ಮರಾಮಸ್ತ್ವಾಂ ಸ್ಮರಾಮಃ ಸಂಕಟೇಽಪಿ ಚ ।
ನ ರೋಷೋ ಜಾತು ಭಕ್ತೇಷು ಪ್ರಸಾದಃ ಸರ್ವದೈವ ತೇ ॥ ೪೦ ॥

---

೩೫. ಭೀಮನೂ, ಮೃಗವ್ಯಾಧನೂ, ಗಜಚರ್ಮಾಂಬರನೂ, ಕೃಪಾಸಿಂಧುವೂ, ಕೃಶಾನುರೇತನೂ ಆದ ನೀನು ಸರ್ವಕಾಲದಲ್ಲಿಯೂ ಕೈಲಾಸದಲ್ಲಿಯೇ ವಾಸಮಾಡುತ್ತಿರುವೆ.

೩೬. ನಿನ್ನ ಆಜ್ಞಾನುಸಾರವಾಗಿಯೇ ವಾಯುವು ಬೀಸುವುದು. ಆದಿಶೇಷನು ಭೂಮಿಯನ್ನು ಹೊತ್ತುಕೊಂಡಿರುವನು. ಚಂದ್ರಸೂರ್ಯರು ಪ್ರಕಾಶಿಸುತ್ತಿರುವರು. ಬ್ರಹ್ಮಾಂಡವು ನೀರಿನಲ್ಲಿ ತೇಲುತ್ತಿರುವುದು.

೩೭. ಗ್ರಹಗಳೂ, ನಕ್ಷತ್ರಗಳೂ ನಿನ್ನ ಆಜ್ಞೆಯಿಂದಲೇ ಆಕಾಶದಲ್ಲಿ ಸಂಚರಿಸುತ್ತಿರುವುವು. ನಾನೂ ಬ್ರಹ್ಮನೂ ಬ್ರಹ್ಮಾಂಡದ ಸೃಷ್ಟಿರಕ್ಷಣ ಕಾರ್ಯಗಳಲ್ಲಿ ಶಕ್ತರಾಗಿರುವೆವು.

೩೮. ಜಗದ್ರಕ್ಷಣಕ್ಕಾಗಿಯೇ ನೀನು ಅನೇಕ ವಿಧಿಗಳನ್ನು ನಿಯಮಿಸಿರುವೆ. ಭೂಮಿಯು ಬೆಳೆಗಳನ್ನು ಕೊಡುವುದು. ಸಮುದ್ರಗಳು ತಮ್ಮ ಮೇರೆಗಳನ್ನು ಮೀರುವುದಿಲ್ಲ. ಇವೆಲ್ಲವೂ ನಿನ್ನ ಮಹಿಮೆಯೇ ಸರಿ.

೩೯. ಅಣಿಮಾದಿ ಮಹಾಸಿದ್ಧಿಗಳಿಂದೊಡಗೂಡಿದ ಅಸಾಧಾರಣವಾದ ವೈಭವವುಳ್ಳ ನಾನು ಇತರ ದೇವತೆಗಳಿಂದ ಸ್ತುತ್ಯನಾದ ನಿನ್ನನ್ನು ಹೇಗೆತಾನೆ ಉಪೇಕ್ಷೆಮಾಡಲಿ ?

೪೦. ಸುಖಕಾಲದಲ್ಲಿ ನಿನ್ನನ್ನು ಮರೆಯುತ್ತೇವೆ. ಸಂಕಟಗಳಲ್ಲಿ ಮಾತ್ರ ನಿನ್ನನ್ನು ಸ್ಮರಿಸುತ್ತೇವೆ. ಆದರೂ ನಿನಗೆ ಭಕ್ತರಲ್ಲಿ ರೋಷವೇ ಇಲ್ಲದೆ ಯಾವಾಗಲೂ ಅನುಕಂಪವೇ ಇರುವುದು.

ಯಥಾ ವಿಧಿತ್ಸೇರ್ಭಕ್ತಿಂ ತ್ವಂ ಯದಾ ಚ ಸ್ರಾವೃಣೋಷಿ ತಾಂ ।
ಮೋಹಬೋಧೌ ತದಾ ಪೂತಾಂ ಕಲ್ಪೇ ತೇ ಬಂಧಮೋಕ್ಷಯೋಃ ॥
ಇತಿ ಸ್ತುತಸ್ಸಾಂಜಲಿಬದ್ಧಪಾಣಿನಾ
ಪತಿಃ ಪಶೂನಾಮಥ ಚಕ್ರಪಾಣಿನಾ ।
ಕೃತಾಪಹಾಸೇ ಚ ಸರೋಜಸಂಭವೇ
ಮದೋದ್ಧತೇ ಪ್ರಾದುರಭೂದ್ದಯಾನಿಧಿಃ ॥ ೩೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ಶಂಕರಪ್ರಾದುರ್ಭಾವವರ್ಣನಂ" ನಾಮ ಚತುರ್ದಶೋಽಧ್ಯಾಯಃ

---

೩೧. ಯಾವಾಗ ನೀನು ಮಾನವರಿಗೆ ಭಕ್ತಿಯನ್ನು ಕೊಡುವೆಯೊ, ಮತ್ತು ಯಾವಾಗ ಮುಚ್ಚುವೆಯೊ, ಆ ಕಾಲಗಳಲ್ಲಿ ಅವರಿಗೆ ಬಂಧಮೋಕ್ಷಗಳಿಗೆ ಕಾರಣಗಳಾದ ಮೋಹ ಮತ್ತು ಜ್ಞಾನಗಳುಂಟಾಗುವುವು."

೩೨. ಈ ರೀತಿಯಾಗಿ ಚಕ್ರಪಾಣಿಯಾದ ಮಹಾವಿಷ್ಣುವು ಅಂಜಲಿಬಂಧವನ್ನು ಮಾಡಿಕೊಂಡು ಸ್ತೋತ್ರಮಾಡುತ್ತಿರಲು ಮದೋದ್ಧತನಾದ ಬ್ರಹ್ಮನು ಅಪಹಾಸ್ಯಮಾಡುತ್ತಿದ್ದನು. ಆ ಸಮಯದಲ್ಲಿಯೇ ಸಕಲ ಭೂತಗಳಿಗೆ ಒಡೆಯನೂ, ದಯಾನಿಧಿಯೂ ಆದ ಮಹಾದೇವನು ಅಲ್ಲಿ ಕಾಣಿಸಿಕೊಂಡನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯೆಯ ಉತ್ತರಾರ್ಧದಲ್ಲಿ "ಶಂಕರನು ಬ್ರಹ್ಮ ವಿಷ್ಣುಗಳಿಗೆ ಪ್ರತ್ಯಕ್ಷವಾದು"ದೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚದಶೋಽಧ್ಯಾಯಃ

### ಬ್ರಹ್ಮಕೃತ ಶಿವಸ್ತುತ್ಯುದ್ಯಮವರ್ಣನಂ

ನಂದಿಕೇಶ್ವರ ಉವಾಚ :—

ತೇಜಃಸ್ತಂಭಂ ವಿನಿರ್ಭಿದ್ಯ ಸಂಧ್ಯಾಭ್ರಮಿವ ಚಂದ್ರಮಾಃ ।
ಕೈಲಾಸಕೂಟಧವಳಂ ವೃಷೇಂದ್ರಮಧಿತಸ್ಥಿವಾನ್ ।
ಜಟಾಜೂಟವತಾ ಬಾಲಚಂದ್ರಚೂಡೇನ ಮೌಳಿನಾ ॥ ೧ ॥
ಕಪಾಲಮಾಲಿಕಾಂ ವೈದೀಂ ಸ್ರಜಂ ಚಾರಗ್ವಧೀಂ ದಧತ್ ।
ನಾಗಕುಂಡಲಿಭಿಃ ಫಾಲಫಲಕೋದ್ಭಾಸಿಲೋಚನೈಃ ॥ ೨ ॥
ಪಂಚಭಿರ್ವದನೈರ್ದೀಪ್ತ್ಯೈಃ ಕ್ಷ್ವೇಡಕಲ್ಮಾಷಕಂಧರೈಃ ।
ಶೂಲಂ ಕಪಾಲಂ ಡಮರುಂ ಸಾರಂಗಂ ಪರಶುಂ ಧನುಃ ॥ ೩ ॥
ಖಟ್ವಾಂಗಮುಮುಲಂ ಖಡ್ಗಂ ದೋರ್ಭಿರ್ನಾಗಂ ಚ ಧಾರಯನ್ ।
ಶ್ವಸಿತೋದ್ಧೂಳಿತಾಕಾರೋ ಗಜಚರ್ಮೋತ್ತರೀಯವಾನ್ ॥ ೪ ॥
ಸರ್ವಾಲಂಕಾರಸಂಪನ್ನಃ ಸರ್ವದೇವೈರಭಿಷ್ಟುತಃ ।
ಪರಿಧಾನೀ ಕೃತವ್ಯಾಘ್ರಚರ್ಮಾ ತಾಭ್ಯಾಮದರ್ಶಿ ಸಃ ॥ ೫ ॥
ರೂಪಂ ದೃಷ್ಟ್ವಾಸ ಆನಂದಂ ನನರ್ತ ನಳಿನೇಕ್ಷಣಃ ॥ ೬ ॥

---

### ಕನ್ನಡದ ಅನುವಾದ

#### ಬ್ರಹ್ಮನು ಶಿವನನ್ನು ಸ್ತುತಿಸಲು ಉದ್ಯುಕ್ತನಾದುದು

೧. ನಂದಿಕೇಶ್ವರನು ಹೇಳುತ್ತಾನೆ:—ಮಹೇಶ್ವರನು ಆ ತೇಜಸ್ತಂಭವನ್ನು ಭೇದಿಸಿಕೊಂಡು ಸಂಧ್ಯಾಕಾಲದ ಮೇಘವನ್ನು ಚದಿರಿಸಿ ಹೊರಬರುವ ಚಂದ್ರನಂತೆ ಕಾಣುತ್ತ ಕೈಲಾಸದ ಕೋಡುಗಲ್ಲಿನಂತೆ ಶುಭ್ರಶ್ವೇತವರ್ಣವಾದ ವೃಷಭವನ್ನು ಹತ್ತಿಕೊಂಡುಬಂದನು.

೨–೬. ಜಟಾಜೂಟದಿಂದಲೂ ಅಷ್ಟಮಿಾಚಂದ್ರನಿಂದೊಪ್ಪುವ ಮೌಳಿಯಿಂದಲೂ, ಬ್ರಹ್ಮಕಪಾಲಗಳ ಸರದಿಂದಲೂ, ಮಹಾಸರ್ಪಗಳ ಹಾರಗಳಿಂಧಲೂ, ನಾಗಗಳ ಕುಂಡಲಗಳಿಂದಲೂ, ಹಣೆಯಲ್ಲಿ ಪ್ರಕಾಶಿಸುತ್ತಿರುವ ತ್ರಿನೇತ್ರಗಳಿಂದಲೂ, ತೇಜಃಪುಂಜಗಳಾದ ಪಂಚವಕ್ತ್ರಗಳಿಂದಲೂ, ವಿಷದಿಂದೊಪ್ಪುವ ನೀಲಕಂಠದಿಂದಲೂ ರಂಜಿಸುತ್ತ, ಶೂಲ, ಕಪಾಲ, ಡಮರು, ಮೃಗ, ಪರಶು, ಧನುಸ್ಸು, ಗದೆ, ದಿವ್ಯವಾದ ಖಡ್ಗ, ಬಾಹುಗಳಲ್ಲಿ ಒಪ್ಪುತ್ತಿರುವ ಹಾವುಗಳು ಮುಂತಾದುವುಗಳನ್ನು ಧರಿಸಿ, ಭಸ್ಮದಿಂದ ಮೈಯೆಲ್ಲವೂ ತುಂಬಿರಲು, ಗಜಚರ್ಮವನ್ನೇ ಉತ್ತರೀಯವನ್ನಾಗಿ ಮಾಡಿ, ಸಕಲಾಭರಣಭೂಷಿತನಾಗಿ,

ನ ಕಿಂಚಿದಪಿ ಜಾನಾನೋ ಮುಮೋಹ ಚ ಸರೋಜಭೂಃ ॥ ೭ ॥
ದೃಶಾಭಿನಂದ್ಯ ಮಾಧವಂ ಪ್ರಸನ್ನಃ ಸ ಮಹೇಶ್ವರಃ ।
ಅಥೋದತಿಷ್ಠಿಪಚ್ಚ ತಂ ಸ ಹುಂಕ್ರಿಯಶ್ಚತುರ್ಮುಖಂ ॥ ೮ ॥
ಜಗಾದ ಚಾಧಿಕಾರಿತಾಮದಾದ್ಯುವಾಂ ಸಮುದ್ಧತೌ ।
ನ ಲಜ್ಜಿತವ್ಯಮತ್ರ ವಾಮಯಂ ಕ್ರಮೋಽಧಿಕಾರಿಣಾಂ ॥ ೯ ॥
ಪರೀಕ್ಷ್ಯ ವೈಭವಂ ಮಮ ಪ್ರಬೋಧವಾನಭೂದ್ಧರಿಃ ।
ಅಯಂ ನ ಜಾತು ಪದ್ಮಭೂಶ್ಛಲನ್ಮನೋ ದುರಾತ್ಮವಾನ್ ॥ ೧೦ ॥
ಅಶಾಸಿ ಪಂಚವಕ್ತ್ರತಾ ಯದೋಪಹಾಸಿತೋಽಹ್ಯಹಂ ।
ಪುನಃ ಸ್ವಪುತ್ರಿಕಾರತಿರ್ಮಯೈಷ ಶಿಕ್ಷಿತೋಽಭವತ್ ॥ ೧೧ ॥
ತೃತೀಯ ಏಷ ಮಂತುರಪ್ಯಹೋ ಕಥಂ ನು ಸಹ್ಯತೇ ।
ತದಸ್ಯ ತು ಪ್ರತಿಷ್ಠಯಾ ಕ್ವಚಿನ್ನ ಭೂಯತಾಂ ವಿಧೇಃ ॥ ೧೨ ॥
ಅಯಂ ಚ ಕೇತಕಛದೋಃ ಯದಾಪ ಕೂಟಸಾಕ್ಷಿತಾಂ ।
ಅತಃ ಪರಂ ನ ಜಾತು ತನ್ಮನ್ಯೈತು ಮೂರ್ಧ್ನಿ ಸಂಸ್ಥಿತಿಂ ॥ ೧೩ ॥

---

ಸಮಸ್ತ ದೇವತೆಗಳಿಂದಲೂ ಸ್ತುತ್ಯನಾಗಿ, ವ್ಯಾಘ್ರಚರ್ಮವನ್ನು ವಸ್ತ್ರವನ್ನಾಗಿ ಮಾಡಿಕೊಂಡು ಮಹಾದೇವನು ಅವರಿಬ್ಬರಿಗೂ ಕಾಣಿಸಿಕೊಂಡನು. ಆತನನ್ನು ನೋಡಿ ಮಹಾವಿಷ್ಣುವು ಮಹದಾನಂದದಿಂದ ನರ್ತನಮಾಡಿದನು.

೭–೮. ಬ್ರಹ್ಮನು ಏನನ್ನೂ ತಿಳಿಯಲಾರದೆ ಬುದ್ಧಿಭ್ರಮಣೆಯನ್ನು ಹೊಂದಿದನು. ಮಹೇಶ್ವರನು ನಾರಾಯಣನನ್ನು ದೃಷ್ಟಿಯಿಂದಲೇ ಅಭಿನಂದಿಸಿ ಪ್ರಸನ್ನನಾಗಿ ಆತನನ್ನು ಕೈಗಳಿಂದೆತ್ತಿ ಹುಂಕಾರದಿಂದಲೇ ಬ್ರಹ್ಮನನ್ನು ನೋಡುತ್ತ ಹೇಳತೊಡಗಿದನು :—

೯. "ನೀವಿಬ್ಬರೂ ಅಧಿಕಾರದ ಮದದಿಂದ ಉದ್ಧತರಾಗಿರುವಿರಿ. ನೀವೇನೂ ನಾಚಿಕೆಪಡಬೇಕಾಗಿಲ್ಲ. ಅಧಿಕಾರಿಗಳ ಕ್ರಮವೇ ಹೀಗಿರುವುದು.

೧೦–೧೧. ನನ್ನ ವೈಭವವನ್ನು ಕಂಡು ನಾರಾಯಣನು ಜ್ಞಾನವನ್ನು ಹೊಂದಿದನು. ಆದರೆ ದುರಾತ್ಮನಾದ ಈ ಬ್ರಹ್ಮನು ಮಾತ್ರ ಛಲದಿಂದ ಕೂಡಿದ ಮನಸ್ಸುಳ್ಳವನಾಗಿ ನನ್ನನ್ನು ತಿಳಿಯಲಿಲ್ಲ. ನನ್ನನ್ನು ಹಿಂದೆ ಅಪಹಾಸ್ಯಮಾಡಿದಾಗಲೇ ಇವನ ಪಂಚವಕ್ತ್ರತೆಯನ್ನು ನಾಶನಮಾಡಿದೆನು. ತನ್ನ ಮಗಳಲ್ಲಿಯೇ ಮೋಹಗೊಂಡ ಇವನಿಗೆ ಮತ್ತೆ ಶಾಸನವೂ ಮಾಡಲ್ಪಟ್ಟಿತು.

೧೨–೧೩. ಈ ಮೂರನೆಯ ಅಪರಾಧವನ್ನೂ ಸಹ ಹೇಗೆ ಸಹನಮಾಡಲಿ? ಆದುದರಿಂದ ಬ್ರಹ್ಮನಿಗೆ ಪ್ರಪಂಚದಲ್ಲಿ ಪ್ರತಿಷ್ಠೆಯೂ, ಪೂಜಾದಿಗಳೂ ನಡೆಯದೆ ಹೋಗಲಿ. ಸುಳ್ಳುಸಾಕ್ಷ್ಯವನ್ನು ಹೇಳಿದ ಈ ಕೇತಕೀಪತ್ರವೂ ಕೂಡ ಈ ಕಾರಣದಿಂದಲೇ ಇನ್ನುಮೇಲೆ ನನಗೆ ಅಲಂಕಾರವಾಗಿ ನನ್ನ ತಲೆಯಲ್ಲಿ ನಿಲ್ಲದಿರಲಿ."

ಶಪ್ತ್ವೈವಮೇತೌ ಗಿರಿಶಃ ಪ್ರೀತ್ಯಾ ವಿಷ್ಣುಮಭಾಷತ ॥ ೧೪ ॥

ಮಹೇಶ್ವರ ಉವಾಚ :—

ವತ್ಸ ಮಾ ಭೈಃ ಪ್ರಸನ್ನೋಽಸ್ಮಿ ಭವತೇ ಭಕ್ತಿಶಾಲಿನೇ ।
ಮನುತ್ವಮಂಗಾನ್ಮೇ ಜಾತಸ್ಸಾತ್ವಿಕೋಽಸಿ ವಿಶೇಷತಃ
ಮಾಹೇಶ್ವರಾಗ್ರಗಣ್ಯೋಽಸಿ ಜಗತ್ಯಾಂ ಹಿ ಯಥಾ ಪುರಾ ॥ ೧೫ ॥
ನ ತವಾತಃ ಪರಂ ಜಾತು ಭಕ್ತಿಹಾನಿರ್ಭವೇನ್ಮಯಿ ।
ಪ್ರತಿಕ್ಷಣಂ ವರ್ಧಮಾನಾ ಕಲ್ಪತೇ ಚ ವಿಮುಕ್ತಯೇ ॥ ೧೬ ॥

ಇತ್ಯನುಗ್ರಹಕೃತಂ ತ್ರಿಲೋಚನಂ
ಭಕ್ತಿಭಾಜಿ ನಿರಹಂಕ್ರಿಯೇ ಹರೌ ।
ಭೀತಿಮಾನವನತಃ ಸ್ವಯಂ ವಿಧಿಃ
ಸ್ತೋತುಮಾರಭತ ಕ್ಲಪ್ತ ವಂದನಃ ॥ ೧೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ಬ್ರಹ್ಮಕೃತ ಶಿವಸ್ತುತ್ಯುದ್ಯಮವರ್ಣನಂ" ನಾಮ ಪಂಚದಶೋಽಧ್ಯಾಯಃ

---

೧೪. ಈ ರೀತಿಯಾಗಿ ಆ ಮಹಾದೇವನು ಅವರಿಬ್ಬರನ್ನೂ ಶಪಿಸಿ ವಿಷ್ಣು ವನ್ನು ಕುರಿತು ಹೇಳಿದನು :—

೧೫. ಮಗನೆ! ಭಯಪಡಬೇಡ. ನಿನ್ನಲ್ಲಿ ಸುಪ್ರೀತನಾಗಿರುವೆನು. ನೀನೇ ಭಕ್ತಿಭರಿತನಾಗಿರುವೆ. ನನ್ನ ಶರೀರದಿಂದಲೇ ಹುಟ್ಟಿದ ನೀನು ವಿಶೇಷ ವಾಗಿ ಸಾತ್ವಿಕಗುಣಭರಿತನಾಗಿರುವೆ. ಮೊದಲಿನಂತೆಯೇ ಶಿವಭಕ್ತರಲ್ಲಿ ನೀನು ಅತ್ಯುತ್ತಮನೆನಿಸಿಕೊಂಡಿರುವೆ.

೧೬. ಇನ್ನುಮೇಲೆ ನಿನಗೆ ನನ್ನಲ್ಲಿ ಯಾವಾಗಲೂ ಭಕ್ತಿಯು ಕ್ಷೀಣ ವಾಗುವುದೇ ಇಲ್ಲ. ಅದು ಕ್ಷಣಕ್ಷಣಕ್ಕೂ ವೃದ್ಧಿಯನ್ನೈದುತ್ತ ಅಂತ್ಯದಲ್ಲಿ ನಿನ್ನ ಮುಕ್ತಿಗೆ ಸಾಧನವಾಗುವುದು."

೧೭. ಹೀಗೆ ಭಕ್ತಿಯುಕ್ತನೂ ಅಹಂಕಾರರಹಿತನೂ ಆದ ನಾರಾಯಣನಲ್ಲಿ ಅನುಗ್ರಹವನ್ನು ಮಾಡಿದ ತ್ರಿಲೋಚನನನ್ನು ಕಂಡು ಬ್ರಹ್ಮನು ಭಯಗೊಂಡವ ನಾಗಿ ನಮ್ರತೆಯಿಂದ ನಮಸ್ಕಾರವನ್ನು ಮಾಡಿ ತಾನೂ ಕೂಡ ಸ್ತೋತ್ರ ಮಾಡತೊಡಗಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ಬ್ರಹ್ಮನು ಶಿವನನ್ನು ಸ್ತುತಿಸಲು ಉದ್ಯುಕ್ತನಾದುದು" ಎಂಬ ಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷೋಡಶೋಽಧ್ಯಾಯಃ

### ಬ್ರಹ್ಮವಿಷ್ಣುಕೃತಾರುಣಾಚಲೇಶಮಂದಿರವರ್ಣನಂ

ಬ್ರಹ್ಮೋವಾಚ:—

ದೇವ ದೇವ ತವೈಶ್ವರ್ಯಂ ಕೇನ ಶಕ್ಯೇತ ವೇದಿತುಂ ।
ವಿನಾ ಭಾಗ್ಯೈಕಸುಲಭಂ ಭವದೀಯಮನುಗ್ರಹಂ ॥ ೧ ॥
ಅಕರ್ತೃಕಾಣಿ ವಾಕ್ಯಾನಿ ಐಶ್ವರ್ಯಂ ತೇ ನಿರತ್ಯಯಂ ।
ನ ಸ್ತೋತುಂ ಶಕ್ಯತೇ ಕಿಂ ತು ನಮಸ್ಕುರ್ವಂತಿ ದೂರತಃ ॥ ೨ ॥
ಕೋ ವಿಷ್ಣುಃ ಕೋಽಹಮೇತೇ ವಾ ದಿಕ್ಪಾಲಾ ವಾಸವಾದಯಃ ।
ತ್ವಮೇವ ದೇವ ಕರ್ತಾಸಿ ಜಗತ್ಸೃಜನರಕ್ಷಯೋಃ ॥ ೩ ॥
ಪತಿಸ್ತ್ವಂ ಪಾರ್ವತೀನಾಥ ಪಶವೋ ವಯಮಪ್ಯಮಾ ।
ಬದ್ಧುಂ ಪಾಶೇನ ಮೋಕ್ತುಂ ವಾ ತ್ವಮೇವಾಸ್ಮಾನ್ಪ್ರಗಲ್ಭಸೇ ॥ ೪ ॥
ಷಡ್ವಿಂಶತ್ತತ್ವರೂಪಸ್ತ್ವಮಭಿತಶ್ಚಾಭಿವರ್ತಸೇ ।
ಕೋವಿದಃ ಕೋ ವಿನಿರ್ಣೇತುಂ ತವ ಯಾಥಾತ್ಮ್ಯಮೀಶ್ವರಃ ॥ ೫ ॥

---

### ಕನ್ನಡದ ಅನುವಾದ

#### ಬ್ರಹ್ಮ ವಿಷ್ಣುಗಳು ಅರುಣಾಚಲೇಶ್ವರನನ್ನು ವರ್ಣಿಸಿದುದು

೧. ಬ್ರಹ್ಮನು ಹೇಳುತ್ತಾನೆ:—"ಎಲೈ ಮಹಾದೇವನೆ! ಕೇವಲ ಪುಣ್ಯ ದಿಂದಲೇ ಲಭ್ಯವಾಗುವ ನಿನ್ನ ಅನುಗ್ರಹವಿಲ್ಲದೆ ನಿನ್ನ ಮಾಹಾತ್ಮ್ಯವನ್ನು ತಿಳಿಯಲು ಯಾರಿಗೆತಾನೆ ಸಾಧ್ಯವು?

೨. ಅಪೌರುಷೇಯಗಳಾದ ವೇದಗಳು ನಿನ್ನ ಅನಂತ ಐಶ್ವರ್ಯಗಳನ್ನು ಸ್ತೋತ್ರಮಾಡಲಾರದೆ ದೂರದಿಂದಲೆ ನಮಸ್ಕಾರ ಮಾಡುತ್ತಿರುವುವು.

೩. ವಿಷ್ಣುವು ಯಾರು? ನಾನು ಯಾರು? ಇಂದ್ರಾದಿ ಈ ಅಷ್ಟ ದಿಕ್ಪಾಲಕರುತಾನೆ ಯಾರು? ನೀನೇ ಪ್ರಪಂಚದ ಸೃಷ್ಟಿ ಸ್ಥಿತಿಗಳನ್ನು ಮಾಡು ವವನು.

೪. ಎಲೈ ಪಾರ್ವತೀರಮಣನೆ! ನೀನೇ ಪಶುಪತಿಯು; ನಾವೆಲ್ಲರೂ ಪಶುಗಳು; ನಮ್ಮನ್ನು ಬಂಧಿಸುವುದಕ್ಕೂ ಬಿಡಿಸುವುದಕ್ಕೂ ನೀನೊಬ್ಬನೇ ಶಕ್ತನಾಗಿರುವೆ.

೫. ನೀನೆ ಹದಿನಾರು ತತ್ವಗಳ ರೂಪನು; ಎಲ್ಲದರಲ್ಲಿಯೂ ಸನ್ನಿಹಿತ ನಾಗಿರುವೆ; ನಿನ್ನ ಯಾಥಾತ್ಮ್ಯವನ್ನು ತಿಳಿಯಲು ಯಾವನುತಾನೆ ಸಮರ್ಥನು?

ಕಿರಾತಃ ಕಿಲ ದೇವಸ್ತ್ವಂ ಸಾರಮೇಯೈಃ ಕಿಲಾಗಮೈಃ ।
ಷಡ್ವರ್ಗಹಿಂಸ್ರಾನ್ಸಂಹರ್ತುಂ ಕರೋಷ್ಯಾಖೇಟಕೌತುಕಂ ॥ ೬ ॥
ದೇವ ದಕ್ಷಾಧ್ವರೇ ಪೂರ್ವಂ ವೀರಭದ್ರಸ್ತ್ವದಾಜ್ಞಯಾ ।
ಕಾಂ ಕಾಂ ಶಿಕ್ಷಾಮಕಾರ್ಷೀನ್ನ ಇತಿ ಕಾಪಿ ವಿಡಂಬನಾ ॥ ೭ ॥
ತವ ಕಾಲಾಗ್ನಿರೂಪಸ್ಯ ಸರ್ವಬ್ರಹ್ಮಾಂಡದಾಹಿನಃ ।
ಪೋಷಣಾತ್ಪುಷ್ಪಚಾಪಸ್ಯ ಪ್ರಾಯೋ ಜಿಹ್ರೇತಿ ಶೇಮುಷೀ ॥ ೮ ॥
ಕೃತಾಪರಾಧಃ ಶೂಲೇನ ಸ್ವಯಂ ಶೀರ್ಣೋ ಜಲಂಧರಃ ।
ಅಂತಕೋಽಂಧಕದೈತ್ಯಶ್ಚ ಪ್ರತಿವೀರಶ್ಚ ಕೋಽಸ್ತಿ ತೇ ॥ ೯ ॥
ಅಧಾರಯಿಷ್ಯತ್ಕಂಠೇನ ಕಾಲಕೂಟಂ ನ ಚೇದ್ಭವಾನ್ ।
ಕಥಂ ಚ ಧಾರಯಿಷ್ಯಾಮೋ ವಯಂ ಸರ್ವೇಽಪಿ ಜೀವಿತಂ ॥ ೧೦ ॥
ದೇವದಾರು ವನೇ ಪೂರ್ವಂ ಮುನೀನ್ಕೇವಲಕರ್ಮಠಾನ್
ಪ್ರಕ್ಷೋಭ್ಯ ಧೂರ್ತವೇಷಸ್ತ್ವಂ ದಯಯಾನ್ವಗ್ರಹೀಸ್ತಥಾ ॥ ೧೧ ॥

---

೬. ನೀನು ಕಿರಾತರೂಪನಾಗಿ ನಾಲ್ಕು ವೇದಗಳನ್ನೂ ನಾಯಿಗಳನ್ನಾಗಿ ಮಾಡಿಕೊಂಡು ಅರಿಷಡ್ವರ್ಗಗಳನ್ನು ಬೇಟೆಯಾಡಲು ಮೃಗಯಾವಿನೋದವನ್ನು ಮಾಡುತ್ತಿರುವೆ.

೭. ದಕ್ಷಯಜ್ಞದಲ್ಲಿ ನಿನ್ನ ಆಜ್ಞಾನುಸಾರವಾಗಿ ವೀರಭದ್ರನು ನಮಗೆ ಯಾವ ಯಾವ ಶಿಕ್ಷೆಗಳನ್ನು ವಿಧಿಸಿದನೆಂಬುದೂ ನಿನ್ನ ವಿಡಂಬನವೇ ಆಗಿರುವುದು.

೮. ಪ್ರಳಯಾಗ್ನಿರೂಪನಾಗಿ ಬ್ರಹ್ಮಾಂಡವನ್ನೇ ಸುಡುವ ಶಕ್ತಿಯುಳ್ಳ ನೀನು ಮನ್ಮಥನನ್ನು ಕಾಪಾಡಿದುದನ್ನು ನೋಡಿ ನಮ್ಮ ಬುದ್ಧಿಯು ಲಜ್ಜಿತವಾಗುತ್ತದೆ.

೯. ನಿನಗೆ ಅಪರಾಧವನ್ನು ಮಾಡಿದ ಜಲಂಧರ, ಯಮ, ಅಂಧಕಾಸುರರು ನಿನ್ನ ಶೂಲಾಯುಧದಿಂದ ನಿರ್ಭಿನ್ನರಾದರು. ನಿನ್ನೆದುರಿಗೆ ನಿಲ್ಲುವ ವೀರನಾದರೂ ಯಾರು ?

೧೦. ಅಮೃತಮಂಥನ ಕಾಲದಲ್ಲಿ ನೀನು ಕಾಲಕೂಟ ವಿಷವನ್ನು ಕಂಠದಲ್ಲಿ ಧರಿಸದೆ ಇದ್ದಿದ್ದರೆ, ನಾವೆಲ್ಲರೂ ಹೇಗೆ ಪ್ರಾಣಗಳನ್ನು ಉಳಿಸಿಕೊಳ್ಳಬಹುದಾಗಿತ್ತು ?

೧೧. ಪೂರ್ವದಲ್ಲಿ ದೇವದಾರು ವನದಲ್ಲಿ ಕೇವಲ ಕರ್ಮಗಳಲ್ಲಿಯೇ ನಿರತರಾಗಿದ್ದ ಮುನಿಗಳನ್ನು ನೀನು ಕ್ಷೋಭಗೊಳಿಸಿ ಧೂರ್ತವೇಷದಿಂದ ಮತ್ತೆ ಅವರನ್ನು ಅನುಗ್ರಹಿಸಲಿಲ್ಲವೆ?

ಅಂಘ್ರಿಣಾ ಕ್ರಾಂತವಾನ್ನೋ ಚೇದತ್ಯುಗ್ರಾಂ ತ್ವಮುಪಸ್ಮೃತಿಂ ।
ತಯಾ ಕ್ರಾಂತಮಿದಂ ಕೃತ್ಸ್ನಮಂಧಕಾರಾಯತೇ ಜಗತ್ ॥ ೧೨ ॥
ಅರ್ಧನಾರೀಶ್ವರಂ ರೂಪಂ ತ್ವಯಾ ಚೇನ್ನಪ್ರಕಾಶಿತಂ ।
ಪ್ರಭವಾಮಿ ಕಥಂ ಸ್ರಷ್ಟುಂ ಜಗದೇತಚ್ಚರಾಚರಂ ॥ ೧೩ ॥
ಭವತಾ ಸ್ತಂಭಿತಃ ಶಂಭೋ ಸಂರಂಭಾಜ್ಜಂಭಜಿದ್ಭುಜಃ ।
ಕಿಯಂತಂ ಹಂತ ಕಾಲಂ ತೇ ಜಯಸ್ತಂಭ ಇವ ಸ್ಥಿತಃ ॥ ೧೪ ॥
ಭಿಕ್ಷೋಃ ಕಪಾಲಮಾಪೂರ್ಯ ರುಧಿರೇಣಾತ್ಮನೋ ಹರಿಃ ।
ಶೂಲೇನೋತ್ಕ್ಷಿಪ್ಯ ಮಾಮುಹೇಹ್ಯೇತತ್ತ್ವಮವಧಾರಯ ॥ ೧೫ ॥
ನ ಚೇದಶಿಕ್ಷಯಃ ಸರ್ವಶಸ್ತ್ರಾಣ್ಯನುಕಂಪಯಾ ।
ನಿರ್ವಾಪಯೇತ್ಕಥಂ ವೈರಂ ಕೃದ್ಧೋಽಪಿ ಜಮದಗ್ನಿಭೂಃ ॥ ೧೬ ॥
ನೃಹರಿಂ ಶರಭಾಕಾರಃ ಸಮಹಾರ್ಷೀನ್ನಚೇದ್ಭವಾನ್ ।
ಸ ಏವ ಸಂಹರೇದ್ವಿಶ್ವಂ ಹಿರಣ್ಯಕಶಿಪೋರಪಿ ॥ ೧೭ ॥

---

೧೨. ಅತ್ಯುಗ್ರವಾದ ಮಾಯೆಯನ್ನು ನೀನು ಪಾದಗಳಿಂದ ಮೆಟ್ಟಿ ತುಳಿಯದೆ ಇದ್ದಿದ್ದರೆ, ಬ್ರಹ್ಮಾಂಡವೆಲ್ಲವೂ ಕೇವಲ ಅಂಧಕಾರಮಯವಾಗಿರುತ್ತಿದ್ದಿತು.

೧೩. ನೀನು ನಿನ್ನ ಅರ್ಧನಾರೀಶ್ವರ ರೂಪವನ್ನು ನನಗೆ ತೋರಿಸದಿದ್ದರೆ ಚರಾಚರಾತ್ಮಕವಾದ ಈ ಸಕಲ ಜಗತ್ತನ್ನೂ ಸೃಷ್ಟಿಸಲು ನಾನು ಶಕ್ತನೇ ಆಗುತ್ತಿರಲಿಲ್ಲ.

೧೪. ಸಡಗರದಿಂದ ಎದುರಿಸಲು ಬಂದ ಇಂದ್ರನ ಭುಜವನ್ನೇ ನೀನು ಸ್ತಂಭಿತವನ್ನಾಗಿ ಮಾಡಲು ಅದು ಬಹುಕಾಲ ಅಂತೆಯೇ ನಿನ್ನ ವಿಜಯಸ್ತಂಭದಂತೆ ನಿಂತಿರಲಿಲ್ಲವೆ?

೧೫. ಹಿಂದೆ ಭಿಕ್ಷುವಾಗಿ ನೀನು ಹೊರಡಲು ನಾರಾಯಣನು ತ್ರಿಶೂಲದಿಂದ ತನ್ನ ಶರೀರವನ್ನೇ ಬಗೆದು ಚಿಮ್ಮಿದ ರಕ್ತದಿಂದ ನಿನ್ನ ಭಿಕ್ಷಾಪಾತ್ರೆಯಾದ ಕಪಾಲವನ್ನು ತುಂಬಿ ಮೋಹಗೊಂಡನು.

೧೬. ನೀನು ಕೇವಲ ಅನುಗ್ರಹದಿಂದ ಶಸ್ತ್ರಾಸ್ತ್ರಗಳನ್ನು ಚೆನ್ನಾಗಿ ಕಲಿಸದೆ ಇದ್ದಿದ್ದರೆ ಪರಶುರಾಮನು ಅತ್ಯಂತ ಕ್ರೋಧಯುಕ್ತನಾದರೂ ಏನುತಾನೆ ಮಾಡಲು ಸಮರ್ಥನಾಗುತ್ತಿದ್ದನು?

೧೭. ಹಿರಣ್ಯಕಶಿಪುವಿನ ಸಂಹಾರಕ್ಕೆ ಕಾರಣನಾದ ನಾರಾಯಣನ ನರಹರಿ ರೂಪವನ್ನು ನೀನು ಶರಭರೂಪದಿಂದ ನಿಗ್ರಹಿಸದಿದ್ದರೆ, ಆತನೇ ಸಕಲ ಪ್ರಪಂಚವನ್ನೂ ಸಂಹಾರಮಾಡುತ್ತಿದ್ದನು.

ತ್ವಮಾಚಕೃಕ್ಷಿಃ ಕಲ್ಪಾಬ್ಧೌ ಕೈವರ್ತೋ ಮತ್ಸ್ಯಕಚ್ಛಪೌ ।
ಹರಿಂ ಬದ್ಧ್ವಾಹಿರಾಟ್ಪೋತ್ರೈರ್ನೃಸಿಂಹಮಥ ಸೂಕರಂ ॥ ೧೮ ॥
ಏಕೋನೇ ಪದ್ಮಸಾಹಸ್ರೇ ಸ್ವನೇತ್ರೇಣ ಕೃತಾರ್ಚನಂ ।
ಶೂಲಿನ್ಸುದರ್ಶನಂ ದತ್ತ್ವಾ ದೈತ್ಯದ್ವಿಷಮತೂತುಷಃ ॥ ೧೯ ॥

ನಂದಿಕೇಶ್ವರ ಉವಾಚ :—

ಸ್ತುತ್ಯೈವಮಸ್ಯ ವಿಷ್ಣೋಶ್ಚ ಪ್ರಾರ್ಥನೇನ ಪ್ರಸೇದಿವಾನ್ ।
ಧೂರ್ಜಟಿಃ ಸೃಷ್ಟಿಕರ್ತೃತ್ವಂ ಪುನರಸ್ಯಾಭ್ಯಮನ್ಯತ ॥ ೨೦ ॥
ಸಮಜ್ಯಾಸು ದ್ವಿಜಾನಾಂ ಚ ಪೂಜನಂ ಚಾನುಶಿಷ್ಟವಾನ್ ।
ಉಭಾವಪ್ಯಬ್ರವೀದೇತೌ ವಾತ್ಸಲ್ಯಾಚ್ಚಂದ್ರಶೇಖರಃ ॥ ೨೧ ॥

ಶಿವ ಉವಾಚ :—

ವತ್ಸೌ ಯುವಾಂ ನ ಜ್ಞಾತ್ವೈವಂ ಭೂಯೋ ಭವತಮುದ್ಧತೌ ।
ಗುರುಂ ಸ್ಮರಂತೌ ಮಾಮೇವ ಜಾಗ್ರತಂ ಸೃಷ್ಟಿರಕ್ಷಯೋಃ ॥ ೨೨ ॥
ಇಹ ಪ್ರದೇಶೇ ಯುವಯೋರ್ಯನ್ಮಯಾಽನುಗ್ರಹಃ ಕೃತಃ ।
ಪುಣ್ಯಕ್ಷೇತ್ರಮಿದಂ ಪುಂಸಾಂ ತತೋ ಮೋಕ್ಷಾಯ ಕಲ್ಪತಾಂ ॥ ೨೩ ॥

---

೧೮. ಪ್ರಳಯ ಸಮುದ್ರದಲ್ಲಿ ನೀನು ಬೆಸ್ತರವನಾಗಿ ಆದಿಶೇಷನೇ ಮೊದಲಾದ ಸರ್ಪಗಳಿಂದ ಬಲೆಯನ್ನು ಮಾಡಿ ಮಹಾವಿಷ್ಣುವಿನ ಮತ್ಸ್ಯ, ಕೂರ್ಮ, ವರಾಹ ಮತ್ತು ನೃಸಿಂಹ ರೂಪಗಳನ್ನು ಆಕರ್ಷಿಸಿದೆ.

೧೯. ವಿಷ್ಣುವು ನಿನ್ನನ್ನು ಸಹಸ್ರ ಕಮಲಗಳಿಂದ ಪೂಜಿಸಲೆಳಸಿ ಒಂದೇ ಕಮಲವು ಕಡಮೆಯಾಗಲು ತನ್ನ ನೇತ್ರವನ್ನೇ ಕೊನೆಯದಾಗಿ ಅರ್ಪಿಸಲು ನೀನು ಆತನಿಗೆ ಸುದರ್ಶನ ಚಕ್ರವನ್ನು ಕೊಟ್ಟು ಸಂತೋಷಪಡಿಸಿದೆ.''

೨೦. ನಂದಿಕೇಶ್ವರನು ಹೇಳುತ್ತಾನೆ:—ಈ ರೀತಿಯಾಗಿ ಬ್ರಹ್ಮವಿಷ್ಣುಗಳ ಸ್ತೋತ್ರಗಳನ್ನೂ ಪ್ರಾರ್ಥನೆಗಳನ್ನೂ ಕೇಳಿ ಪ್ರಸನ್ನನಾಗಿ ಪರಮೇಶ್ವರನು ಮತ್ತೆ ಬ್ರಹ್ಮನಿಗೆ ಸೃಷ್ಟಿಕರ್ತೃತ್ವವನ್ನು ದಯೆಗೈದನು.

೨೧. ಯಜ್ಞಶಾಲೆಗಳಲ್ಲಿ ದ್ವಿಜರಿಂದ ಪೂಜೆಯನ್ನು ಕೈಕೊಳ್ಳಬೇಕೆಂದು ಅನುಶಾಸನವನ್ನುಮಾಡಿ ಆ ಚಂದ್ರಶೇಖರನು ವಾತ್ಸಲ್ಯದಿಂದ ಮತ್ತೆ ಬ್ರಹ್ಮ ವಿಷ್ಣುಗಳಿಬ್ಬರನ್ನು ಕುರಿತು ಹೇಳತೊಡಗಿದನು :—

೨೨–೨೩. ''ನೀವಿಬ್ಬರೂ ಹುಡುಗರಾಗಿ ಇನ್ನೂ ನನ್ನನ್ನು ತಿಳಿಯದೆ ಅತ್ಯಂತ ಉದ್ಧತರಾಗಿರುವಿರಿ. ಈ ಔದ್ಧತ್ಯವನ್ನಿನ್ನು ತೊರೆಯಿರಿ. ಇನ್ನುಮೇಲೆ ಗುರುವಾದ ನನ್ನನ್ನೇ ಸ್ಮರಣೆಮಾಡುತ್ತ ಪ್ರಪಂಚದ ಸೃಷ್ಟಿ ರಕ್ಷಣೆಗಳಲ್ಲಿ ಜಾಗ್ರತರಾಗಿರಿ. ನಿಮಗೆ ನಾನು ಅನುಗ್ರಹಮಾಡಿದಂತಹ ಈ ಪ್ರದೇಶವು ಜನರಿಗೆ ಅತ್ಯಂತ ಪುಣ್ಯಕ್ಷೇತ್ರವಾಗಿ ಮೋಕ್ಷದಾಯಕವೆನಿಸುವುದು.

ಯೋಜನತ್ರಯಮಾತ್ರೇಽಸ್ಮಿನ್ಕ್ಷೇತ್ರೇ ನಿವಸತಾಂ ನೃಣಾಂ ।
ಅಬುದ್ಧಿಪೂರ್ವಿಕಾಬುದ್ಧಿರಪವರ್ಗಸ್ಯ ಜಾಯತಾಂ ॥ ೨೪ ॥
ಯದ್ವಾ ತಿರಶ್ಚಾಮಪ್ಯತ್ರ ಸ್ಥಾವರಾಣಾಂ ಚ ದೇಹಿನಾಂ ।
ಅಬುದ್ಧಿಪೂರ್ವಿಕಾ ಬುದ್ಧಿರಪವರ್ಗಸ್ಯ ಜಾಯತಾಂ ॥ ೨೫ ॥
ನೃಣಾಂ ಚ ದರ್ಶನಾದ್ದೂರೇ ಕೈವಲ್ಯಂ ಸ್ಮರಣೇನ ವಾ ।
ಅಸ್ತು ವೇದಾಂತವಿಜ್ಞಾನಂ ನ ಸಾಧ್ಯಂ ನಿಷ್ಪ್ರಯಾಸತಃ ॥ ೨೬ ॥
ಶುಭಾಯ ತೈಜಸೀಮೂರ್ತಿಃ ಸ್ಥಾವರಾ ಮಮ ಶಾಶ್ವತೀ ।
ಅರುಣಾದ್ರಿರಿತಿ ಖ್ಯಾತಾ ನಿತ್ಯಮೇವಾತ್ರ ವರ್ತತಾಂ ॥ ೨೭ ॥
ಯುಗಾತ್ಯಯೇಽಪಿ ನೈನಂ ತು ಮಜ್ಜಯೇಯುರ್ಮಹಾಬ್ಧಯಃ ।
ನ ಚಾಲಯೇಯುರ್ಮರುತೋ ನ ದಹೇಯುಶ್ಚ ವಹ್ನಯಃ ॥ ೨೮ ॥
ಜ್ಯೋತಿರ್ಮಯಮಿದಂ ಲಿಂಗಂ ಜ್ಯೋತಿಷ್ವಪಿ ನ ಜಾತುಚಿತ್ ।
ಕ್ರಮಂತಾಂ ನಿರ್ಗಮಾ ಗತ್ವಾ ಖೇಚರಾಣಿ ಸಮಂತತಃ ॥ ೨೯ ॥
ಯಸ್ಯಾನುಗ್ರಹಮಿಚ್ಛಾಮಿ ಜಂತೋಸ್ತಸ್ಯಾತ್ರ ಸಂಭವಃ ।
ದೇಹಾಂತೇ ಕಲ್ಪತಾಂ ಮುಕ್ತ್ಯೈ ವಿನೌಪನಿಷದೀರ್ಗಿರಃ ॥ ೩೦ ॥

---

೨೪. ಮೂರು ಯೋಜನಗಳ ವಿಸ್ತಾರವುಳ್ಳ ಈ ಪ್ರದೇಶದಲ್ಲಿ ವಾಸ ಮಾಡುವ ಜನರಿಗೆ ನನ್ನ ಅನುಜ್ಞೆಯಿಂದ ದೀಕ್ಷಾದಿ ವ್ರತಗಳಿಲ್ಲದೆಯೇ ನನ್ನ ಸಾಯುಜ್ಯರೂಪವಾದ ಮೋಕ್ಷವುಂಟಾಗಲಿ.

೨೫. ಅಲ್ಲದೆ ಈ ಕ್ಷೇತ್ರದಲ್ಲಿರುವ ತಿರ್ಯಗ್ಜಂತುಗಳಿಗೂ, ಸ್ಥಾವರ ಪ್ರಾಣಿಗಳಿಗೂ ಸಹ ಬುದ್ಧಿಪೂರ್ವಕವಾದ ಪ್ರಯತ್ನವಿಲ್ಲದೆಯೇ ಮೋಕ್ಷಾಭಿಲಾಷೆ ಯುಂಟಾಗಲಿ.

೨೬. ಮಾನವರಿಗೆ ಈ ಕ್ಷೇತ್ರವು ದೂರದರ್ಶನದಿಂದಲೇ ಕೈವಲ್ಯವೂ, ಸ್ಮರಣದಿಂದಲೇ ಪ್ರಯಾಸಸಾಧ್ಯವಾದ ವೇದಾಂತ ವಿಜ್ಞಾನವೂ ಉಂಟಾಗಲಿ.

೨೭. ಸಕಲ ಲೋಕಗಳ ಉದ್ಧಾರಕ್ಕಾಗಿ ನನ್ನ ಈ ತೈಜಸರೂಪವು ಶಾಶ್ವತ ವಾದ ಪರ್ವತರೂಪವಾಗಿ ನಿಂತು ಅರುಣಾಚಲವೆಂಬ ಹೆಸರಿನಿಂದ ಕೀರ್ತಿಯನ್ನು ಪಡೆದು ರಂಜಿಸುತ್ತಿರಲಿ.

೨೮. ಪ್ರಳಯಕಾಲದಲ್ಲಿಯೂ ಈ ಪರ್ವತವನ್ನು ಸಮುದ್ರಗಳು ಮುಳುಗಿ ಸುವುದಿಲ್ಲ. ಚಂಡಮಾರುತಗಳು ಕದಲಿಸುವುದಿಲ್ಲ. ಅಗ್ನಿಗಳು ಸುಡುವುದಿಲ್ಲ.

೨೯. ಬ್ರಹ್ಮಾಂಡದಲ್ಲಿರುವ ಜ್ಯೋತಿಗಳಲ್ಲೆಲ್ಲ ಇಂತಹ ಜ್ಯೋತಿರ್ಮಯ ವಾದ ಲಿಂಗವೇ ಇರುವುದಿಲ್ಲ. ಖೇಚರರೆಲ್ಲರೂ ಈ ಲಿಂಗದ ಸುತ್ತಲೂ ಪರಿಚರ್ಯೆಯನ್ನು ಮಾಡುತ್ತ ಓಡಾಡುತ್ತಿರಲಿ.

೩೦. ಯಾವ ಪ್ರಾಣಿಯ ಅನುಗ್ರಹವನ್ನು ಇಚ್ಛಿಸುವನೊ, ಆ ಪ್ರಾಣಿಗೆ

ಏಷ ದೂರಾತ್ಪ್ರಣಾಮೇನ ನಿಕರ್ಷಾಚ್ಚ ಪ್ರದಕ್ಷಿಣಾತ್ ।
ಅಪಿ ಪಾಪಾತ್ಮನಾಂ ಪುಂಸಾಮುಸ್ತು ನಿಶ್ರೇಯಸಪ್ರದಃ ॥ ೩೧ ॥
ಅತ್ರೈವ ನಿಯತಂ ವಾಸಾಃ ಸಂಭವಂತಿ ಮಹಾತ್ಮನಾಂ ।
ತಸ್ಮಾತ್ಸ್ಥಲಮಿದಂ ಹಿತ್ವಾ ನಗಂತವ್ಯಂ ಕದಾಚನ ॥ ೩೨ ॥
ಶೋಣಾಚಲಮನಾದೃತ್ಯ ಕ್ವಚಿತ್ಸ್ಥಿತ್ವಾಪಿ ಮುಕ್ತಯೇ ।
ತಸ್ಮಾದ್ಯುವಾಂ ವಿಧಿಹರೀ ವಸತಂ ಚಾತ್ರ ನಿತ್ಯಶಃ ॥ ೩೩ ॥

ನಂದಿಕೇಶ್ವರ ಉವಾಚ :—

ಇತ್ಯುಕ್ತವಂತಂ ಕಾಮಾರಿಂ ಪ್ರಣಮ್ಯ ವಿಧಿಮಾಧವೌ ।
ತೌ ವ್ಯಜ್ಞಾಪಯತಾಂ ದೇವಂ ದೂರೀಭವದಹಂಕ್ರಿಯೌ ॥ ೩೪ ॥

ವಿಧಿಮಾಧವಾವೂಚತುಃ :—

ಏವಮೇತಜ್ಜಗಾಧಾರ ಜಗದಾಧಾರತಾಂ ಗತಃ ।
ಆಸ್ತಾಂ ಗಿರಿರಸೌ ಕಿಂ ತು ತೇಜೋ ಹ್ಯಸ್ಯ ಸುದುಸ್ಸಹಂ ॥ ೩೫ ॥
ಅತೋಽಯಮುತ್ತಮೋ ರುದ್ರ ತೇಜಃ ಸಾಮಾನ್ಯಶೈಲವತ್ ।
ತಿಷ್ಠತ್ವಭೇದ್ಯಮಹಿಮಾ ನಿಶ್ರೇಯಸಮಹಾಖನಿಃ ॥ ೩೬ ॥

---

ಈ ಕ್ಷೇತ್ರದಲ್ಲಿ ಜನ್ಮವುಂಟಾಗುವುದು. ಆ ಜೀವರಿಗೆ ಯಾವ ಉಪನಿಷದ್ವಾಕ್ಯಗಳ ಜ್ಞಾನವೂ ಇಲ್ಲದೆಯೇ ದೇಹಾವಸಾನವಾದ ಮೇಲೆ ಮುಕ್ತಿಯು ಕರಗತವಾಗುವುದು.

೩೧. ಈ ಅರುಣಾಚಲವು ದೂರದಿಂದ ಮಾಡುವ ನಮಸ್ಕಾರದಿಂದಲೂ, ಸಂಸ್ಪರ್ಶದಿಂದಲೂ, ಪ್ರದಕ್ಷಿಣೆಯಿಂದಲೂ ಪಾಪಾತ್ಮರಾದ ಮನುಷ್ಯರಿಗೂ ಕೂಡ ಮುಕ್ತಿಯನ್ನು ಕೊಡುವುದು.

೩೨. ಇಲ್ಲಿಯೇ ಮಹಾತ್ಮರ ನಿವಾಸಸ್ಥಾನಗಳು ನಿರಂತರದಲ್ಲಿಯೂ ಇರುವುವು. ಆದುದರಿಂದ ಈ ಸ್ಥಳವನ್ನು ಬಿಟ್ಟು ಎಲ್ಲಿಗೂ ಹೋಗಕೂಡದು.

೩೩. ಅರುಣಾಚಲವನ್ನು ಅನಾದರಣೆ ಮಾಡಿದರೆ ಎಲ್ಲಿಯೂ ಮುಕ್ತಿಯು ಸಿಕ್ಕಲಾರದು. ಆದುದರಿಂದ ನೀವಿಬ್ಬರೂ ಇಲ್ಲಿಯೇ ಶಾಶ್ವತವಾಗಿ ವಾಸಮಾಡಿರಿ.''

೩೪. ನಂದಿಕೇಶ್ವರನು ಹೇಳುತ್ತಾನೆ:—ಈ ರೀತಿಯಾಗಿ ಅಪ್ಪಣೆಮಾಡಿದ ಮಹೇಶ್ವರನಿಗೆ ನಮಸ್ಕರಿಸಿ ಅಹಂಕಾರವನ್ನು ದೂರಮಾಡಿ ಬ್ರಹ್ಮವಿಷ್ಣುಗಳಿಬ್ಬರೂ ಹೇಳಿದರು :—

೩೫–೩೬. ''ಎಲೈ ಮಹಾದೇವನೆ! ನೀನು ಹೇಳಿದಂತೆಯೇ ಜಗತ್ತಿಗೆ ಆಧಾರಭೂತವಾಗಿ ಈ ಪರ್ವತವು ನಿಲ್ಲಲಿ. ಆದರೆ ಇದರ ತೇಜವು ಅತ್ಯಂತ ದುರ್ಭರವಾಗಿರುವುದು. ಆದುದರಿಂದ ಈ ಉತ್ತಮ ಜ್ಯೋತಿಯೇ ಅಭೇದ್ಯವಾದ

ವಿವೃಣೋತಿ ನಿಜಂ ಜ್ಯೋತಿರ್ವಿಶ್ವಸ್ಯಾಸ್ಯ ಸಮೃದ್ಧಯೇ ।
ಪ್ರತ್ಯಬ್ದಂ ಕಾರ್ತಿಕೇ ಮಾಸಿ ಕೃತ್ತಿಕಾಸು ದಿನಾತ್ಯಯೇ ॥ ೩೭ ॥
ಶರ್ಮದೋಽಪಿ ನೃಣಾಂ ದೇವ ಶೋಣಾದ್ರಿಸ್ತವ ಶಾಸನಾತ್ ।
ಮಹತ್ತ್ವಾದರ್ಚಿತುಂ ಶಕ್ಯೋ ನ ಸ್ಯಾದ್ಭಕ್ತಸ್ಯ ಕಸ್ಯಚಿತ್ ॥ ೩೮ ॥
ಏತಸ್ಯೋಪತ್ಯಕಾಯಾಂ ತದದ್ಯಾರಭ್ಯಾಸ್ಮದರ್ಥನಾತ್ ।
ದೇವೇನ ಸನ್ನಿಧಾತವ್ಯಮುವನ್ಯಾಂ ಲಿಂಗರೂಪಿಣಾ ॥ ೩೯ ॥
ತಚ್ಚಾರುಣಗಿರೀಶಾನಮಾವಾಮಾರಾಧಯಾವಹೇ ।
ಅಭಿಷೇಕಾನುಲೇಪಾದ್ಯೈರುಪಚಾರೈರ್ಯಥಾ ವಿಧಿ ॥ ೪೦ ॥
ಸಂತ್ಯತ್ರ ಕೇಶರಾಶ್ಚೂತಾ ನಾಗಪುನ್ನಾಗಕೇಸರಾಃ ।
ಆರಗ್ವಧಾಃ ಕುರಬಕಾಃ ಮಾಲೂರಾಃ ಪಾಟಲಾ ಅಪಿ ॥ ೪೧ ॥
ಅತ್ರೈವ ಸನ್ನಿಧಾತವ್ಯಂ ದೇವ ದೇವ ದಯಾನಿಧೇ ।
ಯತಸ್ತ್ವದ್ಭಕ್ತಿದಾರ್ಢ್ಯಂ ನೌ ಭವತಾತ್ತ್ವದುಪಾಸನಾತ್ ॥ ೪೨ ॥

---

ಮಹಿಮೆಯುಳ್ಳುದೂ, ಮುಕ್ತಿಗೆ ಮಹಾ ಖನಿಯ ರೂಪವಾದುದೂ ಆಗಿ ಸಾಮಾನ್ಯ ಪರ್ವತದಂತೆಯೇ ಕಾಣುತ್ತಿರಲಿ.

೩೭. ಆದರೆ ಲೋಕದ ಅಭ್ಯುದಯಕ್ಕಾಗಿ ಈ ಪರ್ವತವು ಪ್ರತಿವರ್ಷವೂ ಕಾರ್ತಿಕಮಾಸದಲ್ಲಿ ಕೃತ್ತಿಕಾನಕ್ಷತ್ರದ ದಿನದ ಸಾಯಂಕಾಲದಲ್ಲಿ ತನ್ನ ಜ್ಯೋತಿಯನ್ನು ಬೆಳಗಿಸಲಿ.

೩೮. ಈ ಪರ್ವತವು ಜನರಿಗೆ ನಿನ್ನ ಶಾಸನಾನುಸಾರವಾಗಿ ಸೌಖ್ಯಪ್ರದವಾದರೂ ಅತ್ಯಂತ ದೊಡ್ಡದಾದುದರಿಂದ ಯಾವ ಭಕ್ತನಿಗೂ ಪೂಜೆಮಾಡಲು ಸಾಧ್ಯವಾಗುವುದಿಲ್ಲ.

೩೯. ಇಂದು ಮೊದಲ್ಗೊಂಡು ನಮ್ಮ ಪ್ರಾರ್ಥನೆಯನ್ನಂಗೀಕರಿಸಿ ಈ ಪರ್ವತದ ತುದಿಯಲ್ಲಿ ನೀನು ಲಿಂಗದ ರೂಪವನ್ನು ಧರಿಸಿ ಸನ್ನಿಹಿತನಾಗಬೇಕು.

೪೦. ನಾವೂ ಸಹ ಆ ಲಿಂಗವನ್ನು ಯಥಾವಿಧಿಯಾಗಿ, ಅಭಿಷೇಕ, ಅನುಲೇಪನ ಮುಂತಾದ ಉಪಚಾರಗಳಿಂದ ಅರುಣಾಚಲೇಶ್ವರನೆಂದು ಪೂಜಿಸುವೆವು.

೪೧. ಈ ಪ್ರದೇಶದಲ್ಲಿ ಬಕುಳ, ಆಮ್ರ, ನಾಗ, ಪುನ್ನಾಗ, ಕೇಸರಿ, ಆರಗ್ವಧ, ಕುರವಕ, ಬಿಲ್ವ, ಪಾಟಲ ಮುಂತಾದ ಅನೇಕ ವೃಕ್ಷಗಳಿರುವುವು.

೪೨. ಇಲ್ಲಿಯೇ ನಿನ್ನ ಉಪಾಸನೆಯಿಂದ ನಮಗೆ ಭಕ್ತಿಯು ದೃಢವಾಗಿರಲಿ. ದಯಾನಿಧಿಯಾದ ನೀನು ಇಲ್ಲಿಯೇ ಸನ್ನಿಹಿತನಾಗಿರಬೇಕು.

ನಾನ್ಯಥಾ ಚಿತ್ತಶುದ್ಧಿರ್ನೌ ದೇವೇಪ್ಯೇವಂ ಪ್ರಸೇದುಷಿ ।
ಅನಾದ್ಯವಿದ್ಯಾವೃತಯೇ ಯೋ ಭವಿಷ್ಯತಿ ನಿತ್ಯಶಃ ॥ ೪೩ ॥
ಶೋಣಾದ್ರೇಃ ಪೂರ್ವದಿಗ್ಭಾಗೇ ಸ ಏಷ ಭೃಶಮುನ್ನತಃ ।
ಸ ಏವಾಲಂ ನಿವಾಸಾಯ ದೇವಸ್ಯ ಹೃದಯಂಗಮಃ ॥ ೪೪ ॥
ಸಾಂಗಾವೇದಾ ಧರ್ಮಶಾಸ್ತ್ರಂ ಪುರಾಣಾನಿ ಶಿವಾಗಮಾಃ ।
ಕೃತ್ಸ್ನಾ ಚ ಸಕಲಾಃ ಪ್ರೋಕ್ತಾ ಭವತೈವ ಭವಾವಯೋಃ ॥ ೪೫ ॥
ನಿಃಶ್ರೇಯಸಾಯ ಭಕ್ತಾನಾಂ ತ್ವಯೈವ ಗುರುರೂಪಿಣಾ ।
ಅಷ್ಟಾವಿಂಶತಿರಾಖ್ಯಾತಾ ಆಗಮಾಃ ಶೈವಸಂಜ್ಞಿತಾಃ ॥ ೪೬ ॥
ತೇಷು ಕಸ್ಯ ಪ್ರಕಾರೇಣ ಕುರ್ವಾಣೌ ತದುಪಾಸನಾಂ ।
ಕದಾಪ್ಯಜ್ಞಾನಜಾಮಾರ್ತಿಂ ನಾಧಿಗಚ್ಛಾವ ಶಂಕರ ॥ ೪೭ ॥

ನಂದಿಕೇಶ್ವರ ಉವಾಚ :—

ಇತಿ ತೌ ಧಾತೃಗೋವಿಂದೌ ಪಾದಪದ್ಮಾವಲಂಬಿನೌ ।
ಜಗಾದ ಕರುಣಾಮೂರ್ತಿರ್ಜಗತೀಭೃತ್ಸುತಾಪತಿಃ ॥ ೪೮ ॥

ಮಹಾದೇವ ಉವಾಚ :—

ಯುಕ್ತಮುಕ್ತಮಿದಂ ಭದ್ರೌ ಮಯಾಪ್ಯೇವಂ ಮನೀಷಿತಂ ।
ಕಾಮಿಕೋಕ್ತೇನ ಮಾರ್ಗೇಣ ಮಾಮರ್ಚಯಿತುಮರ್ಹಥಃ ॥ ೪೯ ॥

---

೪೩. ಅನಾದಿಯಾದ ಅವಿದ್ಯೆಯ ಆವರಣದ ನಿರಾಸಕ್ಕೆ ಯಾವನು ನಿತ್ಯವೂ ಕಾರಣನಾಗಿರುವನೊ ಅಂತಹ ನೀನು ಪ್ರಸನ್ನನಾಗಿದ್ದರೂ ನಮಗೆ ನಿನ್ನ ನಿತ್ಯಸನ್ನಿಧಾನವಿಲ್ಲದೆ ಚಿತ್ತಶುದ್ಧಿಯುಂಟಾಗುವುದಿಲ್ಲ.

೪೪. ಅರುಣಾಚಲದ ಪೂರ್ವದಿಗ್ಭಾಗದಲ್ಲಿರುವ ಈ ಉನ್ನತಪ್ರದೇಶವೇ ಹೃದಯಂಗಮವಾಗಿ ನಿನ್ನ ನಿವಾಸಕ್ಕೆ ಯೋಗ್ಯವಾಗಿರುವುದು.

೪೫. ಎಲೈ ಮಹೇಶ್ವರನೆ! ನಮ್ಮಿಬ್ಬರಿಗೂ ನಿನ್ನಿಂದಲೇ ಸಾಂಗಗಳಾದ ವೇದಗಳೂ, ಧರ್ಮಶಾಸ್ತ್ರವೂ, ಪುರಾಣಗಳೂ, ಶೈವಾಗಮಗಳೂ, ಎಲ್ಲವೂ ರಹಸ್ಯಸಹಿತಗಳಾಗಿ ಉಪದೇಶವಾದುವು.

೪೬. ಗುರುರೂಪನಾದ ನಿನ್ನಿಂದಲೇ ಭಕ್ತರ ಮುಕ್ತಿಮಾರ್ಗಕ್ಕಾಗಿ ಶಿವಾಚಾರಬೋಧಕಗಳಾದ ಇಪ್ಪತ್ತೆಂಟು ಆಗಮಗಳು ಹೇಳಲ್ಪಟ್ಟುವು.

೪೭. ಅವುಗಳಲ್ಲಿ ಯಾವ ಪ್ರಕಾರದಿಂದ ನಿನ್ನನ್ನರ್ಚಿಸಿದರೆ ಅಜ್ಞಾನದಿಂದುಂಟಾದ ಈ ದುಃಖವು ಪುನಃ ನಮಗೆ ಸಂಭವಿಸುವುದಿಲ್ಲ?"

೪೮. ಈ ರೀತಿಯಾಗಿ ಬ್ರಹ್ಮನಾರಾಯಣರು ಪಾದಪದ್ಮಗಳಲ್ಲಿ ಬಿದ್ದು ಕೇಳಿಕೊಳ್ಳುತ್ತಿರಲು ಕರುಣಾಮೂರ್ತಿಯಾದ ಪರಮೇಶ್ವರನು ಅವರಿಗೆ ಹೇಳಿದನು :—

೪೯. "ನೀವು ಹೇಳಿದುದು ಯುಕ್ತವಾಗಿಯೇ ಇರುವುದು. ನಾನೂ ಇದನ್ನೇ

ಮೋಹತೋ ವಿಸ್ಮೃತಾ ಮನ್ಯೇ ಭವದ್ಭ್ಯಾಂ ಶೈವಸಂಹಿತಾ ।
ಅಧುನಾ ಮತ್ಪ್ರಸಾದೇನ ಪುನರುದ್ಭಾಸತಾಂ ಹೃದಿ ॥ ೫೦ ॥

ನಂದೀಶ ಉವಾಚ :—

ಇತ್ಯುಕ್ತ್ವಾ ಶ್ರೀಶವಾಗೀಶೌ ಗಿರಿಶೋಽಂತರಧಾದಥ ।
ತದಾ ಪ್ರಾದುರಭೂತ್ತತ್ರ ಲಿಂಗಂ ಕಿಮಪಿ ಮಂಗಳಂ ॥ ೫೧ ॥
ತಚ್ಚಾವಲೋಕ್ಯ ಸಾಶ್ಚರ್ಯೌ ಮುಕುಂದಕಮಲಾಸನೌ ।
ಮುಹುಃ ಪ್ರಣಮ್ಯ ಸಾನಂದಂ ಪ್ರಾರ್ಚ್ಯ ತುಷ್ಟುವತುಶ್ಚಿರಂ ॥ ೫೨ ॥
ತಾವಕಾರಯತಾಂ ಶೋಣಗಿರಿನಾಥಸ್ಯ ಚಾಲಯಂ ।
ನಾನಾಶಿಲ್ಪಾದ್ಭುತಂ ವಿಶ್ವಕರ್ಮಣಾ ಪ್ರಚಯೇನ ಚ ॥ ೫೩ ॥
ಖಾನಯಾಮಾಸತುಸ್ತತ್ರ ಸರಃ ಕಿಮಪಿ ಪಾವನಂ ।
ಅಭಿಷೇಕಾಯ ದೇವಸ್ಯ ಸರ್ವತೀರ್ಥಮಯಂ ನವಂ ॥ ೫೪ ॥
ಅರುಣಾಖ್ಯಂ ಪುರಂ ಚಾರಾತ್ಕಲ್ಪಯಾಮಾಸತುಶ್ಚಿರಂ ।
ಸಿದ್ಧ್ಯೈ ನೋತ್ಕಂಠತೇ ಲಬ್ಧ್ವಾ ಕೈಲಾಸಾಯಾಪಿ ಧೂರ್ಜಟಿಃ ॥ ೫೫ ॥

---

ಚಿಂತಿಸುತ್ತಿದ್ದೆನು. ನೀವಿಬ್ಬರೂ ನನ್ನನ್ನು ನಿಮ್ಮ ಇಷ್ಟಬಂದ ಮಾರ್ಗದಲ್ಲಿ ಪೂಜಿಸಿರಿ.

೫೦. ನಿಮ್ಮ ಅಹಂಕಾರದಿಂದ ನಿಮಗೆ ಶಿವಸಂಹಿತೆಯು ಮರೆತು ಹೋಗಿರುವುದೆಂದು ತಿಳಿಯುತ್ತೇನೆ. ಈಗ ನನ್ನ ಪ್ರಸಾದದಿಂದ ಪುನಃ ನಿಮ್ಮ ಹೃದಯದಲ್ಲಿ ಅದು ಭಾಸವಾಗುವುದು.''

೫೧. ನಂದೀಶ್ವರನು ಹೇಳುತ್ತಾನೆ :—ಹೀಗೆಂದು ಅವರಿಬ್ಬರಿಗೂ ಅನುಗ್ರಹಮಾಡಿ ಮಹೇಶ್ವರನು ಅಂತರ್ಧಾನವನ್ನು ಹೊಂದಿದನು. ಆಗಲೇ ಅಲ್ಲಿ ಪರಮ ಮಂಗಳಕರವಾದ ಒಂದು ಲಿಂಗವು ಉದ್ಭವಿಸಿತು.

೫೨. ಅದನ್ನು ನೋಡಿ ಅವರಿಬ್ಬರೂ ಆಶ್ಚರ್ಯಯುಕ್ತರಾಗಿ ಆನಂದದಿಂದ ಮತ್ತೆ ನಮಸ್ಕರಿಸಿ ಬಹಳಕಾಲ ಸ್ತೋತ್ರಮಾಡಿದರು.

೫೩. ಬಳಿಕ ವಿಶ್ವಕರ್ಮನನ್ನು ಕರೆಸಿ ವಿಚಿತ್ರವಾದ ಶಿಲ್ಪಕೌಶಲದಿಂದ ಅದ್ಭುತವಾದ ಒಂದು ಆಲಯವನ್ನು ಅರುಣಾಚಲೇಶ್ವರನಿಗೆ ಕಟ್ಟಿಸಿದರು.

೫೪. ಅಲ್ಲದೆ ದೇವನ ಅಭಿಷೇಕಕ್ಕಾಗಿ ನೂತನವಾಗಿ ಸಕಲ ತೀರ್ಥಗಳಿಂದೊಡಗೂಡಿದ ಪರಮಪಾವನವಾದ ಸರೋವರವನ್ನು ತೋಡಿಸಿದರು.

೫೫. ಅದರ ಸುತ್ತಲೂ ಅರುಣವೆಂಬ ಪಟ್ಟಣವನ್ನು ಕಲ್ಪಿಸಿದರು. ಅದನ್ನು ಹೊಂದಿ ಮಹೇಶ್ವರನು ತನ್ನ ಕೈಲಾಸವನ್ನೂ ಸಹ ಸೇರಲಿಚ್ಛಿಸುವುದಿಲ್ಲ.

ತಸ್ಯಾಂ ಬ್ರಹ್ಮರ್ಷಯೋ ದೇವಾ ಗಂಧರ್ವಾ ದಿವ್ಯಯೋಷಿತಃ ।
ಸಿದ್ಧವಿದ್ಯಾಧರಾ ಯಕ್ಷಾ ಪೌರತ್ವಂ ಸಮುಪಾಯಯುಃ ॥ ೫೬ ॥
ತೀರ್ಥಾನಿ ಧಾರ್ಯರ್ ಕೂಪತ್ವಂ ಗಂಗಾದ್ಯಾಃ ಸರಿತಸ್ತಥಾ ।
ನಂದನಾದೀನಿ ಚ ವನಾನ್ಯಥವನ್ನಿಷ್ಕುಟತ್ವತಃ ॥ ೫೭ ॥
ಗೋಲೋಕೋ ಗೋಗೋಷ್ಠತಯಾ ನೈಗಮತ್ವಂ ಕಿಲಾಗಮಾಃ ।
ಶೈಲಾಶ್ಚ ಗೋಪುರಾದಿತ್ವಂ ಸ್ಮೃತಯೋ ವೀಥಿಕಾಂ ಯಯುಃ ॥ ೫೮ ॥
ಭೂತಾಃ ಪ್ರೇತಾಃ ಪಿಶಾಚಾಶ್ಚ ವೇತಾಲಾಃ ಕಟಪೂತನಾಃ ।
ಪ್ರಪನ್ನಾ ಮಾನುಷಂ ರೂಪಂ ತಸ್ಯಾಂ ಕಿಲ ಪೃಥಗ್ಜನಾಃ ॥ ೫೯ ॥
ದೇವೋಽಪಿ ಧೂರ್ಜಟಿಸ್ತಸ್ಯಾಂ ಕೌತುಕೀ ಸಿದ್ಧರೂಪಧೃಕ್ ।
ಯೋಗಿತ್ವಂ ಸಮುಪಾಸ್ಥಾಯ ಮಾತ್ರಾ ಕೌಪೀನಮುಂಡಧೃಕ್ ।
ನ ಕೇನಚಿದವಿಜ್ಞಾತಃ ಸದಾ ಸರ್ವತ್ರ ದೀಪ್ಯತಿ ॥ ೬೦ ॥
ತೌ ಚ ಕೇಶವಲೋಕೇಶೌ ಜಟಿಲೌ ಭಸ್ಮಗುಂಠಿತೌ ।
ದಾಂತೌ ಶೋಣಾದ್ರಿನಾಥಂ ತಮರ್ಚಯಾಮಾಸತುಶ್ಚಿರಂ ॥ ೬೧ ॥

---

೫೬. ಆ ಪಟ್ಟಣದಲ್ಲಿ ಬ್ರಹ್ಮರ್ಷಿಗಳು, ದೇವತೆಗಳು, ಗಂಧರ್ವರು, ದೇವತಾಸ್ತ್ರೀಯರು, ಸಿದ್ಧರು, ವಿದ್ಯಾಧರರು, ಯಕ್ಷರೂ ಆ ಅರುಣಾಚಲ ಪಟ್ಟಣದಲ್ಲಿ ಪುರಜನರಾಗಿದ್ದರು.

೫೭. ಸಕಲ ತೀರ್ಥಗಳೂ ಗಂಗೆಯೇ ಮೊದಲಾದ ಪುಣ್ಯನದಿಗಳೂ ಅಲ್ಲಿ ಭಾವಿಗಳಾದುವು. ನಂದನವೇ ಮೊದಲಾದ ಸ್ವರ್ಗದ ವನಗಳು ಅಲ್ಲಿ ವಿಹಾರ ವನಗಳಾದುವು.

೫೮. ಗೋಲೋಕವೇ ಹಸುಗಳ ಕೊಟ್ಟಿಗೆಗಳೂ, ಆಗಮಗಳೇ ಸಂತೆ ಬೀದಿಗಳೂ, ಪರ್ವತಗಳೇ ಮನೆಗಳ ಗೋಪುರಗಳೂ, ಸ್ಮೃತಿಗಳೇ ರಾಜಬೀದಿಗಳೂ ಆಗಿದ್ದುವು.

೫೯. ಭೂತಗಳು, ಪ್ರೇತಗಳು, ಪಿಶಾಚಗಳು, ಭೇತಾಳಗಳು, ಕಟಪೂತನೆಯರೂ ತಂತಮ್ಮ ಭಯಂಕರ ರೂಪಗಳನ್ನು ತೊರೆದು ಭೂಲೋಕದಲ್ಲಿ ಮನುಷ್ಯರಾಗಿ ಜನಿಸಿ ಅಲ್ಲಿ ಪಟ್ಟಣಿಗರಾದರು.

೬೦. ಮಹಾದೇವನೂ ಸಹ ಕೌತುಕದಿಂದ ಸಿದ್ಧರೂಪವನ್ನು ಧರಿಸಿ ಯೋಗಿಯಾಗಿ, ಜಪಮಾಲೆ, ಕೌಪೀನ, ಕಪಾಲಗಳನ್ನು ಧರಿಸಿ ಸಕಲರಿಗೂ ಪ್ರತ್ಯಕ್ಷನಾಗಿ ಯಾವಾಗಲೂ, ಎಲ್ಲೆಲ್ಲಿಯೂ ಇರುವನು.

೬೧. ಆ ಬ್ರಹ್ಮನಾರಾಯಣರೂ ಕೂಡ ಶೈವದೀಕ್ಷಾವಿಧಾನವನ್ನನುಸರಿಸಿ ಜಡೆಗಳನ್ನು ಧರಿಸಿ ಭಸ್ಮವನ್ನು ಲೇಪನೆಮಾಡಿಕೊಂಡು ಇಂದ್ರಿಯ ನಿಗ್ರಹದಿಂದ ಬಹುಕಾಲ ಅರುಣಾಚಲೇಶ್ವರನನ್ನು ಭಕ್ತಿಪೂರ್ವಕವಾಗಿ ಪೂಜಿಸಿದರು.

ತತ್ರತ್ಯಾನಾಂ ಚ ಸರ್ವೇಷಾಂ ವರ್ಣಾನಾಮಾನುಗುಣ್ಯತಃ ।
ದೀಕ್ಷಾದಿಕಾನಿ ಚಕ್ರಾತೇಸ್ವಯಮಾಚಾರ್ಯತಾಂ ಗತೌ ॥ ೬೨ ॥
ಕ್ರಮೇಣ ಹೃತನಿರ್ಮಾಲ್ಯೌ ಸರ್ವಾಗಮರಹೋವಿದೌ ॥ ೬೩ ॥
ಪ್ರಾತಃ ಸ್ನಾತ್ವಾ ಸಮಾಹೃತ್ಯ ಪುಷ್ಪಪತ್ರಾದಿಕಂ ಫಲಂ ।
ಮಂತ್ರಂ ಚಾರುಣನಾಥಸ್ಯ ತತ ಏವ ರಹಃ ಶ್ರುತಂ ॥ ೬೪ ॥
ಜಂಜಲ್ಪಾಕೌ ಜಜಪತುಃ ಸರ್ವಮಂತ್ರಾಧಿಕಂ ಸದಾ ।
ಧೂಪ ಪ್ರದೀಪ ನೈವೇದ್ಯೈರ್ಗೀತವಾದಿತ್ರ ನರ್ತನೈಃ ॥ ೬೫ ॥
ಪ್ರದಕ್ಷಿಣನಮಸ್ಕಾರೈರ್ಮುದ್ರಾಬಂಧೈರ್ನವೈರ್ನವೈಃ ।
ಆಸನೇನ ಚ ಮೂರ್ತ್ಯಾ ಚ ಮೂಲೇನ ಚ ಯಥಾವಿಧಿ ॥ ೬೬ ॥
ಪಂಚಬ್ರಹ್ಮ ಷಡಂಗಾದ್ಯೈರರ್ಚಯಾಮಾಸತುಃ ಶಿವಂ ।
ಏವಂ ವರ್ಷಸಹಸ್ರಾಣಿ ಷೋಡಶಾರುಣಶಂಕರಂ ॥ ೬೭ ॥
ವೇಧೋ ವಿಷ್ಣೂ ಸಮಾರಾಧ್ಯ ಶಿವಜ್ಞಾನಮವಾಪತುಃ ॥ ೬೮ ॥

---

೬೨. ತಾವೇ ಶಿವಪೂಜಾ ವಿಧಾನಗಳಿಗೆ ಉಪದೇಷ್ಟೃಗಳಾದ ಆಚಾರ್ಯರಾಗಿ ನಿಂತು ಆ ಪಟ್ಟಣದಲ್ಲಿದ್ದ ಸಮಸ್ತ ಜನರಿಗೂ ಅವರವರ ಬ್ರಹ್ಮ ಕ್ಷತ್ರ ವೈಶ್ಯ ಶೂದ್ರಗಳೆಂಬ ವರ್ಣಾನುಸಾರವಾಗಿ ದೀಕ್ಷೆಯೇ ಮೊದಲಾದ ಎಲ್ಲ ಬಗೆಯ ಸಂಸ್ಕಾರಗಳನ್ನೂ ಮಾಡಿಸಿದರು.

೬೩–೬೪. ಬಳಿಕ ಶಿವನನ್ನರ್ಚಿಸಿ ಶಿವನಿರ್ಮಾಲ್ಯವನ್ನು ಸ್ವೀಕರಿಸಿ ಸಕಲಾಗಮಗಳ ರಹಸ್ಯಗಳನ್ನೂ ತಿಳಿದ ಅವರೀರ್ವರೂ ಉಷಃಕಾಲದಲ್ಲಿ ಸ್ನಾನಮಾಡಿ ಪತ್ರಪುಷ್ಪಫಲಗಳನ್ನು ಸಂಗ್ರಹಿಸಿ ಅರುಣಾಚಲೇಶ್ವರನಿಂದಲೇ ಉಪದಿಷ್ಟವಾದ ರಹಸ್ಯವಾದ ಶೈವ ಮಂತ್ರವನ್ನು ಸರ್ವೋತ್ತಮವೆಂದು ತಿಳಿದು ಉಪಾಂಶು ಕ್ರಮದಿಂದ ಜಪಿಸುತ್ತಿದ್ದರು.

೬೫–೬೬. ಧೂಪ, ದೀಪ, ನೈವೇದ್ಯ, ಗೀತ, ವಾದ್ಯ, ನರ್ತನ, ಪ್ರದಕ್ಷಿಣೆ, ನಮಸ್ಕಾರ, ಶೈವಾಗಮೋಕ್ತಗಳಾದ ನೂತನ ಮುದ್ರಾಬಂಧನೆಗಳಿಂದಲೂ, ಯೌಗಿಕವಾದ ಆಸನಗಳಿಂದಲೂ, ಮೂರ್ತಿಯಿಂದಲೂ, ಮೂಲದಿಂದಲೂ, ವಿಧ್ಯುಕ್ತರೀತಿಯಿಂದ ಪಂಚವೇದಗಳಿಂದಲೂ, ಷಡಂಗಗಳಿಂದಲೂ ಆ ಹರಿಹರರು ಶಿವನನ್ನು ಆರಾಧಿಸಿದರು.

೬೭–೬೮. ಈ ರೀತಿಯಾಗಿ ಬ್ರಹ್ಮನೂ, ನಾರಾಯಣನೂ ಹದಿನಾರು ಸಾವಿರ ವರ್ಷಗಳ ಕಾಲ ಅರುಣಾಚಲೇಶ್ವರನನ್ನು ಪೂಜಿಸಿ ಅಂತ್ಯದಲ್ಲಿ ಮುಕ್ತಿಯನ್ನು ದೊರಕಿಸುವ ಶಿವಜ್ಞಾನವನ್ನು ಪಡೆದರು.

ಇತೀದಮಶ್ರಾವಿ ಮಯಾ ರಹಸ್ಯಂ
ಪಿತುಃ ಶಿಲಾದಸ್ಯ ಮುಖಾತ್ಪುರಾ ಯತ್ ।
ನಿವೇದಿತಂ ಚಾದ್ಯ ತದೇವ ತುಭ್ಯಂ
ಕಿಮನ್ಯದಾಕರ್ಣಯಿತುಂ ಮನೀಷಾ ॥ ೬೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ಬ್ರಹ್ಮವಿಷ್ಣುಕೃತಾರುಣಾಚಲೇಶಮಂದಿರವರ್ಣನಂ" ನಾಮ ಷೋಡಶೋಽಧ್ಯಾಯಃ

---

೬೯. ಅಯ್ಯಾ ಮಾರ್ಕಂಡೇಯನೆ! ಪೂರ್ವದಲ್ಲಿ ಶಿಲಾದನ ತಂದೆಯ ಮುಖದಿಂದ ನಾನು ಈ ಪರಮ ರಹಸ್ಯವನ್ನು ಕೇಳಿದೆನು. ಅದನ್ನೇ ನಿನಗೆ ಈಗ ನಿರೂಪಿಸಿರುತ್ತೇನೆ. ಮತ್ತೇನನ್ನು ಕೇಳಲು ನಿನಗೆ ಕುತೂಹಲವಿರುವುದು?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯೆಯ ಉತ್ತರಾರ್ಧದಲ್ಲಿ "ಬ್ರಹ್ಮ ವಿಷ್ಣುಗಳು ಅರುಣಾಚಲೇಶ್ವರನನ್ನು ವರ್ಣಿಸಿದು"ದೆಂಬ ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತದಶೋಽಧ್ಯಾಯಃ

### ಶಿವಪಾರ್ವತೀವಿಹಾರವರ್ಣನಂ

ಸೂತ ಉವಾಚ :—

ಇತಿ ಶ್ರುತ್ವಾಸ್ಯ ವಚನಂ ಮಾರ್ಕಂಡೇಯೋಽಭ್ಯಭಾಷತ ।

ಮಾರ್ಕಂಡೇಯ ಉವಾಚ :—

ಶ್ರುತಮೇವ ಮಯಾ ದೇವ ಶ್ರೋತವ್ಯಂ ಭವತೋ ಮುಖಾತ್ ॥ ೧ ॥

ತಥಾಪಿ ಕೌತುಕೇನಾಹಮಾಕ್ರಾಂತೋ ಮುನಯೋಽಪ್ಯಮೀ ।

ಗೌರ್ಯಾ ಕಥಂ ತಪಸ್ತಪ್ತಂ ಮಹಾದೇವ್ಯಾತ್ರ ಕಥ್ಯತಾಂ ॥ ೨ ॥

ನಂದಿಕೇಶ್ವರ ಉವಾಚ :—

ಕಥಯಾಮಿ ತದಪ್ಯೇತದ್ಯಥಾಧಿಗತಮಾತ್ಮನಾ ।

ಶೃಣುತ್ವಮವಧಾನೇನ ಮಾರ್ಕಂಡೇಯ ಮಹಾಮತೇ ॥ ೩ ॥

ನನು ಜಾನಾಸಿ ತತ್ಪೂರ್ವಂ ಯಥಾ ದಾಕ್ಷಾಯಣೀಂ ಶಿವಃ ।

ಉಪಯೇಮೇ ಸತೀಂ ನಾಮ ಸತೀನಾಮಧಿದೇವತಾಂ ॥ ೪ ॥

---

### ಕನ್ನಡದ ಅನುವಾದ

#### ಶಿವ ಪಾರ್ವತೀ ವಿಹಾರವರ್ಣನ

೧. ಸೂತರು ಹೇಳುತ್ತಾರೆ:—ನಂದಿಕೇಶ್ವರನ ವಚನವನ್ನು ಕೇಳಿ ಮಾರ್ಕಂಡೇಯನು ಕೇಳುತ್ತಾನೆ:—ಎಲೈ ನಂದೀಶ್ವರನೆ! ನಾನು ಕೇಳಲಿಚ್ಛಿಸಿದ್ದನ್ನೆಲ್ಲ ನಿನ್ನಿಂದ ಕೇಳಿದೆನು.

೨. ಆದರೂ ನನಗೂ ಈ ಮಹರ್ಷಿಗಳಿಗೂ ಒಂದು ಕುತೂಹಲವುಂಟಾಗಿರುವುದು. ಈ ಸ್ಥಳದಲ್ಲಿ ಪಾರ್ವತಿಯು ತಪಸ್ಸನ್ನು ಮಾಡಿದುದೆಂತೆಂಬುದನ್ನು ತಿಳಿಸು.

೩. ನಂದಿಕೇಶ್ವರನು ಹೇಳುತ್ತಾನೆ:—"ಎಲೈ ಸೂಕ್ಷ್ಮಬುದ್ಧಿಯಾದ ಮಾರ್ಕಂಡೇಯನೆ! ನನಗೆ ತಿಳಿದಿರುವ ವಿಷಯವನ್ನೆಲ್ಲ ಹೇಳುತ್ತೇನೆ. ಏಕಾಗ್ರಚಿತ್ತನಾಗಿ ಕೇಳು.

೪. ಪೂರ್ವದಲ್ಲಿ ದಕ್ಷನ ಮಗಳಾದ ಸತೀದೇವಿಯನ್ನು ಶಿವನು ಮದುವೆಯಾದನೆಂಬುದನ್ನು ತಿಳಿದಿರುವೆಯಷ್ಟೆ. ಆ ದಾಕ್ಷಾಯಣಿಯೇ ಸಮಸ್ತ ಸುಮಂಗಲಿಯರ ಅಧಿದೇವತೆಯು.

ಯಥಾ ಚ ಸಾ ಕೃಧಾ ಭರ್ತುರ್ದ್ರುಹಿ ದಕ್ಷಪ್ರಜಾಪತೌ ।
ಯೋಗಾದಹಾಸೀದಾತ್ಮೀಯಂ ವಪುರಿತ್ಯಪಿ ತೇ ಶ್ರುತಂ ॥ ೫ ॥
ತದಾ ಹರಾಜ್ಞಾನಿಘ್ನೇನ ವೀರಭದ್ರೇಣ ಯತ್ಕೃತಂ ।
ಅಧ್ವರಧ್ವಂಸನಂ ದಕ್ಷಸ್ಯಾಪಿ ತೇ ವಿದಿತಂ ಮಹತ್ ॥ ೬ ॥
ಅಶ್ರೌಷೀಸ್ತಸ್ಯ ದಕ್ಷಸ್ಯ ಗಣೈಃ ಶೀರ್ಷಾಸಖಂಡನಂ ।
ಬ್ರಹ್ಮಾಚ್ಯುತೇಂದ್ರಮುಖ್ಯಾನಾಂ ದೇವಾನಾಮಪಿ ಶಿಕ್ಷಣಂ ॥ ೭ ॥
ದಂತಘಾತಂ ರವೇಃ ಪಾಣಿಪಾಟನಂ ಜಾತವೇದಸಃ ।
ಅದಿತಿಪ್ರಭೃತೀನಾಂ ಚ ದಿವ್ಯಸ್ತ್ರೀಣಾಂ ಪರಾಭವಂ ॥ ೮ ॥
ಸಾಚ ದೇವೀ ಪುನರ್ಜನ್ಮ ಲೇಭೇ ಹಿಮವತೋ ಗೃಹೇ ।
ಉಮೇತಿ ಪಾರ್ವತೀತ್ಯಾಖ್ಯಾಂ ದ್ವಿತೀಯಾಂ ಬಿಭ್ರತೀ ಪುನಃ ॥ ೯ ॥
ದೇವಃ ಸ್ಥಾಣುವನೇ ತಾಂ ಚ ಪರಿಚರ್ಯಾಪರಾಂ ರಹಃ ।
ಅರುರೋಚಯಿಷುಃ ಕಾಮಮಧಾಕ್ಷೀತ್ಕಾಲವಹ್ನಿನಾ ॥ ೧೦ ॥
ಜಿತೇಂದ್ರಿಯಂ ಚ ತಂ ದೇವಂ ಕ್ವಾಪಿ ಯಾತಂ ಗಣೈಃ ಸಹ ।
ತಪೋಭಿಸ್ತೋಷಯಾಮಾಸ ಗೌರೀಶಿಖರವಾಸಿನೀ ॥ ೧೧ ॥

---

೫–೬. ಗಂಡನಲ್ಲಿ ದ್ರೋಹಮಾಡಿದ ದಕ್ಷಪ್ರಜಾಪತಿಯ ವಿಷಯದಲ್ಲಿ ಕ್ರೋಧದಿಂದ ಆಕೆಯು ಯೋಗದಿಂದ ತನ್ನ ಶರೀರವನ್ನು ವಿಸರ್ಜಿಸಿದ ವಿಷಯವನ್ನೂ ನೀನು ಕೇಳಿರುವೆ. ಆಗ ಶಿವನ ಆಜ್ಞಾನುಸಾರಿಯಾದ ವೀರಭದ್ರನೆಸಗಿದ ದಕ್ಷನ ಯಜ್ಞದ ಧ್ವಂಸವೂ ಸಹ ನಿನಗೆ ತಿಳಿದೇ ಇರುವುದು.

೭. ಪ್ರಮಥಗಣಗಳಿಂದ ದಕ್ಷನಿಗೆ ಶಿರಶ್ಛೇದವಾದುದನ್ನೂ, ಬ್ರಹ್ಮ, ವಿಷ್ಣು, ಇಂದ್ರ ಮೊದಲಾದ ದೇವತೆಗಳೆಲ್ಲರಿಗೂ ಶಿಕ್ಷೆಯಾದುದನ್ನೂ ಕೇಳಿರುವೆ.

೮. ಸೂರ್ಯನಿಗೆ ಹಲ್ಲುಗಳು ಮುರಿದುದೂ, ಅಗ್ನಿಗೆ ಕೈಗಳು ಮುರಿದುದೂ, ಅದಿತಿಯೇ ಮೊದಲಾದ ದೇವತಾಸ್ತ್ರೀಯರು ಪರಾಭವವನ್ನು ಹೊಂದಿದುದೂ ನಿನಗೆ ತಿಳಿದಿರುವುವು.

೯. ಆ ದೇವಿಯೇ ಪುನಃ ಉಮೆಯೆಂದೂ, ಪಾರ್ವತಿಯೆಂದೂ ಹೆಸರನ್ನು ಪಡೆದು ಹಿಮವದ್ರಾಜನ ಮನೆಯಲ್ಲಿ ಜನ್ಮವನ್ನೆತ್ತಿದಳು.

೧೦. ಮಹಾದೇವನೂ ಸ್ಥಾಣುವನದಲ್ಲಿ ಏಕಾಂತ ಸೇವೆಯನ್ನು ಮಾಡುವ ಆಕೆಯನ್ನು ಸಂತೋಷಗೊಳಿಸುವುದಕ್ಕಾಗಿ ತನ್ನ ತೃತೀಯನೇತ್ರದಿಂದ ಮನ್ಮಥನನ್ನು ಸುಟ್ಟನು.

೧೧. ಜಿತೇಂದ್ರಿಯನಾಗಿ ಪ್ರಮಥಗಣಗಳಿಂದೊಡಗೂಡಿ ಸಂಚರಿಸುತ್ತಿರುವ ಮಹೇಶ್ವರನನ್ನು ಪಾರ್ವತಿಯು ಅನೇಕ ತಪಸ್ಸುಗಳಿಂದ ಸಂತೋಷಗೊಳಿಸಿದಳು.

ಉಪಯಮ್ಯಾಥ ತಾಂ ದೇವೋ ವೃತ್ವಾಂತೈಶ್ಚಿತ್ತಖಂಡಿಭಿಃ ।
ರಮಯಾಮಾಸ ಚೈಕಾಂತೇ ನೋದಸ್ವೇತಿ ವಿಲಾಸಿನೀಂ ॥ ೧೨ ॥
ವೈಧವ್ಯಖಿನ್ನಯಾ ರತ್ಯಾ ಪ್ರಾರ್ಥಿತಾ ಶೈಲನಂದಿನೀ ।
ಕಾಮಪೀಠೇ ತಪಸ್ಯಂತೀ ಕಾಮಂ ಪ್ರತ್ಯುದದೀಪಯುತ್ ॥ ೧೩ ॥
ಪುನಶ್ಚ ಮೇನಯಾ ಮಾತ್ರಾ ಪಿತ್ರಾ ಚ ಹಿಮಭೂಭೃತಾ ।
ಆನೀತಾ ಭವನಂ ಭರ್ತ್ರಾ ಸಾಕಂ ಚಿರಮರಂಸ್ತ ಸಾ ॥ ೧೪ ॥
ತದಾ ಶುಂಭನಿಶುಂಭಾಖ್ಯೌ ಲೇಭಾತೇ ವೇಧಸೋ ವರಂ ।
ದೇವದಾನವ ಮರ್ತ್ಯೇಷು ಮಾಸ್ತು ನೌ ಪುರುಷಾನ್ಮೃತಿಃ ॥ ೧೫ ॥
ಇತಿ ತದ್ವಚನಂ ಶ್ರುತ್ವಾ ಜಾತತ್ರಾಸೈಃ ಸುಪರ್ವಭಿಃ ।
ಅಭ್ಯರ್ಥಿತೋಽವದದ್ದೇವೋ ರಹಶ್ಚಕ್ರಧರಾದಿಭಿಃ ॥ ೧೬ ॥
ಮಾ ಭೈಷ್ಟ ಭದ್ರಾ ಕಾಲೇನ ತಥಾ ಪ್ರತಿವಿಧೀಯತೇ ।
ಯಥಾ ನಿಷೂದಿತೌ ಸ್ಯಾತಾಂ ತಾದೃಶೌ ದಾನವಾವಿತಿ ॥ ೧೭ ॥
ದತ್ತ್ವಾಭಯಾನ್ಮುಕುಂದಾದೀನ್ವಿಸೃಜ್ಯಾಂಧಕಸೂದನಃ ।
ಅಂತಃಪುರಗತೋ ರೇಮೇ ದೇವ್ಯಾ ಸಹ ಯಥಾ ಪುರಾ ॥ ೧೮ ॥

---

೧೨. ಬಳಿಕ ಆಕೆಯನ್ನು ಸೇರಿ ಮಹಾದೇವನು ನಾನಾವಿಧಗಳಾದ ನರ್ಮವಚನಗಳಿಂದ ತೃಪ್ತಿಗೊಳಿಸುತ್ತ ಆಕೆಯೊಡನೆ ಏಕಾಂತದಲ್ಲಿ ವಿಹಾರ ಮಾಡುತ್ತಿದ್ದನು.

೧೩. ವೈಧವ್ಯದಿಂದ ದುಃಖಪಡುತ್ತಿರುವ ರತಿಯಿಂದ ಪ್ರಾರ್ಥಿತಳಾಗಿ ಪಾರ್ವತಿಯು ಕಾಮಪೀಠದಲ್ಲಿ ತಪಸ್ಸನ್ನು ಮಾಡಿ ಮತ್ತೆ ಆತನಿಗೆ ಉದ್ದೀಪನ ವನ್ನು ಕೊಡಿಸಿದಳು.

೧೪. ಮತ್ತೆ ತಾಯಿ ತಂದೆಯರಾದ ಮೇನೆ ಹಿಮವಂತರಿಂದ ಗಂಡನ ಮನೆಗೆ ಕಳುಹಲ್ಪಟ್ಟವಳಾಗಿ ಆತನೊಡನೆ ಬಹಳಕಾಲ ರಮಿಸಿದಳು.

೧೫. ಆಗ ಶುಂಭ, ನಿಶುಂಭರೆಂಬ ಇಬ್ಬರು ರಾಕ್ಷಸರು ದೇವ, ದಾನವ, ಮನುಷ್ಯರಿಂದ ತಮಗೆ ಮೃತಿಯುಂಟಾಗಬಾರದೆಂದು ಬ್ರಹ್ಮನಿಂದ ವರವನ್ನು ಪಡೆದರು.

೧೬. ಇದನ್ನು ಕೇಳಿ ವಿಷ್ಣುವೇ ಮೊದಲಾದ ದೇವತೆಗಳೆಲ್ಲರೂ ತ್ರಾಸ ಗೊಂಡವರಾಗಿ ಮಹಾದೇವನನ್ನು ಕೇಳಿಕೊಂಡರು.

೧೭. "ಎಲೈ ಪುಣ್ಯಶಾಲಿಗಳೆ! ನೀವು ಭಯಪಡಬೇಡಿರಿ. ಇಂತಹ ದಾನವರಿಬ್ಬರೂ ನಿಗ್ರಹವನ್ನು ಹೊಂದುವಂತೆ ಕಾಲನಿಂದಲೇ ವಿಧಾಯಕ ವಾಗುವುದು."

೧೮. ಈ ರೀತಿಯಾಗಿ ಅಭಯವನ್ನು ಕೊಟ್ಟು ಮುಕುಂದನೇ ಮೊದಲಾದ

ಕದಾಚಿನ್ಮರ್ಮಲಕ್ಷ್ಯೇಣ ಪ್ರೀತ್ಯಾ ಕಾಳೀತಿ ನಿಂದಿತಾ ।
ತಸ್ಯ ಪ್ರೀತ್ಯೈ ಕಾಳಿಕಾ ಚ ತ್ವಚಮೇವಾಜಹಾನ್ನಿಜಾಂ ॥ ೧೯ ॥
ಯತ್ರೋತ್ಸಿಪ್ತವತೀ ಚರ್ಮ ಸ್ವೇಚ್ಛಯಾ ಪರಮೇಶ್ವರೀ ।
ಮಹಾಕಾಶೀಪ್ರಪಾತಾಖ್ಯಂ ತದಭೂತ್ಕ್ಷೇತ್ರಮುತ್ತಮಂ ॥ ೨೦ ॥
ಸಾ ಚ ತ್ವಕ್ಕೌಶಿಕೀ ನಾಮ್ನಾ ಕಾಳೀ ವಿಂಧ್ಯಾದ್ರಿವಾಸಿನೀ ।
ತಪಸ್ಯಂತೀ ವೃಷಸ್ಯಂತೌ ತೌ ಜಘಾನ ಮಹಾಸುರೌ ॥ ೨೧ ॥
ದೇವೀ ಚ ಗೌರೀಶಿಖರೇ ತಸ್ಮಿನ್ನೇವ ಮನೋಹರೇ ।
ತಪೋಭಿರ್ಲಬ್ಧ ಗೌರೀತ್ವಾದ್ಭರ್ತಾರಂ ಸಮತೋಷಯತ್ ॥ ೨೨ ॥
ಕ್ರಮೇಣ ದೌಹೃದವತೀ ಭೂತ್ವಾ ಪ್ರಾಸೂತ ಪಾರ್ವತೀ ।
ಗಜಾನನಂ ಚ ಹೇರಂಬಂ ಸೇನಾನ್ಯಂ ಚ ಷಡಾನನಂ ॥ ೨೩ ॥
ತೌ ಚಾಗಮವಿದಃ ಪ್ರಾಹುರ್ನಾರಾಯಣಚತುರ್ಮುಖೌ ।
ಪೂರ್ವಾಪರಾಧಶುದ್ಧ್ಯರ್ಥಂ ದೇವೀಗರ್ಭಸಮುದ್ಭವೌ ॥ ೨೪ ॥

---

ದೇವತೆಗಳನ್ನು ಬೀಳ್ಕೊಟ್ಟು ಮಹೇಶ್ವರನು ಅಂತಃಪುರಕ್ಕೆ ಹೋಗಿ ಪೂರ್ವದಂತೆಯೇ ದೇವಿಯೊಡನೆ ವಿಹರಿಸುತ್ತಿದ್ದನು.

೧೯. ಒಂದಾನೊಂದು ದಿನ ಸರಸವಾಡುತ್ತ ಶಿವನು ಪಾರ್ವತಿಯನ್ನು ಕಾಳಿಯೆಂದು ಕರೆಯಲು ಮರ್ಮಭೇದಕವಾದ ಆ ಮಾತನ್ನು ಕೇಳಿ ಪಾರ್ವತಿಯು ಆತನಿಗೆ ಪ್ರಿಯವನ್ನುಂಟುಮಾಡಲು ತನ್ನ ಚರ್ಮವನ್ನೇ ಬಿಟ್ಟುಬಿಟ್ಟಳು.

೨೦. ಸ್ವೇಚ್ಛೆಯಿಂದ ತನ್ನ ಚರ್ಮವನ್ನು ಪಾರ್ವತಿಯು ಸುಲಿದು ಬಿಸುಟ ಸ್ಥಳವೇ ಕಾಶೀಪ್ರಪಾತವೆಂಬ ಮಹಾಕ್ಷೇತ್ರವಾಗಿ ಪರಿಣಮಿಸಿತು.

೨೧. ಕಾಳಿಯೂ ಸಹ ತ್ವಕ್ಕೌಶಿಕಿಯೆಂಬ ಹೆಸರಿನಿಂದ ವಿಂಧ್ಯಾಚಲದಲ್ಲಿ ವಾಸಮಾಡುತ್ತ ತನ್ನನ್ನು ಕಾಮಿಸಿದ ಶುಂಭ ನಿಶುಂಭರೆಂಬ ಆ ಇಬ್ಬರು ದೈತ್ಯರನ್ನೂ ನಿಗ್ರಹಿಸಿದಳು.

೨೨. ಬಳಿಕ ಅದೇ ಪರ್ವತದ ಮನೋಹರವಾದ ಶಿಖರದಲ್ಲಿ ತಪಸ್ಸನ್ನು ಮಾಡಿ ತನ್ನ ಶರೀರಕ್ಕೆ ಗೌರವರ್ಣವನ್ನು ತಳೆದು ಗೌರಿಯೆಂಬ ಹೆಸರಿನಿಂದ ಗಂಡನನ್ನು ಸಂತೋಷಗೊಳಿಸಿದಳು.

೨೩. ಯಥಾಕ್ರಮದಲ್ಲಿ ಪಾರ್ವತಿಯು ಗರ್ಭವತಿಯಾಗಿ ಗಜಮುಖನಾದ ಹೇರಂಬನನ್ನೂ ಸೇನಾನಾಯಕನಾದ ಷಣ್ಮುಖಸ್ವಾಮಿಯನ್ನೂ ಪ್ರಸವಿಸಿದಳು.

೨೪. ವೇದಜ್ಞರಾದ ಮಹಾತ್ಮರು ಈ ಇಬ್ಬರೂ ಸಹ ಪೂರ್ವದಲ್ಲಿ ಮಾಡಿದ ಅಪರಾಧದ ಶುದ್ಧಿಗಾಗಿ ಆಕೆಯ ಹೊಟ್ಟೆಯಲ್ಲಿ ಹುಟ್ಟಿದ ಬ್ರಹ್ಮನಾರಾಯಣರೆಂದೇ ಹೇಳುವರು.

ವರ್ಧಮಾನೌ ಚ ತೌ ಬಾಲೌ ಪಿತ್ರೋರಾಲೋಕಮಾನಯೋಃ ।
ಮಗ್ನಯೋರಿವ ವರ್ಷಾಬ್ಧೌ ಪ್ರೇಮಗ್ರಂಥಿರಭೂದ್ದೃಢಾ ॥ ೨೫ ॥
ಜಾತು ವೀಣಾನಿನಾದೇನ ಕದಾಚಿಚ್ಚಿತ್ರಲೇಖನೈಃ ।
ವಿಜಹ್ರತುಶ್ಶಿವೌ ಸ್ವೈರಮೇಕದಾ ಮಂಡನೈರ್ಮಿಥಃ ॥ ೨೬ ॥
ಜಾತು ವಿದ್ಯಾಗಮಾಲಾಪೈಃ ಕದಾಚಿಚ್ಚಿತ್ರವಸ್ತುಭಿಃ ।
ಏಕದಾ ಲೋಕವೃತ್ತಾಂತೈರ್ದಂಪತಿಭ್ಯಾಂ ವಿನೋದಿತಂ ॥ ೨೭ ॥
ಪುಷ್ಪಾವಚಯನೈರ್ಜಾತು ಕದಾಚಿದ್ವಾರಿ ಖೇಲನೈಃ ।
ಅದೀಪ್ಯತಾಂ ಚ ರಾಗಾದ್ರೌ ದೋಲಾಕೇಳಿಭಿರೇಕದಾ ॥ ೨೮ ॥
ಮೈನಾಕೇನಾರ್ಚಿತೌ ಜಾತು ಮೇನಯಾ ಜಾತು ಪೂಜಿತೌ ।
ಜಾತ್ವರ್ಹಿತೌ ಹಿಮವತಾ ದಂಪತೀ ತೌ ವಿನೋದಿತೌ ॥ ೨೯ ॥
ಜಾತು ದ್ಯೂತವಿನೋದೇನ ಗೀತಗೋಷ್ಠ್ಯಾ ಕದಾಚನ ।
ಏಕದಾ ದಾನಲೀಲಾಭಿಃ ಶಿವೌ ಚಿಕ್ರೀಡತುಶ್ಚಿರಂ ॥ ೩೦ ॥
ದ್ಯೂತನಿರ್ಜಿತಮಾಚ್ಛಿದ್ಯ ಪತ್ಯುರುತ್ಸಂಗತಾಂ ಗತಂ ।
ವಲಯೀಕೃತಮೇಣಾಂಕಂ ತಾಟಂಕೀಕೃತವತ್ಯುಮಾ ॥ ೩೦ ॥

---

೨೫. ತಂದೆ ತಾಯಿಗಳೆದುರಿನಲ್ಲಿ ಆ ಬಾಲಕರಿಬ್ಬರೂ ಪ್ರವರ್ಧಮಾನರಾಗುತ್ತಿದ್ದರು. ಅವರಿಗೂ ಕೂಡ ವರ್ಷಾಬ್ಧಿಯಲ್ಲಿ ಮುಳುಗಿದವರಿಗಿರುವಂತೆ ಪ್ರೇಮವೆಂಬ ಗ್ರಂಥಿಯು ದೃಢವಾಯಿತು.

೨೬. ಕೆಲವು ಕಾಲ ವೀಣಾವಾದನದಿಂದಲೂ, ಒಮ್ಮೆ ಚಿತ್ರಲೇಖನಗಳಿಂದಲೂ, ಮತ್ತೊಮ್ಮೆ ಒಬ್ಬರಿಗೊಬ್ಬರು ಅಲಂಕರಿಸುವುದರಿಂದಲೂ ಪಾರ್ವತೀ ಪರಮೇಶ್ವರರು ಯಥೇಚ್ಛವಾಗಿ ವಿಹರಿಸುತ್ತಿದ್ದರು.

೨೭. ಒಮ್ಮೆ ವಿದ್ಯೆ, ವೇದಗಳ ಅಭ್ಯಾಸದಿಂದಲೂ, ಒಮ್ಮೆ ವಿಚಿತ್ರ ಪದಾರ್ಥಗಳಿಂದಲೂ, ಮತ್ತೊಮ್ಮೆ ಪ್ರಪಂಚದ ವ್ಯವಹಾರಗಳಿಂದಲೂ ಆ ದಂಪತಿಗಳು ವಿನೋದಿಸುತ್ತಿದ್ದರು.

೨೮. ಪುಷ್ಪಸಂಗ್ರಹದಿಂದಲೂ, ಜಲಕೇಳಿಗಳಿಂದಲೂ, ದೋಣಿಗಳಲ್ಲಾಡುವುದರಿಂದಲೂ ಆ ದಂಪತಿಗಳು ಪ್ರೇಮಾರ್ದ್ರರಾಗಿ ರಂಜಿಸುತ್ತಿದ್ದರು.

೨೯. ಅನೇಕವೇಳೆ ಮೈನಾಕನಿಂದಲೂ, ಮೇನೆಯಿಂದಲೂ, ಹಿಮವಂತನಿಂದಲೂ ಪೂಜೆಗೊಂಡವರಾಗಿ ಸಂತೋಷದಿಂದಿದ್ದರು.

೩೦. ಒಮ್ಮೆ ಜೂಜಾಡುವುದರಿಂದಲೂ, ಕೆಲವುವೇಳೆ ಗೀತಗೋಷ್ಠಿಗಳಿಂದಲೂ, ಕೆಲವು ಕಾಲ ದಾನಗಳನ್ನು ಮಾಡುವ ಲೀಲೆಯಿಂದಲೂ ಅವರು ಬಹುಕಾಲ ಕ್ರೀಡಿಸಿದರು.

೩೧. ಗಂಡನ ಮಡಿಲನ್ನು ಸೇರಿ ಆತನು ವಲಯವನ್ನಾಗಿ ಮಾಡಿಕೊಂಡಿದ್ದ

ಇತಿ ತೌ ಪಿತರೌ ಚರಾಚರಾಣಾಂ,
ನಿವಸಂತೌ ಕನಕಾಚಲಾದಿಕೇಷು ।
ರುಚಿರೇಷು ಪದೇಷು ಕಾಮಭೋಗಾ
ನತಿಹೃದ್ಯಾನ್ನ್ವಚಿರಂ ಕಿಲಾನ್ವಭೂತಾಂ ॥ ೩೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ಶಿವಪಾರ್ವತೀ ವಿಹಾರ ವರ್ಣನಂ" ನಾಮ ಸಪ್ತದಶೋಽಧ್ಯಾಯಃ

---

ಚಂದ್ರನನ್ನು ಒಮ್ಮೆ ಪಾರ್ವತಿಯು ಜೂಜಿನಲ್ಲಿ ಗೆದ್ದು ತನ್ನ ಕಿವಿಯೋಲೆಯನ್ನಾಗಿ ಮಾಡಿಕೊಂಡಳು.

೩೨. ಈ ರೀತಿಯಾಗಿ ಚರಾಚರ ಪ್ರಪಂಚಕ್ಕೆ ಕಾರಣರಾದ ಪಾರ್ವತೀ ಪರಮೇಶ್ವರರಿಬ್ಬರೂ, ಮೇರುಪರ್ವತವೇ ಮುಂತಾದ ಮನೋಹರ ಸ್ಥಳಗಳಲ್ಲಿ ವಾಸಿಸುವವರಾಗಿ ಬಹಳಕಾಲ ಮನೋಹರಗಳಾದ ಅನೇಕ ಕಾಮೋಪಭೋಗಗಳನ್ನನುಭವಿಸಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ಶಿವಪಾರ್ವತೀ ವಿಹಾರ ವರ್ಣನ" ವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಅಷ್ಟಾದಶೋಽಧ್ಯಾಯಃ

## ಪಾರ್ವತೀ ಕೃತಾರುಣಾಚಲೇಶ್ವರಪರಿಚರಣವರ್ಣನಂ

ನಂದಿಕೇಶ್ವರ ಉವಾಚ :—

ಗಾರ್ಹಸ್ಥ್ಯಂ ಬಿಭ್ರತೀ ಭರ್ತುರೇಕಾಮ್ರತಲವಾಸಿನಃ ।
ಪಕ್ವಾನ್ನಪಾನೈಸ್ಸಾ ತತ್ರ ಪರ್ಯತರ್ಪಯತ ಪ್ರಜಾಃ ॥ ೧ ॥
ಜಾತು ಸಂಧ್ಯಾನುಸಂಧಾನಮುಕುಳೀಕೃತಲೋಚನಂ ।
ಬದ್ಧಾಂಜಲಿಪುಟಂ ದೇವಮದ್ರಾಕ್ಷೀದದ್ರಿನಂದಿನೀ ॥ ೨ ॥
ಧ್ಯಾಯತೇ ನೂನಮಧುನಾ ಕಾಪಿ ಸೌಭಾಗ್ಯಶಾಲಿನೀ ।
ಕ್ರಿಯತೇ ಯನ್ಮಯಿ ಪ್ರೇಮ ತನ್ಮನ್ಯೇ ವಂಚನಂ ಮಹತ್ ॥ ೩ ॥
ಕಥಂ ವಿಜ್ಞಾಯತೇ ಪುಂಸಾಂ ಕುಟಿಲಾ ಮಾನಸೀ ಸ್ಥಿತಿಃ ।
ಮಿಥ್ಯೋಪಚಾರಾದ್ದಕ್ಷೇಣ ವಂಚಿತಾಸ್ಮ್ಯಮುನಾ ಭೃಶಂ ॥ ೪ ॥
ಮಯಿ ದಾಕ್ಷಿಣ್ಯಮೇವಾಸ್ಯ ಮನ್ಯೇ ಮನಸಿ ಚೇದ್ಗ್ರಹಃ ।
ಜನಃ ಸೌಭಾಗ್ಯವಾನ್ಯಸ್ಮಾದ್ಭವತಿ ಸ್ನೇಹಭಾಜನಂ ॥ ೫ ॥

---

## ಕನ್ನಡದ ಅನುವಾದ

### ಪಾರ್ವತಿಯು ಅರುಣಾಚಲೇಶ್ವರನನ್ನು ಪೂಜಿಸಿದುದು

೧. ನಂದಿಕೇಶ್ವರನು ಹೇಳುತ್ತಾನೆ:—ಏಕಾಮ್ರತಲದಲ್ಲಿ ವಾಸಿಸುತ್ತಿರುವ ಶಿವನೊಡನೆ ಪಾರ್ವತಿಯು ಗಾರ್ಹಸ್ಥ್ಯಧರ್ಮವನ್ನಾಚರಿಸುತ್ತ ಅನುಯಾಯಿಗಳನ್ನು ಪಕ್ವಮಾಡಿದ ಅನ್ನಪಾನಗಳಿಂದ ತೃಪ್ತಿಪಡಿಸುತ್ತಿದ್ದಳು.

೨. ಒಂದಾನೊಂದು ದಿನ ಸಾಯಂಕಾಲದಲ್ಲಿ ಬ್ರಹ್ಮಾನುಸಂಧಾನವನ್ನು ಮಾಡುತ್ತ ಕಣ್ಣುಗಳನ್ನು ಮುಚ್ಚಿಕೊಂಡು ಅಂಜಲಿಪುಟವನ್ನು ಜೋಡಿಸಿಕೊಂಡಿದ್ದ ಪರಮೇಶ್ವರನನ್ನು ಆ ಪಾರ್ವತಿಯು ಕಂಡಳು.

೩–೪. "ಈತನು ನಿಜವಾಗಿಯೂ ಯಾವಳೋ ಒಬ್ಬ ಪುಣ್ಯಶಾಲಿನಿಯನ್ನು ಕುರಿತು ಯೋಚಿಸುತ್ತಿರುವನು. ನನ್ನಲ್ಲಿ ತೋರಿಸುತ್ತಿರುವ ಪ್ರೇಮವೆಲ್ಲವೂ ಕೇವಲ ವಂಚನೆಯೇ ಸರಿ. ಪುರುಷರ ಮನಸ್ಸಿನ ಕುಟಿಲಗತಿಯನ್ನು ತಿಳಿಯಲು ಹೇಗೆ ಸಾಧ್ಯವು? ಹೆಚ್ಚಾಗಿ ಮಾಡಿದ ಕಪಟೋಪಚಾರದಿಂದ ನನ್ನನ್ನು ಬುದ್ಧಿವಂತನಾದ ಈತನು ವಂಚಿಸಿರುವನು.

೫. ಈತನ ಮನಸ್ಸಿನ ಅಂತರವನ್ನು ನೋಡಿದರೆ ನನ್ನಲ್ಲಿ ಕೇವಲ ದಾಕ್ಷಿಣ್ಯಭಾವವೇ ಕಾಣುತ್ತಿರುವುದು. ಲೋಕದಲ್ಲಿ ಐಶ್ವರ್ಯವಂತರೇ ನಿಜವಾಗಿಯೂ ಸ್ನೇಹಕ್ಕೆ ಪಾತ್ರರಾಗುವರು.

ಅದ್ಯ ಪ್ರಭೃತಿ ತೇ ದಾಸಸ್ತಪೋಭಿಃ ಕ್ರೀತ ಇತ್ಯಪಿ ।
ಮುಗ್ಧೇಂದುಶೇಖರೇಣಾಸ್ಮಿ ವಿಪ್ರಲಬ್ಧಾ ಸ್ಮರಾರಿಣಾ ॥ ೬ ॥
ಅಸಮಾನಾನುರಾಗೇಷು ನಾರೀಣಾಂ ಮೂಢಚೇತಸಾಂ ।
ಸೌಭಾಗ್ಯಗರ್ವೋ ಲೋಕೇಷು ಪರಿಹಾಸಾಯ ಕೇವಲಂ ॥ ೭ ॥
ಇತಿ ಪ್ರಣಯರೋಷೇಣ ದೇವ್ಯಾಃ ಕಲುಷಚೇತಸಃ ।
ಹವ್ಯವಾಹಾತಪಾಲೀಢಮಿವಾನನಮಲಕ್ಷ್ಯತ ॥ ೮ ॥
ಬಾಷ್ಪವಾರಿಪ್ಲವೇ ತಸ್ಯಾ ಆತಾಮ್ರೇ ಚ ವಿಲೋಚನೇ ।
ನೀಲೋತ್ಪಲೇ ಜಲಾಪೂರ್ಣೇ ಇವ ಭೂಮ್ನಾ ವಿರೇಜತುಃ ॥ ೯ ॥
ಯತ್ತಸ್ಯಾಧೀನತಿಲಕಂ ಭ್ರುವೋರ್ಯುಗಮಲಕ್ಷ್ಯತ ।
ದ್ವೇಧಾಕೃತಮಿವಾದರ್ಶಿ ಮನ್ಮಥಸ್ಯ ಶರಾಸನಂ ॥ ೧೦ ॥
ಅಂತರ್ಮನ್ಯುಭರೇಣಾಸ್ಯಾಃ ಕಂಪತೇ ಸ್ಮಾಧರಚ್ಛದಃ ।
ಮುಹುಃ ಪ್ರವಾಳಸ್ಥಾಯೀವ ರಕ್ತಾಶೋಕಸ್ಯ ಪಲ್ಲವಃ ॥ ೧೧ ॥
ಅತೀವ ರಜ್ಯಮಾನಂ ತತ್ಪಾರ್ವತ್ಯಾ ಗಂಡಮಂಡಲಂ ।
ಶಾಣಾವಘೃಷ್ಟಮಾಣಿಕ್ಯದರ್ಪಣಪ್ರತಿಮಂ ಬಭೌ ॥ ೧೨ ॥

---

೬. 'ಇಂದು ಮೊದಲು ನಾನು ನಿನಗೆ ದಾಸನು; ನಿನ್ನ ತಪಸ್ಸಿನಿಂದ ಕ್ರೀತನಾಗಿದ್ದೇನೆ' ಎಂದು ಹೇಳಿದ ಮನ್ಮಥವೈರಿಯಾದ ಈ ಚಂದ್ರಶೇಖರನಿಂದ ಮುಗ್ಧೆಯಾದ ನಾನು ಮೋಸಹೋದೆನು.

೭. ಮೂಢಬುದ್ಧಿಯುಳ್ಳ ಹೆಂಗಸರಿಗೆ ಲೋಕದಲ್ಲಿ ಸಮಾನರಲ್ಲದ ಅನುರಾಗಿಗಳಲ್ಲಿ ಹೆಮ್ಮೆಗೊಳ್ಳುವುದು ಕೇವಲ ಹಾಸ್ಯಾಸ್ಪದವೇ ಆಗುವುದು."

೮. ಈ ರೀತಿಯಾದ ಪ್ರಣಯಕೋಪದಿಂದ ದೂಷಿತವಾದ ದೇವಿಯ ಮುಖವು ಬೆಂಕಿಯ ಶಾಖಕ್ಕೆ ಸಿಕ್ಕಿ ಮ್ಲಾನಗೊಂಡಂತೆ ಕಂಡಿತು.

೯. ಆಕೆಯ ಕಣ್ಣುಗಳು ಕೆಂಪಗಾಗಿ ಕಣ್ಣೀರಿನಿಂದ ತುಂಬಿದುವು. ಅವು ಜಲದಿಂದ ತುಂಬಿದ ಉತ್ಪಲಪುಷ್ಪಗಳಂತೆ ರಾಜಿಸುತ್ತಿದ್ದುವು.

೧೦. ಆಕೆಯ ಹಣೆಯಲ್ಲಿದ್ದ ತಿಲಕವು ಹುಬ್ಬುಗಳನ್ನು ಇಬ್ಭಾಗವಾಗಿ ಮಾಡುತ್ತ ಮನ್ಮಥನ ಧನುಸ್ಸನ್ನು ಮುರಿದು ತುಂಡುಮಾಡಿದಂತೆ ಕಾಣುತ್ತಿದ್ದಿತು.

೧೧. ಪ್ರವಾಳಗಳನ್ನೊಳಕೊಂಡ ರಕ್ತಾಶೋಕ ವೃಕ್ಷಗಳ ಚಿಗುರುಗಳಂತೆ ದೇಹದಲ್ಲಿ ತುಂಬಿದ ಪ್ರಣಯಕೋಪದಿಂದ ಆಕೆಯ ತುಟಿಗಳು ಕಂಪಿಸುತ್ತಿದ್ದುವು.

೧೨. ಅತ್ಯಂತ ಕೆಂಪಾದ ಆಕೆಯ ಕಪೋಲಗಳು ಸಾಣೆಕಲ್ಲಿನಲ್ಲಿ ಮಸೆದು ನುಣುಪುಮಾಡಿದ ಮಾಣಿಕ್ಯದರ್ಪಣಗಳಂತೆ ಕಂಗೊಳಿಸುತ್ತಿದ್ದುವು.

ಅಂತರ್ವೇಪಥುತೌ ತಸ್ಯಾಶ್ಚ ಕಂಪಾತೇ ಪಯೋಧರೌ ।
ಪದ್ಮಕೋಶಾವಿವಾಂತಸ್ಥ ಚಂಚರೀಕಪ್ರಚಾಲಿತೌ ॥ ೧೩ ॥
ಅಚಿಂತಯಚ್ಚ ಸಂಭೂಯ ಸೌಭಾಗ್ಯಾಭಾವತೋ ನನು ।
ಮಮಾಯಮನ್ಯ ಸ್ತ್ರೀ ಚಿಂತಾಂ ಕುರುತೇ ಚಂದ್ರಭೂಷಣಃ ॥ ೧೪ ॥
ತದ್ಯೈಷಾ ಕ್ವಾಪಿ ಯಾಸ್ಯಾಮಿ ಕಿಮತ್ರಾಸ್ತ್ಯೇಕಯಾ ಮಮ ।
ತಪಸ್ಯಂತೇ ಚ ಸೌಭಾಗ್ಯಮಾರ್ಜನೀಯಂ ಮಯಾಧುನಾ ॥ ೧೫ ॥
ನಿಮೀಲಿತಾಕ್ಷ್ಯೇವಾಸ್ಯ ಗಂತವ್ಯಂ ನಿಭೃತಂ ಮಯಾ ।
ನ ಚೇನ್ಮಾಂ ವಾರಯತ್ಯೇಷ ಕಂಠಾದುಪರಿ ಭಾಷಿತೈಃ ॥ ೧೬ ॥
ವತ್ಸೌ ತು ವರ್ಧಯತ್ಯೇವ ಗಂಗೇಯಮತಿವತ್ಸಲಾ ।
ದೇವಸ್ತು ನ ಸ್ಮರತ್ಯೇವ ಮಾಮನ್ಯಸ್ತ್ರೀಪರಾಯಣಃ ॥ ೧೭ ॥
ಇತಿ ನಿಶ್ಚಿತ್ಯ ದೇವಸ್ಯ ಪಾರ್ಶ್ವಾದಾಶು ನಿವೃತ್ಯ ಸಾ ।
ಅನಿರ್ದಿಶ್ಯ ದಿಶಂ ಕಾಂಚಿದ್ಯಾತುಂ ವ್ಯಗ್ರಾ ಪ್ರಚಕ್ರಮೇ ॥ ೧೮ ॥

---

೧೩. ದೇಹದೊಳಗಿನ ಚಿಂತಾಗ್ನಿಯಿಂದ ಆಕೆಯ ಸ್ತನಗಳು ಕಂಪಿಸುತ್ತ ಒಳಗೆ ಭ್ರಮರಗಳನ್ನು ಹುದುಗಿಸಿಕೊಂಡು ಅವುಗಳಿಂದ ಅಲುಗಾಡುತ್ತಿರುವ ಕಮಲಕುಟ್ಮಲಗಳಂತೆ ರಂಜಿಸುತ್ತಿದ್ದುವು.

೧೪. ಆಗ ದೇವಿಯು ಇಂತು ಯೋಚಿಸಿದಳು:—"ನಾನು ಸೌಭಾಗ್ಯ ಹೀನಳಾದುದರಿಂದಲೇ ನನ್ನ ಪತಿಯಾದ ಚಂದ್ರಶೇಖರನು ಅನ್ಯಸ್ತ್ರೀಯನ್ನು ಕುರಿತು ಚಿಂತಿಸುತ್ತಿರುವನು.

೧೫. ಆದುದರಿಂದ ನಾನು ಎಲ್ಲಿಗಾದರೂ ಹೋಗುವೆನು. ಒಬ್ಬೊಂಟಿಗಳಾಗಿ ಇಲ್ಲಿ ಏನುಮಾಡಲಿ. ಈಗ ನಾನು ತಪಸ್ಸನ್ನು ಮಾಡಿ ಸೌಭಾಗ್ಯವನ್ನು ಸಂಪಾದಿಸಬೇಕು.

೧೬. ಈತನು ಹೀಗೆ ಗಟ್ಟಿಯಾಗಿ ಕಣ್ಣುಮುಚ್ಚಿಕೊಂಡಿರುವಾಗಲೇ ನಾನು ಹೊರಡಬೇಕು. ಇಲ್ಲದಿದ್ದರೆ ಬರಿಯ ಬಾಯಿಮಾತುಗಳಿಂದಲೇ ನನ್ನನ್ನು ತಡೆದು ನಿಲ್ಲಿಸುವನು.

೧೭. ನನ್ನ ಮಕ್ಕಳನ್ನು ಪುತ್ರವತ್ಸಲೆಯಾದ ಈ ಗಂಗೆಯು ಪೋಷಿಸುತ್ತಾಳೆ. ಪರಮೇಶ್ವರನಂತೂ ಅನ್ಯಸ್ತ್ರೀಯಲ್ಲಿ ಆಸಕ್ತನಾಗಿ ನನ್ನನ್ನು ಸ್ಮರಿಸುವುದೇ ಇಲ್ಲ."

೧೮. ಹೀಗೆ ನಿಶ್ಚಯವನ್ನು ಮಾಡಿ ಪರಮೇಶ್ವರನ ಸಾನ್ನಿಧ್ಯವನ್ನು ಬಿಟ್ಟು ಎಲ್ಲಿಗಾದರೂ ಹೊರಟುಹೋಗಬೇಕೆಂದು ಆಕೆಯು ಯಾರಿಗೂ ಹೇಳದೆ ತೆರಳಲುದ್ಯುಕ್ತಳಾದಳು.

ಚಲಾವತೀ ಮಾಲ್ಯವತೀ ಮಾಲಿನೀ ವಿಜಯಾ ಜಯಾ ।
ವಾರಿತಾ ಅಪಿ ಸಂರಂಭಾತ್ಸ್ವಾಮಿನೀಮನ್ವಯುಃ ಸ್ವಯಂ ॥ ೧೯ ॥
ತತ್ರ ಸಾಪಿ ಗಿರೀನ್ಪುಣ್ಯಾನ್ವನಾನಿ ನಗರಾಣಿ ಚ ।
ಸರಾಂಸಿ ಸರಿತಶ್ಚೈಷಾ ವಿಚಚಾರ ಸಮಂತತಃ ॥ ೨೦ ॥
ಭ್ರಮಂತೀ ಸಹ್ಯಪಾದೇಷು ದ್ರಾವಿಡಾಖ್ಯೇ ಸುನಿರ್ವೃತಿ ।
ತೀರ್ತ್ವಾ ಶಕ್ತ್ಯಾಪಗಾಂ ದೇವೀ ವಿಜಯಾಂ ಸಮಭಾಷತ ॥ ೨೧ ॥
ದೃಶ್ಯೋಽಯಂ ನಾತಿದೂರೇಣ ಪುರಸ್ತಾತ್ಸಕಲಾರುಣಃ ।
ಶೃಂಗೈಸ್ಸಂಲಕ್ಷ್ಯತೇಽಷ್ಟಾಭಿರ್ನಗಂ ಮಾಹಾತ್ಮ್ಯವಾನ್ಗಿರಿಃ ॥ ೨೨ ॥
ಉಪತ್ಯಕಾಸು ಚೈತಸ್ಯ ದೃಶ್ಯಂತೇ ತಾಪಸಾಶ್ರಮಾಃ ।
ಅತೀವ ಪಾವನಾಃ ಶಾಂತಾಃ ಪುಣ್ಯಾರಣ್ಯಮನೋಹರಾಃ ॥ ೨೩ ॥
ಗತ್ವಾ ನಿರೂಪಯಾಮಸ್ತಾನಿಮಾನ್ಪುಣ್ಯಾಶ್ರಮಾನ್ವಯಂ ।
ಪ್ರಸೀದತಿತರಾಂ ಚೇತ ಏಷಾಂ ಸಂದರ್ಶನೇನ ಮೇ ॥ ೨೪ ॥
ಏವಮಾಹ್ಲಾದಯತ್ಯಾಲಿಂ ಕ್ರಮೇಣ ಗಿರಿನಂದಿನೀ ।
ತಸ್ಯಾದ್ರೇರ್ಜಗ್ಮುಷೀ ಪಾರ್ಶ್ವಮಪಶ್ಯತ್ಕಂಚಿದಾಶ್ರಮಂ ॥ ೨೫ ॥

---

೧೯. ಆದರೆ ಆಕೆಯ ಆಪ್ತಸಖಿಯರಾದ ಚಲಾವತಿ, ಮಾಲ್ಯವತಿ, ಮಾಲಿನಿ, ವಿಜಯೆ ಮತ್ತು ಜಯೆ ಎಂಬ ಐದು ಜನರು ಬೇಡ ಬೇಡವೆಂದರೂ ತಾವಾಗಿಯೇ ಯಜಮಾನಿಯನ್ನು ಅನುಸರಿಸಿದರು.

೨೦. ಬಳಿಕ ಆಕೆಯು ಅನೇಕ ಪುಣ್ಯಪರ್ವತಗಳನ್ನೂ, ವನಗಳನ್ನೂ, ಪಟ್ಟಣಗಳನ್ನೂ, ಸರೋವರಗಳನ್ನೂ, ನದಿಗಳನ್ನೂ ನೋಡುತ್ತ ಭೂಲೋಕದಲ್ಲೆಲ್ಲ ಸಂಚರಿಸಿದಳು.

೨೧. ಹೀಗೆ ತಿರುಗುತ್ತ ಸಹ್ಯಾದ್ರಿಯ ಕೆಳಗಡೆ ದ್ರಾವಿಡ ದೇಶದಲ್ಲಿ ಶಕ್ತಿನದಿಯನ್ನು ದಾಟಿದವಳಾಗಿ ಸಖಿಯಾದ ವಿಜಯೆಯೊಡನೆ ಹೀಗೆಂದಳು :—

೨೨. "ವಿಜಯೆ! ಇಲ್ಲಿಗೆ ಸಮೀಪದಲ್ಲಿಯೇ ಕೆಂಪಾದ ಆಕಾರವುಳ್ಳದ್ದಾಗಿಯೂ ಅತ್ಯಂತ ಮಾಹಾತ್ಮ್ಯವುಳ್ಳದ್ದಾಗಿಯೂ ಕಾಣುವ ಪರ್ವತವು ಎಂಟು ಶಿಖರಗಳಿಂದ ರಂಜಿಸುತ್ತಿರುವುದು.

೨೩. ಈ ಪರ್ವತದ ತಪ್ಪಲುಗಳಲ್ಲಿ ಪರಮ ಪಾವನಗಳೂ, ಶಾಂತಗಳೂ, ಪುಣ್ಯಾರಣ್ಯಗಳಲ್ಲಿ ಮನೋಹರವಾಗಿ ಕಾಣುವಂತಹವುಗಳೂ ಆದ ಅನೇಕ ತಾಪಸರ ಆಶ್ರಮಗಳು ಕಾಣುತ್ತಿರುವುವು.

೨೪. ಅಲ್ಲಿಗೆ ಹೋಗಿ ಈ ಪುಣ್ಯಾಶ್ರಮಗಳನ್ನು ನೋಡೋಣ. ಅವುಗಳ ಸಂದರ್ಶನದಿಂದ ನನ್ನ ಮನಸ್ಸು ಪ್ರಸನ್ನವಾಗುವುದಲ್ಲವೆ?"

೨೫. ಈ ರೀತಿಯಾಗಿ ಸಖಿಯನ್ನು ಸಂತೋಷಗೊಳಿಸುತ್ತ ಗಿರಿಜೆಯು

ಲೂತಾಸ್ತಂತೂನ್ನಯಂತ್ಯತ್ರ ಕುಂಭೀರಾಃ ಶೈವಲಾನ್ಯಪಿ ।
ಶಿಶೂನ್ಪುಷ್ಣಂತಿ ನೀವಾರೈಃ ಶಫರಾನ್ಭೂರಿಮಾಯವಃ ॥ ೨೬ ॥
ಹರಂತ್ಯವಕರಾನ್ವಾಲೈಶ್ಚಮರಾಃ ಸ್ಫೀತರೋಮಭಿಃ ।
ಸಮೀಕುರ್ವಂತಿ ಚೋದ್ಭೂತೈರ್ವಿಷಾಣೈರ್ಯತ್ರ ಸೈರಿಭಾಃ ॥ ೨೭ ॥
ವಾನರಾಃ ಫಲಪುಷ್ಪಾಣಿ ಮಧುಪತ್ರಾಣಿ ಭಲ್ಲುಕಾಃ ।
ಕ್ರೋಡಾಃ ಸ್ನಾನೀಯಮೃತ್ಸ್ನಾಂ ಚ ಯತ್ರರ್ಷಿಭ್ಯೋ ನಯಂತ್ಯಹೋ ॥
ಕಾಕೋಲೂಕೈಃ ಶುಕಶ್ಯೇನೈಃ ಮೃಗವ್ಯಾಘ್ರೈರ್ಹರಿದ್ವಿಪೈಃ ।
ಕಲಾಪಿಸರ್ಪೈರ್ಯತ್ರಾಖುಮಾರ್ಜಾರೈಃ ಸೌಹೃದಂ ಶ್ರಿತಂ ॥ ೨೯ ॥
ಹೂಯಮಾನಪುರೋಡಾಶದ್ರವ್ಯಸೌರಭ್ಯಹಾರಿಣೀ ।
ಯತ್ರ ದ್ರುಮಾಂತರಾಳೇಭ್ಯೋ ಧೂಮ್ಯಾ ನಿರ್ಯಾತಿ ಪಾವನೀ ॥ ೩೦ ॥
ಪಠಂತಿ ಶತರುದ್ರೀಯಂ ಯತ್ರ ವಾಯಸವೈರಿಣಃ ।
ಗೃಣಂತಿ ಕಾಕಾಃ ಸ್ತೋತ್ರಾಣಿ ಸಾಮ ಗಾಯಂತಿ ಸಾರಿಕಾಃ ॥ ೩೧ ॥

---

ಕ್ರಮವಾಗಿ ಆ ಪರ್ವತದ ಹತ್ತಿರಕ್ಕೆ ಬಂದು ಅದರ ಪಾರ್ಶ್ವದಲ್ಲಿ ಒಂದಾನೊಂದು ಆಶ್ರಮವನ್ನು ಕಂಡಳು.

೨೬–೨೭. ಅಲ್ಲಿ ಜೇಡರ ಹುಳುಗಳು ಬಟ್ಟೆಗಳಿಗೆ ಬೇಕಾದ ದಾರಗಳನ್ನೊದಗಿಸುತ್ತಿದ್ದುವು. ಜಲಜಂತುಗಳು ಹಾಸಿಕೊಳ್ಳಲು ಪಾಚಿಗಳನ್ನು ತರುತ್ತಿದ್ದುವು. ನರಿಗಳು ಸಣ್ಣಮೀನುಗಳನ್ನು ಮಕ್ಕಳಂತೆಯೇ ಕಾಣುತ್ತ ಕಾಡಕ್ಕಿಯಿಂದ ಅವುಗಳಿಗೆ ಆಹಾರ ಕೊಡುತ್ತಿದ್ದುವು. ಚಮರೀ ಮೃಗಗಳು ಶುಭ್ರರೋಮಗಳುಳ್ಳ ತಮ್ಮ ಬಾಲಗಳಿಂದ ಕಸವನ್ನು ಗುಡಿಸುತ್ತಿದ್ದುವು. ಎಮ್ಮೆಗಳು ತಮ್ಮ ಕೋಡುಗಳಿಂದ ಎತ್ತರ ಪ್ರದೇಶಗಳನ್ನು ಸಮಮಾಡುತ್ತಿದ್ದುವು.

೨೮–೨೯. ಕೋತಿಗಳು ಫಲಪುಷ್ಪಗಳನ್ನೂ, ಕರಡಿಗಳು ಜೇನುತುಪ್ಪ, ಎಲೆಗಳನ್ನೂ, ಕಾಡುಹಂದಿಗಳು ಸ್ನಾನಕ್ಕೆ ಬೇಕಾದ ಮಣ್ಣನ್ನೂ ಋಷಿಗಳಿಗೆ ತಂದುಕೊಡುತ್ತಿದ್ದುವು. ಕಾಗೆ ಗೂಬೆಗಳಿಗೂ, ಗಿಳಿ ಹದ್ದುಗಳಿಗೂ, ಜಿಂಕೆ ಹುಲಿಗಳಿಗೂ, ಸಿಂಹ ಆನೆಗಳಿಗೂ, ನವಿಲು ಸರ್ಪಗಳಿಗೂ, ಇಲಿ ಬೆಕ್ಕುಗಳಿಗೂ ಅಲ್ಲಿ ಸ್ನೇಹವು ಯಾವಾಗಲೂ ಇದ್ದಿತು.

೩೦. ಹೋಮ ಮಾಡುತ್ತಿರುವ ಪುರೋಡಾಶ ದ್ರವ್ಯದ ಸುಗಂಧವನ್ನು ತೆಗೆದುಕೊಂಡು ಮರಗಳ ಸಂದಿಗಳಿಂದ ವಾಯುವು ಪವಿತ್ರವಾಗಿ ಸುತ್ತಲೂ ಹರಡುತ್ತಿರುವುದು.

೩೧. ಕೋಗಿಲೆಗಳು ಶತರುದ್ರಸಂಹಿತೆಯನ್ನು ಪಠಿಸುತ್ತಿದ್ದುವು. ಕಾಗೆಗಳು ಶಿವಸ್ತೋತ್ರಗಳನ್ನು ಹೇಳುತ್ತಿದ್ದುವು. ಶಾರಿಕೆಗಳು ಸಾಮವೇದವನ್ನು ಹೇಳುತ್ತಿದ್ದುವು.

ಶಾಕಶಾಲಿಷು ಶಾರ್ದೂಲಾಶ್ಚರಂತಿ ಚ ತಥೈವ ಗಾಃ ।
ಸಿಂಚಂತಿ ಪುಷ್ಕರಾಂಭೋಭಿಃ ಕುಂಭಿನೋ ಯತ್ರ ಪಾದಪಾನ್ ॥ ೩೨ ॥
ಕ್ವಚಿಚ್ಚ ಶೋಭನೇ ದೇಶೇ ಪುಣ್ಯೇ ಪುಣ್ಯಮನೋಹರೇ ।
ದದರ್ಶ ಸಾ ತಪಸ್ಯಂತಂ ಯಂ ಕಂಚಿದೃಷಿಸತ್ತಮಂ ॥ ೩೩ ॥
ಅಧಸ್ತಾತ್ಸಪ್ತಪರ್ಣಸ್ಯ ಚಿತ್ರವ್ಯಾಘ್ರತ್ವಗಾಸನೇ ।
ಬದ್ಧವೀರಾಸನಂ ಸಮ್ಯಕ್ಪಾವನೇ ಕುಶವಿಷ್ಟರೇ ॥ ೩೪ ॥
ಶಾಲಿಶೂಕಾರುಣಾಭಾಭಿರ್ಜಟಾಭಿರ್ಭಸ್ಮ ಪಾಂಡುರಂ ।
ಅಚಂಚಲಾಭಿರ್ವಿದ್ಯುದ್ಭಿರಿವ ಶಾರದವಾರಿದಂ ॥ ೩೫ ॥
ನಾಸಾಗ್ರನಿಶ್ಚಲದೃಶಂ ಸಮುಪ್ರಸ್ಫುರಿತಾಧರಂ ।
ಆವರ್ತಯಂತಂ ರುಧ್ರಾಕ್ಷಮಾಲಿಕಾಮಗ್ರಪಾಣಿನಾ ॥ ೩೬ ॥
ಪ್ರತ್ಯಗ್ರನಿರ್ಣೇಜನತೋ ಹ್ಯತ್ಯಚ್ಛಾನದಶಾಂಚಲೇ ।
ವಸಾನಂ ವಲ್ಕಲಯುಗೇ ಸಂಧ್ಯಾಭ್ರೇ ಭೂಭೃತಾಂ ಯಥಾ ॥ ೩೭ ॥
ಷಡ್ವರ್ಗಹಿಂಸ್ರಬಂಧಾಯ ಸ್ಥಾಪಿತಾಂ ವಾಗುರಾಮಿವ ।
ಉಪವೀತತ್ರಯೀಮಾರಾದುರೋಗರ್ತಸ್ಯ ಬಿಭ್ರತಂ ॥ ೩೮ ॥

---

೩೨. ಭತ್ತದ ಗದ್ದೆಗಳಲ್ಲಿ ಗೋವುಗಳೂ ಹುಲಿಗಳೂ ಜೊತೆಯಲ್ಲಿ ಓಡಾಡುತ್ತಿದ್ದುವು. ಆನೆಗಳು ತಮ್ಮ ಸೊಂಡಿಲುಗಳಲ್ಲಿ ನೀರನ್ನು ತಂದು ಗಿಡಗಳಿಗೆ ಎರೆಯುತ್ತಿದ್ದುವು.

೩೩. ಒಂದಾನೊಂದು ಪಾವನವೂ ಮನೋಹರವೂ ಆದ ಶುಭಪ್ರದೇಶದಲ್ಲಿ ತಪಸ್ಸನ್ನು ಮಾಡುತ್ತಿದ್ದ ಒಬ್ಬ ಋಷಿವರ್ಯನನ್ನು ಪಾರ್ವತಿಯು ಕಂಡಳು.

೩೪-೩೮. ಸಪ್ತಪರ್ಣವೃಕ್ಷದ ಮೂಲದಲ್ಲಿ ವ್ಯಾಘ್ರಚರ್ಮದ ಮೇಲೆ ಕುಶಾಸನವನ್ನು ಹಾಕಿಕೊಂಡು ಚೆನ್ನಾಗಿ ವೀರಾಸನವನ್ನು ಮಂಡಿಸಿ, ಭತ್ತದ ಮುಳ್ಳಿನಂತೆ ಕೆಂಪಾದ ಜಡೆಗಳಿಂದ ಕೂಡಿ, ಭಸ್ಮದಿಂದ ಬೆಳ್ಳಗಿರುವ ದೇಹದಿಂದ, ನಿಶ್ಚಂಚಲಗಳಾದ ಮಿಂಚುಗಳಿಂದ ಕೂಡಿದ ಶರತ್ಕಾಲದ ಮೇಘದಂತೆ ಕಾಣುತ್ತ, ನಾಸಾಗ್ರದಲ್ಲಿ ನಿಶ್ಚಲವಾದ ದೃಷ್ಟಿಯನ್ನಿಟ್ಟು, ಒಂದೇ ಸಮನಾಗಿ ತುಟಿಗಳನ್ನಾಡಿಸುತ್ತ, ಬಲಗೈ ಬೆರಳುಗಳಿಂದ ರುದ್ರಾಕ್ಷಿಗಳ ಸರವನ್ನು ತಿರುಗಿಸುತ್ತ, ಹೊಸದಾಗಿ ಶುದ್ಧಿಮಾಡಿದುದರಿಂದ ಇನ್ನೂ ಒದ್ದೆಯಾಗಿರುವ ವಲ್ಕಲಗಳನ್ನುಟ್ಟುಕೊಂಡು ಸಂಧ್ಯಾಕಾಲದ ಮೇಘಗಳಿಂದಾವೃತವಾದ ಪರ್ವತದಂತೆ ತೋರುವವನಾಗಿ, ಅರಿಷಡ್ವರ್ಗಗಳೆಂಬ ಹಿಂಸ್ರಜಂತುಗಳನ್ನು ಹಿಡಿಯುವುದಕ್ಕಾಗಿ ಬೀಸಿರುವ ಬಲೆಯಂತೆ ಕಾಣುವ ಯಜ್ಞೋಪವೀತತ್ರಿತಯವನ್ನು ಎದೆಯಲ್ಲಿ ಧರಿಸಿದವನಾಗಿ, ತನಗೆ ಅತಿಥಿಸತ್ಕಾರವನ್ನು ಮಾಡಿದ ಆ ಮುನಿ

ಕೃತೋಚಿತೋಪಚಾರಾ ಸಾ ತಮಪ್ರಾಕ್ಷೀತ್ತಪೋಧನಂ ।
ಪಾರ್ವತ್ಯುವಾಚ:—
ಕಸ್ತ್ವಂ ಕೋಽಯಂ ಗಿರಿವರೋ ಯತ್ರತ್ವಂ ಕುರುಷೇ ತಪಃ ॥ ೩೯ ॥
ಸಚಾಹಾರುಣಶೈಲೋಽಯಂ ಪುಣ್ಯಕ್ಷೇತ್ರೇಷು ಪೂಜಿತಃ ।
ಗೌತಮೋಽಹಂ ಮುನಿರ್ಮುಕ್ತ್ಯೈ ತಪಸಾರಾಧಯೇ ಶಿವಂ ॥ ೪೦ ॥
ಇತ್ಯುಕ್ತ್ವಾ ವಿಜಯಾದೀನಾಂ ಮುಖೇನೈನಾಂ ಶಿವಾಂ ವಿದನ್ ।
ಪ್ರಣಮ್ಯ ಭಕ್ತ್ಯಾ ಬಹುಶೋ ನೀತವಾನುಟಜಂ ನಿಜಂ ॥ ೪೧ ॥
ಕಂದಮೂಲಫಲಾದ್ಯೈಶ್ಚ ಕೃತಾತಿಥ್ಯಾಮಿಮಾಂ ಮುನಿಃ ।
ಜಗನ್ಮಂಗಳಮೂಲಾಯ ತಪಸೇ ಚಾನ್ವಮನ್ಯತ ॥ ೪೨ ॥
ಜ್ಯೋತಿಃಸ್ತಂಭಸ್ಯ ಸಂಭೂತಿಮಾರಭ್ಯಾನುಕ್ರಮೇಣ ಸಃ ।
ಜಗಾದ ಚಾಸ್ಯೈ ಶೋಣಾದ್ರೇರ್ಮಹಿಮಾನಮಶೇಷತಃ ॥ ೪೩ ॥
ಶೋಣಾದ್ರೇಃ ಪೂರ್ವದಿಗ್ಭಾಗೇ ಸ್ಥಳೀಶ್ವರಮಿತಿ ಸ್ಥಳಂ ।
ಯತ್ರ ಸನ್ನಿಹಿತಃ ಶಂಭುರ್ಜ್ಯೋತಿರ್ಲಿಂಗಾತ್ಮತಾಂ ಗತಃ ॥ ೪೪ ॥

---

ಶ್ರೇಷ್ಠನನ್ನು ಕುರಿತು ಆಕೆಯು "ಎಲೈ ಮಹರ್ಷಿಯೆ! ನೀನು ಯಾರು? ಈ ಪವಿತ್ರವಾದ ಪರ್ವತವಾವುದು? ಇಲ್ಲಿ ನೀನು ತಪಸ್ಸನ್ನು ಮಾಡುತ್ತಿರುವೆಯಲ್ಲ!" ಎಂದು ಪ್ರಶ್ನೆಮಾಡಿದಳು.

೪೦. ಆತನು ಪ್ರತ್ಯುತ್ತರವಾಗಿ "ಈ ಪರ್ವತವೇ ಪುಣ್ಯಕ್ಷೇತ್ರಗಳಲ್ಲಿ ಅತ್ಯುತ್ತಮವಾದ ಅರುಣಾಚಲವೆಂಬುದು. ನನ್ನನ್ನು ಗೌತಮ ಮುನಿಯೆಂದು ಕರೆಯುವರು. ನಾನು ಮುಕ್ತಿಗಾಗಿ ಇಲ್ಲಿ ಶಿವನನ್ನು ಕುರಿತು ತಪಸ್ಸನ್ನು ಮಾಡುತ್ತಿರುವೆನು."

೪೧. ಹೀಗೆ ಹೇಳಿ ಆ ಮುನಿಯು ಸಖಿಯರಾದ ವಿಜಯೆಯೇ ಮೊದಲಾದವರಿಂದ ಬಂದವಳು ಪಾರ್ವತಿಯೆಂದು ನಿಶ್ಚಯಿಸಿ ಭಕ್ತಿಯಿಂದ ನಮಸ್ಕಾರವನ್ನು ಮಾಡಿ ಆಕೆಯನ್ನು ತನ್ನ ಗುಡಿಸಿಲಿಗೆ ಕರೆದುಕೊಂಡುಹೋದನು.

೪೨. ಕಂದಮೂಲ ಫಲಗಳಿಂದ ಆಕೆಗೆ ಸತ್ಕಾರವನ್ನು ಮಾಡಿ ಲೋಕಕಲ್ಯಾಣಕ್ಕಾಗಿ ತಪಸ್ಸನ್ನು ಮಾಡಲು ಈಕೆಯೇ ತಕ್ಕವಳೆಂದು ಗೌತಮನು ಅನುಮೋದಿಸಿದನು.

೪೩. ಬಳಿಕ ಜ್ಯೋತಿಸ್ತಂಭದ ಆವಿರ್ಭಾವವೇ ಮೊದಲಾಗಿ ಅರುಣಾಚಲದ ಮಾಹಾತ್ಮ್ಯವನ್ನು ಸಂಪೂರ್ಣವಾಗಿ ಯಥಾಕ್ರಮವಾಗಿ ಆಕೆಗೆ ತಿಳಿಸಿದನು.

೪೪. "ಅರುಣಾಚಲದ ಪೂರ್ವದಿಗ್ಭಾಗದಲ್ಲಿ ಸ್ಥಳೀಶ್ವರವೆಂಬ ಸ್ಥಳದಲ್ಲಿಯೇ ಪರಮೇಶ್ವರನು ಜ್ಯೋತಿರ್ಲಿಂಗದ ಆಕಾರವನ್ನು ಹೊಂದಿ ಸನ್ನಿಹಿತನಾಗಿರುವನು.

ವೈಕುಂಠಪರಮೇಷ್ಠ್ಯಾದಿಗೀರ್ವಾಣನಿಬಿಡೀಕೃತೇ ।
ನ ತತ್ರ ಮೇ ತಪಃ ಕರ್ತುಮವ್ಯಾಕ್ಷೇಪೇಣ ಶಕ್ಯತೇ ॥ ೪೫ ॥
ಅಯಂ ಶೋಣಗಿರೇಃ ಪಾದಃ ಪ್ರವಾಳಾಚಲನಾಮವಾನ್ ।
ಪುಣ್ಯಾರಣ್ಯೋಪರುದ್ಧತ್ವಾದ್ರಹಸ್ಯತ್ವಂ ವಿಗಾಹತೇ ॥ ೪೬ ॥
ತತ ಏವಾಹಮತ್ರೈವ ಪ್ರತಿಷ್ಠಾಪ್ಯ ತ್ರಿಲೋಚನಂ ।
ಆರಾಧಯೇ ಯಥಾಶಕ್ತಿ ತಪೋಭಿಃ ಕಲ್ಪಿತಾತ್ಮಭಿಃ ॥ ೪೭ ॥
ಮಮಾಶ್ರಮಸಮೀಪೇಽಸ್ಮಿನ್ಪುಣ್ಯಕ್ಷೇತ್ರಮಿದಂ ಮಹತ್ ।
ಕ್ರಿಯತಾಮಾಶ್ರಮೋ ದೇವ್ಯಾ ಕರ್ತವ್ಯಂ ಹಿ ತಪಶ್ಚಿರಂ ॥ ೪೮ ॥
ಮುನೇರೇವಮನುಜ್ಞಾನಾತ್ಕೃತಾಶ್ರಮಪರಿಗ್ರಹಾ ।
ಉದಯುಙ್ಕ್ತ ತಪಃ ಕರ್ತುಂ ಸುಮಹತ್ಪರ್ವತಾತ್ಮಜಾ ॥ ೪೯ ॥
ಆಶ್ರಮಂ ರಕ್ಷಿತುಂ ಸತ್ಯವತೀಂ ಕಾನನವಾಸಿನೀಂ ।
ಶುಭಗಾಂ ಧುಂಧುಮಾರಿಂ ಚ ಪ್ರಾಗಾದ್ಯಾಶಾಸ್ವತಿಷ್ಠಿಪತ್ ॥ ೫೦ ॥
ತಪೋವನಸ್ಯ ಸರ್ವಸ್ಯ ರಕ್ಷಾರ್ಥಂ ಸಾ ಸಮಾದಿಶತ್ ।
ದುರ್ಗಾಮನರ್ಗಳಸ್ಫೂರ್ತಿಮಾಜ್ಞಾನಿರ್ವಹಣಕ್ಷಮಾಂ ॥ ೫೧ ॥

---

೪೫. ನಾರಾಯಣ ಬ್ರಹ್ಮರೆ ಮೊದಲಾದ ಸಕಲ ದೇವತೆಗಳಿಂದ ತುಂಬಿ ತುಳುಕುತ್ತಿರುವ ಆ ಪ್ರದೇಶದಲ್ಲಿ ನಿರಾಂತಕವಾಗಿ ತಪಸ್ಸನ್ನು ಮಾಡಲು ನನಗೆ ಅಶಕ್ಯವು.

೪೬. ಈ ಅರುಣಾಚಲದ ಪಾದಪ್ರದೇಶಕ್ಕೆ ಪ್ರವಾಳಾಚಲವೆಂದು ಹೆಸರು. ಪುಣ್ಯಾರಣ್ಯಗಳಿಂದ ನಿಬಿಡವಾಗಿರುವ ಈ ಪ್ರದೇಶವು ರಹಸ್ಯವಾಗಿರುವುದು.

೪೭–೪೮. ಆದುದರಿಂದಲೇ ನಾನು ಇಲ್ಲಿಯೇ ಶಿವಲಿಂಗವನ್ನು ಪ್ರತಿಷ್ಠೆ ಮಾಡಿ ಶಕ್ತ್ಯನುಸಾರವಾಗಿ ಆತ್ಮಶುದ್ಧಿಪೂರ್ವಕವಾದ ತಪಸ್ಸಿನಿಂದ ಪೂಜಿಸುತ್ತಿರುವೆನು. ನೀನೂ ಸಹ ಪುಣ್ಯಕ್ಷೇತ್ರವಾದ ಈ ನನ್ನ ಆಶ್ರಮದ ಸಮೀಪದಲ್ಲಿಯೇ ಮತ್ತೊಂದು ಆಶ್ರಮವನ್ನು ಕಟ್ಟಿಕೊಂಡು ಕೆಲವು ಕಾಲ ತಪಸ್ಸನ್ನು ಮಾಡು.''

೪೯–೫೦. ಈ ರೀತಿಯಾಗಿ ಮಹರ್ಷಿಯ ಅನುಜ್ಞೆಯನ್ನು ಹೊಂದಿ ಪಾರ್ವತಿಯು ಆಶ್ರಮವನ್ನು ಕಲ್ಪಿಸಿಕೊಂಡು ಉಗ್ರವಾದ ತಪಸ್ಸನ್ನು ಮಾಡಲು ಉದ್ಯುಕ್ತಳಾದಳು. ಆಶ್ರಮ ಪ್ರದೇಶವನ್ನು ರಕ್ಷಿಸುವುದಕ್ಕಾಗಿ ಸತ್ಯವತಿ, ಕಾನನವಾಸಿನಿ, ಶುಭಗಾ ಮತ್ತು ಧುಂಧುಮಾರಿಯರನ್ನು ಕ್ರಮವಾಗಿ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ನಿಲ್ಲಿಸಿದಳು.

೫೧. ತಪೋವನದ ಸ್ಥಳವನ್ನು ನೋಡಿಕೊಳ್ಳುವುದಕ್ಕೆ ನಿರ್ಮಲಜ್ಞಾನವುಳ್ಳ ಆಜ್ಞಾನುವರ್ತಿನಿಯಾದ ದುರ್ಗಾದೇವಿಯನ್ನು ನೇಮಿಸಿದಳು.

ಅನಂತರಂ ಸಾ ಧಮ್ಮಿಲ್ಲಂ ಮಂದಾರಪ್ರಸವೋಚಿತಂ ।
ಜಟಾಭರತ್ವಂ ತಪಸೇ ಗಮಯಾಮಾಸ ಪಾರ್ವತೀ ॥ ೫೨ ॥
ಹಂಸಚಿಹ್ನದಶಂ ಹಿತ್ವಾ ದುಕೂಲಂ ಮಿಹಿಕಾಲಘು ।
ಪರುಷಂ ಸುಕುಮಾರಾಂಗೀ ಪರಿಧತ್ತೇ ಸ್ಮ ವಲ್ಕಲಂ ॥ ೫೩ ॥
ಅಪಿ ಪ್ರಸೂನಾವಚಯನಿಸ್ಸಹಾಂಗುಲಿ ಪಲ್ಲವಾ ।
ಅಲಾವೀದತಿತೀಕ್ಷ್ಣಾಗ್ರಾಣ್ಯವಿಕಾರಂ ಕುಶಾನಿ ಸಾ ॥ ೫೪ ॥
ವಜ್ರಸೂಚೀನಿರ್ಭರಾಂಗೈರವಚ್ಛಿನ್ನಾನಿ ಕಂಟಕೈಃ ।
ಶಿರೀಷಮೃದ್ವೀ ಶಾಂಡಿಲ್ಯಪಲ್ಲವಾನ್ಯುಚ್ಚಿಕಾಯ ಸಾ ॥ ೫೫ ॥
ಪಾವನ್ಯಾಂ ಕಮಲಾನದ್ಯಾಂ ಪ್ರಾತರ್ವಿಹಿತ ಮಜ್ಜನಾ ।
ಅರ್ಚಯಾಮಾಸ ರಕ್ತಾಬ್ಜೈರ್ಯಥಾವಿಧಿ ವಿಭಾಕರಂ ॥ ೫೬ ॥
ದರ್ಭಾಕ್ಷತ ತಿಲೋನ್ಮಿಶ್ರೈರ್ಗೌರೀ ಶ್ರೀನದಿವಾರಿಭಿಃ ।
ದೇವೀ ನಿರ್ವರ್ತಯಾಮಾಸ ದೇವರ್ಷಿಪಿತೃತರ್ಪಣಂ ॥ ೫೭ ॥
ವಾಲುಕಾಮಂಡಲೇ ಸೂರ್ಯಮಾವಾಹ್ಯಾಭ್ಯರ್ಚ್ಯ ಪಂಕಜೈಃ ।
ಕೃತಪ್ರದಕ್ಷಿಣಾ ಗೌರೀ ಪ್ರಣನಾಮ ಸಹಸ್ರಶಃ ॥ ೫೮ ॥

---

೫೨. ಬಳಿಕ ಮಂದಾರಪುಷ್ಪಗಳಿಂದಲಂಕರಿಸಲು ಯೋಗ್ಯವಾದ ತನ್ನ ಕೇಶಪಾಶವನ್ನು ತಪೋಯೋಗ್ಯವಾದ ಜಡೆಯನ್ನಾಗಿ ಮಾರ್ಪಡಿಸಿದಳು.

೫೩. ಹಂಸತೂಲದಂತೆ ಶುಭ್ರವಾಗಿ ಮಂಜಿನಂತೆ ಲಘುವಾದ ಅನರ್ಘ್ಯ ದುಕೂಲವನ್ನು ತ್ಯಜಿಸಿ ಕಠಿನವಾದ ನಾರುಬಟ್ಟೆಯನ್ನು ಸುಕುಮಾರಿಯಾದ ಪಾರ್ವತಿಯು ಧರಿಸಿದಳು.

೫೪. ಮೃದುಪುಷ್ಪಗಳನ್ನು ಕೊಯ್ಯುವುದಕ್ಕೂ ಕೂಡ ಸಾಧ್ಯವಾಗದಂತಹ ಕೋಮಲ ಹಸ್ತಗಳಿಂದ ತೀಕ್ಷ್ಣಾಗ್ರಗಳುಳ್ಳ ಕುಶಗಳನ್ನು ಮನೋವಿಕಾರ ವಿಲ್ಲದೆಯೇ ಕೊಯ್ಯಲನುವಾದಳು.

೫೫–೫೬. ಶಿರೀಷಪುಷ್ಪದಂತೆ ಮೃದುಶರೀರವುಳ್ಳ ಆಕೆಯು ವಜ್ರದ ಸೂಜಿಗಳಂತೆ ಕಠಿನಗಳಾದ ಮುಳ್ಳುಗಳ ಮಧ್ಯದಿಂದ ಬಿಲ್ವದಳಗಳನ್ನು ಕೊಯ್ಯಬೇಕಾಯಿತು. ಪುಣ್ಯತಮವಾದ ಕಮಲಾನದಿಯಲ್ಲಿ ಸ್ನಾನಮಾಡಿ ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಯಥಾವಿಧಿಯಾಗಿ ಪ್ರತಿದಿನವೂ ಕೆಂದಾವರೆಗಳಿಂದ ಸೂರ್ಯದೇವನನ್ನು ಪೂಜಿಸಿದಳು.

೫೭. ದರ್ಭೆ, ಅಕ್ಷತೆ ಮತ್ತು ತಿಲಗಳಿಂದೊಡಗೂಡಿದ ಆ ನದಿಯ ಜಲದಿಂದಲೇ ಗೌರಿಯು ದೇವ, ಋಷಿ ಮತ್ತು ಪಿತೃಗಳಿಗೆ ತರ್ಪಣಗಳನ್ನು ಕೊಡುತ್ತಿದ್ದಳು.

೫೮. ನದಿಯ ಮಳಲಿನಲ್ಲಿಯೇ ಮಂಡಲವನ್ನು ಮಾಡಿ ಸೂರ್ಯನನ್ನು

ಸ್ವಯಮೇವ ಪ್ರತಿಷ್ಠಾಪ್ಯ ಲಿಂಗಂ ಕಿಮಪಿ ಶಂಕರಂ ।
ಆಗಮೋಕ್ತೇನ ವಿಧಿನಾ ಪೂಜಯಾಮಾಸ ಪಾರ್ವತೀ ॥ ೫೯ ॥
ಆಸನೇನ ಚ ಮೂರ್ತ್ಯಾ ಚ ಮೂಲೇನಾಂಗೈಶ್ಚ ಸಾ ರವಿಂ ।
ದಂಡಿ ಪಿಂಗಳಮುಖ್ಯಾಂಶ್ಚ ಶಕ್ತೀರ್ದೀಪ್ತಾದಿಕಾ ಅಪಿ ॥ ೬೦ ॥
ತತ್ತದ್ದಿಕ್ಷು ಚ ಸೋಮಾದೀನ್ಗ್ರಹಾನ್ಧೇನ್ವಾದಿಮುದ್ರಯಾ ।
ತೇಜಶ್ಚಂಡೇ ಚಾರ್ಚಯಿತ್ವಾ ನಿರ್ಮಾಲ್ಯಂ ಚ ನ್ಯವೇದಯತ್ ॥ ೬೦ ॥
ಅರ್ಘ್ಯೇಣಾತೀವ ಶುದ್ಧೇನ ಸಂಪ್ರೋಕ್ಷ್ಯ ಚ ಸಮಂತತಃ ।
ದ್ವಾರವಾಸ್ತು ಸಮಭ್ಯರ್ಚ್ಯ ನ್ಯಾಸಾನಪಿ ಚಕಾರ ಸಾ ॥ ೬೨ ॥
ಭೂತಶುದ್ಧಿಂ ವಿಧಾಯಾನ್ತರ್ಗತಯಾಗಂ ಚಕಾರ ಸಾ ।
ಹೃದಿ ಪದ್ಮಾಸನೇ ಚಾರ್ಚ್ಯ ಜ್ಞಾನಧರ್ಮಾದಿಕಾನ್ಕ್ರಮಾತ್ ॥ ೬೩ ॥
ಶಕ್ತೀರ್ದಲೇಷು ವಾಮಾದೀರ್ದಲಾಗ್ರೇ ಸೂರ್ಯವೇಧಸೌ ।
ಕೇಸರಾಗ್ರೇ ಸೋಮವಿಷ್ಣೂ ಕರ್ಣಿಕಾಗ್ರೇಽಗ್ನಿಧೂರ್ಜಟೀ ॥ ೬೪ ॥
ತದೂರ್ಧ್ವೇ ಶಕ್ತಿಚಕ್ರಂ ಚ ವಿನ್ಯಸ್ತಬ್ರಹ್ಮಪಂಚಕಾ ।
ಅಂಗೈರ್ದತ್ವಾ ಚ ಪಾದ್ಯಾದೀನುಪಚರ್ಯಾಭಿಷಿಚ್ಯ ಸಾ ॥ ೬೫ ॥

---

ಆವಾಹನೆಮಾಡಿ ಕಮಲಗಳಿಂದ ಪೂಜಿಸಿ ಭಕ್ತಿಪೂರ್ವಕವಾಗಿ ಪ್ರದಕ್ಷಿಣೆಯನ್ನು ಮಾಡಿ ಸಹಸ್ರಸಂಖ್ಯಾಕವಾದ ನಮಸ್ಕಾರಗಳನ್ನು ಮಾಡಿದಳು.

೫೯. ತಾನೇ ಮರಳಿನ ಲಿಂಗವನ್ನು ಪ್ರತಿಷ್ಠೆ ಮಾಡಿ ಆಗಮದಲ್ಲಿ ಹೇಳಿರುವ ಪ್ರಕಾರದಿಂದ ಪಾರ್ವತಿಯು ಶಿವನನ್ನು ಪೂಜಿಸುತ್ತಿದ್ದಳು.

೬೦–೬೧. ಆಸನ, ವಿಗ್ರಹ, ಮೂಲಮಂತ್ರ ಮತ್ತು ಅಂಗಗಳಿಂದ ಸೂರ್ಯನನ್ನೂ, ದಂಡಿ, ಪಿಂಗಳ ಮುಂತಾದವರನ್ನೂ, ದೀಪ್ತಾದಿ ಮಹಾ ಶಕ್ತಿಯರನ್ನೂ, ಚಂದ್ರನೇ ಮೊದಲಾದ ನವಗ್ರಹಗಳನ್ನೂ ಅವರವರ ದಿಕ್ಕುಗಳಲ್ಲಿ ಧೇನುಮುದ್ರೆ ಮುಂತಾದ ಮುದ್ರೆಗಳಿಂದಲೂ, ತೇಜಸ್ಸು, ಚಂಡರುಗಳನ್ನೂ ಪೂಜಿಸಿ ಶಿವನಿರ್ಮಾಲ್ಯವನ್ನು ನಿವೇದನ ಮಾಡಿದಳು.

೬೨. ಅತ್ಯಂತ ಪರಿಶುದ್ಧವಾದ ತೀರ್ಥದಿಂದ ಸ್ಥಳವನ್ನೆಲ್ಲ ಸಂಪ್ರೋಕ್ಷಿಸಿ ದ್ವಾರದಲ್ಲಿ ವಾಸ್ತುಪುರುಷನ ಆವಾಹನೆಯನ್ನು ಮಾಡಿ ಅಂಗನ್ಯಾಸ ಕರನ್ಯಾಸ ಗಳನ್ನು ಮಾಡಿದಳು.

೬೩–೬೬. ಬಳಿಕ ಭೂತಶುದ್ಧಿಯನ್ನು ಮಾಡಿಕೊಂಡು ತನ್ನ ಶರೀರ ದಲ್ಲಿಯೇ ಮನೋಯಜ್ಞವನ್ನು ಮಾಡಿಕೊಂಡಳು. ಹೃದಯಪದ್ಮದಲ್ಲಿಯೇ ಜ್ಞಾನ, ಧರ್ಮ ಮುಂತಾದ ಗುಣಗಳನ್ನು ಪೂಜಿಸಿ, ಆ ಪದ್ಮದಳಗಳಲ್ಲಿ ವಾಮಾದಿ ಶಕ್ತಿಗಳನ್ನೂ, ದಳಗಳ ಅಗ್ರಗಳಲ್ಲಿ ಸೂರ್ಯಬ್ರಹ್ಮರನ್ನೂ, ಕೇಸರ ಗಳಲ್ಲಿ ಚಂದ್ರವಿಷ್ಣುಗಳನ್ನೂ, ಕರ್ಣಿಕೆಯಲ್ಲಿ ಅಗ್ನಿರುದ್ರರನ್ನೂ, ಆ ಪದ್ಮದ

ಪ್ರಾದಾಚ್ಚಂದನಪುಷ್ಪಾದಿ ಧೂಪದೀಪಪ್ರದಾಯಿನೀ ।
ಭೂಯೋಽಪಿ ಪಂಚಬ್ರಹ್ಮಾಣಿ ಷಡಂಗಾನ್ಯಪ್ಯಪೂಜಯತ್ ॥ ೬೬ ॥
ತತ್ತದ್ದಿಕ್ಷು ಚ ಶಕ್ರಾದೀನ್ವಜ್ರಾದೀಂಶ್ಚ ವಿಧಾನತಃ ।
ಕೃತ್ವಾ ಸರ್ವೋಪಚಾರಾಂಶ್ಚ ವಿತತಾರಾಷ್ಟಪುಷ್ಪಿಕಾಂ ॥ ೬೭ ॥
ಪಂಚವಕ್ತ್ರಾಣಿ ಚಾಭ್ಯರ್ಚ್ಯ ಕೃತಚಂಡೇಶ್ವರಾರ್ಚನಾ ।
ಪ್ರದಕ್ಷಿಣಪ್ರಣಾಮಾದ್ಯೈರ್ನಿತ್ಯಂ ಶಿವಮಪೂಜಯತ್ ॥ ೬೮ ॥
ಶಿವಾಗಮೋಕ್ತವಿಧಿನಾ ದ್ರವ್ಯೈಃ ಸೌಭಾಗ್ಯದಾಯಿಭಿಃ ।
ಸಾ ಜುಹಾವ ಚ ಪೂಜಾಂತೇ ಪ್ರಣೀತೇ ಜಾತವೇದಸಿ ॥ ೬೯ ॥
ಪರಿಕಲ್ಪಿತೋಪಚಾರಾ ಚ ಕಂದಮೂಲಫಲಾದಿಕೈಃ ।
ಸ್ವಯಂ ಕೃತೋಪಚಾರೇಯಮತಿಥೀನಭ್ಯಪೂಜಯತ್ ॥ ೭೦ ॥
ಅಂಗುಷ್ಠಾಗ್ರೇಣ ತಿಷ್ಠಂತೀ ಗ್ರೀಷ್ಮೇ ಪಂಚಾಗ್ನಿಮಧ್ಯತಃ ।
ಹ್ರದೇ ಚ ಶಿಶಿರೇ ಚಂದ್ರಪೀಯೂಷಾಪ್ಯಾಯಿತಾ ಭವತ್ ॥ ೭೧ ॥

---

ಮೇಲುಗಡೆಯಲ್ಲಿ ಶಕ್ತಿಚಕ್ರವನ್ನೂ ಚಿಂತಿಸಿ ಪಂಚವೇದಗಳನ್ನೂ ವಿನ್ಯಾಸ ಮಾಡಿಕೊಂಡು ಸಾಂಗವಾಗಿ ಪಾದ್ಯಾದಿಗಳಿಂದ ಉಪಚರಿಸಿ ಅಭಿಷೇಕಮಾಡಿ, ಚಂದನ, ಪುಷ್ಪ, ದೀಪ, ಧೂಪ ಮುಂತಾದುವುಗಳನ್ನು ಅರ್ಪಿಸಿದಳು. ಮತ್ತೆ ಪಂಚವೇದಗಳನ್ನೂ, ಷಡಂಗಗಳನ್ನೂ ಪೂಜೆಮಾಡಿದಳು.

೬೭. ದಿಕ್ಕುಗಳಲ್ಲಿ ಯಥಾಕ್ರಮವಾಗಿ ಇಂದ್ರಾದಿ ದೇವತೆಗಳನ್ನೂ ಅವರ ವಜ್ರಾದಿ ಆಯುಧಗಳನ್ನೂ ಆವಾಹನೆ ಮಾಡಿ ಸಕಲ ಉಪಚಾರಗಳಿಂದ ಪೂಜಿಸಿ ಅಷ್ಟಪುಷ್ಪಿಕೆಯನ್ನು ನೆರವೇರಿಸಿದಳು.

೬೮. ಚಂಡಿಕೇಶ್ವರನ ಪೂಜೆಯನ್ನು ಮಾಡಿ ಸದ್ಯೋಜಾತವೇ ಮೊದಲಾದ ಪಂಚಮುಖಗಳನ್ನು ಅರ್ಚಿಸಿ ಪ್ರದಕ್ಷಿಣೆ ನಮಸ್ಕಾರಗಳಿಂದ ನಿತ್ಯವೂ ಶಿವನನ್ನು ಪೂಜಿಸುತ್ತಿದ್ದಳು.

೬೯. ಪೂಜೆಯು ಸಾಂಗವಾಗಿ ನೆರವೇರಿದಮೇಲೆ ಶಿವಾಗಮಗಳಲ್ಲಿ ಹೇಳಿರುವ ವಿಧಿಯನ್ನನುಸರಿಸಿ ಸೌಭಾಗ್ಯದಾಯಕಗಳಾದ ಪದಾರ್ಥಗಳಿಂದ ಅಗ್ನಿಯಲ್ಲಿ ಹೋಮವನ್ನು ಮಾಡಿದಳು.

೭೦. ಕಂದಮೂಲಫಲಾದಿ ದ್ರವ್ಯಗಳಿಂದ ಉಪಚಾರಗೊಂಡವಳಾಗಿ ತಾನೂ ಸಹ ಅಂತೆಯೇ ಅತಿಥಿಗಳಿಗೆ ಸತ್ಕಾರವನ್ನು ಮಾಡುತ್ತಿದ್ದಳು.

೭೧. ಗ್ರೀಷ್ಮಕಾಲದಲ್ಲಿ ಪಂಚಾಗ್ನಿ ಮಧ್ಯದಲ್ಲಿ ಕಾಲ ಹೆಬ್ಬೆರಳಿನಮೇಲೆ ನಿಂತುಕೊಂಡೂ, ಶಿಶಿರ ಋತುವಿನಲ್ಲಿ ಗಂಟಲವರೆಗೆ ನೀರಿನಲ್ಲಿ ನಿಂತೂ ಚಂದ್ರನ ಅಮೃತವನ್ನೇ ಪಾನಮಾಡುತ್ತಿದ್ದಳು.

ವರ್ಷರಾತ್ರಿಷು ಧಾರಾಭಿಃ ಸಹವಾರಿಧರಾ ಪುನಃ ।
ಸೌದಾಮಿನೀವ ದದೃಶೇ ತಮಸಿ ಸ್ತಿಮಿತಾಕೃತಿಃ ॥ ೭೨ ॥
ಪಾಣಿಪಾದೇನ ಪದ್ಮಾನಿ ಮುಖೇನ ಚ ಕಲಾನಿಧಿಂ ।
ಪ್ರದರ್ಶಯತ್ಯನಾಯಾಸಾನ್ನಿನ್ಯೇ ಸಾ ಹೈಮನೀರ್ನಿಶಾಃ ॥ ೭೩ ॥
ನೀವಾರಬೀಜದಾನೇನ ಸಾ ಮೃಗಾನಪ್ಯಪೋಷಯತ್ ।
ಅಜ್ಞಾತಹಿಂಸಾಭಿಭವಾನಾಶ್ರಮೋಪಾಂತವಾಸಿನಃ ॥ ೭೪ ॥
ಕೃತಾಲವಾಲಸಲಿಲೈಃ ಸುಬಾಲಾ ಕಲಶಾಹೃತೈಃ ।
ವಾತ್ಸಲ್ಯಾದ್ವರ್ಧಯಾಮಾಸ ಪೂರ್ಣಾನಾಶ್ರಮಪಾದಪಾನ್ ॥ ೭೫ ॥
ಪ್ರದಕ್ಷಿಣಾಂ ಕೃತವತೀ ಶೋಣಶೈಲಂ ಗಿರೀಂದ್ರಜಾ ।
ಸಾ ಮನೋರಥಸಂಸಿದ್ಧ್ಯೈ ನಿತ್ಯಂ ಸಹ ಸಖೀಜನೈಃ ॥ ೭೬ ॥
ಪಂಚಾಕ್ಷರೀಂ ಜಜಾಪೈಷಾ ಶಿವಸ್ತೋತ್ರಾಣ್ಯುದೈರಯತ್ ।
ದಧ್ಯೌ ಚ ದೇವಂ ಮನಸಾ ಶೋಣಪರ್ವತರೂಪಿಣಂ ॥ ೭೭ ॥

---

೭೨. ವರ್ಷಾಕಾಲದಲ್ಲಿ ಮುಗಿಲುಗಳೊಡನೆ ಜಲಧಾರೆಗಳಿಂದ ತಾನೂ ಸಹ ಒದ್ದೆಯಾದ ಮೈಯುಳ್ಳವಳಾಗಿ ಕತ್ತಲಿನಲ್ಲಿ ನಿಶ್ಚಲವಾಗಿ ನಿಂತ ಮಿಂಚಿನ ಬಳ್ಳಿಯಂತೆ ಕಾಣುತ್ತಿದ್ದಳು.

೭೩. ಕೈಕಾಲುಗಳಿಂದ ಕಮಲಗಳನ್ನೂ, ಮುಖದಿಂದ ಚಂದ್ರನನ್ನೂ ತಿರಸ್ಕರಿಸಿರುವವಳಾಗಿ ಆಕೆಯು ಅನಾಯಾಸವಾಗಿಯೇ ಹಿಮಕಾಲದ ರಾತ್ರಿಗಳನ್ನು ಕಳೆದಳು.

೭೪. ನವಣೆಯ ಧಾನ್ಯವನ್ನು ಕೊಟ್ಟು ಜಿಂಕೆಯ ಮರಿಗಳನ್ನು ಪೋಷಿಸಿದಳು. ಅವುಗಳು ಹಿಂಸೆಯೆಂಬುದನ್ನೇ ಅರಿಯದೆ ಆಶ್ರಮದ ಸಮೀಪದಲ್ಲಿಯೇ ಓಡಿಯಾಡುತ್ತಿದ್ದುವು.

೭೫. ತನ್ನ ಸಖಿಯರು ಕಲಶಗಳಲ್ಲಿ ತಂದ ನೀರನ್ನು ಪಾತಿಗಳಲ್ಲಿ ಹಾಕುತ್ತ ಆಶ್ರಮದ ವೃಕ್ಷಗಳೆಲ್ಲವನ್ನೂ ವಾತ್ಸಲ್ಯಭಾವದಿಂದ ಬೆಳಸುತ್ತಿದ್ದಳು.

೭೬. ತನ್ನ ಮನೋರಥವನ್ನು ನೆರವೇರಿಸಿಕೊಳ್ಳುವುದಕ್ಕಾಗಿ ನಿತ್ಯದಲ್ಲಿಯೂ ತನ್ನ ಸಖಿಯರೊಡಗೂಡಿ ಆ ಗಿರಿಜೆಯು ಅರುಣಾಚಲದ ಪ್ರದಕ್ಷಿಣೆಯನ್ನು ಮಾಡುತ್ತಿದ್ದಳು.

೭೭. ಪಂಚಾಕ್ಷರೀ ಮಂತ್ರವನ್ನು ಜಪಿಸಿದಳು. ಅನೇಕ ಶಿವಸ್ತೋತ್ರಗಳನ್ನು ಹೇಳಿದಳು. ಅರುಣಾಚಲರೂಪಿಯಾದ ಪರಮೇಶ್ವರನನ್ನು ನಿರಂತರವೂ ಧ್ಯಾನಿಸುತ್ತಿದ್ದಳು.

ಅನುದಿನಮರುಣಾಚಲೇಶ್ವರಂ ಸಾ
ಪ್ರಣತವತೀ ವಿಹಿತಪ್ರದಕ್ಷಿಣಾದ್ಯೈಃ ।
ಶಿವನಿಗಮವಿಧಾನವೇದಿನೀ ಸಾ
ವ್ಯರಚಯದದ್ರಿಸುತಾ ಚಿರಂ ತಪಸ್ಯಾಂ ॥ ೭೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ಪಾರ್ವತೀಕೃತಾರುಣಾಚಲೇಶ್ವರ ಪರಿಚರಣವರ್ಣನಂ" ನಾಮ ಅಷ್ಟಾದಶೋಽಧ್ಯಾಯಃ

---

೭೮. ಪ್ರತಿದಿನವೂ ಶೈವಾಗಮರಹಸ್ಯಗಳನ್ನರಿತ ಆ ಪಾರ್ವತಿಯು ಅರುಣಾಚಲೇಶ್ವರನನ್ನು ನಿಯಮಾನುಸಾರವಾದ ಪ್ರದಕ್ಷಿಣೆ ಪೂರ್ವಕವಾಗಿ ನಮಸ್ಕರಿಸಿ, ಬಹುಕಾಲ ತಪಸ್ಸನ್ನು ಮಾಡಿದಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ಪಾರ್ವತಿಯು ಅರುಣಾಚಲೇಶ್ವರನನ್ನು ಪೂಜಿಸಿದುದು" ಎಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನವಿಂಶೋಽಧ್ಯಾಯಃ

### ದೇವ್ಯಾಸ್ತಪಶ್ಚರ್ಯಾಯಾಂ ದುರ್ಗಾಕೃತ ಮಹಿಷಾಸುರವಧ ವರ್ಣನಂ

ನಂದಿಕೇಶ್ವರ ಉವಾಚ :-

ತಾವತ್ಕುತಶ್ಚಿದಾಕರ್ಣ್ಯ ತತ್ರಸ್ಥಾಂ ಮಹಿಷಾಸುರಃ ।
ಅವಜ್ಞಾತಸುರಾರಾತಿರ್ವಿಧ್ವಂಸಿತಪುರಂದರಃ ॥ ೧ ॥
ಸರ್ವಲೋಕಜಯೀ ಸಿದ್ಧವಿದ್ಯಾಧರಭಯಾವಹಃ ।
ದುರ್ನಿಗ್ರಹೋ ವರಾದಾಸೀಚ್ಛಸ್ತ್ರಾಸ್ತ್ರೈರಖಿಲೈರಪಿ ॥ ೨ ॥
ತೀಕ್ಷ್ಣಾನಾಮಪಿ ಶಾಪಾನಾಮಪ್ಯಗೋಚರತಾಂ ಗತಃ ।
ದರ್ಪದ್ಭಿರ್ದಾನವೈರ್ದೈತ್ಯೈಃ ಕೌಣಪೈಶ್ಚ ನಿಷೇವಿತಃ ॥ ೩ ॥
ದೂಷಕೋ ಮುನಿಪತ್ನೀನಾಂ ಧರ್ಮಮಾರ್ಗೋಪಘಾತಕಃ ।
ಬಲಾತ್ಪುಲೋಮ್ನೋ ನಮುಚೇಃ ವೃತ್ರಾದಪಿ ಬಲಾಧಿಕಃ ॥ ೪ ॥
ಹಿರಣ್ಯಕಶಿಪೋರ್ವಂಶ್ಯೋ ಹಿರಣ್ಯಾಕ್ಷ ಇವಾಪರಃ ।
ತಾಂ ವಿಲೋಭಯಿತುಂ ಕಾಂಚಿತ್ಪ್ರಾಹಿಣೋತ್ಕಿಲ ದೂತಿಕಾಂ ॥ ೫ ॥

---

## ಕನ್ನಡದ ಅನುವಾದ

### ದುರ್ಗಾದೇವಿಯು ಮಹಿಷಾಸುರನನ್ನು ನಿಗ್ರಹಿಸಿದುದು

೧. ನಂದಿಕೇಶ್ವರನು ಹೇಳುತ್ತಾನೆ:—ಅಷ್ಟರಲ್ಲಿಯೇ ಆಕೆಯು ಅಲ್ಲಿರುವುದನ್ನು ಕೆಲವರು ಮಹಿಷಾಸುರನಿಗೆ ತಿಳಿಸಿದರು. ಆತನು ತನ್ನ ಸಾಮರ್ಥ್ಯದಿಂದ ದೇವತೆಗಳನ್ನೂ ಲೆಕ್ಕಿಸದೆ ಇಂದ್ರನನ್ನೇ ನಿಗ್ರಹಮಾಡಿದ್ದನು.

೨. ಹದಿನಾಲ್ಕು ಲೋಕಗಳನ್ನೂ ಜಯಿಸಿ ಸಿದ್ಧವಿದ್ಯಾಧರರಿಗೆ ಭಯವನ್ನುಂಟುಮಾಡಿದ್ದನು. ಬ್ರಹ್ಮನಿತ್ತ ವರಪ್ರಭಾವದಿಂದ ಯಾವ ಅಸ್ತ್ರಶಸ್ತ್ರಗಳಿಂದಲೂ ಅವಧ್ಯನಾಗಿದ್ದನು.

೩. ತೀಕ್ಷ್ಣಗಳಾದ ಶಾಪಗಳೂ ಅವನಲ್ಲಿ ವ್ಯರ್ಥಗಳಾದುವು. ಗರ್ವಿಷ್ಠರಾದ ದಾನವರೂ, ದೈತ್ಯರೂ, ರಾಕ್ಷಸರೂ ಅವನನ್ನು ಸೇವಿಸುತ್ತಿದ್ದರು.

೪. ಮುನಿಪತ್ನಿಯರನ್ನು ದೂಷಿಸಿ ಧರ್ಮಕಾರ್ಯಗಳಿಗೆ ವಿಘ್ನಕಾರಕನಾಗಿ ಶರೀರಶಕ್ತಿಯಲ್ಲಿ ಪುಲೋಮ, ನಮುಚಿ ಮತ್ತು ವೃತ್ರಾಸುರರಿಗೆ ಅಧಿಕನಾಗಿದ್ದನು.

೫. ಹಿರಣ್ಯಕಶಿಪುವಿನ ವಂಶದಲ್ಲಿ ಹುಟ್ಟಿ ಎರಡನೆಯ ಹಿರಣ್ಯಾಕ್ಷನಂತೆ ವರ್ತಿಸುತ್ತ ಆ ಪಾರ್ವತಿಯನ್ನು ಪ್ರಲೋಭನಮಾಡಲು ಒಬ್ಬ ದೂತಿಯನ್ನು ಆಕೆಯಲ್ಲಿಗೆ ಕಳುಹಿಸಿದನು.

ತತಃ ಸಾ ತಾಪಸೀವೇಷಧಾರಿಣೀ ಗಿರಿಜಾಂ ಪ್ರತಿ ।
ಸಖೀ ಸಮಕ್ಷ ಏವೇದಮುವಾಚಾನುಚಿತಂ ವಚಃ ॥ ೬ ॥
ಅರಾರು ಭೀಷಣೇ ಭೀರೋ ನಿವಸಸ್ಯತ್ರ ಕಿಂ ವನೇ ।
ವಿಹರ್ತುಮುಚಿತಾ ರಮ್ಯೇಷ್ವವರೋಧನವೇಶ್ಮಸು ॥ ೭ ॥
ಕಿಮರ್ಥಂ ವಾದ್ಯ ಚಿತ್ತಂ ತೇ ಯೌವನೇ ಭೋಗನಿಸ್ಪೃಹಂ ।
ನಿವೇಶಿತಂ ತಪಸಿ ಚ ದೈವತೈರಪಿ ದುಷ್ಕರೇ ॥ ೮ ॥
ಹಂಸತೂಲಮಯೀಂ ಶಯ್ಯಾಂ ಮುಕ್ತಾಮಯವಿತಾನಿಕಾಂ ।
ಹಿತ್ವಾ ಕಿಮಿತಿ ಮೃದ್ವಂಗಿ ಸುಪ್ಯತೇ ಪರುಷಾಶ್ಮಸು ॥ ೯ ॥
ತಪೋಜಡೋ ಮೃಡೋ ದಿಷ್ಟ್ಯಾ ಪ್ರಾಗೇವಾಸ್ತಿ ತ್ವಯೋಜ್ಝಿತಃ ।
ತವಾನುರೂಪೋ ನೈವಾನ್ಯೋ ವಿದ್ಯತೇ ದಿವಿಷತ್ಸು ಚ ॥ ೧೦ ॥
ಕಿಂತು ತ್ರೈಲೋಕ್ಯ ನಾಥೋಽಸ್ತಿ ಮಹಿಷೋ ದಾನವೇಶ್ವರಃ ।
ಯದಿ ದ್ರಕ್ಷ್ಯಸಿ ತಂ ಸುಭ್ರು ತ್ಯಕ್ಷ್ಯಸ್ಯೇವ ಕ್ಷಣಾತ್ತಪಃ ॥ ೧೧ ॥
ಕಿಂ ನಿಹ್ನವೇನ ನನ್ವೇಷ ಶ್ರುತ್ವಾ ಸರ್ವಂ ಚಿರಾತ್ಪ್ರಭುಃ ।
ಸ ಪ್ರಾಹಿಣೋದುಪಾನೇತುಂ ದೂತಿಕಾಂ ಮಾಂ ಸ್ಮರಾತುರಃ ॥ ೧೨ ॥

---

೬. ಆ ದೂತಿಯು ತಪಸ್ವಿನಿಯ ವೇಷವನ್ನು ಧರಿಸಿ ಗಿರಿಜೆಯಲ್ಲಿಗೆ ಬಂದು ಸಖಿಯರ ಎದುರಿನಲ್ಲಿಯೇ ಈ ಅನುಚಿತಗಳಾದ ಮಾತುಗಳನ್ನು ಆಡತೊಡಗಿದಳು.

೭. "ಎಲೈ ಭೀರುವೆ! ನೀನು ಈ ಕಾಡಿನಲ್ಲಿ ಏತಕ್ಕೆ ವಾಸಮಾಡು ತ್ತಿರುವೆ? ನಿಜವಾಗಿಯೂ ನೀನು ಅಂತಃಪುರದ ಉಪ್ಪರಿಗೆಗಳಲ್ಲಿ ಮನೋಹರ ವಾಗಿ ಕ್ರೀಡಿಸುವುದಕ್ಕೆ ಯೋಗ್ಯಳು.

೮. ಈ ನವಯೌವನದಲ್ಲಿಯೇ ನಿನ್ನ ಮನಸ್ಸು ಭೋಗಗಳಿಂದ ವಿರಾಗ ವನ್ನು ಹೊಂದಿ ದೇವತೆಗಳಿಗೂ ದುಸ್ಸಾಧ್ಯವಾದ ತಪಸ್ಸನ್ನು ಮಾಡುವುದರಲ್ಲಿ ಅಭಿಲಾಷೆಯನ್ನೇಕೆ ಹೊಂದಿತು?

೯. ಎಲೌ ಸುಕುಮಾರಿಯೇ! ಮುತ್ತುಗಳ ಸರಗಳಿಂದಲಂಕೃತವಾದ ಹಂಸತೂಲಿಕಾತಲ್ಪವನ್ನು ಬಿಟ್ಟು ಏತಕ್ಕೆ ತಾನೆ ನೀನು ಕಠಿನವಾದ ಕಲ್ಲಿನಮೇಲೆ ಮಲಗಬೇಕು?

೧೦. ತಪಸ್ಸಿನಿಂದ ಜಡನಾದ ಈಶ್ವರನು ಮೊದಲೇ ನಿನ್ನಿಂದ ತ್ಯಕ್ತನಾಗಿ ರುವನು. ದೇವತೆಗಳಲ್ಲಿ ನಿನಗೆ ಅನುರೂಪನಾದ ಪುರುಷನು ಮತ್ತಾವನೂ ಇಲ್ಲ.

೧೧. ಆದರೆ ಮೂರು ಲೋಕಗಳಿಗೂ ಒಡೆಯನಾದ ಮಹಿಷನೆಂಬ ರಾಕ್ಷಸೇಶ್ವರನೊಬ್ಬನಿರುವನು. ಅವನನ್ನು ನೋಡಿದಮಾತ್ರದಿಂದಲೇ ನೀನು ತಪಸ್ಸನ್ನು ತಕ್ಷಣವೇ ಬಿಟ್ಟುಬಿಡುವೆ.

೧೨. ಬಹಳವಾದ ಸುತ್ತುಮಾತುಗಳಿಂದೇನು? ಆತನೇ ಕಾಮಾತುರನಾಗಿ

ಇತ್ಯತ್ಯಂತವಿರುದ್ಧಂ ತಾಂ ಬ್ರುವಾಣಾಮಸಮಂಜಸಂ ।
ದೇವ್ಯಾಶ್ಚಿತ್ತಸ್ಥಿತಿಂ ಜ್ಞಾತ್ವಾ ವಿಜಯಾ ನಿರಕಾಸಯತ್ ॥ ೧೩ ॥
ಸಾ ಚಾತಿರೋಷೇಣ ಕೃತಪ್ರತಿಜ್ಞಾ ದೈತ್ಯರೂಪಿಕಾ ।
ಗತ್ವಾ ವಿದಿತವೃತ್ತಾಂತಮಕರೋನ್ಮಹಿಷಾಸುರಂ ॥ ೧೪ ॥
ಸೋಽಪಿ ತತ್ಸರ್ವಮಾಕರ್ಣ್ಯ ರುಷಾತೀವಾರುಣೇಕ್ಷಣಃ ।
ದೇವೀಂ ಜಿಘೃಕ್ಷುರಭ್ಯಾಗಾದ್ವೃತೋ ದೈತೇಯಕೋಟಿಭಿಃ ॥ ೧೫ ॥
ಸ್ಯಂದನೈರ್ದ್ವಿರದೈರಶ್ವೈಃ ಪತ್ತಿಭಿಶ್ಚ ಸಮಂ ತತಃ ।
ಭುವಮಾಚ್ಛಾದಯಾಮಾಸ ಧ್ವಜೈಶ್ಚ ಗಗನಾಂತರಂ ॥ ೧೬ ॥
ಕ್ಷ್ವೇಳಿತೈರ್ವಾದ್ಯಘೋಷೈಶ್ಚ ನಭಃ ಸ್ಫುಟಮಿವಾಭವತ್ ।
ಪಾದಾಘಾತೈಶ್ಚ ದೈತ್ಯಾನಾಂ ವಿದದ್ರೇ ವಸುಧಾತಲಂ ॥ ೧೭ ॥
ಕರಾಳೋ ದುರ್ಧರಸ್ತಸ್ಯ ವಿಚಕ್ಷುರ್ವಿಕರಾಳಕಃ ।
ಬಾಷ್ಕಲೋ ದುರ್ಮುಖಶ್ಚಂಡಃ ಪ್ರಚಂಡಶ್ಚಾಮರಾಸುರಃ ॥ ೧೮ ॥
ಮಹಾಹನುರ್ಮಹಾಮೌಳಿರುಗ್ರಾಸ್ಯೋ ವಿಕಟೇಕ್ಷಣಃ ।
ಜ್ವಾಲಾಸ್ಯೋ ದಹನಶ್ಚೇಮೇ ಸೇನಾನ್ಯೋಽಪಿ ಪ್ರತಸ್ಥಿರೇ ॥ ೧೯ ॥

---

ನಿನ್ನ ವಿಷಯವೆಲ್ಲವನ್ನೂ ಕೇಳಿ ನಿನ್ನನ್ನು ಕರೆದುಕೊಂಡುಬರಲು ನನ್ನನ್ನು ದೂತಿಯಾಗಿ ಕಳುಹಿಸಿರುವನು.''

೧೩. ಹೀಗೆ ಅತ್ಯಂತ ಅಪ್ರಿಯವಾಗಿ ಅಸಮಂಜಸವಾದ ಮಾತುಗಳನ್ನು ಹೇಳುತ್ತಿರಲು ದೇವಿಯ ಅಂತರಂಗದ ಅಭಿಪ್ರಾಯವನ್ನು ತಿಳಿದು ವಿಜಯೆ ಯೆಂಬ ಸಖಿಯು ಆ ದೂತಿಯನ್ನು ಅಲ್ಲಿಂದ ಓಡಿಸಿದಳು.

೧೪-೧೫. ಆ ದೂತಿಯೂ ಸಹ ಅತಿರೋಷದಿಂದ ಕೂಡಿ ಪ್ರತಿಜ್ಞೆಯನ್ನು ಮಾಡಿ ತನ್ನ ಸಹಜವಾದ ರಾಕ್ಷಸರೂಪವನ್ನಂಗೀಕರಿಸಿ ಮಹಿಷಾಸುರನಿಗೆ ವೃತ್ತಾಂತವನ್ನೆಲ್ಲ ವಿವರಿಸಿದಳು. ಆ ರಾಕ್ಷಸನೂ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ದೂತಿಯ ಮಾತುಗಳೆಲ್ಲವನ್ನೂ ಕೇಳಿ ಆ ಪಾರ್ವತಿಯನ್ನು ಹಿಡಿಯಲು ಅನೇಕ ಕೋಟಿ ದೈತ್ಯರೊಡನೆ ಬಂದನು.

೧೬. ರಥ, ಗಜ, ತುರಗ, ಪದಾತಿಗಳ ಸೈನ್ಯದಿಂದ ಸಮಸ್ತ ಭೂಮಂಡಲ ವನ್ನೂ ಧ್ವಜಪತಾಕೆಗಳಿಂದ ಆಕಾಶವನ್ನೂ ತುಂಬಿದನು.

೧೭. ಹಾಸ್ಯಾಲಾಪಗಳಿಂದಲೂ, ವಾದ್ಯಘೋಷಗಳಿಂದಲೂ ಆಕಾಶವು ಒಡೆಯುವಂತಿತ್ತು. ದೈತ್ಯರ ಪಾದಘಾತದಿಂದ ಭೂಮಿಯು ಸೀಳುವಂತೆ ತೋರುತ್ತಿತ್ತು.

೧೮-೧೯. ಕರಾಳ, ದುರ್ಧರ, ವಿಚಕ್ಷು, ವಿಕರಾಲಕ, ಬಾಷ್ಕಲ, ದುರ್ಮುಖ, ಚಂಡ, ಪ್ರಚಂಡ, ಚಾಮರ, ಮಹಾಹನು, ಮಹಾಮೌಳಿ,

ಕೋಲಾಹಲಮಿಮಂ ಶ್ರುತ್ವಾ ದೇವೀ ನಿಯಮವಿಘ್ನತಃ ।
ಶಂಕಿತಾ ದೈತ್ಯಸಂಹೃತ್ಯೈ ದುರ್ಗಾಮಾದಿಶತಿ ಸ್ಮ ಸಾ ॥ ೨೦ ॥
ಸಾರುಣಾದ್ರಿರಹೋದ್ರೋಣ್ಯಾಮಧಿರೂಢಾ ಮೃಗಾಧಿಪಂ ।
ದೀಪ್ತಾಯುಧಧರೈರ್ದೋರ್ಭಿಃ ಕಾಳಿಕೇವ ಮಹೀಂ ಗತಾ ॥ ೨೧ ॥
ಘನಾ ಘನರವೋದಗ್ರಂ ಸಿಂಹನಾದಮಚೀಕರತ್ ।
ಸ್ಫುರದ್ದಂತಚ್ಛದೋಪಾಂತಂ ವಲ್ಗದಂಗುಲಿಪಲ್ಲವಾ ॥ ೨೨ ॥
ಸ್ವಾಂಗೇಭ್ಯೋ ಯೋಗಿನೀಚಕ್ರಂ ಮಾತರೋಽಪ್ಯಸೃಜನ್ನೃಪಾ ।
ದೇವ್ಯಾಃ ಪ್ರಿಯಾಯ ದೈತೇಯಸಂಹಾರಾರ್ಹಾಃ ಸಹಸ್ರಶಃ ॥ ೨೩ ॥
ಕಾಶ್ಚಿತ್ತತ್ರಾರುಣಚ್ಛಾಯಾ ದಂಡಿನ್ಯೋ ಹಂಸವಾಹನಾಃ ।
ಮುಖೈಶ್ಚತುರ್ಭಿರಾಜಗ್ಮುಃ ಕೋಪಪ್ರಸ್ಫುರಿತಾಧರೈಃ ॥ ೨೪ ॥
ನಿರ್ಯಯುಃ ಕಾಶ್ಚನ ಕ್ರುದ್ಧಾ ಜ್ವಲತ್ತ್ರಿಶಿಖಪಾಣಯಃ ।
ನಿಃಸ್ವನದ್ಭೂಷಣಾಃ ಪಂಸಲ್ಲಲಾಟಾ ವೃಷವಾಹನಾಃ ॥ ೨೫ ॥

---

ಉಗ್ರಾಸ್ಯ, ವಿಕಟೇಕ್ಷಣ, ಜ್ವಾಲಾಸ್ಯ, ದಹನ ಮುಂತಾದ ಸೇನಾನಾಯಕರೂ ದಿಗ್ವಿಜಯಕ್ಕಾಗಿ ಹೊರಟರು.

೨೦. ಈ ಸೈನ್ಯದ ಕೋಲಾಹಲವನ್ನು ಕೇಳಿ ಪಾರ್ವತಿಯು ವ್ರತಕ್ಕೆ ವಿಘ್ನ ಉಂಟಾಗುವುದೆಂಬ ಭಯದಿಂದ ರಾಕ್ಷಸರನ್ನು ಸಂಹಾರ ಮಾಡುವಂತೆ ದುರ್ಗಿಗೆ ಆಜ್ಞಾಪಿಸಿದಳು.

೨೧. ಆ ದುರ್ಗಿಯು ಅರುಣಾಚಲದ ಕಣಿವೆಯಲ್ಲಿ ಸಿಂಹವಾಹಿನಿಯಾಗಿ ಭುಜಗಳಿಂದ ಜ್ವಲಿಸುತ್ತಿರುವ ನಾನಾ ವಿಧಗಳಾದ ಆಯುಧಗಳನ್ನು ಧರಿಸಿ ಕಾಳಿಕೆಯಾಗಿ ಭೂಮಿಗೆ ಇಳಿದಳು.

೨೨. ವರ್ಷಾಕಾಲದ ಮೇಘಗಳ ಘರ್ಜನೆಯನ್ನೂ ಧಿಕ್ಕರಿಸುವಂತೆ ಸಿಂಹ ನಾದವನ್ನು ಮಾಡುತ್ತ ತುಟಿಗಳು ಅದುರುತ್ತಿರಲು ಆಕೆಯ ಕೈಬೆರಳುಗಳು ಆತುರದಿಂದ ನಡುಗುತ್ತಿದ್ದುವು.

೨೩-೨೪. ಪಾರ್ವತಿಗೆ ಪ್ರಿಯವನ್ನುಂಟುಮಾಡುವುದಕ್ಕಾಗಿ ರಾಕ್ಷಸ ಸಂಹಾರಕ್ಕೆಂದು ಸಾವಿರಗಟ್ಟಲೆ ಯೋಗಿನಿಯರನ್ನೂ ಸಪ್ತಮಾತೃಕೆಯರನ್ನೂ ತನ್ನ ಶರೀರದಿಂದ ಸೃಜಿಸಿದಳು. ಕೆಲವರು ಕೆಂಪು ಶರೀರಗಳುಳ್ಳವರಾಗಿ ದಂಡಾಯುಧಗಳನ್ನು ಹಿಡಿದು ಹಂಸವಾಹನಗಳನ್ನೇರಿ ನಾಲ್ಕು ಮುಖಗಳಲ್ಲಿಯೂ ಕೋಪದಿಂದ ತುಟಿಗಳನ್ನದುರಿಸುತ್ತ ಯುದ್ಧಕ್ಕೆ ಬಂದರು.

೨೫. ಕೆಲವರು ಕ್ರುದ್ಧರಾಗಿ ತೇಜಃಪುಂಜಗಳಾದ ತ್ರಿಶೂಲಗಳನ್ನು ಹಿಡಿದು ಆಭರಣಗಳು ಶಬ್ದಮಾಡುತ್ತಿರಲು ಮುಖಗಳನ್ನು ಗಂಟುಹಾಕಿಕೊಂಡು ವೃಷಭಗಳನ್ನೇರಿ ಬಂದರು.

ನಿರ್ಜಗ್ಮುರಪರಾಃ ಸೇನಾಸಹಿತಾಃ ಶಿಖಿವಾಹನೈಃ ।
ಶಕ್ತಿದಂಡಾಭಯಕರಾಃ ಶತಶಃ ಷಡ್ವಿರಾನನೈಃ ॥ ೨೬ ॥
ನಿಶ್ಚಕ್ರಮುಃ ಪಾರಾಸ್ತಾರ್ಕ್ಷ್ಯಮಧಿರುಹ್ಯಾಧಿಕಕ್ರುಧಾ ।
ಶಂಖಚಕ್ರಧರಾಃ ಸೂರ್ಯಚಂದ್ರಮೋಭ್ಯಾಂ ದಿವೋ ಯಥಾ ॥ ೨೭ ॥
ಪ್ರತಿಷ್ಠಂತೇ ತಥಾ ವ್ಯಾಘ್ರವಾಹಾಃ ಕುವಲಯತ್ವಿಷಃ ।
ಘೋತ್ರೈಃ ಸದ್ಘರ್ಘರಾರಾವೈರ್ಬಿಭ್ರತ್ಯೋ ಮುಸಲಂ ಹಲಂ ॥ ೨೮ ॥
ರೋಷಾರುಣಸಹಸ್ರಾಕ್ಷ್ಯೋ ವಳಕ್ಷದ್ವಿಪವಾಹನಾಃ ।
ಪ್ರತಸ್ಥಿರೇ ಶಾತಕೋಟಿಶತಕೋಟಿಧರಾಃ ಪರಾಃ ॥ ೨೯ ॥
ಅಶ್ವಾರೂಢಾಃ ಸಮಾಪೇತುರೇಕಾಃ ಸೌದಾಮಿನೀನಿಭಾಃ ।
ಖಡ್ಗಖೇಟಕಧಾರಿಣ್ಯಃ ಕೋಪೇನ ಕಪಿಲಾನನಾಃ ॥ ೩೦ ॥
ತಾಶ್ಚ ಕೋಟಿಚತುಷ್ಷಷ್ಟಿಮಸುರಾನಾಶ್ರಮಾದ್ಬಹಿಃ ।
ಅರುನ್ಧನ್ಪ್ರಸಭಂ ಧ್ವಾಂತರಾಶೀನಿವ ರವೇಸ್ತ್ವಿಷಃ ॥ ೩೧ ॥

---

೨೬. ನೂರಾರುಜನ ಇತರರು ನವಿಲುಗಳನ್ನೇರಿ ಸೇನಾಸಮೇತರಾಗಿ ಶಕ್ತಿ, ದಂಡ, ಅಭಯಮುದ್ರೆಗಳನ್ನು ಕೈಗಳಲ್ಲಿ ತೋರಿಸುತ್ತ ಆರುಮುಖ ಗಳಿಂದ ಕೂಡಿ ಹೊರಟರು.

೨೭. ಮತ್ತೆ ಕೆಲವರು ಅತ್ಯಂತ ಕೋಪದಿಂದ ಗರುಡಪಕ್ಷಿಗಳನ್ನೇರಿ ಶಂಖಚಕ್ರಗಳನ್ನು ಕೈಗಳಲ್ಲಿ ಹಿಡಿದು ಆಕಾಶದಿಂದ ಸೂರ್ಯಚಂದ್ರರನ್ನೇ ಕಿತ್ತು ಕೊಂಡು ಬರುತ್ತಿರುವಂತೆ ಹೊರಟರು.

೨೮. ಹಲವರು ವ್ಯಾಘ್ರಗಳನ್ನೇರಿ ನೀಲವರ್ಣವುಳ್ಳವರಾಗಿ ಮೇಘಗಳಂತೆ ಘರ್ಜನೆಯನ್ನು ಮಾಡುತ್ತ ಕೈಗಳಲ್ಲಿ ಮುಸಲ ಮತ್ತು ಹಲಾಯುಧಗಳನ್ನು ಹಿಡಿದುಕೊಂಡು ಪ್ರಾಪ್ತರಾದರು.

೨೯. ರೋಷದಿಂದ ಕೆಂಪೇರಿದ ಕಣ್ಣುಗಳುಳ್ಳವರಾಗಿ ಶುಭ್ರವಾದ ಆನೆ ಗಳನ್ನೇರಿ ತೀಕ್ಷ್ಣಗಳಾದ ಅನೇಕ ವಜ್ರಾಯುಧಗಳನ್ನು ಧರಿಸಿ ಕೆಲವರು ಸನ್ನದ್ಧರಾದರು.

೩೦. ಕೆಲವರು ಕೋಪದಿಂದ ಮುಖಗಳನ್ನು ಕೆಂಪಗೆ ಮಾಡಿಕೊಂಡು ಮಿಂಚುಗಳಂತೆ ಹೊಳೆಯುವವರಾಗಿ ಕುದುರೆಗಳನ್ನೇರಿ ಖಡ್ಗ, ಶರೀರತ್ರಾಣ ಗಳನ್ನು ತೆಗೆದುಕೊಂಡು ಯುದ್ಧರಂಗಕ್ಕೆ ಇಳಿದರು.

೩೧. ಸೂರ್ಯನ ಕಿರಣಗಳು ಕತ್ತಲೆಯನ್ನು ತಡೆಯುವಂತೆ ಈ ಯೋಗಿ ನಿಯರೆಲ್ಲರೂ ಶೀಘ್ರವಾಗಿ ಆಶ್ರಮದ ಹೊರಗಡೆಯಲ್ಲಿಯೇ ಮಹಿಷಾಸುರನ ಅರುವತ್ತುನಾಲ್ಕುಕೋಟಿ ರಾಕ್ಷಸರನ್ನು ತಡೆದರು.

ತತಶ್ಚ ಯೋಗಿನೀಚಕ್ರದಾನವಾನೀಕಯೋರ್ಮಿಥಃ ।
ಪ್ರಾವರ್ತತ ರಣಂ ಘೋರಂ ಮುಷ್ಟಾಮುಷ್ಟಿ ಕಚಾಕಚಿ ॥ ೩೨ ॥
ಸಾಯಕೈರ್ಯೋಗಿನೀ ಮುಕ್ತೈರ್ದಲಿತಾ ದೈತ್ಯಮೌಳಯಃ ।
ಆಚ್ಛಾದಯನ್ಮಹೀಪೃಷ್ಠಂ ಸ್ಥಳಜಾನೀವ ಸರ್ವತಃ ॥ ೩೩ ॥
ಪ್ರಸಸ್ರೂ ರಕ್ತಸರಿತೋ ಲಗತ್ಕೈಶಿಕಶೈವಲಾಃ ।
ಲುಠದ್ವಿಪಾಠಪಾಠೀನಾಃ ಸ್ಮೇರೈರ್ದೇವೀಮುಖಾಂಬುಜೈಃ ॥ ೩೪ ॥
ವೇತಂಡ ತುಂಡಾನ್ಯಾರುಹ್ಯ ಸೌಧಾನಿವ ಪಿಶಾಚಿಕಾಃ ।
ಪ್ರಚಂಡತಾಂಡವಾಃ ಪೀತರಕ್ತಮುದ್ಯಾಶ್ಚಕಾಶಿರೇ ॥ ೩೫ ॥
ಕಪಾಲೈರ್ದೈತ್ಯವೀರಾಣಾಮಘಾಸುರಸೃಗಾಸವಾನ್ ।
ಕ್ರೀಡಡ್ಡಮರುಗಾಕಾರೈರ್ಡಾಮರೈರ್ಯೋಗಿನೀಗಣಾಃ ॥ ೩೬ ॥
ಪರಿಜಹ್ರುಸ್ತಥಾಂತ್ರಾಣಿ ಕಂಕೌಘಾಃ ಪಾಶಶಂಕಯಾ ।
ಕ್ಷುಧಿತಾ ಅಪಿ ಮಾಂಸಾನಿ ಸಶಲ್ಯಾನ್ಯಜಹುಃ ಶಿವಾಃ ॥ ೩೭ ॥

---

೩೨. ಆಗ ಪಾರ್ವತಿಯ ಯೋಗಿನಿಯರಿಗೂ ಮಹಿಷಾಸುರನ ರಾಕ್ಷಸ ಸೈನ್ಯಕ್ಕೂ ಮುಷ್ಟಾಮುಷ್ಟಿ ಕಚಾಕಚಿಯಾದ ಭಯಂಕರ ಯುದ್ಧವುಪಕ್ರಮವಾಯಿತು.

೩೩. ಯೋಗಿನಿಯರಿಂದ ಬಿಡಲ್ಪಟ್ಟ ಬಾಣಗಳಿಂದ ದೈತ್ಯರ ತಲೆಗಳು ಪೈರುಗಳು ಬೆಳೆದಂತೆ ಭೂಮಿಯನ್ನೆಲ್ಲ ತುಂಬಿ ಹರಡಿಕೊಂಡಿದ್ದುವು.

೩೪. ಅಲ್ಲಿ ಹರಿಯುತ್ತಿದ್ದ ರಾಕ್ಷಸರ ರಕ್ತದ ನದಿಗಳಲ್ಲಿ ಅವರ ತಲೆ ಕೂದಲುಗಳೇ ಪಾಚಿಯಾಗಿಯೂ ಹಾರಾಡುತ್ತಿರುವ ಕೂರಂಬುಗಳೇ ಮೀನುಗಳಾಗಿಯೂ ಯೋಗಿನಿಯರ ನಗೆಮೊಗಗಳೇ ಕಮಲಗಳಾಗಿಯೂ ಕಾಣುತ್ತಿದ್ದುವು.

೩೫. ಕೆಲವು ಪಿಶಾಚಸ್ತ್ರೀಯರು ಉಪ್ಪರಿಗೆಗಳನ್ನೇರುವಂತೆ ಆನೆಗಳ ಸೊಂಡಿಲುಗಳನ್ನೇರಿ ಅವುಗಳ ರಕ್ತವೆಂಬ ಮದ್ಯವನ್ನು ಕುಡಿದು ಪ್ರಚಂಡ ತಾಂಡವವನ್ನು ಮಾಡುತ್ತಿದ್ದರು.

೩೬. ಯೋಗಿನಿಯರು ಆಟದ ಡಮರುಗಳಂತೆ ಕಾಣುತ್ತಿದ್ದ ರಾಕ್ಷಸ ಶ್ರೇಷ್ಠರ ಕಪಾಲಗಳಿಂದ ಅವರ ರಕ್ತವನ್ನೇ ಪಾನಮಾಡುತ್ತಿದ್ದರು.

೩೭. ರಣಹದ್ದುಗಳು ಯುದ್ಧಭೂಮಿಯಲ್ಲಿ ಅಸಂಖ್ಯಾತಗಳಾಗಿ ಚೆಲ್ಲಿದ್ದ ಕರುಳುಗಳನ್ನು ಕಂಡು ತಮ್ಮನ್ನು ಹಿಡಿಯಲು ಹಾಕಿದ ಪಾಶಗಳೆಂದು ಭ್ರಮೆಗೊಂಡುವು. ನರಿಗಳು ಹಸಿದಿದ್ದರೂ ಶಲ್ಯಸಹಿತವಾದ ಮಾಂಸವನ್ನು ತಿನ್ನಲಿಚ್ಛಿಸಲಿಲ್ಲ.

ಸಿದ್ಧವಿದ್ಯಾಧರೋನ್ಮುಕ್ತಮಂದಾರಪ್ರಸವಾಸವೈಃ ।
ಇಯಾಯ ಶಾಂತಿಂ ಭೂರೇಣುಃ ಸಂಗ್ರಾಮೇ ಕ್ಷೋಭಸಂಭವಃ ॥ ೩೮ ॥
ವಿರೇಜುರ್ಯೋಗಿನೀಮುಕ್ತೈರ್ದೇಹಲಗ್ನೈರ್ದ್ವಿಷಾಂ ಹಯಾಃ ।
ಅಮರ್ಷಾತಿಶಯೋತ್ಕ್ಷಿಪ್ತೈಃ ಶಲ್ಯೈಃ ಶಲ್ಯಮೃಗಾ ಇವ ॥ ೩೯ ॥
ದಂಡೈಃ ಕೇಚಿತ್ಪರೇ ಶೂಲೈರ್ನಿಶಿತೈಃ ಕೇಽಪಿ ಶಕ್ತಿಭಿಃ ।
ಚಕ್ರೈರನ್ಯೇ ಹಲೈರೇಕೇ ಕತಿಚಿಚ್ಛತಕೋಟಿಭಿಃ ॥ ೪೦ ॥
ಯೋಗಿನೀನಾಂ ಪರೇ ಖಡ್ಗೈರ್ದಲಿತಾ ದಾನವೇಶ್ವರಾಃ ।
ನಿಃಶೇಷತಾಮುಪಾಜಗ್ಮುರ್ವಿನಾ ಸೇನಾಧಿಪಾನ್ನಿಜಾನ್ ॥ ೪೧ ॥
ಬ್ರಾಹ್ಮೀ ಸ್ವಯಮುಪಾಗಮ್ಯ ವಿಹಿತಾಯೋಧನಾವಧೀತ್ ।
ಕರಾಳಂ ವಿಕರಾಳೇನ ದಂಡೇನ ಜ್ವಲತಾ ಚಿರಾತ್ ॥ ೪೨ ॥
ಮಾಹೇಶ್ವರೀ ತ್ರಿಶೂಲೇನ ಸುಚಿರಂ ಕೃತಸಂಗರಾ ।
ಚಕರ್ತ ದುರ್ಧರಸ್ಯಾಶು ಮೂರ್ಧಾನಮತಿರೋಷಣಾ ॥ ೪೩ ॥
ಶಕ್ತ್ಯಾ ಲುಲಾವ ಕೌಮಾರೀ ಚಿಕ್ಷುರಾಸುರಮಸ್ತಕಂ ।
ಚಕ್ರೇಣ ಚಾಲುನಾನ್ಮೌಳಿಂ ವಿಕರಾಳಸ್ಯ ವೈಷ್ಣವೀ ॥ ೪೪ ॥

---

೩೮. ಸಿದ್ಧವಿದ್ಯಾಧರರು ಆಕಾಶದಿಂದ ಸುರಿದ ಮಂದಾರಪುಷ್ಪಗಳ ಮಕರಂದವು ರಣಭೂಮಿಯಿಂದೆದ್ದ ಧೂಳಿಯನ್ನು ಶಮನಮಾಡಿ ಮುಂದಿನ ಶುಭವನ್ನು ಸೂಚಿಸುವಂತಿತ್ತು.

೩೯. ಯೋಗಿನಿಯರು ಅತ್ಯಂತ ರೋಷದಿಂದ ಬಿಟ್ಟ ಬಾಣಗಳನ್ನು ದೈತ್ಯರ ಕುದುರೆಗಳು ತಮ್ಮ ದೇಹಗಳಲ್ಲಿ ಧರಿಸಿ ಶಲ್ಯಮೃಗಗಳಂತೆ ಕಾಣುತ್ತಿದ್ದುವು.

೪೦–೪೧. ಈ ರೀತಿಯಾಗಿ ಸ್ವಲ್ಪಕಾಲದಲ್ಲಿಯೇ ರಾಕ್ಷಸರ ಸೇನಾನಾಯಕರನ್ನು ಬಿಟ್ಟು ಉಳಿದ ಸೈನ್ಯವೆಲ್ಲವೂ ಯೋಗಿನಿಯರ ದಂಡಗಳಿಂದಲೂ, ಶೂಲಗಳಿಂದಲೂ, ಶಕ್ತ್ಯಾಯುಧಗಳಿಂದಲೂ, ಚಕ್ರಗಳಿಂದಲೂ, ಹಲಾಯುಧಗಳಿಂದಲೂ, ಖಡ್ಗಗಳಿಂದಲೂ ನಿಶ್ಶೇಷವಾಯಿತು.

೪೨. ಸಪ್ತಮಾತೃಕೆಯರಲ್ಲಿ ಬ್ರಾಹ್ಮಿಯು ಮುಂದಕ್ಕೆ ಬಂದು ಕೋಪದಿಂದ ಉರಿಯುತ್ತ ಯುದ್ಧಕ್ಕೆ ನಿಂತು ಭಯಂಕರವಾದ ದಂಡದಿಂದ ಕರಾಳನನ್ನು ಕೊಂದಳು.

೪೩. ಮಾಹೇಶ್ವರಿಯು ಕೆಲವು ಕಾಲ ಅತಿರೋಷದಿಂದ ಯುದ್ಧಮಾಡಿ ತ್ರಿಶೂಲದಿಂದ ದುರ್ಧರನ ತಲೆಯನ್ನು ದೇಹದಿಂದ ಕತ್ತರಿಸಿದಳು.

೪೪. ಕೌಮಾರಿಯು ಶಕ್ತ್ಯಾಯುಧದಿಂದ ಚಿಕ್ಷುರನ ತಲೆಯನ್ನು ಕಡಿದಳು. ವೈಷ್ಣವಿಯು ತನ್ನ ಚಕ್ರದಿಂದ ವಿಕರಾಳನ ಶಿರಸ್ಸನ್ನು ತರಿದಳು.

ಬಾಷ್ಕಲಸ್ಯಾಶು ವಾರಾಹೀ ಮುಸಲೇನಾಲುನಚ್ಛಿರಃ ।
ದುರ್ಮುಖಂ ಚಾಶು ವಜ್ರೇಣ ವ್ಯಧಾದೈಂದ್ರೀ ಗತಾಯುಷಂ ॥ ೪೫ ॥
ಖ್ಯಾತಂ ಯಸ್ಯಾಶ್ಚ ನಾಮೇದಂ ತಯೋರೇವ ನಿಷೂದನಾತ್ ।
ಚಾಮುಂಡಾ ಚಂಡಮುಂಡೌ ಚ ಮಂಡಲಾಗ್ರೇಣ ಚಿಚ್ಛಿದೇ ॥ ೪೬ ॥
ಪ್ರಚಂಡಚಾಮರೌ ವೀರೌ ಮಹಾಮೌಳಿರ್ಮಹಾಹನುಃ ।
ಉಗ್ರಾಸ್ಯವಿಕಟಾಕ್ಷೌ ಚ ಜ್ವಾಲಾಸ್ಯದಹನಾವಪಿ ॥ ೪೭ ॥
ಅನುಜಗ್ಮುಃ ಕೃಧಾ ಯಾಂತಂ ಯುದ್ಧಾಯ ಮಹಿಷಾಸುರಂ ।
ಕಾಲನೇಮಿಪ್ರಭೃತಯೋ ವಿಪ್ರಚಿತ್ತಿಮಿವಾಸುರಾಃ ॥ ೪೮ ॥
ಶಿರಸ್ತ್ರವಂತೋ ರಥಿನಃ ಸುನಿಷಂಗಾ ಧನುರ್ಧರಾಃ ।
ಉದ್ಧೂತಕಟಕಾಃ ಪ್ರಾಪುರ್ಯುದ್ಧಭೂಮಿಂ ಚಲದ್ಧ್ವಜಾಃ ॥ ೪೯ ॥
ಸಮಂತಾತ್ಪೂರಿತದಿಶಃ ಸಿಂಹನಾದೈರ್ಭಯಂಕರೈಃ ।
ಪೃಷತ್ಕವರ್ಷಿಣೋ ಮಾತೃಮಂಡಲಾನ್ಯಭಿದುದ್ರುವುಃ ॥ ೫೦ ॥

---

೪೫. ವಾರಾಹಿಯು ಬಾಷ್ಕಲನೆಂಬ ರಾಕ್ಷಸನ ತಲೆಯನ್ನು ಮುಸಲಾಯುಧದಿಂದ ಪುಡಿಗುಟ್ಟಿದಳು. ಇಂದ್ರಾಣಿಯು ಗತಾಯುಷನಾದ ದುರ್ಮುಖನನ್ನು ವಜ್ರಾಯುಧದಿಂದ ವಧಿಸಿದಳು.

೪೬. ಚಾಮುಂಡಿಯು ಮೊದಲಲ್ಲಿಯೇ ಚಂಡಮುಂಡರನ್ನು ನಿಗ್ರಹಿಸಿದ್ದರಿಂದ ಅವರ ಹೆಸರಿನಿಂದಲೇ ಇಂದಿಗೂ ಆಕೆಯ ನಾಮವು ವಿಖ್ಯಾತವಾಗಿರುವುದು.

೪೭. ವೀರರಾದ ಪ್ರಚಂಡ, ಚಾಮರ, ಮಹಾಮೌಳಿ, ಮಹಾಹನು, ಉಗ್ರಾಸ್ಯ, ವಿಕಟಾಕ್ಷ, ಜ್ವಾಲಾಸ್ಯ, ದಹನರನ್ನೂ ಸಹ ಚಾಮುಂಡಿಯೇ ನಿಗ್ರಹಿಸಿದಳು.

೪೮. ರೋಷದಿಂದ ಯುದ್ಧಕ್ಕೆ ಹೊರಡುತ್ತಿದ್ದ ಮಹಿಷಾಸುರನನ್ನು ಕಾಲನೇಮಿಯೇ ಮೊದಲಾದ ರಾಕ್ಷಸರು ಹಿಂದೆ ವಿಪ್ರಚಿತ್ತಿಯನ್ನು ಹಿಂಬಾಲಿಸಿದಂತೆಯೇ ಅನುಸರಿಸಿದರು.

೪೯. ರಥಾರೋಹಕರೂ ಸಹ ಶಿರಸ್ತ್ರಾಣಗಳಿಂದಲೂ, ಬತ್ತಳಿಕೆಗಳಿಂದಲೂ, ಬಿಲ್ಲುಗಳಿಂದಲೂ ಸನ್ನದ್ಧರಾಗಿ ತಮ್ಮ ಬಾವುಟಗಳು ಗಾಳಿಗೆ ಹಾರಾಡುತ್ತಿರಲು ಶಿಬಿರವನ್ನು ಬಿಟ್ಟು ಯುದ್ಧಭೂಮಿಗೆ ಬಂದರು.

೫೦. ಭಯಂಕರವಾದ ಸಿಂಹಾನಾದದ ಶಬ್ದದಿಂದ ದಿಕ್ಕುಗಳನ್ನು ತುಂಬುತ್ತ ಬಾಣದ ಮಳೆಯನ್ನೇ ಕರೆಯುತ್ತ ಆ ರಥಿಕರು ಮಾತೃಗಣವನ್ನು ಎದುರಿಸಿದುರು.

ತಾಶ್ಚ ತೈರ್ಬಲಿಭಿಃ ಕೃತ್ವಾ ಸಂಗ್ರಾಮಂ ನಿಸ್ಸಹತ್ವತಃ ।
ದುರ್ಗಾಂ ಪ್ರಪೇದಿರೇ ದೇವೀಂ ಶರಣಂ ಸಿಂಹವಾಹನಾಂ ॥ ೫೧ ॥
ಉಕ್ತ್ವಾ ಮಾಯಾಲುಲಾಯಸ್ಯ ದುರ್ಜಯತ್ವಂ ದುರಾತ್ಮನಃ ।
ದೇವೀಂ ತಾಂ ತುಷ್ಟುವುರ್ದುರ್ಗಾಮೇವಂ ಸಪ್ತಾಪಿ ಮಾತರಃ ॥ ೫೨ ॥
ಯೋಗನಿದ್ರೇತಿ ರೂಪೇಣ ವಿಷ್ಣೋರ್ನಯನಪದ್ಮಯೋಃ ।
ತ್ವಯಾ ನಿಲೀಯತೇ ದೇವಿ ಮಧುಕಾರ್ಯೇವ ಲೀಲಯಾ ॥ ೫೩ ॥
ಅಮೂಮುಹಸ್ತ್ವಂ ನ ತಥಾ ಮಾತಶ್ಚ ಮಧುಕೈಟಭೌ ।
ಕಥಂ ಜಘಾನ ತೌ ವಿಷ್ಣುಸ್ತಯೋರೇವಾಭ್ಯನುಜ್ಞಯಾ ॥ ೫೪ ॥
ತ್ವಂ ಕೌಶಿಕೀ ನ ಚೇಜ್ಜಾತಾ ಮೃತ್ಯುಃ ಶುಂಭನಿಶುಂಭಯೋಃ ।
ಕಥಂ ತು ಲೋಕಪಾಲಾನಾಮೈಶ್ವರ್ಯಂ ದೇವಿ ವಿಷ್ಯತಿ ॥ ೫೫ ॥
ವಿಂಧ್ಯವಾಸಿನಿ ವಿಂಧ್ಯೇನ ಕಿಮವಂಧ್ಯಂ ಕೃತಂ ತಪಃ ।
ಯತ್ರ ಮೈತ್ರೀ ಕಿರಾತೀಭಿರಪಿ ಲಭ್ಯಾ ತ್ವಯಾ ಸಮಂ ॥ ೫೬ ॥
ಕಾಪಿಶಾಯನಮಾಪೀತಂ ಧನದೋಪಾಯನೀಕೃತಂ ।
ತ್ವಯಾಂಬ ನೀತಂ ದೈತ್ಯಾನಾಂ ರಸೈರ್ನಿಯತಮಾನವೈಃ ॥ ೫೭ ॥

---

೫೧. ಅವರೂ ಕೂಡ ಬಲಿಷ್ಠರಾದ ರಾಕ್ಷಸರೊಡನೆ ಯುದ್ಧಮಾಡಿ ದುಸ್ಸಾಧ್ಯವಾಗಲು ಸಿಂಹವಾಹಿನಿಯಾದ ದುರ್ಗಿಯನ್ನು ಶರಣುಹೊಂದಿದರು.

೫೨. ಮಾಯಾರೂಪಿಯಾದ ಮಹಿಷಾಸುರನ ಅಜೇಯತ್ವವನ್ನು ತಿಳಿಸಿ ದುರ್ಗಾದೇವಿಯನ್ನು ಸಪ್ತಮಾತೃಕೆಯರೂ ಸಹ ಸ್ತೋತ್ರಮಾಡತೊಡಗಿದರು.

೫೩. "ವಿಷ್ಣುವಿನ ನೇತ್ರಪದ್ಮಗಳಲ್ಲಿ ನೀನು ಯೋಗನಿದ್ರೆಯೆಂಬ ರೂಪದಿಂದ ಸ್ಥಾನವನ್ನು ಹೊಂದಿರಲು ಜೇನಿನಗೂಡು ಬೇಡನಿಂದ ಅವಲೀಲೆಯಾಗಿ ನಾಶವಾಗುವಂತೆ ಸಕಲವೂ ನಾಶವಾಗುವುದು.

೫೪. ನೀನು ವಿಷ್ಣುವನ್ನೂ ಮಧುಕೈಟಭರನ್ನೂ ಹಾಗೆಯೇ ಮೋಹಗೊಳಿಸದಿದ್ದರೆ ಅವರ ಇಷ್ಟದಂತೆಯೇ ವಿಷ್ಣುವು ಅವರನ್ನು ಹೇಗೆ ಸಂಹರಿಸುತ್ತಿದ್ದನು?

೫೫. ನೀನು ದುರ್ಗಿಯಾಗಿ ಶುಂಭನಿಶುಂಭರಿಗೆ ಮೃತ್ಯುದೇವತೆಯಾಗದಿದ್ದರೆ ಲೋಕಪಾಲಕರಿಗೆ ತಮ್ಮ ಸ್ಥಾನಗಳು ಹೇಗೆ ತಾನೆ ಸಿಕ್ಕುತ್ತಿದ್ದುವು?

೫೬. ಎಲೌ ವಿಂಧ್ಯವಾಸಿನಿಯೆ! ನಿನ್ನನ್ನು ಪಡೆಯಲು ವಿಂಧ್ಯನು ಸಾಮಾನ್ಯ ತಪಸ್ಸನ್ನು ಮಾಡಿದನೆ? ಆ ಪರ್ವತದಲ್ಲಿರುವ ಬೇಡಗಿತ್ತಿಯರಿಗೂ ಸಹ ನಿನ್ನ ಸ್ನೇಹವೆಂಬುದು ಲಭ್ಯವಾಯಿತು.

೫೭. ಕುಬೇರನಿಗೆ ಉಪಾಯನವಾದ ಮದ್ಯವನ್ನು ನೀನೇ ಕುಡಿದೆ. ದೈತ್ಯರಿಗೆ ನಿಯತವಾಗಿದ್ದ ರಸವನ್ನು ಮನುಷ್ಯರಿಗೆ ತಂದುಕೊಟ್ಟೆ.

ಬ್ರಹ್ಮಣಃ ಸೃಷ್ಟಿಶಕ್ತಿಸ್ತ್ವಂ ಸ್ಥಿತಿಶಕ್ತಿರ್ಮಧುದ್ವಿಷಃ ।
ಅಂಬ ಸಂಹಾರಶಕ್ತಿಶ್ಚ ರುದ್ರಸ್ಯಾಪಿ ಪ್ರಗಲ್ಭಸೇ ॥ ೫೮ ॥
ಯಶೋದಾನಂದಜಾತಾ ತ್ವಮೇಕಾನಂಶೇತಿನಾಮತಃ ।
ಕಂಸಾದ್ಯಸುರಸಂಹಾರೇ ಹರೇಃ ಸಾಹ್ಯಂ ಕರಿಷ್ಯಸಿ ॥ ೫೯ ॥
ತ್ವಂ ವಿದ್ಯಾ ತ್ವಂ ಮಹಾಮಾಯಾ ತ್ವಂ ಲಕ್ಷ್ಮೀಸ್ತ್ವಂ ಸರಸ್ವತೀ ।
ತ್ವಂ ದೇವೀ ಪಾರ್ವತೀಶಾಪಿ ದುರ್ಗೇ ಕಿಂ ವಾ ನಜಾಯಸೇ ॥ ೬೦ ॥

ನಂದಿಕೇಶ್ವರ ಉವಾಚ :—

ಸ್ತೋತ್ರೇಣಾನೇನ ಮಾತೃಭ್ಯೋ ದುರ್ಗಾ ದತ್ತಾಭಯಾ ಸ್ವಯಂ ।
ಮಹಿಷಾಸುರಯುದ್ಧಾಯ ಸಂತುಷ್ಟಾ ನಿರ್ಯಯೌ ತದಾ ॥ ೬೧ ॥
ಪ್ರಚಂಡಮುಂಡಲಾಗ್ರೇಣ ಭಿಂಡಿಪಾಲೇನ ಚಾಮರಂ ।
ಮಹಾಮೌಳಿಂ ಕ್ಷುರಿಕಯಾ ಕರ್ಪರೇಣ ಮಹಾಹನುಂ ॥ ೬೨ ॥
ಉಗ್ರವಕ್ತ್ರಂ ಕುಠಾರೇಣ ಶಕ್ತ್ಯಾ ವಿಕಟಚಕ್ಷುಷಂ ।
ಜ್ವಾಲಾಮುಖಂ ಮುದ್ಗರೇಣ ದಹನಂ ಮುಸಲೇನ ಚ ॥ ೬೩ ॥
ನಿಹತ್ಯ ಮಹಿಷಸ್ಯಾಗ್ರೇ ಸರೋಷಂ ಯುಧ್ಯತೀ ಸ್ವಯಂ ।
ಸಿಂಹನಾದಂ ಮಹಾಘೋರಂ ಚಕಾರ ಮುದಿತಾಶಯಾ ॥ ೬೪ ॥

---

೫೮. ನೀನೇ ಬ್ರಹ್ಮನ ಸೃಷ್ಟಿಶಕ್ತಿಯು. ವಿಷ್ಣುವಿನ ರಕ್ಷಣಾ ಶಕ್ತಿಯು. ರುದ್ರನ ಸಂಹಾರ ಶಕ್ತಿಯೂ ನೀನೆ ಎಂದು ಪ್ರಸಿದ್ಧಿಯನ್ನು ಪಡೆದಿರುವೆ.

೫೯. ನೀನೊಬ್ಬಳೇ ಅನಂಶೆಯೆಂಬ ಹೆಸರಿನಿಂದ ಯಶೋದಾನಂದರಲ್ಲಿ ಜನಿಸಿ ಕಂಸನೇ ಮೊದಲಾದ ರಾಕ್ಷಸರ ನಾಶಕಾರ್ಯದಲ್ಲಿ ಕೃಷ್ಣನಿಗೆ ಸಹಾಯವನ್ನು ಮಾಡುವವಳಾಗುವೆ.

೬೦. ನೀನೇ ವಿದ್ಯೆಯು, ಮಹಾಮಾಯೆಯು, ಮಹಾಲಕ್ಷ್ಮಿಯು, ಸರಸ್ವತಿಯು, ದೇವಿಯಾದ ಪಾರ್ವತಿಯು, ಸರ್ವಶಕ್ತಳು ಆಗಿ ಹುಟ್ಟುವಳಲ್ಲವೆ?"

೬೧. ನಂದಿಕೇಶ್ವರನು ಹೇಳುತ್ತಾನೆ:—ಈ ರೀತಿಯಾಗಿ ಸಪ್ತಮಾತೃಕೆಯರು ಸ್ತೋತ್ರಮಾಡಲು ಅವರಿಗೆ ಅಭಯವನ್ನು ಕೊಟ್ಟು ದುರ್ಗಿಯು ಸಂತೋಷದಿಂದ ಮಹಿಷಾಸುರನೊಡನೆ ಯುದ್ಧಮಾಡಲು ತಾನೇ ಹೊರಟಳು.

೬೨-೬೪. ವೇಗವಾಗಿ ಸುತ್ತಿಬೀಸಿದ ಕವಣೆಯಿಂದ ಚಾಮರನನ್ನೂ, ಕತ್ತಿಯಿಂದ ಮಹಾಮೌಳಿಯನ್ನೂ, ಕರ್ಪರದಿಂದ ಮಹಾಹನುವನ್ನೂ, ಕೊಡಲಿಯಿಂದ ಉಗ್ರವಕ್ತ್ರನನ್ನೂ, ಶಕ್ತ್ಯಾಯುಧದಿಂದ ವಿಕಟಾಕ್ಷನನ್ನೂ, ಗದೆಯಿಂದ ಜ್ವಾಲಾಮುಖನನ್ನೂ, ಮುಸಲಾಯುಧದಿಂದ ದಹನನ್ನೂ ಸಂಹರಿಸಿ ರೋಷದಿಂದ ಯುದ್ಧಮಾಡುತ್ತ ಮಹಿಷಾಸುರನೆದುರಿಗೆ ಭಯಂಕರವಾದ ಸಿಂಹನಾದವನ್ನು ಮಾಡುತ್ತ ಸಂಭ್ರಮದಿಂದ ನಿಂತಳು.

ಅಥಾತ್ಯಮರ್ಷಿತೋ ದುರ್ಗಾಂ ವಿಶಿಖೈರ್ಮಹಿಷಾಸುರಃ ।
ವಿವ್ಯಾಧ ಫಾಲಫಲಕೇ ಸ್ತನಯೋರ್ಗಂಡಯೋರಪಿ ॥ ೧೫ ॥
ತತೋ ದುರ್ಗಾಥ ಸಂರಂಭಾತ್ಪ್ರಜಹಾರಾಸುರೇಶ್ವರಂ ।
ಬಾಹ್ವೋರ್ವಕ್ಷಸಿ ವಕ್ತ್ರೇ ಚ ಕ್ಷುರಪ್ರೈಃ ಪ್ರಜ್ವಲತ್ಫಲೈಃ ॥ ೧೬ ॥
ತತೋ ದೈತ್ಯಸ್ತ್ರಿಭಿರ್ದುರ್ಗಾಂ
ಜಘಾನ ವಿಶಿಖೈರ್ಮುಖೇ ।
ಪಂಚಭಿಃ ಪಂಚಭಿರ್ಬಾಹ್ವೋ
ರ್ದ್ವಾಭ್ಯಾಂ ದ್ವಾಭ್ಯಾಂ ಚ ನೇತ್ರಯೋಃ ॥ ೧೭ ॥
ಏಕೇನ ಸಾರಥಿಂ ರಥ್ಯಾನಷ್ಟಭಿಃ ಕಾರ್ಮುಕಂ ತ್ರಿಭಿಃ ।
ಚತುರ್ಭಿಶ್ಚ ಧ್ವಜಂ ತಸ್ಯ ದುರ್ಗಾ ಚಿಚ್ಛೇದ ಸಾಯಕೈಃ ॥ ೧೮ ॥
ಪದಾತಿರಥ ದೈತ್ಯೇಂದ್ರಃ ಶತಘ್ನೀಂ ಜ್ವಲದಾಕೃತಿಂ ।
ಕಾಲದಂಡಪ್ರತೀಕಾಶಾಂ ದುರ್ಗಾಂ ಪ್ರತಿ ವಿಮುಕ್ತವಾನ್ ॥ ೧೯ ॥
ಹಾಹಾಕುರ್ವತ್ಸು ದೇವೇಷು ವಿದ್ರುತೇ ಮಾತೃಮಂಡಲೇ ।
ತಾಮಾಪತಂತೀಮಾದಾಯ ದುರ್ಗಾ ಜಗ್ರಾಹ ಲೀಲಯಾ ॥ ೨೦ ॥

---

೧೫. ಆ ಮಹಿಷಾಸುರನೂ ಕೂಡ ಕೋಪಗೊಂಡವನಾಗಿ ತೀಕ್ಷ್ಣವಾದ ಬಾಣಗಳಿಂದ ದೇವಿಯ ಹಣೆ, ಸ್ತನಪ್ರದೇಶ, ಕಪೋಲಗಳಿಗೆ ಹೊಡೆದನು.

೧೬. ಕಾಳಿಯೂ ಸಹ ಆವೇಶದಿಂದ ಬಾಹುಗಳಲ್ಲಿಯೂ, ಎದೆಯಲ್ಲಿಯೂ, ಮುಖದಲ್ಲಿಯೂ ಸಹ ತೀಕ್ಷ್ಣಧಾರೆಗಳುಳ್ಳ ಅರ್ಧಚಂದ್ರಾಸ್ತ್ರಗಳಿಂದ ರಾಕ್ಷಸನನ್ನು ಹೊಡೆದಳು.

೧೭. ದೈತ್ಯನು ದುರ್ಗಿಯ ಮುಖದಲ್ಲಿ ಮೂರು ಬಾಣಗಳನ್ನೂ, ಪ್ರತಿಯೊಂದು ಕೈಗೂ ಐದು ಬಾಣಗಳನ್ನೂ, ಪ್ರತಿಯೊಂದು ಕಣ್ಣಿಗೂ ಎರಡೆರಡು ಬಾಣಗಳನ್ನೂ ಬಿಟ್ಟನು.

೧೮. ದುರ್ಗಿಯೂ ಒಂದು ಬಾಣದಿಂದ ಸಾರಥಿಯನ್ನೂ ಎಂಟು ಬಾಣಗಳಿಂದ ಕುದುರೆಗಳನ್ನೂ, ಮೂರು ಬಾಣಗಳಿಂದ ಧನುಸ್ಸನ್ನೂ, ನಾಲ್ಕು ಬಾಣಗಳಿಂದ ಧ್ವಜವನ್ನೂ ಕತ್ತರಿಸಿದಳು.

೧೯. ಆಗ ರಾಕ್ಷಸೇಂದ್ರನು ರಥದಿಂದ ಕೆಳಕ್ಕೆ ಹಾರಿ ಯಮದಂಡದಂತೆ ಭಯಂಕರವಾಗಿ ಜ್ವಲಿಸುತ್ತಿರುವ ಶತಘ್ನಿಯನ್ನು ದೇವಿಯ ಕಡೆಗೆ ಬೀಸಿದನು.

೨೦. ಸಕಲ ದೇವತೆಗಳೂ ಹಾಹಾಕಾರ ಮಾಡುತ್ತಿರಲು, ಸಪ್ತಮಾತೃಕೆಯರು ದಿಕ್ಕುತೋಚದೆ ಓಡುತ್ತಿರಲು ದುರ್ಗಿಯು ಬೀಳುತ್ತಿರುವ ಆಯುಧವನ್ನು ಅನಾಯಾಸವಾಗಿ ಕೈಯಲ್ಲಿ ಹಿಡಿದಳು.

ಕೃಪಾಣಮಂಕುಶಂ ಪಾಶಂ ಭುಶುಂಡೀಂ ಕರವಾಳಿಕಾಂ ।
ಶಂಕುಂ ಶಕ್ತಿಂ ಗದಾಂ ಚಕ್ರಂ ತೋಮರಂ ಫಲಕಂ ಸೃಣಿಂ ॥ ೭೧ ॥
ಪರಶ್ವಧಂ ಭಿಂಡಿಪಾಲಂ ಪಟ್ಟಿಶಂ ಲಗುಡಂ ಚ ಸಃ ।
ದುರ್ಗಾಂ ಪ್ರತಿ ವಿಚಿಕ್ಷೇಪ ಕ್ಷಯಾಂಭೋದ ಇವಾಶನಿಂ ॥ ೭೨ ॥
ಆಪತಂತ್ಯೇವ ಶಸ್ತ್ರಾಣಿ ಕ್ಷಿಪ್ತಾನ್ಯಾದಾಯ ವೈರಿಣಃ ।
ಬಭಂಜ ಪಾಣಿಭಿಃ ಸ್ವೈರಂ ಕರಿಣೀವೇಕ್ಷುಕಾಂಡಕಂ ॥ ೭೩ ॥
ದುರ್ಗೋಪವಾಹ್ಯಃ ಸಿಂಹೋಽಪಿ ಲಾಂಗೂಲಾಗ್ರೇಣ ಮುದ್ರಿತಂ ।
ದಂಷ್ಟ್ರಯಾ ದಾರಯಾಮಾಸ ಪ್ರಹರನ್ನಖಪಂಕಜೈಃ ॥ ೭೪ ॥
ಕ್ಷಣಂ ಸಿಂಹಃ ಕ್ಷಣಂ ಕ್ರೋಡಃ ಕ್ಷಣಂ ವ್ಯಾಘ್ರಃ ಕ್ಷಣಂ ಗಜಃ ।
ಕ್ಷಣಂ ಚ ಮಹಿಷೋ ಭೂತ್ವಾ ದೈತ್ಯೋ ದುರ್ಗಾಮಯೋಧಯತ್ ॥
ಮಹಿಷೋಽಥ ವಿಷಾಣಾಭ್ಯಾಂ ತೀಕ್ಷ್ಣಾಭ್ಯಾಮತ್ಯಮರ್ಷಿತಃ ।
ತಾಡಯಾಮಾಸ ಸಿಂಹಂ ಚ ದೇವೀಮಪಿ ಮುಹುರ್ಮುಹುಃ ॥ ೭೬ ॥
ಕ್ಷಣಂ ಗಗನಮಧ್ಯಸ್ಥಃ ಕ್ಷಣಂ ಪ್ರಾಪ್ತೋ ಮಹೀತಲೇ ।
ಕ್ಷಣಂ ದಿಕ್ಷು ಭ್ರಮನ್ಪ್ರಾಪ್ತಃ ಕ್ಷಣಂ ಚಾದೃಶ್ಯತಾಂ ಗತಃ ॥ ೭೭ ॥

---

೭೧–೭೨. ಕೃಪಾಣ, ಅಂಕುಶ, ಪಾಶ, ಭುಸುಂಡಿ, ಕರವಾಳ, ಶಂಕು, ಶಕ್ತಿ, ಗದೆ, ಚಕ್ರ, ತೋಮರ, ಫಲಕ, ಸೃಣಿ, ಪರಶ್ವಧ, ಭಿಂಡಿಪಾಲ, ಪಟ್ಟಿಶ, ಲಗುಡ ಮುಂತಾದ ಅನೇಕ ಶಸ್ತ್ರಗಳನ್ನು ಕ್ಷಯಕಾಲದ ಮೇಘಗಳು ಸಿಡಿಲುಗಳನ್ನು ಬಿಡುವಂತೆ ಆ ರಾಕ್ಷಸನು ದೇವಿಯಮೇಲೆ ಪ್ರಯೋಗಿಸಿದನು.

೭೩. ಆ ರಾಕ್ಷಸನ ಆಯುಧಗಳು ತನ್ನ ಹತ್ತಿರ ಬರುವಷ್ಟರಲ್ಲಿಯೇ ಕೈಯಲ್ಲಿ ಹಿಡಿದು ಮದ್ದಾನೆಯು ಕಬ್ಬನ್ನು ಮುರಿಯುವಂತೆ ಅವುಗಳನ್ನೆಲ್ಲ ದೇವಿಯು ಅನಾಯಾಸವಾಗಿ ಮುರಿದುಹಾಕಿದಳು.

೭೪. ದುರ್ಗಿಯ ವಾಹನವಾದ ಸಿಂಹವೂ ಆ ರಾಕ್ಷಸನನ್ನು ಬಾಲದಿಂದ ಮರ್ದಿಸಿ, ಹಲ್ಲುಗಳಿಂದ ಕಚ್ಚಿ, ಉಗುರುಗಳಿಂದ ಸೀಳಿತು.

೭೫. ಆ ರಾಕ್ಷಸನು ಕ್ಷಣಕ್ಷಣಕ್ಕೂ ರೂಪವನ್ನು ಬದಲಾಯಿಸುತ್ತ ಸಿಂಹ, ಹಂದಿ, ಹುಲಿ, ಆನೆಗಳಾಗಿ ಕೊನೆಗೆ ಮಹಿಷ ರೂಪನಾಗಿ ದುರ್ಗಿಯೊಡನೆ ಯುದ್ಧಮಾಡಿದನು.

೭೬. ಅತ್ಯಂತ ಕೋಪದಿಂದ ರಾಕ್ಷಸನು ತನ್ನ ತೀಕ್ಷ್ಣಗಳಾದ ಕೋಡುಗಳಿಂದ ಸಿಂಹವನ್ನೂ ದೇವಿಯನ್ನೂ ಮತ್ತೆ ಮತ್ತೆ ಚುಚ್ಚಿದನು.

೭೭. ಒಂದು ಕ್ಷಣ ಆಕಾಶದಲ್ಲಿಯೂ, ಮರುಕ್ಷಣ ಭೂಮಿಯಮೇಲೂ, ಒಂದು ಕ್ಷಣ ನಾಲ್ಕು ದಿಕ್ಕುಗಳಲ್ಲಿ ತಿರುಗುತ್ತಲೂ, ಮಗುದೊಂದು ಕ್ಷಣದಲ್ಲಿ ಅದೃಶ್ಯನಾಗುತ್ತಲೂ ಇದ್ದನು.

ಪ್ರಾರ್ಥಿತಾ ಮಾತೃಚಕ್ರೇಣ ದುರ್ಗಾ ಮಹಿಷದಾನವಂ ।
ಅಮೋಘೇನ ತ್ರಿಶೂಲೇನ ದಾರಯಾಮಾಸ ಸಸ್ಮಿತಾ ॥ ೭೮ ॥
ಮುಕ್ತಘರ್ಘರನಿರ್ಘೋಷೋ ಯಾವತ್ಪತತಿ ದಾನವಃ ।
ತಾವದಸ್ಯ ಹಠೇನಾಂಘ್ರಿಂ ಸ್ಕಂಧಪೀಠೇ ನ್ಯವೇಶಯತ್ ॥ ೭೯ ॥
ಕಂಠಪೀಡನತೋ ಯಾತಜೀವಿತಸ್ಯಾಸುರದ್ರುಹಃ ।
ಛಿನ್ನಂ ಮೂರ್ಧಾನಮಾದಾಯ ಪಾಣಿನಾಥ ನನರ್ತ ಸಾ ॥ ೮೦ ॥
ಇತಿ ದುರ್ಗಯಾ ಸಮಿತಿ ಕಾಸರಾಸುರೇ
ದಳಿತೇ ಸಮಸ್ತಭುವನೈಕಕಂಟಕೇ ।
ನನೃತುಃ ಸುರಾಃ ಪ್ರಜಹೃಷುರ್ಮಹರ್ಷಯೋ
ವವೃಷುಶ್ಚ ದಿವ್ಯಕುಸುಮಾನಿ ವಾರಿದಾಃ ॥ ೮೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ದೇವ್ಯಾಸ್ತಪಶ್ಚರ್ಯಾಯಾಂ ದುರ್ಗಾಕೃತ ಮಹಿಷಾಸುರವಧ ವರ್ಣನಂ" ನಾಮ ಏಕೋನವಿಂಶೋಽಧ್ಯಾಯಃ

---

೭೮. ಆಗ ಸಪ್ತಮಾತೃಕೆಯರ ಪ್ರಾರ್ಥನೆಯನ್ನಂಗೀಕರಿಸಿ ದುರ್ಗೆಯು ಮುಗುಳ್ನಗೆಯಿಂದ ಕೂಡಿ ಮಹಿಷಾಸುರನನ್ನು ಅಮೋಘವಾದ ತ್ರಿಶೂಲದಿಂದ ಸೀಳಿದಳು.

೭೯. ಗಂಟಲಿನಲ್ಲಿ ಗೊರಗುಟ್ಟುತ್ತ ಮಹಿಷಾಸುರನು ನೆಲಕ್ಕೆ ಬೀಳುತ್ತಲೆ ಛಲದಿಂದ ಅವನ ಕಂಠದಲ್ಲಿ ತನ್ನ ಪಾದವನ್ನು ಒತ್ತಿದಳು.

೮೦. ಕಂಠರೋಧನದಿಂದ ಆ ರಾಕ್ಷಸನು ಪ್ರಾಣವನ್ನು ಬಿಡಲು ಅವನ ತಲೆಯನ್ನು ಕತ್ತರಿಸಿ ಕೈಯಲ್ಲಿ ಹಿಡಿದುಕೊಂಡು ದುರ್ಗೆಯು ನರ್ತನ ಮಾಡ ತೊಡಗಿದಳು.

೮೧. ಈ ರೀತಿಯಾಗಿ ಸಕಲ ಲೋಕಗಳಿಗೂ ಕಂಟಕನಾಗಿದ್ದ ಮಹಿಷಾಸುರನು ದುರ್ಗಾದೇವಿಯಿಂದ ಹತನಾಗಲು ದೇವತೆಗಳು ನರ್ತನಮಾಡಿದರು. ಮಹರ್ಷಿಗಳು ಹರ್ಷಗೊಂಡರು. ಮೇಘಗಳಿಂದ ಪುಷ್ಪವರ್ಷಗಳು ಬಿದ್ದುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ದುರ್ಗಾದೇವಿಯು ಮಹಿಷಾಸುರನನ್ನು ನಿಗ್ರಹಿಸಿದುದು" ಎಂಬ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ವಿಂಶತಿತಮೋಽಧ್ಯಾಯಃ

### ಪಾರ್ವತೀಕೃತಾರುಣಾಚಲೇಶ್ವರಸ್ತುತಿ ವರ್ಣನಂ

ಮಾರ್ಕಂಡೇಯ ಉವಾಚ :—

ಅಹೋ ಮಹಿಷದೈತ್ಯಸ್ಯ ದುರಾಚಾರತ್ವಮೀದೃಶಂ ।
ಅಹೋ ದುರಿತಹಾರಿಣ್ಯಾ ದುರ್ಗಾಯಾಶ್ಚ ಪರಾಕ್ರಮಃ ॥ ೧ ॥
ಏವಂ ತಯಾ ಭದ್ರಕಾಳ್ಯಾ ನಿಹತೇ ಮಹಿಷಾಸುರೇ ।
ಕಿಂ ಚಕಾರ ಗಿರೀಂದ್ರಸ್ಯ ನಂದಿನೀ ತಪಸಿ ಸ್ಥಿತಾ ॥ ೨ ॥

ನಂದಿಕೇಶ್ವರ ಉವಾಚ :—

ಅನಂತರಂ ಸಾ ಹಸ್ತೇನ ದಧತೀ ದೈತ್ಯಮಸ್ತಕಂ ।
ನನಾಮ ಗೌರೀಮನ್ಯೇನ ಪಾಣಿನಾ ಖಡ್ಗಧಾರಿಣಾ ॥ ೩ ॥
ಅಥ ಹರ್ಷೇಣ ನೃತ್ಯಂತೀಂ ತಾಮಾಲೋಕ್ಯ ದಯಾರ್ದ್ರಯಾ ।
ದೃಷ್ಟ್ಯಾ ದೇವೀ ಜಗಾದೈನಾಂ ದಂತಾಂಶುದ್ಯೋತಿತಾಂಬರಾ ॥ ೪ ॥
ತ್ವಯಾತಿದುಷ್ಕರಂ ಕರ್ಮ ನಿರ್ಮಿತಂ ವಿಂಧ್ಯವಾಸಿನಿ ।
ಜಾತಂ ತವ ಪ್ರಭಾವೇನ ನಿಷ್ಪ್ರತ್ಯೂಹಂ ಚ ಮೇ ತಪಃ ॥ ೫ ॥

---

### ಕನ್ನಡದ ಅನುವಾದ

#### ಪಾರ್ವತಿಯು ಅರುಣಾಚಲೇಶ್ವರನನ್ನು ಸ್ತುತಿಸಿದುದು

೧. ಮಾರ್ಕಂಡೇಯನು ಕೇಳುತ್ತಾನೆ:—ಮಹಿಷಾಸುರನ ದುರಾಚಾರವು ಎಷ್ಟರದು! ಅವನನ್ನು ನಿಗ್ರಹಿಸಿದ ದುರ್ಗಿಯ ಪರಾಕ್ರಮವೂ ಅದ್ಭುತವಾದದ್ದೇ ಸರಿ!!

೨. ಈ ರೀತಿಯಾಗಿ ಭದ್ರಕಾಳಿಯಿಂದ ಮಹಿಷಾಸುರನ ಸಂಹಾರವಾಗಲು ತಪಸ್ಸಿನಲ್ಲಿ ನಿರತಳಾಗಿದ್ದ ಪಾರ್ವತಿಯು ಏನುಮಾಡಿದಳು?

೩. ನಂದಿಕೇಶ್ವರನು ಹೇಳುತ್ತಾನೆ:—ಆಗ ದುರ್ಗಿಯು ರಾಕ್ಷಸನ ತಲೆಯನ್ನು ಒಂದು ಕೈಯಲ್ಲೂ ಖಡ್ಗವನ್ನು ಮತ್ತೊಂದರಲ್ಲೂ ಹಿಡಿದು ಪಾರ್ವತಿಗೆ ನಮಸ್ಕರಿಸಿದಳು.

೪. ಆಗ ದೇವಿಯು ಹರ್ಷದಿಂದ ನರ್ತನ ಮಾಡುತ್ತಿರುವ ದುರ್ಗಿಯನ್ನು ಕುರಿತು ದಯಾರ್ದ್ರವಾದ ದೃಷ್ಟಿಯಿಂದ ನೋಡುತ್ತ ತನ್ನ ರದನಕಾಂತಿಯು ದಿಕ್ಕುಗಳನ್ನು ಬೆಳಗುತ್ತಿರಲು ಹೀಗೆಂದಳು.

೫. "ಎಲೌ ವಿಂಧ್ಯವಾಸಿನಿಯೆ! ನಿನ್ನಿಂದ ಮಹತ್ತರವಾದ ಕಾರ್ಯವು ನೆರವೇರಿತು. ನಿನ್ನ ಪ್ರಭಾವದಿಂದಲೇ ನನ್ನ ತಪಸ್ಸು ನಿರ್ವಿಘ್ನವಾಗಿ ನೆರವೇರಿತು.

ಅಧ್ಯೈತನ್ಮಾಹಿಷಂ ಶೀರ್ಷಮಪವಿತ್ರಂ ಭಯಂಕರಂ ।
ಜಗತ್ಪವಿತ್ರಚಾರಿತ್ರೇ ತ್ಯಕ್ತುಮರ್ಹಸಿ ಹಸ್ತತಃ ॥ ೬ ॥
ಇತಿ ಗೌರ್ಯೋದಿತಾ ದುರ್ಗಾ ಜುಗುಪ್ಸಾಕುಲಮಾನಸಾ ।
ಮೂರ್ಧ್ನಸ್ತಸ್ಯ ನಿಪಾತಾಯ ವ್ಯಧುನೋದ್ಬಹುಶಃ ಕರಂ ॥ ೭ ॥
ತೀರ್ಥಮುತ್ಪಾದ್ಯತಾಂ ದೇವಿ ನವಂ ಪಾಪವಿನಾಶನಂ ।
ತಸ್ಮಿನ್ನಿಮಜ್ಜನಾದ್ದುರ್ಗೇ ಪ್ರಾಯಶ್ಚಿತ್ತಂ ಭವಿಷ್ಯತಿ ॥ ೮ ॥
ಇತೀರಿತಾ ಗೌತಮೇನ ದುರ್ಗಾ ದುರಿತಶಂಕಿನೀ ।
ಪಾಟಯಾಮಾಸ ಖಡ್ಗೇನ ಶಿಲಾಪಟ್ಟಂ ಪಟೀಯಸಾ ॥ ೯ ॥
ಪಾತಾಲಾವಧಿ ನಿರ್ಭಿನ್ನಾತ್ಪಾಷಾಣತಲತಸ್ತತಃ ।
ಉದಜೃಂಭತ್ತರಂಗಾಂಭಃ ಸಚ್ಚಿತ್ತಮಿವ ನಿರ್ಮಲಂ ॥ ೧೦ ॥
ಮಮಜ್ಜ ಸಾಪಿ ಗಂಭೀರೇ ತಸ್ಮಿನ್ನಂಭಸಿ ಪಾವನೇ ।
ನಮಃ ಶೋಣಾದ್ರಿನಾಥಾಯೇತ್ಯುಕ್ತ್ವಾ ಮಂತ್ರಮನುತ್ತಮಂ ॥ ೧೧ ॥
ತಾವನ್ಮಹಿಷಕಂಠಸ್ಥಂ ಲಿಂಗಂ ತದ್ಗಲಿತಂ ತಲೇ ।
ತಟೇ ಪ್ರತಿಷ್ಠಿತಂ ಜಾತಂ ಪಾಪನಾಶನಸಂಜ್ಞಯಾ ॥ ೧೨ ॥

---

೬. ಈಗ ಭಯಂಕರವೂ ಅಪವಿತ್ರವೂ ಆದ ಮಹಿಷಮಸ್ತಕವನ್ನು ಶುದ್ಧ ಚರಿತ್ರಳಾದ ನೀನು ತ್ಯಜಿಸು.''

೭. ಹೀಗೆ ಗಿರಿಜೆಯಿಂದ ಆಜ್ಞಪ್ತಳಾಗಿ ಮನಸ್ಸಿನಲ್ಲಿ ಜುಗುಪ್ಸೆಯನ್ನು ತಳೆದು ಅದನ್ನು ಬಿಸುಡಲು ಅನೇಕ ಸಲ ಕೈಯನ್ನು ಝಾಡಿಸಿದಳು.

೮. "ಎಲೌ ದೇವಿಯೆ! ನೀನು ಪಾಪನಾಶಕವಾದ ಒಂದು ತೀರ್ಥವನ್ನು ಸೃಷ್ಟಿಮಾಡು. ಅದರಲ್ಲಿ ಸ್ನಾನಮಾಡುವುದರಿಂದ ಈ ಕಾರ್ಯಕ್ಕೆ ಪ್ರಾಯಶ್ಚಿತ್ತ ವಾಗುವುದು."

೯. ಗೌತಮ ಮಹರ್ಷಿಯು ಪಾಪಶಂಕಿನಿಯಾದ ದುರ್ಗೆಗೆ ಈ ರೀತಿ ಯಾಗಿ ಹೇಳಲು ಆಕೆಯು ಒಂದು ಕಲ್ಲಿನ ಬಂಡೆಯನ್ನು ಬಲವಾದ ತನ್ನ ಖಡ್ಗ ದಿಂದ ಹೊಡೆದಳು.

೧೦. ಆ ಬಂಡೆಯು ಪಾತಾಳದವರೆಗೂ ಭಿನ್ನವಾಗಲು ಅದರೊಳಗಿನಿಂದ ಸತ್ಪುರುಷರ ಮನಸ್ಸಿನಂತೆ ನಿರ್ಮಲವಾದ ಉದಕವು ಹೊರಹೊರಟಿತು.

೧೧. ಆಕೆಯೂ ಗಂಭೀರವಾದ ಆ ಜಲದಲ್ಲಿ ಸ್ನಾನಮಾಡಿದಳು. ಶೋಣಾದ್ರಿನಾಥನಿಗೆ ನಮಸ್ಕರಿಸಿ ಅಪ್ರತಿಮವಾದ ಮಂತ್ರವನ್ನು ಪುರಶ್ಚರಣ ಮಾಡಿದಳು.

೧೨. ಆಗ ಮಹಿಷಾಸುರನ ಕಂಠದಲ್ಲಿದ್ದ ಲಿಂಗವು ತೀರ್ಥದ ದಡದಲ್ಲಿ ಬಿದ್ದು ಪಾಪನಾಶನಲಿಂಗವೆಂಬ ಹೆಸರಿನಿಂದ ಅಲ್ಲಿಯೇ ಪ್ರತಿಷ್ಠಿಸಲ್ಪಟ್ಟಿತು.

ಉನ್ಮಮಜ್ಜ ತತೋ ದುರ್ಗಾ ತೀರ್ಥಾಂಭೋಧೂತಕಲ್ಮಷಾ ।
ನಿಪಪಾತಾಥ ತತ್ಪಾಣೇರ್ಮಹಿಷಾಸುರಮಸ್ತಕಂ ॥ ೧೩ ॥
ಕೃತಪ್ರದಕ್ಷಿಣಾ ನತ್ವಾ ಪಾಪನಾಶನಮೀಶ್ವರಂ ।
ಪುರಸ್ತಾದಸ್ಥಿ ಸಾ ಗೌರ್ಯಾ ಗೌತಮೇನಾಭಿನಂದಿತಾ ॥ ೧೪ ॥
ಏವಂ ಪ್ರತ್ಯಕ್ಷನಿರತಪಾಪಾಂ ತಾಂ ವೀಕ್ಷ್ಯ ಪಾರ್ವತೀ ।
ಜಗಾದ ದೀರ್ಘತಪಸಂ ಜಗತೀಧರನಂದಿನೀ ॥ ೧೫ ॥
ಮಹಿಷಾಸುರಸಂಹಾರೇಽಂಜಸಾ ಸ್ವನುಮತಿಃ ಕೃತಾ ।
ವಿಂಧ್ಯವಾಸಿನೀಯಮಹೋ ದುಷ್ಟಮಾಹಿಷನಿಗ್ರಹಂ ॥ ೧೬ ॥
ಗೃಹೀತ್ವಾ ಭಕ್ಷಯಾಮಾಸ ತಸ್ಯ ಲಿಂಗಮಿದಂ ಶಿವಂ ।
ಪ್ರಾಯಶ್ಚಿತ್ತಂ ತತೋ ಬ್ರೂಹಿ ಮಮಾಪಿ ಮುನಿಸತ್ತಮ ॥ ೧೭ ॥

ಗೌತಮ ಉವಾಚ :—

ದೇವಿ ಸರ್ವಜಗತ್ಸರ್ಗಸ್ಥಿತಿಸಂಹಾರಕಾರಿಣಿ ।
ತ್ವದ್ಧ್ಯಾನಮೇವ ಜಗತಾಂ ಸರ್ವಪಾತಕನಾಶನಂ ॥ ೧೮ ॥
ಅಥಾಪಿ ಲೌಕಿಕಂ ವೃತ್ತಮವಲಂಬ್ಯ ತ್ವಯೇರಿತಂ ।
ಸ್ವಕೃತಾಪಿ ಹಿ ಮರ್ಯಾದಾ ನ ಮಹದ್ಭಿರ್ವಿಲಂಘ್ಯತೇ ॥ ೧೯ ॥

---

೧೩. ತೀರ್ಥದಿಂದ ಸ್ನಾತಳಾದ ದುರ್ಗಿಯು ನಿಷ್ಕಲ್ಮಷಳಾಗಿ ಎದ್ದು ಬರುತ್ತಲೆ ಕೈಯಿಂದ ಮಹಿಷಾಸುರನ ತಲೆಯು ನೆಲಕ್ಕುರುಳಿತು.

೧೪–೧೫. ಆಗ ಪಾಪನಾಶನ ಲಿಂಗಕ್ಕೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಗೌತಮರಿಂದ ಹೊಗಳಿಸಿಕೊಂಡು ಪಾರ್ವತಿಯ ಮುಂಭಾಗದಲ್ಲಿ ಬಂದು ನಿಂತಳು. ಹೀಗೆ ಪ್ರತ್ಯಕ್ಷವಾಗಿ ತನ್ನ ಪಾಪಗಳಿಂದ ಮುಕ್ತಳಾದ ದುರ್ಗಿಯನ್ನು ಕಂಡು ಪಾರ್ವತಿಯು ತಪೋನಿಷ್ಠನಾದ ಗೌತಮನನ್ನು ಕುರಿತು ಹೇಳಿದಳು.

೧೬–೧೭. ಈ ಮಹಿಷಾಸುರನ ಸಂಹಾರಕ್ಕೆ ನಾನೇ ಅನುಮತಿಯನ್ನು ಕೊಟ್ಟೆನು. ಈ ವಿಂಧ್ಯವಾಸಿನಿಯೂ ಕೂಡ ಅದರಂತೆ ದುಷ್ಟನಾದ ಮಹಿಷಾಸುರನನ್ನು ಆತನ ಕೊರಳಲಿಂಗವನ್ನು ಹಿಡಿದು ಭಕ್ಷಣಮಾಡಿದಳು. ಈ ಪಾವನವಾದ ಲಿಂಗವು ಅವನ ಕಂಠದಲ್ಲಿದ್ದುದು. ಆದುದರಿಂದ ನನಗೂ ತಕ್ಕ ಪ್ರಾಯಶ್ಚಿತ್ತವನ್ನು ನಿಯಮಿಸು.

೧೮. ಗೌತಮರು ಹೇಳುತ್ತಾರೆ:—ಎಲೌ ಪಾರ್ವತಿಯೆ! ನೀನೇ ಸಕಲ ಲೋಕಗಳ ಸೃಷ್ಟಿಸ್ಥಿತಿಲಯಗಳಿಗೆ ಕಾರಣಳಾಗಿರುವೆ. ಲೋಕದಲ್ಲೆಲ್ಲ ನಿನ್ನ ನಾಮದ ಸ್ಮರಣೆಯೇ ಸಕಲಪಾಪನಾಶಕವು.

೧೯. ಹಾಗೂ ನೀನು ಲೌಕಿಕ ವ್ಯವಹಾರವನ್ನನುಸರಿಸಿಕೊಳ್ಳುತ್ತಿರುವೆ. ದೊಡ್ಡವರು ತಾವು ಮಾಡಿದ ಕಟ್ಟಳೆಗಳನ್ನು ತಾವೇ ಉಲ್ಲಂಘನಮಾಡುವುದಿಲ್ಲ.

ಅಂತಃಕರಣಕಾಲುಷ್ಯಕ್ಷಾಲಿನೀ ಕಾಚನ ಕ್ರಿಯಾ ।
ಕಥ್ಯತೇಽದ್ಯ ಮಯಾ ಮಾತರವಧಾನಂ ವಿಧೀಯತಾಂ ॥ ೨೦ ॥
ಅರುಣಾದ್ರಿರಯಂ ಸಾಕ್ಷಾದನಲಾದ್ರಿಸ್ತಿರೋಹಿತಃ ।
ಜ್ವಲತಿ ಜ್ಯೋತಿಷಾ ಸ್ವೇನ ಕೃತ್ತಿಕಾಪೂರ್ಣಿಮಾನಿಶಿ ॥ ೨೧ ॥
ತತ್ಸಪರ್ಯಾ ತಪಶ್ಚರ್ಯಾ ಕಾರ್ಯಾ ಕಾತ್ಯಾಯನಿ ತ್ವಯಾ ।
ತಜ್ಜ್ಯೋತಿರ್ದರ್ಶನಾತ್ಸರ್ವಮಭೀಷ್ಟಂ ತವ ಸಿದ್ಧ್ಯತಿ ॥ ೨೨ ॥
ಇತ್ಯುಕ್ತಾ ಗೌತಮೇನಾಂಬಾ ತದಾಪ್ರಭೃತಿ ದಾರುಣಾ ।
ಇಯಂ ಚ ಶಿವಭಕ್ತಾ ಹಿ ಶಿವಪೂಜಾರತಾ ತದಾ ॥ ೨೩ ॥
ತಪಶ್ಚಚಾರ ಪಂಚಾನಾಮಗ್ನೀನಾಂ ಮಧ್ಯಮಾಶ್ರಿತಾ ।
ಚತುರ್ಣಾಂ ಶಿಖಿನಾಂ ಮಧ್ಯೇ ಸ್ಥಿತಾ ಸೂರ್ಯನಿವಿಷ್ಟದೃಕ್ ॥ ೨೪ ॥
ರೇಜೇ ಹೈಮೀ ಶಲಾಕೇವ ದ್ಯೋತಮಾನಾ ಗಿರೀಂದ್ರಜಾ ।
ಅಥಾಕೃಷ್ಟೇನ ಪಾರ್ವತ್ಯಾಃ ಪ್ರೇಮಪಾಶೈರ್ನಿರಾಯತೈಃ ।
ಸಾ ಕಾರ್ತಿಕೀ ಪೌರ್ಣಮಾಸೀ ಸಮಾಪೇದೇ ಶುಭಾ ತಿಥಿಃ ॥ ೨೫ ॥

---

೨೦. ನಿನ್ನ ಅಂತಃಕರಣದ ಮಾಲಿನ್ಯವನ್ನು ಕಳೆಯುವಂತಹ ಒಂದು ಕಾರ್ಯವನ್ನು ಹೇಳುತ್ತೇನೆ. ಸಾವಧಾನವಾಗಿ ಕೇಳುವವಳಾಗು.

೨೧. ಪೂರ್ವದಲ್ಲಿ ಶಿವನ ಜ್ಯೋತಿಸ್ತಂಭವೇ ತಿರೋಹಿತವಾಗಿ ಅರುಣಾಚಲವೆಂದು ಪ್ರಸಿದ್ಧವಾಗಿರುವುದು. ಕೃತ್ತಿಕಾಪೌರ್ಣಿಮೆಯ ರಾತ್ರಿಯಲ್ಲಿ ಈ ಪರ್ವತವು ತನ್ನ ಪೂರ್ವತೇಜಸ್ಸಿನಿಂದ ರಂಜಿಸುವುದು.

೨೨. ಈ ಅರುಣಾಚಲದ ಸೇವೆಯೂ ತಪಸ್ಸೂ ಈಗ ನಿನ್ನ ಕಾರ್ಯವಾಗಿರುವುದು. ಎಲೌ ದೇವಿಯೇ! ಈ ದಿವ್ಯಜ್ಯೋತಿಯ ದರ್ಶನದಿಂದ ನಿನ್ನ ಅಭೀಷ್ಟಗಳೆಲ್ಲವೂ ನೆರವೇರುವುವು.''

೨೩. ಈ ರೀತಿಯಾಗಿ ಗೌತಮರಿಂದ ಆದಿಷ್ಟಳಾಗಿ ಪಾರ್ವತಿಯು ಅಂದಿನಿಂದ ಉಗ್ರವಾದ ಶಿವಭಕ್ತಿಯೊಡನೆ ಶಿವಪೂಜೆಯಲ್ಲಿಯೇ ನಿರತಳಾಗಿದ್ದಳು.

೨೪. ಪಂಚಾಗ್ನಿ ತಪಸ್ಸನ್ನೂ ಮಾಡುವವಳಾಗಿ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಬೆಂಕಿಗಳನ್ನು ಹೊತ್ತಿಸಿಕೊಂಡು ಸೂರ್ಯನನ್ನೇ ದೃಷ್ಟಿಸಿ ನೋಡುವವಳಾದಳು.

೨೫. ಪಾರ್ವತಿಯು ಸುಂದರವಾದ ಶರೀರಕಾಂತಿಯಿಂದ ಬಂಗಾರದ ಬಳ್ಳಿಯಂತೆ ಮನೋಹರವಾಗಿದ್ದಳು. ಆಗ ಅನುಲ್ಲಂಘ್ಯಗಳಾದ ಪಾರ್ವತಿಯ

ತತಸ್ತಸ್ಯ ದಿನಸ್ಯಾಂತೇ ಶೃಂಗೇ ಶೋಣಮಹೀಭೃತಃ ।
ಅದರ್ಶಿ ಕಿಮಪಿ ಜ್ಯೋತಿರನುಪಾಧಿಕ ವೈಭವಂ ॥ ೨೬ ॥
ತದರ್ಥೋಪಗತೈರ್ಬ್ರಹ್ಮಮಧುಭಿದ್ವಾಸವಾದಿಭಿಃ ।
ಉಪಾಸ್ಯಮಾನಮಭಿತೋ ದೇವೈರ್ದಿವ್ಯರ್ಷಿಸಂಗತೈಃ ॥ ೨೭ ॥
ತದನಿಂಧನಮಸ್ನೇಹಮದಶಾವರ್ತಿಸಂಭವಂ ।
ಮಹಾಪ್ರದೀಪಮಾಲೋಕ್ಯ ವಿಸ್ಮಯಂ ಪ್ರಾಪ ಪಾರ್ವತೀ ॥ ೨೮ ॥
ಕೃತಪ್ರದಕ್ಷಿಣಾ ಸಾಥ ಪ್ರಣಮಂತೀ ಪದೇ ಪದೇ ।
ಅರುಣಾದ್ರೀಶ್ವರಂ ನಾಥಂ ತುಷ್ಟಾ ತುಷ್ಟಾವ ಶೈಲಜಾ ॥ ೨೯ ॥
ನಮಸ್ತೇ ಮೇರುಚಾಪಾಯ ಕೈಲಾಸಾಚಲವಾಸಿನೇ ।
ನೀಹಾರಶೈಲಜಾಮಾತ್ರೇ ಶೋಣಕ್ಷ್ಮಾಧರರೂಪಿಣೇ ॥ ೩೦ ॥
ವರುಣಾದಿಸುರಾರ್ಚ್ಯಾಯ ತರುಣಾದಿತ್ಯವರ್ಚಸೇ ।
ಅರುಣಾಚಲನಾಥಾಯ ಕರುಣಾಮೂರ್ತಯೇ ನಮಃ ॥ ೩೧ ॥

---

ಪ್ರೇಮಪಾಶಗಳಿಂದ ಆಕರ್ಷಿಸಲ್ಪಟ್ಟಂತೆ ಶುಭ ತಿಥಿಯಾದ ಕೃತ್ತಿಕಾ ಪೌರ್ಣಿಮಾ ತಿಥಿಯು ಸಂಪ್ರಾಪ್ತವಾಯಿತು.

೨೬. ಆದಿನದ ಅವಸಾನದಲ್ಲಿ ಆ ಅರುಣಾಚಲದ ಶೃಂಗ ಪ್ರದೇಶದಲ್ಲಿ ಅಸಾಧಾರಣವಾದ ವೈಭವವುಳ್ಳ ಒಂದಾನೊಂದು ಜ್ಯೋತಿಯು ಕಾಣ ಬಂದಿತು.

೨೭. ಅದಕ್ಕಾಗಿಯೇ ನೆರೆದ ಬ್ರಹ್ಮ, ವಿಷ್ಣು, ಇಂದ್ರ ಮೊದಲಾದ ದೇವತೆಗಳಿಂದಲೂ, ಮಹರ್ಷಿಗಳಿಂದಲೂ ಸುತ್ತಲೂ ಸೇವಿಸಲ್ಪಡುತ್ತಿದ್ದಿತು.

೨೮. ಕಟ್ಟಿಗೆಗಳಾಗಲಿ, ಎಣ್ಣೆಯಾಗಲಿ, ಬತ್ತಿಯಾಗಲಿ ಇಲ್ಲದೆಯೇ ಬೆಳಗುತ್ತಿದ್ದ ಆ ಮಹಾದೀಪವನ್ನು ನೋಡಿ ಪಾರ್ವತಿಯು ಅತ್ಯಂತ ಆಶ್ಚರ್ಯ ವನ್ನು ಹೊಂದಿದಳು.

೨೯. ಪ್ರದಕ್ಷಿಣೆಯನ್ನು ಮಾಡಿ ಹೆಜ್ಜೆ ಹೆಜ್ಜೆಗೂ ನಮಸ್ಕರಿಸುತ್ತ ಸಂತೋಷ ದಿಂದ ಪಾರ್ವತಿಯು ಅರುಣಾಚಲೇಶ್ವರನನ್ನು ಸ್ತೋತ್ರಮಾಡತೊಡಗಿದಳು.

೩೦. ಮೇರುಪರ್ವತವನ್ನು ಚಾಪವನ್ನಾಗಿ ಪಡೆದವನೂ, ಕೈಲಾಸ ಪರ್ವತದಲ್ಲಿ ವಾಸಿಸುವನೂ, ಹಿಮವದ್ರಾಜನ ಅಳಿಯನೂ, ಅರುಣಾಚಲ ಸ್ವರೂಪನೂ ಆದ ನಿನಗೆ ನಮಸ್ಕಾರವು.

೩೧. ವರುಣಾದಿದೇವತೆಗಳಿಂದ ವಂದಿತನೂ, ಬಾಲಸೂರ್ಯನ ತೇಜಸ್ಸಿ ನಿಂದೊಡಗೂಡಿದವನೂ, ಕರುಣಾಮೂರ್ತಿಯೂ ಆದ ಅರುಣಾಚಲನಿಗೆ ನಮಸ್ಕಾರವು.

ಜಯ ಜಹ್ನುಸುತಾಚಂದ್ರಲೇಖಾಲಂಕೃತಶೇಖರ ।
ಸೌಂದರ್ಯಮೋಹಿತಾಶೇಷಮುನಿಪತ್ನೀಜನಾಶಯ ॥ ೩೨ ॥
ಜಯ ಶೈಲಸುತಾಸಂಗಸಂಭೃತಾನಂಗವೈಭವ ।
ಮಾಯಾನಾರಾಯಣಾಭೋಗಕ್ರೀಡಾಮ್ರೇಡನಪಂಡಿತ ॥ ೩೩ ॥
ಜಯ ಸಂಧ್ಯಾಸಮೋಪೇತಸಂಭೃತಾನಂದತಾಂಡವ ।
ಜಯ ಗೀರ್ವಾಣಗಂಧರ್ವಸಿದ್ಧವಿದ್ಯಾಧರಾರ್ಚಿತ ॥ ೩೪ ॥
ಜಯ ಹೇರಂಬಜನಕ ಜಯ ಷಣ್ಮುಖವತ್ಸಲ ।
ಜಯ ಹೈಮವತೀಪ್ರಾರ್ಥ್ಯ ಜಯ ಪಾರ್ಥಿವದುರ್ಲಭ ॥ ೩೫ ॥
ಇತಿ ಸ್ತುತ್ವಾ ಮುಹುಸ್ತಸ್ಮಿನ್ ಜ್ಯೋತಿಷಿ ನ್ಯಸ್ತಲೋಚನಾಂ ।
ದೃಷ್ಟ್ವಾ ದೇವೀಂ ದಯಾವ್ಯಾಜಾದ್ವಿಲಿಲ್ಯೇ ವೃಷಭಧ್ವಜಃ ॥ ೩೬ ॥
ಲಯಿತ್ವಾ ನಿಜಮಾಸ್ಥಾಯ ರೂಪಮುತ್ಕಟಸುಂದರಂ ।
ಆಸ್ಥಾಯ ವೃಷಭಂ ದಿವ್ಯಮುಮಾಂ ದೃಷ್ಟ್ವಾ ಶಿವಾಂ ಶುಭಾಂ ॥ ೩೭ ॥

---

೩೨. ಗಂಗೆಯನ್ನೂ ಬಾಲಚಂದ್ರನನ್ನೂ ಮೌಳಿಯಲ್ಲಿ ಧರಿಸಿ ಸೌಂದರ್ಯದಿಂದ ಸಕಲಮುನಿಗಳ ಪತ್ನಿಯರ ಮನಸ್ಸುಗಳನ್ನೂ ಸೆಳೆಯುತ್ತಿರುವ ನಿನಗೆ ಜಯವಾಗಲಿ.

೩೩. ಗಿರಿಜೆಯ ಅಂಗಸಂಗದಿಂದ ಮನ್ಮಥ ವೈಭವವನ್ನು ಹೊಂದಿದವನೂ, ಮಾಯೆಯಿಂದ ನಾರಾಯಣನಾಗಿ ಕಾಳಿಯನ ಹೆಡೆಗಳಲ್ಲಿ ಮತ್ತೆ ಮತ್ತೆ ನರ್ತನಮಾಡಿದವನೂ ಆದ ನಿನಗೆ ಜಯವು.

೩೪. ಸಂಧ್ಯಾಕಾಲದಲ್ಲಿ ಆನಂದದಿಂದ ತಾಂಡವವನ್ನು ಮಾಡುವವನೂ, ದೇವತೆಗಳು, ಗಂಧರ್ವರು, ಸಿದ್ಧರು, ವಿದ್ಯಾಧರರು ಇವರಿಂದ ಪೂಜಿತನೂ ಆದ ನಿನಗೆ ಜಯವು.

೩೫. ಗಣನಾಥನಿಗೆ ತಂದೆಯೂ, ಷಣ್ಮುಖಪ್ರಿಯನೂ, ಪಾರ್ವತೀ ರಮಣನೂ, ಪ್ರಾಪಂಚಿಕರಿಗೆ ದುರ್ಲಭನೂ ಆದ ನಿನಗೆ ಜಯವಾಗಲಿ.

೩೬. ಈ ವಿಧದ ಸ್ತುತಿಯನ್ನು ಮಾಡಿ ಆ ಜ್ಯೋತಿಯಲ್ಲಿಯೇ ನ್ಯಸ್ತಚಿತ್ತಳಾಗಿದ್ದ ಪಾರ್ವತಿಯನ್ನು ಕಂಡು ಮಹೇಶ್ವರನು ದಯೆಯನ್ನು ತೋರುವ ನೆವದಿಂದ ಅಂತರ್ಹಿತನಾದನು.

೩೭. ತೇಜೋರೂಪವನ್ನು ಉಪಸಂಹರಿಸಿ ಅತಿ ಸುಂದರವಾದ ರೂಪವನ್ನು ಸ್ವೀಕರಿಸಿಕೊಂಡು ದಿವ್ಯವಾದ ವೃಷಭವನ್ನೇರಿ ಪರಿಶುದ್ಧಳಾದ ಆ ಪಾರ್ವತಿಯನ್ನು ನೋಡಿದನು.

ಮಾನಾತಿರೇಕಾದಪಹಾಯ ಸರ್ವ
ಮೈಶ್ವರ್ಯಮೇವಂ ತಪಸಿ ಪ್ರವೃತ್ತಾಂ ।
ಮುಗ್ಧಾಂ ಪುನಃ ಸಾಂತ್ವಯಿತುಂ ಗಿರೀಶಃ
ಪ್ರಚಕ್ರಮೇ ಪರ್ವತರಾಜಪುತ್ರೀಂ ॥ ೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ಪಾರ್ವತೀಕೃತಾರುಣಾಚಲೇಶ್ವರಸ್ತುತಿ ವರ್ಣನಂ" ನಾಮ ವಿಂಶತಿತಮೋಽಧ್ಯಾಯಃ

---

೩೮. ಗರ್ವದಿಂದ ಸಕಲೈಶ್ವರ್ಯವನ್ನೂ ತ್ಯಜಿಸಿ ತಪಸ್ಸಿನಲ್ಲಿ ನಿರತಳಾಗಿರುವ ಮುಗ್ಧೆಯಾದ ಆಕೆಯನ್ನು ಸಮಾಧಾನಗೊಳಿಸುವುದಕ್ಕಾಗಿ ಪರಮೇಶ್ವರನು ಉದ್ಯುಕ್ತನಾದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ಪಾರ್ವತಿಯು ಅರುಣಾಚಲೇಶ್ವರನನ್ನು ಸ್ತುತಿಸಿದುದು" ಎಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕವಿಂಶತಿತಮೋऽಧ್ಯಾಯಃ

### ಶಿವಕೃತ ಪಾರ್ವತೀಪ್ರಶಂಸಾ ವರ್ಣನಂ

ನಂದಿಕೇಶ್ವರ ಉವಾಚ :—

ತದಾ ಬ್ರಹ್ಮಾ ಸರಸ್ವತ್ಯಾ ಮಹಾವಿಷ್ಣುಶ್ಚ ಪದ್ಮಯಾ ।
ಶಕ್ರಃ ಪುಲೋಮಸುತಯಾ ಪರೇ ದಿಕ್ಪಾಲಕಾ ಅಪಿ ॥ ೧ ॥
ಗಂಧರ್ವಾಪ್ಸರಸಾಂ ಸಂಘಾ ವಸವೋऽಪಿ ಸುರಾ ಅಪಿ ।
ತ್ರಯಸ್ತ್ರಿಂಶತ್ಕೋಟಿಗಣಾಃ ಪರೇ ಮುನಿಗಣಾ ಅಪಿ ॥ ೨ ॥
ಏಕಾದಶಮಹಾರುದ್ರಾ ಆದಿತ್ಯಾ ದ್ವಾದಶಾಪಿ ಚ ।
ಭೈರವಾಶ್ಚ ಪಿಶಾಚಾಶ್ಚ ವೇತಾಲಾಃ ಕಟಪೂತನಾಃ ॥ ೩ ॥
ಯಕ್ಷರಕ್ಷೋರಗಾ ಭೂತಾ ಯೇ ಚಾನ್ಯೇ ಶಿವಕಿಂಕರಾಃ ।
ಸಂತೋಷಭಾಜಃ ಸರ್ವೇऽಪಿ ವಿಕಟಾಕಾರವೇಷ್ಟಿತಾಃ ।
ಪರಿವಾರ್ಯ ಮಹೇಶಾನಂ ಸಮಾಜಗ್ಮುಃ ಸಹಸ್ರಶಃ ॥ ೪ ॥
ತದ್ವೀರಾಶಂಸನಂ ದೃಷ್ಟ್ವಾ ಯೋಗಿನೀದಾನವೈಃ ಕೃತಂ ।
ಅತೀವ ವಿಸ್ಮಯಂ ಭೇಜುಃ ಸರ್ವೇ ಕಲ್ಪಾಂತಭೀಷಣಂ ॥ ೫ ॥

---

### ಕನ್ನಡದ ಅನುವಾದ

#### ಶಿವನು ಪಾರ್ವತಿಯ ಪ್ರಶಂಸೆಯನ್ನು ಮಾಡಿದುದು

೧–೪. ನಂದಿಕೇಶ್ವರನು ಹೇಳುತ್ತಾನೆ:— ಆಗ ಸರಸ್ವತಿಯೊಡಗೂಡಿ ಬ್ರಹ್ಮನೂ, ಲಕ್ಷ್ಮಿಯೊಡನೆ ನಾರಾಯಣನೂ, ಶಚಿಯೊಡನೆ ಮಹೇಂದ್ರನೂ, ಇತರ ದಿಕ್ಪಾಲಕರೂ, ಗಂಧರ್ವರೂ, ಅಪ್ಸರಸ್ತ್ರೀಯರ ಸಮೂಹಗಳೂ, ಅಷ್ಟ ವಸುಗಳೂ, ಮುವ್ವತ್ತುಮೂರುಕೋಟಿ ದೇವತೆಗಳ ಗಣಗಳೂ, ಮಹರ್ಷಿಗಳೂ, ಏಕಾದಶರುದ್ರರೂ, ದ್ವಾದಶಾದಿತ್ಯರೂ, ಭೈರವರು, ಪಿಶಾಚರು, ಭೇತಾಳರು, ಕಟರು, ಪೂತನಾಗಣಗಳು, ಯಕ್ಷರು, ರಾಕ್ಷಸರು, ಉರಗರು, ಭೂತಗಳು, ಇತರ ಶಿವಕಿಂಕರ ಗಣಗಳೂ ಸಂತೋಷಗೊಂಡವರಾಗಿ ಸಕಲರೂ ವಿರೂಪಗಳಾದ ವೇಷಭೂಷಣಗಳುಳ್ಳವರಾಗಿ ಸಹಸ್ರಸಂಖ್ಯಾಕವಾಗಿ ಮಹೇಶ್ವರನನ್ನು ಸುತ್ತುಗಟ್ಟಿಕೊಂಡು ಹೊರಟರು.

೫. ಯೋಗಿನಿಯರಿಗೂ ರಾಕ್ಷಸರಿಗೂ ನಡೆದ ಪ್ರಳಯ ಭಯಂಕರವಾದ ವೀರಯುದ್ಧವನ್ನು ಕಂಡು ಅವರೆಲ್ಲರೂ ಅತ್ಯಂತ ವಿಸ್ಮಯವನ್ನು ಹೊಂದಿದರು.

ಕೃತಸಾನ್ನಿಧ್ಯಮಾಲೋಕ್ಯ ದೇವಮಾನಂದಯಂತ್ಯುಮಾ ।
ಚಿರರಾತ್ರಪ್ರರೂಢಾಂ ಚ ತದ್ವಿಯೋಗವ್ಯಥಾಂ ಜಹೌ ॥ ೬ ॥
ರೋಮಾಂಚಿತಾ ಸ್ವಿನ್ನಮುಖೀ ವೇಪಮಾನಾ ಘನಸ್ತನೀ ।
ಪಾದಾಂಗುಲೀಷು ನಯನೇ ವಿನಿವೇಶಯತಿ ಸ್ಮ ಸಾ ॥ ೭ ॥
ವೃಷಭಾದವರುಹ್ಯಾಥ ಗೃಹೀತ್ವೈನಾಂ ಕರೇ ಶಿವಃ ।
ಸ್ಮಿತಶಾರೀರಕಂಠಶ್ರೀಪ್ರಣಯೇನೈವಮಬ್ರವೀತ್ ॥ ೮ ॥

ಶಿವ ಉವಾಚ:—

ವ್ಯಾಕುಲೀಕ್ರಿಯತೇ ದೇವಿ ಕಿಮೇವಂ ಕಾರಣಂ ವಿನಾ ।
ಸರ್ವೈರಾರಾಧನೀಯೇತಿ ಮಯಾಪಿ ಘಟಿತೋಽಂಜಲಿಃ ॥ ೯ ॥
ಕಿಂ ನವೇತ್ಸ್ಯಾವಯೋರೈಕ್ಯಂ ಜ್ಯೋತ್ಸ್ನಾಚಂದ್ರಮಸೋರಿವ ।
ಅನಾದಿಸಿದ್ಧಂ ದೇವೇಶಿ ತವೇದಂ ಮೌಗ್ಧ್ಯಮೀದೃಶಂ ॥ ೧೦ ॥
ಕ್ವೇದಂ ಶಿರೀಷಮೃದ್ವಂಗಿ ಶರೀರಂ ತೇ ಗಿರೀಂದ್ರಜೇ ।
ತಪಃ ಸಮಾಧಯಶ್ಚೇತಿ ಕ್ವ ಕರ್ಕಶ ಜನೋಚಿತಾಃ ॥ ೧೧ ॥
ನಾರಾಯಣೋಽಹಂ ಲಕ್ಷ್ಮೀ ಸ್ತ್ವಂ ಬ್ರಹ್ಮಾಸ್ಮಿ ತ್ವಂ ಸರಸ್ವತೀ ॥ ೧೨ ॥

---

೬. ಎದುರಿಗೆ ಸನ್ನಿಹಿತನಾದ ಮಹೇಶ್ವರನನ್ನು ಕಂಡು ಗಿರಿಜೆಯು ಆನಂದದಿಂದ ಬಹಳಕಾಲದ ವಿರಹವ್ಯಥೆಯನ್ನು ಮರೆತುಬಿಟ್ಟಳು.

೭. ಮೈನವಿರೇಳಲು, ಮುಖವು ಬೆವರುತ್ತಿರಲು, ನಡುಗುತ್ತ ಉತ್ತುಂಗಸ್ತನಗಳುಳ್ಳವಳಾಗಿ ಲಜ್ಜೆಯಿಂದ ಆತನ ಪಾದಗಳ ಬೆರಳುಗಳಲ್ಲಿಯೇ ದೃಷ್ಟಿಯನ್ನಿಡುವವಳಾದಳು.

೮. ಆಗ ಮಹಾದೇವನು ವೃಷಭದಿಂದ ಕೆಳಗಿಳಿದು ಆಕೆಯ ಕೈಯನ್ನು ಹಿಡಿದು ಮುಗುಳ್ನಗೆಯಿಂದ ಕೋಮಲವಾದ ಕಂಠಧ್ವನಿಯು ಪ್ರೇಮವನ್ನು ಸೂಚಿಸುತ್ತಿರಲು ಇಂತೆಂದನು.

೯. ಶಿವನು ಹೇಳಿದನು:—ಎಲೌ ದೇವಿಯೆ! ಕಾರಣವಿಲ್ಲದೆ ಹೀಗೇಕೆ ವ್ಯಾಕುಲಪಡುತ್ತಿರುವೆ? ಸಕಲರಿಂದಲೂ ನೀನು ಸಂಪೂಜ್ಯಳಾದುದರಿಂದ ನಾನೂ ನಿನಗೆ ಕೈಜೋಡಿಸಿರುವೆನು.

೧೦. ನಮ್ಮಿಬ್ಬರಿಗೂ ಚಂದ್ರಚಂದ್ರಿಕೆಯರಿಗಿರುವಂತೆ ಅನಾದಿಸಿದ್ಧವಾದ ಐಕ್ಯವಿರುವುದೆಂಬುದು ನಿನಗೆ ತಿಳಿದಿಲ್ಲವೆ? ಈ ವಿಧವಾದ ಮುಗ್ಧತ್ವವು ನಿನಗೇಕೆ?

೧೧. ಶಿರೀಷಕೋಮಲೆಯಾದ ಗಿರಿಜೆಯೆ! ನಿನ್ನ ಮೃದುವಾದ ಶರೀರವೆಲ್ಲಿ? ಕಠಿನಶರೀರಿಗಳಿಗೆ ಯೋಗ್ಯಗಳಾದ ತಪಸ್ಸು ಸಮಾಧಿಗಳೆಲ್ಲಿ?

೧೨. "ನಾನು ನಾರಾಯಣನು, ನೀನು ಲಕ್ಷ್ಮಿಯು, ನಾನು ಬ್ರಹ್ಮನು, ನೀನು ಸರಸ್ವತಿಯು.

ವಾರುಣೀ ತ್ವಂ ಫಣೀಂದ್ರೋಽಹಂ ರೋಹಿಣೀ ತ್ವಮಹಂ ಶಶೀ ।
ಸ್ವಾಹಾ ತ್ವಂ ಹವ್ಯವಾಹೋಽಹಂ ಸೂರ್ಯೋಽಹಂ ತ್ವಂ ಸುವರ್ಚಲಾ ॥
ಜಾಹ್ನವೀ ತ್ವಂ ಸಮುದ್ರೋಽಹಂ ಮೇರುರಸ್ಮಿ ತ್ವಮುರ್ವರಾ ।
ಪುಲೋಮಜಾ ತ್ವಂ ಶಕ್ರೋಽಹಂ ತ್ವಂ ರತಿಶ್ಚಿತ್ತಭೂರಹಂ ॥ ೧೪ ॥
ಬುದ್ಧಿಸ್ತ್ವಂ ರಾಜರಾಜೋಽಹಂ ತ್ವಂ ಶಮಾಹಂ ಸಮೀರಣಃ ।
ಪಾಥೋಽಧಿಪೋಽಹಂ ವೀಚಿಸ್ತ್ವಂ ಪ್ರಕೃತಿಸ್ತ್ವಂ ಪುಮಾನಹಂ ॥ ೧೫ ॥
ವಿದ್ಯಾ ತ್ವಂ ವೇದಿತವ್ಯೋಽಹಂ ವಾಕ್ತ್ವಮರ್ಥೋಽಸ್ಮಿ ಪಾರ್ವತಿ ।
ಈಶ್ವರೋಽಹಂ ಮದಂಶಾಸಿ ತ್ವಯ್ಯೈವಾಜ್ಞಾಸ್ವರೂಪಯಾ ।
ಸೃಷ್ಟಿಸ್ಥಿತ್ಯುಪಸಂಹಾರವಿಧಾನಾನುಗ್ರಹೇಶ್ವರೀ ॥ ೧೬ ॥
ನ ಭೇದೋಽತಸ್ತ್ವಯಾ ಕಾರ್ಯಃ ಪೃಥಗ್ಜನವದಾವಯೋಃ ।
ಚಿತ್ಪ್ರಕಾಶಾತ್ಮನೋರ್ದೇವಿ ಸ್ವೇಚ್ಛಾಧೃತಶರೀರಯಾ ॥ ೧೭ ॥
ವ್ಯಾಕುಲೀಕುರುಷೇ ಶಶ್ವದ್ವೃಥೈವೇರ್ಷ್ಯಾಯಸೇ ಹಿ ಮಾಂ ।
ದೃಷ್ಟ್ವಾ ಪ್ರತಿಕ್ರಿಯಾ ತಸ್ಯ ಕ್ರಿಯತೇ ಯಾಧುನಾ ಮಯಾ ॥ ೧೮ ॥

---

೧೩. ನೀನು ವಾರುಣಿಯು, ನಾನು ನಾಗೇಂದ್ರನು. ನೀನು ರೋಹಿಣಿಯು, ನಾನು ಚಂದ್ರನು. ನೀನು ಸ್ವಾಹಾದೇವಿಯು, ನಾನು ಅಗ್ನಿಯು. ನಾನು ಸೂರ್ಯನು, ನೀನು ಸುವರ್ಚಲೆಯು.

೧೪. ನೀನು ಗಂಗೆಯು, ನಾನು ಸಮುದ್ರರಾಜನು. ನಾನು ಮೇರುವು, ನೀನು ಭೂದೇವಿಯು. ನೀನು ಶಚಿಯು, ನಾನು ಇಂದ್ರನು. ನೀನು ರತಿಯು, ನಾನು ಮನ್ಮಥನು.

೧೫–೧೬. ನೀನು ಬುದ್ಧಿಯು, ನಾನು ಚಂದ್ರನು. ನೀನು ಶಮೆಯು, ನಾನು ವಾಯುವು. ನಾನು ಸಮುದ್ರನು, ನೀನು ವೀಚಿಯು. ನೀನು ಪ್ರಕೃತಿಯು, ನಾನು ಪುರುಷನು. ನೀನು ವಿದ್ಯೆಯು, ನಾನು ವೇದಿತವ್ಯನಾದ ಆತ್ಮನು. ನೀನು ಶಬ್ದವು, ನಾನು ಅರ್ಥವು. ನಾನು ಈಶ್ವರನು, ನೀನು ನನ್ನ ಅಂಶವು. ನಿನ್ನ ಆಜ್ಞೆಯಿಂದಲೇ ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಲಯಗಳು ಯಥಾವಿಧಿಯಾಗಿ ನಡೆಯುತ್ತವೆ.

೧೭. ಆದುದರಿಂದ ಇತರರಂತೆ ನೀನು ನನ್ನಲ್ಲಿ ಭೇದಭಾವವನ್ನು ಮಾಡಬಾರದು. ನಾವಿಬ್ಬರೂ ಚಿದಾನಂದಾತ್ಮರು. ನೀನೂ ಸ್ವೇಚ್ಛೆಯಿಂದಲೇ ಶರೀರವನ್ನು ಧರಿಸಿರುವೆ.

೧೮. "ನೀನು ಕಾರಣವಿಲ್ಲದೆಯೇ ವ್ಯಾಕುಲಪಟ್ಟು ನನ್ನಲ್ಲಿ ಅಸೂಯೆಯನ್ನು ತೋರುತ್ತಿರುವೆ. ನಾನು ನೋಡಿದ ಅಸೂಯೆಗೆ ತಕ್ಕ ಪ್ರತೀಕಾರವನ್ನು ಈಗಲೇ ಮಾಡುತ್ತೇನೆ."

ಇತ್ಯುಕ್ತ್ವೇಶೋ ನಿಷಣ್ಣಸ್ತಾಂ ಪಾರ್ಶ್ವದೇಶೇ ನ್ಯವೇಶಯತ್ ।
ಗೌರೀಂ ಸ್ವಕೀಯ ಏವಾಂಗೇ ಗೂಹಮಾನಾವಿವ ಹ್ರಿಯಾ ॥ ೧೯ ॥
ಅಂಗದ್ವಯಂ ತಯೋರೈಕ್ಯಮಗಾತ್ಪ್ರೇಮ್ಣಾ ಚ ಲೀನಯೋಃ ।
ಅರ್ಥದ್ವಯ ಮಿವಾಹ್ನಾಯ ಸನ್ನಿಕರ್ಷೋಪಲಂಭತಃ ॥ ೨೦ ॥
ಅರ್ಧೇ ಕರ್ಪೂರಧವಳಮರ್ಧೇ ಸಿಂಧೂರಪಾಟಲಂ ।
ತದ್ವಿಚಿತ್ರಮಭೂದಂಗಂ ಶಿವಯೋರೇಕತಾಂಗತಂ ॥ ೨೦ ॥
ಅರ್ಧೇ ಕುಂತಲದಾಮಾರ್ಧಹಾರಮಧ್ಯೇ ತು ಕುಂಚಿಕಾ ।
ಅಂಗಾದರ್ಧೇಂದುಚೂಡಸ್ಯ ವಪುರರ್ಧೇಂದುಕೂಲಿತಂ ॥ ೨೨ ॥
ಏಕನೂಪುರತಾಟಂಕಪಾರಿಹಾರ್ಯಮನೋಹರಂ ।
ಏಕಪಿಂಗಳಸದ್ಭ್ರೂಚೋ ಗಾತ್ರಮೇಕಸ್ತನಂ ಬಭೌ ॥ ೨೩ ॥
ದೇವ್ಯೈ ದತ್ವಾ ಚ ಧಾಮಾರ್ಧಂ ವಾಮದೇವೋ ಜಗಾದ ತಾಂ ।
ಅವಕಾಶೋ ರುಷೋ ದೇವಿ ಮಾಭೂದತಃ ಪರಂ ತವ ॥ ೨೪ ॥
ಸ್ತನ್ಯಾರ್ಥಿನಂ ಗುಹಂ ಹಿತ್ವಾ ಯಾತಾಸಿ ತಪಸೇ ಯತಃ ।
ತದಪೀತಸ್ತನೀ ನಾಮ್ನಾ ನಿವಸಾತ್ರ ಮಮಾಂತಿಕೇ ॥ ೨೫ ॥

---

೧೯. ಹೀಗೆ ಹೇಳಿ ಮಹಾದೇವನು ಕುಳಿತುಕೊಂಡು ಪಾರ್ವತಿಯನ್ನು ತೊಡೆಯಮೇಲೆಯೇ ಮಗ್ಗುಲಲ್ಲಿ ಕೂಡಿಸಿಕೊಳ್ಳಲು ಲಜ್ಜೆಯಿಂದ ಆಕೆಯು ತನ್ನಲ್ಲಿಯೇ ಬಚ್ಚಿಟ್ಟುಕೊಳ್ಳುತ್ತಿರುವಂತಿತ್ತು.

೨೦–೨೧. ಪ್ರೇಮದಿಂದ ಆಲಿಂಗನಮಾಡಿಕೊಂಡ ಅವರಿಬ್ಬರ ಶರೀರಗಳೂ ಸಾಮೀಪ್ಯದ ಪ್ರಭಾವದಿಂದ ಒಂದೇ ಸಮಯದಲ್ಲಿ ಕೈಗೂಡಿದ ಎರಡು ಪ್ರಯೋಜನಗಳಂತೆ ತಕ್ಷಣದಲ್ಲಿಯೇ ಐಕ್ಯವನ್ನು ಹೊಂದಿದುವು. ಆ ಅರ್ಧ ನಾರೀಶ್ವರ ವಿಗ್ರಹವು ಒಂದು ಕಡೆ ಕರ್ಪೂರದಂತೆ ಬೆಳ್ಳಗೂ, ಮತ್ತೊಂದು ಕಡೆ ಸಿಂದೂರದಿಂದ ಕೆಂಪಗೂ ಕಾಣುತ್ತ ವಿಚಿತ್ರವಾಗಿ ಕಾಣುತ್ತಿತ್ತು.

೨೨. ಈಶ್ವರನ ಅರ್ಧಶರೀರದಲ್ಲಿರುವ ಮುಂಗುರುಳುಗಳ ಸಾಲು, ಹಾರ ಮಧ್ಯದಲ್ಲಿರುವ ಪದಕವು, ಚಂದ್ರನ ಅರ್ಧಮಂಡಲವು ಮುಂತಾದುವುಗಳಿಗೆ ಆ ಪಾರ್ವತಿಯು ಸೇರಿದ ವಾಮಭಾಗದಲ್ಲಿ ಈ ಮುಂದೆ ಹೇಳುವ ಆಭರಣಗಳು ಕಂಗೊಳಿಸುತ್ತಿದ್ದುವು.

೨೩–೨೪. ಒಂದೇ ಕಾಲ್ಗಡಗವು, ಒಂದೇ ಕಿವಿಯೋಲೆ, ಮುಂತಾದುವು ಗಳಿಂದ ಭಿನ್ನವೂ ಮನೋಹರವೂ ಆಗಿ ಒಂದು ಸ್ತನದಿಂದ ಕೂಡಿದ ಪಿಂಗಳ ವಾದ ಸಂಯುಕ್ತದೇಹವು ಕಾಣುತ್ತಿದ್ದಿತು. ಆಗ ದೇವಿಗೆ ನೆಲಸಲು ತನ್ನ ಅರ್ಧಶರೀರವನ್ನು ಕೊಟ್ಟು ಮಹೇಶ್ವರನು ಆಕೆಗೆ ಹೇಳಿದನು:—" ಎಲೌ ದೇವಿಯೆ! ಇನ್ನು ಮೇಲೆ ನಿನಗೆ ಕೋಪಮಾಡಲು ಅವಕಾಶವೇ ಸಿಕ್ಕುವುದಿಲ್ಲ.

೨೫. ನೀನು ಸ್ತನ್ಯಪಾನಮಾಡಲೆಳಸಿದ ಷಣ್ಮುಖನನ್ನು ಬಿಟ್ಟು ತಪಸ್ಸಿಗೆ

ತ್ವಾಮಪೀತಸ್ತನೀಂ ದೇವೀಂ ಶೋಣಾದ್ರೀಶಂ ಚ ಮಾಮಪಿ ।
ಜನಾಃ ಸರ್ವೇ ಸಮಾರಾಧ್ಯ ರಮಂತಾಂ ಭೋಗಮೋಕ್ಷಯೋಃ ॥ ೨೬ ॥
ಇಯಂ ತ್ವದಂಶಜಾ ದೇವಿ ದುರ್ಗಾ ಮಹಿಷಸೂದಿನೀ ।
ಅತ್ರೈವ ಸನ್ನಿಧತ್ತಾಂ ತು ಮಂತ್ರಸಿದ್ಧಿಪ್ರದಾ ನೃಣಾಂ ॥ ೨೭ ॥
ಖಡ್ಗತೀರ್ಥಮಿದಂ ಪುಣ್ಯಂ ಸಕೃದೇವ ನಿಮಜ್ಜನಾತ್ ।
ಸರ್ವರೋಗಹರಂ ಪುಂಸಾಮಸ್ತು ಸರ್ವಾಘನಾಶನಂ ॥ ೨೮ ॥
ಪ್ರವಾಳಗಿರಿನಾಥಶ್ಚ ದೇವೋಽಯಂ ಪಾಪನಾಶನಃ ।
ಭಕ್ತಿಶ್ರದ್ಧಾವತಾಂ ನೄಣಾಂ ಭೂಯಾಸ್ತಾಂ ಭೂತಯೇಭೃಶಂ ॥ ೨೯ ॥
ಅಯಂ ಚ ಗೌತಮೋ ದೇವಿ ತ್ವದನುಗ್ರಹಭಾಜನಂ ।
ತಪೋಽನುರೂಪಂ ಭಜತಾಂ ಲೋಕೇಽಷ್ಯಾಚಂದ್ರತಾರಕಂ ॥ ೩೦ ॥
ಇಮಾಶ್ಚ ಮಾತರಃ ಸಪ್ತ ಸಪ್ತಲೋಕೈಕಮಾತರಃ ।
ಅದ್ಯಪ್ರಭೃತಿ ಕುರ್ವಂತು ಸಾನ್ನಿಧ್ಯಂ ಜಗತಾಂ ಶ್ರಿಯೈ ॥ ೩೦ ॥
ಶಾಸ್ತಾರೋ ಭೈರವಾಃ ಕ್ಷೇತ್ರಪಾಲಕಾ ಬಟುಕಾ ಅಪಿ ।
ಅರುಣಕ್ಷೇತ್ರ ಏವಾತ್ರ ನಿತ್ಯಂ ಕುರ್ವಂತು ಸನ್ನಿಧಿಂ ॥ ೩೨ ॥

---

ಹೊರಟುಹೋದಕಾರಣ ಅಪೀತಕುಚೆಯೆಂಬ ಹೆಸರಿನಿಂದ ನನ್ನ ಸಮೀಪ ದಲ್ಲಿಯೇ ವಾಸಮಾಡು.

೨೬. ಅಪೀತಕುಚೆಯಾದ ನಿನ್ನನ್ನೂ ಅರುಣಾಚಲೇಶ್ವರನಾದ ನನ್ನನ್ನೂ ಸಕಲ ಜನರೂ ಸೇವೆಮಾಡಿ ಸ್ವರ್ಗಮೋಕ್ಷಗಳನ್ನು ಪಡೆದು ಸುಖಿಸಲಿ.

೨೭–೨೮. ನಿನ್ನ ಅಂಶದಿಂದ ಹುಟ್ಟಿದ ಮಹಿಷಾಸುರಮರ್ದಿನಿಯಾದ ಈ ದುರ್ಗೆಯೂ ಜನರಿಗೆ ಮಂತ್ರಸಿದ್ಧಿಗಳನ್ನು ನೆರವೇರಿಸಿಕೊಡುತ್ತ ಇಲ್ಲಿಯೇ ಸನ್ನಿಹಿತಳಾಗಲಿ. ಪುಣ್ಯವಾದ ಈ ಖಡ್ಗತೀರ್ಥವೂ ಜನರು ಮಾಡುವ ಒಂದು ಸ್ನಾನಮಾತ್ರದಿಂದಲೇ ಸಕಲ ರೋಗಗಳನ್ನೂ ನಿವಾರಣೆಮಾಡಿ ಸಮಸ್ತ ಪಾಪ ಕ್ಷಯಕರವಾಗಿರಲಿ.

೨೯. ಪ್ರವಾಳೇಶ್ವರ ಲಿಂಗವೂ ಈ ಪಾಪನಾಶನ ಲಿಂಗವೂ ಕೂಡ ಭಕ್ತಿ ಶ್ರದ್ಧೆಗಳಿಂದ ಸೇವಿಸುವ ಜನರಿಗೆ ಅನೇಕ ಇಷ್ಟಾರ್ಥಗಳನ್ನು ನೆರವೇರಿಸಿಕೊಡಲಿ.

೩೦–೩೧. ಮಹರ್ಷಿಯಾದ ಈ ಗೌತಮನೂ ನಿನ್ನ ಅನುಗ್ರಹಕ್ಕೆ ಪಾತ್ರ ನಾಗಿ ಲೋಕದಲ್ಲಿ ತನ್ನ ತಪಸ್ಸಿಗೆ ಅನುರೂಪವಾದ ಆಚಂದ್ರತಾರಕವಾದ ಕೀರ್ತಿ ಯನ್ನು ಪಡೆಯಲಿ. ಈ ಸಪ್ತಮಾತೃಕೆಯರೂ ಸಪ್ತಲೋಕಗಳಿಗೆ ಅಧಿದೇವತೆ ಗಳಾಗಿ ಇಂದಿನಿಂದ ಲೋಕದ ಹಿತಕ್ಕಾಗಿ ಇಲ್ಲಿಯೇ ಸನ್ನಿಹಿತರಾಗಿರಲಿ.

೩೨. ದಂಡನಾಯಕರಾದ ಭೈರವರು, ಕ್ಷೇತ್ರಪಾಲಕರು, ಬಟುಗಳೂ ಸಹ ಈ ಅರುಣಾಚಲಕ್ಷೇತ್ರದಲ್ಲಿಯೇ ನಿವಾಸವನ್ನು ಮಾಡಿಕೊಂಡಿರಲಿ.

ಅತ್ರಾಹಮರುಣಕ್ಷೇತ್ರೇ ನಿವಸಾಮ್ಯರುಣಾಹ್ವಯಃ ।
ತ್ವಯಾಪ್ಯರುಣಯಾ ದೇವ್ಯಾ ಸ್ಥಾತವ್ಯಂ ಕರುಣಾರ್ದ್ರಯಾ ॥ ೩೩ ॥
ಈಪ್ಸಿನಾಮರುಣೌ ದೇವೌ ಸಾನ್ನಿಧ್ಯಂ ಕುರುತೋ ಯತಃ ॥ ೩೪ ॥
ತದಸ್ಮಿನ್ನರುಣಕ್ಷೇತ್ರೇ ಸುಲಭಾಃ ಸರ್ವಸಿದ್ಧಯಃ ॥ ೩೫ ॥
ಇದಂ ಕೃತಂ ಪರ್ವತರಾಜಪುತ್ರ್ಯಾ
ಪ್ರಸಾದನಂ ಶೋಣಗಿರೀಶ್ವರಸ್ಯ ।
ಶೃಣೋತಿ ಯಃ ಸ ದ್ವಿಷತೋ ವಿಧೂಯ
ಸ್ವರ್ಗಾಪವರ್ಗೌ ಸುಲಭಾವುಪೇಯಾತ್ ॥ ೩೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ "ಶಿವಕೃತ ಪಾರ್ವತೀ ಪ್ರಶಂಸಾ ವರ್ಣನಂ" ನಾಮ ಏಕವಿಂಶತಿತಮೋಽಧ್ಯಾಯಃ

---

೩೩. ಈ ಅರುಣಾಚಲದಲ್ಲಿ ನಾನು ಅರುಣೇಶ್ವರನೆಂದು ಪ್ರಸಿದ್ಧನಾಗಿರುವೆನು. ನೀನೂ ಸಹ ಕರುಣಾಸಮುದ್ರಳಾಗಿ ಅರುಣಾಂಬೆಯೆಂಬ ಹೆಸರಿನಿಂದ ನೆಲಸುವವಳಾಗು.

೩೪–೩೫. "ಭಕ್ತರಿಗಾಗಿ ಶಿವಪಾರ್ವತಿಯರು ಇಲ್ಲಿ ಸನ್ನಿಹಿತರಾಗಿರುವುದರಿಂದ ಅರುಣಾಚಲಕ್ಷೇತ್ರದಲ್ಲಿ ಸಕಲಸಿದ್ಧಿಗಳೂ ಸುಲಭದಲ್ಲಿಯೇ ಪ್ರಾಪ್ತವಾಗುವುವು."

೩೬. ಈ ರೀತಿಯಾಗಿ ಪಾರ್ವತೀದೇವಿಯು ಅರುಣಾಚಲೇಶ್ವರನನ್ನು ಪ್ರಸನ್ನೀಕರಿಸಿಕೊಂಡ ವೃತ್ತಾಂತವನ್ನು ಯಾವನು ಕೇಳುವನೊ, ಅವನು ಕಾಮಕ್ರೋಧಾದಿ ಶತ್ರುಗಳನ್ನು ಗೆದ್ದು ಸ್ವರ್ಗವನ್ನೂ ಮೋಕ್ಷವನ್ನೂ ಸುಲಭವಾಗಿಯೇ ಸಂಪಾದಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ಶಿವನು ಪಾರ್ವತಿಯ ಪ್ರಶಂಸೆಯನ್ನು ಮಾಡಿದುದು" ಎಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾವಿಂಶತಿತಮೋಽಧ್ಯಾಯಃ

## ವಜ್ರಾಂಗದ ವೃತ್ತಾಂತ ವರ್ಣನಂ

ಮಾರ್ಕಂಡೇಯ ಉವಾಚ :—

ಸ್ವಾಮಿನ್ನಿತ್ಯಶಿವಾನಂದ ಭಗವನ್ನಂದಿಕೇಶ್ವರ ।
ಆಹ್ಲಾದಿತೋಽಸ್ಮಿ ಶೋಣೇಶಮಾಹಾತ್ಮ್ಯಸುಧಯಾ ತ್ವಯಾ ॥ ೧ ॥
ಕಥಂ ವಜ್ರಾಂಗದಃ ಪಾಂಡ್ಯರಾಜಃ ಶೋಣವ್ಯತಿಕ್ರಮಂ ।
ಚಕ್ರೇ ಕಥಂ ತದ್ಭಕ್ತ್ಯೈವ ಸ್ವಾಪ್ತವಾನ್ಸಂಪದಂ ಪುನಃ ॥ ೨ ॥
ಕಥಂ ವಿದ್ಯಾಧರಾಧೀಶೌ ಕಾಂತಿಶಾಲಿಕಲಾಧರೌ ।
ದುರ್ವಾಸಃ ಶಾಪನಿರ್ವಿದ್ಧಾವವಿತೌ ಶೋಣಶಂಭುನಾ ॥ ೩ ॥

ನಂದಿಕೇಶ್ವರ ಉವಾಚ :—

ದೀರ್ಘಾಯುಷ್ಯತ್ವಸಾಫಲ್ಯಂ ಲಬ್ಧವಾಂಸ್ತ್ವಂ ಮೃಕಂಡುಜ ।
ಯದಿಯಂ ಸ್ಥೇಯಸೀ ಭಕ್ತಿರ್ಭವತೋ ಭೂತನಾಯಕೇ ॥ ೪ ॥
ವಕ್ಷ್ಯೇ ವಜ್ರಾಂಗದೋದಂತಂ ವೃತ್ತಂ ವಿದ್ಯಾಭೃತೋರಪಿ ।
ಯತೋಽಭೂನ್ಮಹಿತೋ ಲೋಕೇ ಶೋಣಾದ್ರೀಶ್ವರವೈಭವಃ ॥ ೫ ॥

---

## ಕನ್ನಡದ ಅನುವಾದ

### ವಜ್ರಾಂಗದನ ವೃತ್ತಾಂತದ ವರ್ಣನ

೧–೨. ಮಾರ್ಕಂಡೇಯನು ಕೇಳುತ್ತಾನೆ:—"ಎಲೈ ನಂದಿಕೇಶ್ವರನೆ! ನೀನು ನಿತ್ಯವಾದ ಶಿವಸ್ವರೂಪಾನಂದದಲ್ಲಿ ಮಗ್ನನಾಗಿರುವೆ. ನೀನು ನಿರೂಪಿಸಿದ ಅರುಣಾಚಲೇಶ್ವರನ ಮಹಿಮೆಯೆಂಬ ಅಮೃತದಿಂದ ನಾನು ಸಂತೋಷಗೊಂಡೆನು. ಪಾಂಡ್ಯದೇಶದ ರಾಜನಾದ ವಜ್ರಾಂಗದನೆಂಬುವನು ಅರುಣಾಚಲೇಶ್ವರನಿಗೆ ಅಪರಾಧಿಯೆನಿಸಿ ಮತ್ತೆ ಆತನಲ್ಲಿನ ಭಕ್ತಿಯಿಂದಲೇ ಸಕಲೈಶ್ವರ್ಯವನ್ನು ಹೊಂದಿದುದು ಹೇಗೆ?

೩. "ವಿದ್ಯಾಧರರಿಗೆ ಒಡೆಯರಾದ ಕಾಂತಿಶಾಲಿ ಮತ್ತು ಕಲಾಧರರೆಂಬುವರು ದೂರ್ವಾಸರ ಶಾಪಕ್ಕೆ ತುತ್ತಾಗಿ ಅರುಣಾಚಲೇಶ್ವರನ ಅನುಗ್ರಹದಿಂದ ಹೇಗೆ ರಕ್ಷಿಸಲ್ಪಟ್ಟರು?"

೪. ನಂದಿಕೇಶ್ವರನು ಹೇಳುತ್ತಾನೆ:—ಎಲೈ ಮಾರ್ಕಂಡೇಯನೆ! ಮಹಾದೇವನಲ್ಲಿ ಇಂತಹ ಸ್ಥಿರವಾದ ಭಕ್ತಿಯು ನಿನ್ನಲ್ಲಿ ನೆಲಗೊಂಡಿರುವುದರಿಂದಲೇ ನಿಜವಾಗಿಯೂ ನಿನ್ನ ಚಿರಂಜೀವಿತ್ವಕ್ಕೆ ಸಾಫಲ್ಯವುಂಟಾಯಿತು.

೫. ಈ ಅರುಣಾಚಲೇಶ್ವರನ ವೈಭವವು ಲೋಕದಲ್ಲಿ ವಿಸ್ತಾರವಾಗುವುದಕ್ಕೆ

ಆಸೀದ್ವಜ್ರಾಂಗದೋ ನಾಮ ಪುರಾ ಪಾಂಡ್ಯೇಷು ಪಾರ್ಥಿವಃ ।
ಆಸ್ತೇ ಯಸ್ಯ ಭುಜಸ್ತಂಭೇ ವಸುಧಾ ಸಾಲಭಂಜಿಕಾ ॥ ೬ ॥
ಧಾರ್ಮಿಕೋ ನ್ಯಾಯವಿಜ್ಞಾತಾ ಗಂಭೀರೋ ದಕ್ಷಿಣೋ ಕ್ಷಮಃ ।
ಶಾಂತೋ ವಿನಯವಾನ್ಧೀಮಾನೇಕದಾರವ್ರತಃ ಕೃತೀ ॥ ೭ ॥
ಶಿವಪೂಜಾರ್ಚನರತಃ ಶ್ರೀಮಾನ್ಶೀಲವತಾಂ ವರಃ ।
ಪೃಥ್ವೀಮಾಸೇತುಕೇದಾರಾಂ ಶಶಾಸ ಜಿತಶಾತ್ರವಃ ॥ ೮ ॥
ಕದಾಚಿನ್ಮೃಗಯಾವ್ಯಾಜಾತ್ಸ ಚರನ್ಸತುರಂಗಮಃ ।
ಅರುಣಾಚಲಪರ್ಯಂತಂ ಕಾಂತಾರಂ ಸಮಗಾಹತ ॥ ೯ ॥
ಸ ತತ್ರ ಬಹಲಾಮೋದಂ ಕಂಚಿತ್ಕಸ್ತೂರಿಕಾಮೃಗಂ ।
ದೃಷ್ಟ್ವಾ ತಮನ್ವಕ್ತುರಗಂ ಪ್ರಾವರ್ತಯತ ಕೌತುಕಾತ್ ॥ ೧೦ ॥
ಸ ಮೃಗೋಽನುದ್ರುತಸ್ತೇನ ಅಭಿತಃ ಶೋಣಪರ್ವತಂ ।
ಪ್ರಾದಕ್ಷಿಣ್ಯಾತ್ಪರೀಯಾಯ ಪಪಾತ ಚ ಮನೋಜವಃ ॥ ೧೧ ॥

---

ಕಾರಣಗಳಾದ ವಜ್ರಾಂಗದ ಮಹಾರಾಜನ ಇತಿಹಾಸವನ್ನೂ, ವಿದ್ಯಾಧರೇಶ್ವರರ ಚರಿತ್ರೆಯನ್ನೂ ಹೇಳುವೆನು.

೬. ಪೂರ್ವದಲ್ಲಿ ಪಾಂಡ್ಯದೇಶದಲ್ಲಿ ವಜ್ರಾಂಗದನೆಂಬ ರಾಜನು ಆಳುತ್ತಿದ್ದನು. ಆತನ ಭುಜದ ನೆರಳಿನಲ್ಲಿ ಭೂಮಿಯು ಕೇವಲ ಅಲಂಕಾರದ ಪುತ್ಥಳಿಯಂತೆ ಸುಖವಾಗಿದ್ದಿತು.

೭–೮. ಆತನು ಧಾರ್ಮಿಕನೂ, ನ್ಯಾಯಜ್ಞನೂ, ಗಂಭೀರನೂ, ದಾಕ್ಷಿಣ್ಯತತ್ಪರನೂ, ಕ್ಷಮಾಶಾಲಿಯೂ, ಶಾಂತನೂ, ವಿನಯವಂತನೂ, ಬುದ್ಧಿಸಂಪನ್ನನೂ, ಏಕಪತ್ನೀವ್ರತಸ್ಥನೂ, ಪುಣ್ಯಶಾಲಿಯೂ ಶಿವಪೂಜಾರ್ಚನೆಗಳಲ್ಲಿ ನಿರತನೂ, ಐಶ್ವರ್ಯವಂತನೂ, ಶೀಲವಂತನೂ, ಆಗಿ ಸೇತುವಿನಿಂದ ಕೇದಾರದವರೆಗಿನ ಪ್ರದೇಶವನ್ನು ಏಕಛತ್ರದಿಂದಾಳುತ್ತ ಸಮಸ್ತ ಶತ್ರುಗಳನ್ನೂ ಗೆದ್ದಿದ್ದನು.

೯. ಒಮ್ಮೆ ಆತನು ಬೇಟೆಯಾಡಲು ಹೊರಟು ಉತ್ತಮವಾದ ಕುದುರೆಯನ್ನೇರಿ ಅರುಣಾಚಲದ ಸಮೀಪದಲ್ಲಿರುವ ಕಾಡನ್ನು ಶೋಧಿಸುತ್ತಿದ್ದನು.

೧೦. ಅಲ್ಲಿ ಅತ್ಯಂತ ಸುವಾಸನಾವಿಶಿಷ್ಟವಾದ ಒಂದಾನೊಂದು ಕಸ್ತೂರಿ ಮೃಗವನ್ನು ಕಂಡು ಕೌತುಕಬಟ್ಟು ಅದರ ಹಿಂದೆಯೇ ತನ್ನ ಕುದುರೆಯನ್ನು ಓಡಿಸಿದನು.

೧೧. ಆ ಮೃಗವು ರಾಜನಿಂದ ಹಿಂಬಾಲಿಸಲ್ಪಟ್ಟುದಾಗಿ ಮನೋವೇಗದಿಂದ ಓಡುತ್ತ ಅರುಣಾಚಲದ ಸುತ್ತಲೂ ಪ್ರದಕ್ಷಿಣೆಯಾಗಿ ಓಡಿಬಂದು ಬಿದ್ದಿತು.

ತತಃ ಸ ಭಗ್ನಸಾರೋಽಪಿ ರಾಜಾ ಜಾತಶ್ರಮಶ್ಚರನ್ ।
ಪಪಾತ ವಾಹಾದ್ವಿಚ್ಛಾಯಃ ಕ್ಷೀಣಪುಣ್ಯ ಇವ ಚ್ಯುತಃ ॥ ೧೨ ॥
ಅಜ್ಞಾತಕಾರಣೇನೈವಂ ಮಾತಂಗೇನೇವ ಪೀಡಿತಃ ।
ನಾಜ್ಞಾಸೀತ್‌ಕ್ಷಣಮಾತ್ಮಾನಂ ರಾಜಾ ಗ್ರಹಗೃಹೀತವತ್ ॥ ೧೩ ॥
ಅಚಿಂತಯಚ್ಚ ಕೋಽಯಂ ಮೇ ನಿರ್ಹೇತುಃ ಸತ್ವವಿಪ್ಲವಃ ।
ಕ್ವ ಗತಃ ಸಹ್ಯಕಸ್ಮಾನ್ಮೇ ಉಪವಾಹ್ಯಸ್ತುರಂಗಮಃ ॥ ೧೪ ॥
ಇತಿ ಚಿಂತಾಕುಲೇ ತಸ್ಮಿನ್ಸ್ತ್ರಜ್ಞಾನೇಽಪ್ಯಪಟೀಯಸಿ ।
ತಡಿತ್ತಟಿಜಟಾಲೇವ ಸಹಸಾ ದ್ಯೌರದೃಶ್ಯತ ॥ ೧೫ ॥
ನಿರೀಕ್ಷಮಾಣ ಏವಾಸ್ಮಿನ್ ಹಿತ್ವಾ ತಿರ್ಯಕ್ಕಳೇಬರಂ ।
ತೂರ್ಣಂ ತುರಂಗಸಾರಂಗೌ ಖೇಚರತ್ವಮುಪಾಗತೌ ॥ ೧೬ ॥
ಕಿರೀಟಿನೌ ಕುಂಡಲಿನೌ ಹಾರಕೇಯೂರಧಾರಿಣೌ ।
ಕ್ಷೌಮಾಂತರೀಯೋತ್ತರೀಯೌ ಸ್ರಗ್ವಿಣೌ ಚ ವಿರೇಜತುಃ ॥ ೧೭ ॥
ಅವೋಚತಾಂ ಚ ನೃಪತಿಮಾಶ್ಚರ್ಯಾಕೃಷ್ಟಮಾನಸಂ ।
ಹರಂತಾವಿವ ದಂತಾಂಶುಜಾಲೈಸ್ತಸ್ಯಾರ್ತಿಜಂ ತಮಃ ॥ ೧೮ ॥

---

೧೨. ಆ ರಾಜನು ಹತಪ್ರತಿಜ್ಞನಾದರೂ ಬಳಲಿದವನಾಗಿ ಸಂಚರಿಸುತ್ತ, ಸ್ವರ್ಗದಿಂದ ಪುಣ್ಯಕ್ಷಯವಾದೊಡನೆ ಉತ್ತಮನು ಭೂಮಿಗೆ ಜಾರಿ ಬೀಳುವಂತೆ, ಕುದುರೆಯಿಂದ ನೆಲಕ್ಕೆ ಬಿದ್ದನು.

೧೩. ಈ ರೀತಿಯಾಗಿ ನಿಷ್ಕಾರಣವಾಗಿಯೇ ಆನೆಯಿಂದ ಪೀಡಿತನಂತೆಯೂ ಗ್ರಹಾವಿಷ್ಟನಂತೆಯೂ ರಾಜನು ಕ್ಷಣಕಾಲ ತನ್ನನ್ನೇ ಮರೆತುಬಿಟ್ಟನು.

೧೪. ಮತ್ತು "ನಿರ್ಹೇತುಕವಾದ ಬಲಕ್ಷಯವು ನನಗೇಕೆ ಉಂಟಾಯಿತು? ಸುಳಿವಿಲ್ಲದೆಯೇ ನನ್ನ ವಾಹನವಾದ ಕುದುರೆಯು ಎಲ್ಲಿಗೆ ಹೋಯಿತು?" ಎಂದು ಚಿಂತಿಸತೊಡಗಿದನು.

೧೫. ಹೀಗೆ ಆತನು ಚಿಂತಿಸುತ್ತಿರಲು ಬುದ್ಧಿಗೂ ಏನೂ ತೋರದಾಯಿತು. ಆಗಲೇ ಆಕಾಶದಲ್ಲಿ ಮಿಂಚಿನ ಬಳ್ಳಿಗಳ ಸಮೂಹದಂತೆ ಒಂದು ಪ್ರಕಾಶವು ಕಾಣಿಸಿತು.

೧೬–೧೭. ಆ ರಾಜನು ನೋಡುತ್ತಿದ್ದಂತೆಯೇ ನೆಲದಲ್ಲಿಯೇ ದೇಹಗಳನ್ನು ಬಿಟ್ಟು ಕುದುರೆಯೂ, ಕಸ್ತೂರಿ ಮೃಗವೂ, ವಿದ್ಯಾಧರ ಸ್ವರೂಪಗಳನ್ನು ಪಡೆದುವು. ಕಿರೀಟಗಳಿಂದಲೂ, ಕುಂಡಲಗಳಿಂದಲೂ, ಹಾರಭೂಷಣಗಳಿಂದಲೂ, ಉತ್ತಮವಾದ ರೇಷ್ಮೆಯ ಉತ್ತರೀಯಗಳಿಂದಲೂ, ಪುಷ್ಪಮಾಲೆಗಳಿಂದಲೂ ಇಬ್ಬರೂ ಶೋಭಿಸುತ್ತಿದ್ದರು.

೧೮. ತಮ್ಮ ದಂತಪಙ್ಕ್ತಿಯ ಕಾಂತಿಯಿಂದ ಆ ರಾಜನ ದುಃಖವೆಂಬ

ರಾಜನ್ನಲಂ ವಿಷಾದೇನ ಶೋಣಾದ್ರೀಶಪ್ರಭಾವತಃ ।
ಏತಾಂ ಜಾನೀಹಿ ಸಂಜಾತಾಂ ನವಾಂ ನೌ ಚೇದೃಶೀಂ ದಶಾಂ ॥ ೧೯ ॥
ತದೋವಾಚ ತಯೋಃ ಕಿಂಚಿದಾಶ್ವಸ್ತ ಇವ ಪಾರ್ಥಿವಃ ।
ಕೃತಾಂಜಲಿರಭಾಷಿಷ್ಟ ತಾವುಭೌ ವಿನಯಾನ್ವಿತಃ ॥ ೨೦ ॥
ಕೌ ಯುವಾಂ ನಿರ್ಮಿತೋ ಯಾಭ್ಯಾಮಭಿಷಂಗೋ ಮಮೇದೃಶಃ ।
ಭದ್ರೌ ಭಣತಮಾರ್ತಾನಾಂ ತ್ರಾಣಂ ಹಿ ಮಹತಾಂ ಗುಣಃ ॥ ೨೧ ॥
ಇತಿ ತೇನ ಕೃತೇ ಪ್ರಶ್ನೇ ತಮುವಾಚ ಕಲಾಧರಃ ।
ರಾಜಾನಂ ಜನಿತಾಶ್ಚರ್ಯಂ ನಿರ್ದಿಷ್ಟಃ ಕಾಂತಿಶಾಲಿನಾ ॥ ೨೨ ॥
ಅವೇಹಿ ರಾಜನ್ನಾವಾಂ ಹಿ ಪುರಾ ವಿದ್ಯಾಧರೇಶ್ವರೌ ।
ಪರಸ್ಪರಾತಿಸೌಹಾರ್ದೌ ವಸಂತಮದನಾವಿವ ॥ ೨೩ ॥
ಏಕದಾ ತು ಸುವರ್ಣಾದ್ರೇಃ ಪಾರ್ಶ್ವೇ ದುರ್ವಾಸಸೋ ಮುನೇಃ ।
ತಪೋವನಮಗಚ್ಛಾವ ಮನಸೋಽಪಿ ದುರಾಸದಂ ॥ ೨೪ ॥
ಕ್ರೋಶೇದ್ಧಾಂ ತಪಸಸ್ತಸ್ಯ ಶಿವಾರಾಧನಸಾಧನೀಂ ।
ಪುಷ್ಪೋಜ್ಜ್ವಲಾಮಪಶ್ಯಾವ ಪುಣ್ಯಾಮಾರಾಮವಾಟಿಕಾಂ ॥ ೨೫ ॥

---

ತಮಸ್ಸನ್ನು ಕಳೆಯುವವರಾಗಿ ಆಶ್ಚರ್ಯಗೊಂಡ ಮನಸ್ಸಿನಿಂದಿರುವ ರಾಜನನ್ನು ಕುರಿತು ಹೇಳತೊಡಗಿದರು.

೧೯. "ಎಲೈ ರಾಜನೆ! ನೀನು ಶೋಕಮಾಡಬೇಡ. ಅರುಣಾಚಲೇಶ್ವರನ ಪ್ರಭಾವದಿಂದ ನಮ್ಮಿಬ್ಬರಿಗೂ ಈ ದಿವ್ಯರೂಪಗಳು ಉಂಟಾಗಿರುವುವೆಂದು ತಿಳಿ."

೨೦. ಆಗ ರಾಜನಿಗೆ ಸ್ವಲ್ಪ ಮನಶ್ಶಾಂತಿಯುಂಟಾಗಲು, ಆತನು ವಿನಯದಿಂದ ಅವರಿಬ್ಬರಿಗೂ ಕೈಜೋಡಿಸಿ ಪ್ರಶ್ನೆಮಾಡತೊಡಗಿದನು.

೨೧. "ನನ್ನಲ್ಲಿ ಈ ವಿಧವಾದ ಪ್ರೇಮವನ್ನಿಟ್ಟಿರುವ ನೀವಿಬ್ಬರೂ ಯಾರು? ಎಲೈ ಪುಣ್ಯಶಾಲಿಗಳೆ! ನನಗೆ ಹೇಳಿರಿ. ಆರ್ತರನ್ನು ರಕ್ಷಿಸುವುದೇ ಮಹಾತ್ಮರ ಗುಣವಲ್ಲವೆ?"

೨೨. ಈ ರೀತಿಯಾಗಿ ಆಶ್ಚರ್ಯದಿಂದ ಕೇಳಿದ ರಾಜನನ್ನು ಕುರಿತು ಕಲಾಧರನು ಕಾಂತಿಶಾಲಿಯಿಂದ ಪ್ರೇರಿತನಾಗಿ ಹೇಳತೊಡಗಿದನು.

೨೩–೨೪. "ಎಲೈ ರಾಜನೆ! ನಾವಿಬ್ಬರೂ ಪೂರ್ವದಲ್ಲಿ ವಿದ್ಯಾಧರನಾಯಕರಾಗಿದ್ದೆವೆಂಬುದನ್ನು ತಿಳಿ. ನಾವು ಮನ್ಮಥ, ವಸಂತರಂತೆ ಯಾವಾಗಲೂ ಒಟ್ಟಿಗೇ ಸೌಹಾರ್ದದಿಂದಿರುತ್ತಿದ್ದೆವು. ಒಮ್ಮೆ ಮೇರುಪರ್ವತದ ಪಾರ್ಶ್ವದಲ್ಲಿರುವ ಮನಸ್ಸಿಗೂ ಅಗಮ್ಯವಾದ ದೂರ್ವಾಸ ಮಹರ್ಷಿಯ ತಪೋವನಕ್ಕೆ ಬಂದೆವು.

೨೫. ಒಂದು ಕ್ರೋಶವಿಸ್ತಾರವುಳ್ಳದ್ದೂ, ಶಿವಾರಾಧನರೂಪವಾದ

ವಿನೀತಾವಪ್ಯಸಂಜಾತೌ ತತ್ತ್ವೋಚಿತಸುಧೀಗಣೌ ।
ಪ್ರಾವಿಶಾವ ತದುದ್ಯಾನಂ ಪ್ರಸೂನಾವಚಯೋತ್ಸುಕೌ ॥ ೨೬ ॥
ಸ್ಥಲಸ್ಯ ತಸ್ಯ ಸೌಹಾರ್ದಾತ್ಕಾಂತಿಶಾಲ್ಯತಿಗರ್ವಿತಃ ।
ಸಂಚಚಾರ ಮುಹುಃ ಪಾದನ್ಯಾಸೈರಾಘಟ್ಟಯನ್ಮಹೀಂ ॥ ೨೭ ॥
ಅಹಂ ತು ತತ್ರ ಪುಷ್ಪಾಣಾಂ ಗಂಧಾತಿಶಯಮೋಹಿತಃ ।
ವಿಕಸ್ವರೇಷು ಪುಷ್ಪೇಷು ನ್ಯಸ್ತಹಸ್ತೋ ದುರಾಶಯಃ ॥ ೨೮ ॥
ತತಃ ಶಾಂಡಿಲ್ಯಮೂಲಸ್ಥೋ ವ್ಯಾಘ್ರಚರ್ಮಾಸನೇ ಸ್ಥಿತಃ ।
ದುರ್ವಾಸಸ್ತಪಸಾಂ ರಾಶಿರ್ಜ್ವಲನ್ನಿವ ಹುತಾಶನಃ ॥ ೨೯ ॥
ಅಮರ್ಷೋತ್ಕರ್ಷನೀರಂಧ್ರಸ್ಪಂದಮಾನಾಧರಚ್ಛದಃ ।
ಕರಾಳಭ್ರುಕುಟೀಬಂಧಸಾರಾಳಿತವಿಶಾಲಭೂಃ ॥ ೩೦ ॥
ಸರೋಷೋಽಭೂತ್ತೇಜಸಾಢ್ಯೋ ಧರ್ಮದಂತುರವಿಗ್ರಹಃ ।
ದಹನ್ನಿವ ದೃಶಾ ಪಶ್ಯನ್ನಭರ್ತ್ಸಯತ ನೌ ಮುನಿಃ ॥ ೩೦ ॥
ಆಃ ಪಾಪೌ ಪ್ರಚ್ಯುತಾಚಾರೌ ಕೌ ಯುವಾಮತಿಗರ್ವಿತೌ ।
ಜ್ವಲತಃ ಕೋಪವಹ್ನೇರ್ಮೇ ಶಲಭತ್ವಮುಪಾಗತೌ ॥ ೩೨ ॥

---

ತಪಸ್ಸಿಗೆ ಅನುಕೂಲವಾದದ್ದೂ, ಪುಷ್ಪಗಳಿಂದ ರಂಜಿಸುವುದೂ, ಆದ ಪುಣ್ಯಾಶ್ರಮದ ಪುಷ್ಪವಾಟಿಕೆಯನ್ನು ಕಂಡೆವು.

೨೬. "ವಿನೀತರಾದರೂ ತತ್ತ್ವಜ್ಞಾನಕ್ಕೆ ಉಚಿತವಾದ ಬುದ್ಧಿಶಕ್ತಿಯುಳ್ಳವರಾದರೂ ಕೂಡ ಜಾತಿಭೇದದಿಂದ ನಾವು ಪುಷ್ಪಗಳನ್ನು ಸಂಗ್ರಹಿಸುವುದಕ್ಕಾಗಿ ಆ ಉದ್ಯಾನವನವನ್ನು ಪ್ರವೇಶಮಾಡಿದೆವು.

೨೭. ಆ ಸ್ಥಳದ ಪ್ರಭಾವದಿಂದ ಕಾಂತಿಶಾಲಿಯು ಗರ್ವಿತನಾಗಿ ಪಾದಗಳಿಂದ ಭೂಮಿಯನ್ನು ಮತ್ತೆ ಮತ್ತೆ ಘಟ್ಟಿಸುತ್ತ ನಡೆಯುತ್ತಿದ್ದನು.

೨೮. ನಾನೂ ಕೂಡ ಪುಷ್ಪಗಳ ಸೌರಭದಿಂದ ಮೋಹಿತನಾಗಿ ಅವುಗಳನ್ನು ಬಿಡಿಸುವುದಕ್ಕಾಗಿ ಅರಳುವ ಪುಷ್ಪಗಳಲ್ಲಿ ಕೈಯನ್ನಿಡುತ್ತಿದ್ದೆನು.

೨೯–೩೧. ಆಗ ಬಿಲ್ವವೃಕ್ಷದ ಮೂಲದಲ್ಲಿ ವ್ಯಾಘ್ರಾಸನದ ಮೇಲೆ ಕುಳಿತಿರುವ ತಪೋರಾಶಿಯಾದ ದೂರ್ವಾಸ ಮಹರ್ಷಿಯು ಉರಿಯುತ್ತಿರುವ ಬೆಂಕಿಯಂತೆ ಕೋಪದ ಆಧಿಕ್ಯದಿಂದ ಹೆಚ್ಚಾಗಿ ಅದುರುತ್ತಿರುವ ತುಟಿಗಳುಳ್ಳವನೂ, ಭಯಂಕರವಾದ ಹುಬ್ಬುಗಳ ಗಂಟಿನಿಂದ ಕೂಡಿ ಭೂಮಂಡಲವನ್ನೇ ಸಾಸುವೆ ಕಾಳಿನಂತೆ ಕಾಣುವವನೂ ಆಗಿ, ರೋಷದಿಂದಲೂ ತೇಜಸ್ಸಿನಿಂದಲೂ ಕೂಡಿ ಧರ್ಮವೇ ಮೂರ್ತಿಗೊಂಡಂತೆ ಕಾಣುತ್ತ ಸುಡುವವನಂತೆ ನಮ್ಮನ್ನು ಕಣ್ಣುಗಳಿಂದ ನೋಡುತ್ತ ನಮ್ಮಿಬ್ಬರನ್ನೂ ಗದರಿಸಿಕೊಂಡನು.

೩೨. "ಎಲೈ ಪಾಪಿಷ್ಠರೆ! ಆಚಾರಹೀನರಾಗಿ ಅತಿ ಗರ್ವಿತರಾಗಿರುವ

ತಪೋವನಮಿದಂ ಮತ್ಕಂ ಪಾವನಂ ಭೂತಭಾವನಂ ।
ಪಾದೈರ್ನಸ್ಪೃಶತಃ ಕ್ವಾಪಿ ಸೂರ್ಯಾಚಂದ್ರಮಸಾವಪಿ ॥ ೩೩ ॥
ಪುರವೈರಿಸಪರ್ಯಾಯಾಃ ಪರ್ಯಾಯಕಮಿದಂ ವನಂ ।
ನ ಸ್ಪಂದತೇಽತ್ರ ವಾತೋಽಪಿ ನ ಲಿಪ್ಯಂತೇಽತ್ರ ಷಟ್ಪದಾಃ ॥ ೩೪ ॥
ತದೇತತ್ಪಾದಸಂಚಾರೈರ್ದೂಷಯನ್ನೇಷ ಪಾತಕೀ ।
ಹಯೋ ಭವತು ಭೂಲೋಕೇ ಪರವಾಹ್ಯತ್ವಪೀಡಿತಃ ॥ ೩೫ ॥
ಅಪರೋಽಪ್ಯಯಮತ್ಯುಗ್ರೇ ಪತತ್ವಚಲಕಂದರೇ ।
ಪ್ರಸೂನಗಂಧಲೋಭಾಢ್ಯೋ ಗಂಧಸಾರಂಗತಾಂ ಗತಃ ॥ ೩೬ ॥
ಇತಿ ತೇನೋಗ್ರರೋಷೇಣ ಶಾಪವಜ್ರೇ ನಿಪಾತಿತೇ ।
ತತ್ಕ್ಷಣಾದ್ವಿಗಳದ್ಗರ್ವಾವಾವಾಂ ತಂ ಶರಣಂ ಗತೌ ॥ ೩೭ ॥
ಅಭಿಧಾಯ ಚ ತಂ ದೇವಮಾಹಿತಾಂಘ್ರಿಪರಿಗ್ರಹೈಃ ।
ಅಮೋಘ ಏಷ ತ್ವಚ್ಛಾಪಸ್ತದಸ್ಯಾಂತೋ ನಿವೇದ್ಯತಾಂ ॥ ೩೮ ॥
ಅಥಾತಿದೀನಮನಸಾವಾವಾಮಾಲೋಕ್ಯ ಪಾರ್ಥಿವ ।
ಸಾನುಗ್ರಹೋಽಭೂನ್ಮುನಿರಾಟ್ ಕಾರುಣ್ಯಾದತಿಶೀತಲಃ ॥ ೩೯ ॥

---

ನೀವಿಬ್ಬರೂ ಯಾರು? ಜ್ವಲಿಸುತ್ತಿರುವ ನನ್ನ ಕೋಪಾಗ್ನಿಗೆ ಶಲಭಗಳಂತೆ ಆಹುತಿಯಾಗುವಿರಿ.

೩೩. ಪವಿತ್ರವೂ ಭೂತಾವಾಸವೂ ಆದ ಈ ನನ್ನ ತಪೋವನವನ್ನು ಸೂರ್ಯಚಂದ್ರರೂ ಕೂಡ ತಮ್ಮ ಪಾದಗಳಿಂದ ಎಂದೂ ತುಳಿಯುವುದಿಲ್ಲ.

೩೪–೩೫. ಮಹೇಶ್ವರನ ಪೂಜೆಗಾಗಿ ಈ ಉದ್ಯಾನವು ಮೀಸಲಾಗಿರುವುದು. ಇಲ್ಲಿ ವಾಯುವೂ ಸಂಚರಿಸುವುದಿಲ್ಲ. ದುಂಬಿಗಳೂ ಹೂವುಗಳನ್ನು ಮುಟ್ಟುವುದಿಲ್ಲ. ಇಂತಹ ಪವಿತ್ರ ಪ್ರದೇಶವನ್ನು ಪಾದಗಳಿಂದ ದೂಷಿಸಿದ ಈ ಪಾತಕಿಯು ಕುದುರೆಯಾಗಿ ಜನಿಸಿ ಇತರರಿಗೆ ವಾಹನವಾಗುವ ದುಃಖವನ್ನನುಭವಿಸಲಿ.

೩೬. ಇನ್ನೊಬ್ಬನೂ ಹೂವುಗಳ ಸುವಾಸನೆಯಿಂದ ಲೋಭಿತನಾದುದರಿಂದ ಕಸ್ತೂರಿ ಮೃಗವಾಗಿ ಪರ್ವತದ ಕಣಿವೆಯಲ್ಲಿ ಬೀಳಲಿ."

೩೭. ಹೀಗೆ ಉಗ್ರವಾದ ಕೋಪದಿಂದ ನಮ್ಮಲ್ಲಿ ದುರ್ವಾಸನು ಶಾಪವನ್ನು ಪ್ರಯೋಗಿಸಲು ತಕ್ಷಣದಲ್ಲಿಯೇ ನಮ್ಮ ದರ್ಪವಡಗಿ ನಾವಿಬ್ಬರೂ ಆತನ ಶರಣಾಗತಿಯನ್ನು ಹೊಂದಿದೆವು.

೩೮. ಬಳಿಕ ಪಾದಗಳನ್ನು ಹಿಡಿದು ಆತನನ್ನು 'ನಿನ್ನ ಶಾಪವು ಅಮೋಘವಾದರೂ ಅದಕ್ಕೆ ಅಂತ್ಯಕಾಲವನ್ನು ತಿಳಿಸು' ಎಂದು ಕೇಳಿಕೊಂಡೆವು.

೩೯–೪೦. ಆಗ ಅತ್ಯಂತ ಖಿನ್ನವಾದ ಮನಸ್ಸುಳ್ಳ ನಮ್ಮಿಬ್ಬರನ್ನೂ ಕಂಡು ಕಾರುಣ್ಯದಿಂದ ಶಾಂತಚಿತ್ತನಾದ ಆ ಮುನಿವರೇಣ್ಯನು ಅನುಗ್ರಹೋನ್ಮುಖ

ಅಭಾಷತ ಚ ನ್ಯೈವಂ ಭೋ ಭವತೋಃ ಕ್ವಾಪಿ ದುರ್ಧಿಯೋಃ ।
ಶಾಪಸ್ಯ ಭವಿತಾ ಶಾಂತಿರರುಣಾದ್ರೇಃ ಪ್ರದಕ್ಷಿಣಾತ್ ॥ ೪೦ ॥
ಪುರಾ ಖಲು ಪುರಾರಾತಿರಧ್ಯತಿಷ್ಠಚ್ಛುಭಾಂ ಸಭಾಂ ।
ಪರ್ಯುಪಾಸ್ಯತ ದಿಕ್ಪಾಲೈರಿಂದ್ರೋಪೇಂದ್ರಯಮಾದಿಭಿಃ ॥ ೪೧ ॥
ತದಾ ಚ ದೇವದೇವಾಯ ನಂದನಾರಣ್ಯದೇವತಾ ।
ಉಪಾಯನೀಕೃತವತೀ ಫಲಂ ಕಿಮಪಿ ಪಾಟಲಂ ॥ ೪೨ ॥
ಬಾಲ್ಯಾತ್ಕುತೂಹಲಾಕ್ರಾಂತೌ ಗಜಾನನಷಡಾನನೌ ।
ಪಿತರಂ ತದಯಾಚೇತಾಂ ಲೋಭನೀಯತರಂ ಫಲಂ ॥ ೪೩ ॥
ಅಥ ತಾವವದದ್ದೇವಸ್ತನಯೌ ಫಲತರ್ಷಿತೌ ।
ಗೋಪಯಿತ್ವಾ ಫಲಂ ಪಾಣಿಸಂಪುಟೇನ ಕುಮಾರಕೌ ॥ ೪೪ ॥
ಇಮಾಂ ಸಮಸ್ತಾಂ ಪೃಥಿವೀಂ ಲೋಕಾಲೋಕೇನ ವೇಷ್ಟಿತಾಂ ।
ಯೋ ವಾಂ ಪ್ರದಕ್ಷಿಣೀಕರ್ತುಮಿಷ್ಟೇ ತಸ್ಮೈ ದದಾಮ್ಯಹಂ ॥ ೪೫ ॥
ಇತ್ಯುಕ್ತೇ ಪಾರ್ವತೀಶೇನ ಸ್ಮಯಮಾನಮುಖೇಂದುನಾ ।
ಸ್ಕಂದಃ ಪ್ರದಕ್ಷಿಣೀಕರ್ತುಂ ಮೇದಿನೀಮುಪಚಕ್ರಮೇ ॥ ೪೬ ॥

---

ನಾದನು. ಮತ್ತು ಹೀಗೆ ಹೇಳಿದನು :—'ದುರ್ಬುದ್ಧಿಗಳಾದ ನಿಮ್ಮಿಬ್ಬರಿಗೂ ಇನ್ನೆಲ್ಲಿಯೂ ಶಾಪ ಮೋಕ್ಷವಾಗುವುದಿಲ್ಲ. ಅರುಣಾಚಲದ ಪ್ರದಕ್ಷಿಣೆಯಿಂದಲೇ ನಿಮ್ಮ ಶಾಪದ ಶಾಂತಿಯುಂಟಾಗುವುದು.'

೪೧. ಪೂರ್ವದಲ್ಲಿ ಅಷ್ಟದಿಕ್ಪಾಲಕರಿಂದಲೂ, ಮಹೇಂದ್ರ, ಮಹಾವಿಷ್ಣು, ಯಮನೇ ಮೊದಲಾದವರಿಂದಲೂ ತುಂಬಿದ್ದ ಸಭಾಮಂಟಪದಲ್ಲಿ ಮಹಾದೇವನು ಓಲಗದಲ್ಲಿದ್ದನು.

೪೨. ಆಗ ದೇವದೇವನಿಗೆ ನಂದನವನದ ಅಧಿದೇವತೆಯು ಕೆಂಪಾದ ಒಂದು ಹಣ್ಣನ್ನು ಉಪಾಯನವಾಗಿ ತಂದು ಒಪ್ಪಿಸಿದಳು.

೪೩–೪೪. ಅತ್ಯಂತ ಮನೋಹರವಾದ ಹಣ್ಣನ್ನು ಕಂಡು ಹುಡುಗತನದಿಂದ ಕುತೂಹಲಿತರಾಗಿ ಗಣಪತಿ ಷಣ್ಮುಖರಿಬ್ಬರೂ ಹಣ್ಣನ್ನು ಕೊಡೆಂದು ತಂದೆಯನ್ನು ಬೇಡಿದರು. ಹಣ್ಣಿಗೆ ಆಶಿಸುತ್ತಿರುವ ಇಬ್ಬರನ್ನೂ ಕಂಡು ಅದನ್ನು ತನ್ನ ಕೈಗಳಲ್ಲಿ ಮುಚ್ಚಿಟ್ಟುಕೊಂಡು ಅವರಿಗೆ ಹೀಗೆ ಹೇಳಿದನು.

೪೫. ಲೋಕಾಲೋಕ ಪರ್ವತದಿಂದ ಪರಿವೇಷ್ಟಿತವಾದ ಸಕಲ ಭೂಮಂಡಲವನ್ನೂ ನಿಮ್ಮಲ್ಲಿ ಯಾವನು ಮೊದಲು ಪ್ರದಕ್ಷಿಣೆ ಮಾಡುವನೋ ಅವನಿಗೆ ಹಣ್ಣನ್ನು ಕೊಡುತ್ತೇನೆ.

೪೬. ಹೀಗೆ ಮಹೇಶ್ವರನು ಹೇಳಲು ಷಣ್ಮುಖನು ನಗೆಮೊಗದಿಂದೊಡಗೂಡಿದವನಾಗಿ ಭೂಮಿಯನ್ನು ಪ್ರದಕ್ಷಿಣೆಮಾಡಲು ಹೊರಟನು.

ಲಂಬೋದರಸ್ತು ದೇವಸ್ಯ ಶೋಣಶೈಲಾಕೃತೇಃ ಪಿತುಃ ।
ಪ್ರದಕ್ಷಿಣಂ ತತಃ ಕೃತ್ವಾ ಪುರಸ್ತಾದೇವ ತತ್ಕ್ಷಣಾತ್ ॥ ೪೭ ॥
ತದ್ದೃಷ್ಟ್ವಾ ತಸ್ಯ ಚಾತುರ್ಯಂ ಹೇರಂಬಾಯ ತ್ರಿಯಂಬಕಃ ।
ಫಲಂ ವಿತೀರ್ಣವಾನಸ್ಮೈ ಪ್ರಣಯಾಘ್ರಾತಮಸ್ತಕಃ ॥ ೪೮ ॥
ಅದ್ಯಪ್ರಭೃತಿ ಸರ್ವೇಷಾಂ ಫಲಾನಾಮಧಿನಾಯಕಃ ।
ಭವೇತ್ಯಸ್ಮೈ ವರಂ ದತ್ವಾ ಹ್ಯೇಕದಂತಾಯ ಶಂಕರಃ ॥ ೪೯ ॥
ಬಭಾಷೇ ಚ ಸಭಾಸ್ತಾರಾನ್ಸರ್ವಾನಪಿ ಸುರಾಸುರಾನ್ ।
ಪ್ರಸರದ್ದಶನಜ್ಯೋತ್ಸ್ನಾ ಕರ್ಬುರೀಕೃತಮಂದಿರಃ ॥ ೫೦ ॥
ಸ್ಥಾವರೋಽಯಂ ಮಮಾಕಾರಃ ಶೋಣಾದ್ರಿರ್ಯೋಽಸ್ಯ ಭಕ್ತಿತಃ ।
ಪ್ರದಕ್ಷಿಣಾಂ ವಿತನುತೇ ಸ ಮೇ ಸಾರೂಪ್ಯಭಾಗ್ಭವೇತ್ ॥ ೫೧ ॥
ಗಿರೇಃ ಪ್ರದಕ್ಷಿಣೇನಾಸ್ಯ ಯಸ್ಯ ಧತ್ತಃ ಪದೇ ರುಜಂ ।
ಸ ಸಮ್ರಾಟ್ ಸಕಲೋತ್ಕೃಷ್ಟಂ ಲಭತೇ ಶಾಶ್ವತಂ ಪದಂ ॥ ೫೨ ॥
ಇತಿ ಶಾಸನತಃ ಶಂಭೋಃ ಶೋಣಶೈಲಪ್ರದಕ್ಷಿಣಂ ।
ವಿಧಾಯ ಸರ್ವಗೀರ್ವಾಣಾ ಲೇಭಿರೇ ಸ್ವಂ ಸ್ವಮೀಪ್ಸಿತಂ ॥ ೫೩ ॥

---

೪೭. ವಿಘ್ನೇಶ್ವರನು ತನ್ನ ತಂದೆಯ ಅರುಣಾಚಲ ರೂಪವನ್ನು ಪ್ರದಕ್ಷಿಣೆ ಮಾಡಿ ನಿಮಿಷಮಾತ್ರದಲ್ಲಿಯೇ ಮಹಾದೇವನ ಮುಂದೆ ನಿಂತನು.

೪೮. ಅವನ ಚಾತುರ್ಯವನ್ನು ಕಂಡು ಮೆಚ್ಚಿ ಮಹಾದೇವನು ಅವನ ತಲೆಯನ್ನು ಪ್ರೀತಿಯಿಂದ ಆಘ್ರಾಣಿಸುತ್ತ ಹಣ್ಣನ್ನು ಅವನಿಗೆ ಕೊಟ್ಟನು.

೪೯–೫೦. 'ಇಂದಿನಿಂದ ನೀನು ಫಲಪ್ರಾಪ್ತಿಗೆ ಅಧಿನಾಯಕನಾಗಿರು' ಎಂದು ಶಂಕರನು ಆ ಗಣಪತಿಗೆ ವರವನ್ನು ಕೊಟ್ಟು ದಶನಕಾಂತಿಯು ಸಭಾ ಮಂಟಪವನ್ನೆಲ್ಲ ಬೆಳದಿಂಗಳಿನಂತೆ ಪ್ರಸರಿಸುತ್ತಿರಲು, ಸಕಲ ಸಭಾಸದರಾದ ದೇವರಾಕ್ಷಸರನ್ನೂ ಕುರಿತು ಹೇಳತೊಡಗಿದನು.

೫೧. "ಈ ಅರುಣಾಚಲವು ನನ್ನ ಸ್ಥಾವರ ರೂಪವಾಗಿರುವುದು. ಯಾವನು ಇದಕ್ಕೆ ಭಕ್ತಿಯಿಂದ ಪ್ರದಕ್ಷಿಣೆಯನ್ನು ಮಾಡುವನೊ ಅವನಿಗೆ ನನ್ನ ಸಾರೂಪ್ಯವು ಸಿಕ್ಕುವುದು.

೫೨. "ಈ ಗಿರಿಯ ಪ್ರದಕ್ಷಿಣದಿಂದ ಯಾವನ ಪಾದವು ನೋವನ್ನು ಪಡೆಯುವುದೊ, ಅವನು ರಾಜನಾಗಿ ಉತ್ಕೃಷ್ಟವಾದ ಶಾಶ್ವತ ಪದವನ್ನು ಹೊಂದುವನು."

೫೩. ಈ ರೀತಿಯಾದ ಶಿವನ ಶಾಸನದಿಂದ ಅರುಣಾಚಲದ ಪ್ರದಕ್ಷಿಣೆಯನ್ನು ಮಾಡಿ ಸಕಲ ದೇವತೆಗಳೂ ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆದರು.

ಯುವಾಮಪಿ ಮದೋದ್ಭೂತಮಾಲಿನ್ಯಾ ಶಿಕ್ಷಿತೌ ಮಯಾ ।
ಪ್ರದಕ್ಷಿಣೇನ ಶೋಣಾದ್ರೇಃ ಶಾಪಾಂತೋ ವಾಂ ಭವಿಷ್ಯತಿ ॥ ೫೪ ॥
ತಿರಶ್ಚೋರಪಿ ವಾಂ ಸಿದ್ಧ್ಯೇದರುಣಾದ್ರೇಃ ಪ್ರದಕ್ಷಿಣಾ ।
ವಜ್ರಾಂಗದಸ್ಯ ಪಾಂಡ್ಯಸ್ಯ ನೃಪತೇರನುಬಂಧತಃ ॥ ೫೫ ॥
ಇತ್ಯಮರ್ಷಣ ಮಹರ್ಷಿಮಹಾಬ್ಧೇಃ
ಶಾಪಹಾಲಹಲಶೋಷಿತಗಾತ್ರೌ ।
ಪಾತಿತೌ ಬಹುಲಪಾತಕ ಭಾರಾತ್
ಕ್ಷಿಪ್ರಮಶ್ವಮೃಗಜಾತಿಷು ಜಾತೌ ॥ ೫೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ
"ವಜ್ರಾಂಗದ ವೃತ್ತಾಂತ ವರ್ಣನಂ" ನಾಮ ದ್ವಾವಿಂಶತಿತಮೋಽಧ್ಯಾಯಃ

---

೫೪. ನೀವಿಬ್ಬರೂ ಕೂಡ ಮದದ ಉದ್ಭವದಿಂದ ಪುಷ್ಪಗಳನ್ನೆಳಸಿ ನನ್ನಿಂದ ಶಿಕ್ಷಿತರಾದಿರಿ. ಅರುಣಾಚಲದ ಪ್ರದಕ್ಷಿಣದಿಂದ ನಿಮ್ಮ ಶಾಪವು ಕೊನೆಗಾಣುವುದು.

೫೫. ತಿರ್ಯಗ್ಜಂತುಗಳಾಗಿ ಜನಿಸಿದರೂ ಕೂಡ ಪಾಂಡ್ಯದೇಶದ ರಾಜನಾದ ವಜ್ರಾಂಗದನ ಮೂಲಕವಾಗಿ ನಿಮಗೆ ಅರುಣಾದ್ರಿಯ ಪ್ರದಕ್ಷಿಣೆಯು ಲಭಿಸುವುದು."

೫೬. ಈ ರೀತಿಯಾಗಿ ಕೋಪಿಷ್ಠನಾದ ಮಹರ್ಷಿಯೆಂಬ ಸಮುದ್ರದಿಂದ ಹುಟ್ಟಿದ ಶಾಪವೆಂಬ ವಿಷದಿಂದ ಶೋಷಿತವಾದ ಶರೀರವುಳ್ಳವರಾಗಿ ಅಧಿಕ ಪಾಪದ ಫಲವಾಗಿ ಶೀಘ್ರದಲ್ಲಿಯೇ ಕುದುರೆ ಮತ್ತು ಜಿಂಕೆಗಳಾಗಿ ಭೂಲೋಕದಲ್ಲಿ ಹುಟ್ಟುವವರಾದೆವು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ
ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ವಜ್ರಾಂಗದನ ವೃತ್ತಾಂತದ ವರ್ಣನ"ವೆಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋವಿಂಶತಿತಮೋಽಧ್ಯಾಯಃ

## ಕಲಾಧರ ಕಾಂತಿಶಾಲಿ ವೃತ್ತಾಂತ ವರ್ಣನಂ

ಕಲಾಧರ ಉವಾಚ :—

ಕಾಂಭೋಜೇಷು ಹಯೋ ಭೂತ್ವಾ ಕಾಂತಿಶಾಲೀ ಸುಹೃನ್ಮಮ ।
ಅಯಾಸೀದೌಪವಾಹ್ಯತ್ವಂ ಭವತೋ ರಾಜಪುಂಗವ ॥ ೧ ॥
ಅಹಂ ಚ ಗಂಧಮೃಗತಾಂ ಗತಃ ಸ್ವಾಂಗಪ್ರಸೂತಿನಾ ।
ಸುಗಂಧಿನಾ ಮದೇನಾಸ್ಯ ಸಂಚಾರಂ ಚಾಚರಂ ಗಿರೇಃ ॥ ೨ ॥
ಧರ್ಮಾತ್ಮನ್ಮೃಗಯಾವ್ಯಾಜಾದಾಗತೇನ ತ್ವಯಾಧುನಾ ।
ಆವಾಂ ಶೋಣಾದ್ರಿನಾಥಸ್ಯ ಪ್ರಾಪಿತೌ ಹಿ ಪ್ರದಕ್ಷಿಣಾಂ ॥ ೩ ॥
ವಾಹಾರೋಹಣದೋಷೇಣ ತವಾಸೀದೀದೃಶೀ ದಶಾ ।
ಪಾದಪ್ರಚಾರಪುಣ್ಯೇನ ಪ್ರಾಪ್ತಂ ನೌ ಪ್ರಾಕ್ತನಂ ಪದಂ ॥ ೪ ॥
ರಾಜೇಂದ್ರ ತವ ಸಂಬಂಧಾದಸ್ಮಾತ್ತಿರ್ಯಕ್ತ್ವಬಂಧನಾತ್ ।
ಮುಕ್ತಾವಾವಾಂ ಸ್ವಕಂ ಧಾಮ ಪ್ರಾಪ್ತೌ ಸ್ವಸ್ತ್ಯಸ್ತು ತೇ ಸದಾ ॥ ೫ ॥

---

## ಕನ್ನಡದ ಅನುವಾದ

### ಕಲಾಧರ ಕಾಂತಿಶಾಲಿಯರ ವೃತ್ತಾಂತ ವರ್ಣನ

೧. ಕಲಾಧರನು ಹೇಳುತ್ತಾನೆ :—" ಎಲೈ ವಜ್ರಾಂಗದ ರಾಜನೆ! ನನ್ನ ಸ್ನೇಹಿತನಾದ ಕಾಂತಿಶಾಲಿಯು ಕಾಂಭೋಜ ದೇಶದಲ್ಲಿ ಕುದುರೆಯಾಗಿ ಜನಿಸಿ ನಿನಗೆ ವಾಹನವಾದನು.

೨. ನಾನೂ ಕೂಡ ಕಸ್ತೂರಿ ಮೃಗವಾಗಿ ಶರೀರದಿಂದ್ಭವಿಸಿದ ಸುಗಂಧವಾದ ಮದದಿಂದ ಕೂಡಿ ಈ ಪರ್ವತದಲ್ಲಿ ಸಂಚಾರ ಮಾಡುತ್ತಿದ್ದೆನು.

೩. ಎಲೈ ಧರ್ಮಾತ್ಮನೆ! ಬೇಟೆಯ ನೆವದಿಂದ ಬಂದ ನಿನ್ನ ಮೂಲಕವಾಗಿ ನಾವಿಬ್ಬರೂ ಅರುಣಾಚಲದ ಪ್ರದಕ್ಷಿಣೆಯನ್ನು ಮಾಡಿದಂತಾಯಿತು.

೪. ನೀನು ವಾಹನವನ್ನೇರಿ ಪ್ರದಕ್ಷಿಣೆಯನ್ನು ಮಾಡಿದುದರಿಂದ ನಿನಗೆ ಈ ವಿಧವಾದ ನಿಶ್ಶಕ್ತಿಯುಂಟಾಯಿತು. ನಾವು ಪಾದಚಾರಿಗಳಾಗಿದ್ದುದರಿಂದ ಪುಣ್ಯದ ಫಲವಾಗಿ ನಮಗೆ ಪೂರ್ವರೂಪವು ಲಭ್ಯವಾಯಿತು.

೫. ಎಲೈ ರಾಜೇಂದ್ರನೆ! ನಿನ್ನ ಕಾರಣದಿಂದ ನಮಗೆ ತಿರ್ಯಗ್ಜನ್ಮದಿಂದ ಮುಕ್ತಿಯಾಗಿ ನಮ್ಮ ಲೋಕವು ದೊರಕಿತು. ನಿನಗೆ ಯಾವಾಗಲೂ ಮಂಗಳವಾಗಲಿ."

ಇತ್ಯುದೀರ್ಯ ನಿಜಂ ಧಾಮ ಯಿಯಾಸಂತಂ ಕಲಾಧರಂ ।
ಕಾಂತಿಶಾಲಿನಂ ಚ ರಾಜಾ ಜಗಾದ ರಚಿತಾಂಜಲಿಃ ॥ ೬ ॥
ಏವಂ ಯುವಾಂ ಶೋಣಶೈಲಶಂಕರಸ್ಯ ಪ್ರಭಾವತಃ ।
ಶಾಪಾರ್ಣವಂ ಸಮುತ್ತೀರ್ಣೌ ಕಥಂ ಮೇ ಪುನರುಚ್ಛ್ರಯಃ ॥ ೭ ॥
ಭ್ರಾಮ್ಯತೀವ ಮಮ ಸ್ವಾಂತಮಾಧಾಯ ತದವೇಕ್ಷಣಂ ।
ನಿರ್ಯಾಂತೀವ ಮಮ ಪ್ರಾಣಾಸ್ತತ್ರ ದೈವಂ ಬಲೋತ್ತರಂ ॥ ೮ ॥

ಕಲಾಧರಕಾಂತಿಶಾಲಿನಾ ವೂಚತುಃ :—

ಅವಧಾರಯ ನಿಸ್ತಾರಂ ಕಥಯಾವ ತವಾಸ್ಪದಂ ।
ಸಮಾಹಿತೇನ ಮನಸಾ ನಿರ್ಧೂತನಿಖಿಲಾಧಿನಾ ॥ ೯ ॥
ಜಗತ್ಸರ್ಗಸ್ಥಿತಿಧ್ವಂಸವಿಧಾನಾನುಗ್ರಹೇಶ್ವರೇ ।
ಅರುಣಾದ್ರೀಶ್ವರೇ ಚಿತ್ತಂ ನಿಧೇಹಿ ಕರುಣಾನಿಧೌ ॥ ೧೦ ॥
ಪ್ರತ್ಯಕ್ಷಿತಂ ತ್ವಯೇದಾನೀಂ ಅಸ್ಯ ದೇವಸ್ಯ ವೈಭವಂ ।
ತಿರಶ್ಚೋರಾವಯೋರೇತದೀದೃಶತ್ವಂ ವಿತನ್ವತಃ ॥ ೧೧ ॥
ಕುರು ಪ್ರದಕ್ಷಿಣಾಂ ಪಾದಚಾರೀ ಮೃಗಮುದಾದ್ಯೃತೈಃ ।
ಕಲ್ಹಾರೈಃ ಪೂಜಯೇಶಾನಂ ದೇವಂ ಮೃಗಮುದಪ್ರಿಯಂ ॥ ೧೨ ॥

---

೬. ಹೀಗೆ ಹೇಳಿ ತಮ್ಮ ಲೋಕಕ್ಕೆ ತೆರಳಲನುವಾದ ಕಲಾಧರ ಕಾಂತಿಶಾಲಿಗಳನ್ನು ಕಂಡು ರಾಜನು ಕೈಜೋಡಿಸಿಕೊಂಡು ಕೇಳಿದನು.

೭. "ನೀವಂತೂ ಅರುಣಾಚಲೇಶ್ವರನ ಪ್ರಭಾವದಿಂದ ಶಾಪಮೋಕ್ಷವನ್ನು ಹೊಂದಿದಿರಿ. ಆದರೆ ನನಗೆ ಹೇಗೆ ಮತ್ತೆ ಶ್ರೇಯಸ್ಸಾಗುವುದು?

೮. ಈ ಯೋಚನೆಯಿಂದ ನನ್ನ ಅಂತರಂಗವು ಭ್ರಮಿಸುತ್ತಿರುವುದು. ನನ್ನ ಪ್ರಾಣವೂ ದೇಹದಿಂದ ಹೊರಡುತ್ತಿರುವಂತೆ ತೋರುವುದು. ದೈವವೇ ಬಲವತ್ತರವು."

೯–೧೦. ಅವರಿಬ್ಬರೂ ಹೇಳಿದರು:—"ನಿನಗೆ ಮೋಕ್ಷವುಂಟಾಗುವುದಕ್ಕೆ ಮಾರ್ಗವನ್ನು ಹೇಳುವೆವು. ಮನಸ್ಸಿಟ್ಟು ಕೇಳುವವನಾಗು. ನೀನು ಸಕಲ ಮನೋವ್ಯಥೆಗಳನ್ನೂ ದೂರಮಾಡಿ ಸಮಾಹಿತ ಮನಸ್ಸಿನಿಂದ ಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳನ್ನು ನಿಯಮಿಸುವ ಅನುಗ್ರಹವುಳ್ಳ ಸರ್ವಶಕ್ತನೂ ಕರುಣಾಸಮುದ್ರನೂ ಆದ ಅರುಣಾಚಲೇಶ್ವರನಲ್ಲಿ ಮನಸ್ಸನ್ನು ನಿಲ್ಲಿಸು.

೧೧–೧೨. ತಿರ್ಯಗ್ಜಂತುಗಳಾಗಿದ್ದ ನಮಗೆ ಈ ರೂಪವನ್ನು ಕರುಣಿಸಿದ ಈ ದೇವನ ವೈಭವವು ನಿನಗೆ ಪ್ರತ್ಯಕ್ಷವಾಗಿಯೇ ತಿಳಿದಿರುವುದಾಗಿದೆ. ಪಾದಚಾರಿಯಾಗಿಯೇ ಪ್ರದಕ್ಷಿಣೆಯನ್ನು ಮಾಡು. ಕಸ್ತೂರಿಯಿಂದ ಕೂಡಿದ ಬಿಳಿದಾವರೆಗಳಿಂದ ಕಸ್ತೂರೀಪ್ರಿಯನಾದ ಮಹೇಶ್ವರನನ್ನು ಪೂಜಿಸು.

ಯಾವತೀ ತವ ಸಂಪತ್ತಿಸ್ತಾವತೀಮಖಿಲಾಂ ವಿಭೋ ।
ಪ್ರಾಕಾರ ಗೋಪುರಾಗಾರನವೀಕಾರಾಯ ಕಲ್ಪಯ ॥ ೧೩ ॥
ಅಚಿರಾದೇವ ಸಿದ್ಧಿಸ್ತೇ ಭವಿಷ್ಯತಿ ಗರೀಯಸೀ ।
ಮನುಮಾಂಧಾತೃನಾಭಾಗಭಗೀರಥವದಾಧಿಕಾ ॥ ೧೪ ॥

ನಂದಿಕೇಶ್ವರ ಉವಾಚ:–

ಇತ್ಥಂ ನಿಶಮ್ಯ ಚ ತಯೋರ್ನಿಜಮೇವ ಧಾಮ
ವಿದ್ಯಾಭೃತೋಃ ಸಪದಿ ಸಂಶ್ರಿತಯೋರ್ನರೇಂದ್ರಃ ।
ನಿಃಸಂಶಯೇನ ಮನಸಾ ನಿರತಸ್ತದಾನೀಂ
ಭಕ್ತಿಂ ಬಬಂಧ ಭಗವತ್ಯರುಣಾದ್ರಿನಾಥೇ ॥ ೧೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ
"ಕಲಾಧರಕಾಂತಿಶಾಲಿವೃತ್ತಾಂತವರ್ಣನಂ" ನಾಮ
ತ್ರಯೋವಿಂಶತಿತಮೋಽಧ್ಯಾಯಃ

---

೧೩. ನಿನಗೆ ಎಷ್ಟು ಐಶ್ವರ್ಯವಿರುವುದೊ ಅದನ್ನೆಲ್ಲ ಈ ಜ್ಯೋತಿರ್ಲಿಂಗದ ಪ್ರಾಕಾರ, ಗೋಪುರ, ಗರ್ಭಗುಡಿಗಳ ಜೀರ್ಣೋದ್ಧಾರಕ್ಕಾಗಿ ಉಪಯೋಗಿಸು.

೧೪. ಶೀಘ್ರದಲ್ಲಿಯೇ ನಿನಗೆ ಮನು, ಮಾಂಧಾತೃ, ನಾಭಾಗ, ಭಗೀರಥರಿಗೆ ಲಭಿಸಿದಂತೆ ಅಧಿಕವಾಗಿಯೂ, ಉತ್ತಮವಾಗಿಯೂ ಸಿದ್ಧಿಯು ಪ್ರಾಪ್ತವಾಗುವುದು."

೧೫. ನಂದಿಕೇಶ್ವರನು ಹೇಳುತ್ತಾನೆ:—ಈ ರೀತಿಯಾಗಿ ರಾಜನು ಕೇಳುತ್ತಿರಲು ಆ ವಿದ್ಯಾಧರರಿಬ್ಬರೂ ಶೀಘ್ರದಲ್ಲಿಯೇ ತಮ್ಮ ಲೋಕವನ್ನು ಸೇರುವಂತಹವರಾದರು. ರಾಜನೂ ಸಂಶಯರಹಿತವಾದ ಮನಸ್ಸಿನಿಂದ ಏಕಾಗ್ರನಾಗಿ ಭಗವಂತನಾದ ಅರುಣಾಚಲೇಶ್ವರನಲ್ಲಿ ದೃಢವಾದ ಭಕ್ತಿಯನ್ನು ಹೊಂದಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ
ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ಕಲಾಧರ ಕಾಂತಿಶಾಲಿಯರ ವೃತ್ತಾಂತ ವರ್ಣನ"
ವೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ವಿಂಶತಿತಮೋಽಧ್ಯಾಯಃ

### ವಜ್ರಾಂಗದ ಸದ್ಗತಿವರ್ಣನಂ

ಮಾರ್ಕಂಡೇಯ ಉವಾಚ :—

ಭಗವನ್ಛಿವಮಾಹಾತ್ಮ್ಯರತ್ನಾಕರಸುಧಾಕರಂ ।
ನಂದೀಶ ಚಿತ್ರಂ ಚಾರಿತ್ರಂ ಶ್ರುತಂ ವಿದ್ಯಾಭೃತೋರ್ದ್ವಯೋಃ ॥ ೧ ॥
ಕದಾ ವಜ್ರಾಂಗದಃ ಸಿದ್ಧಃ ಕಥಂ ದೇವಮಪೂಜಯತ್ ।
ಕಥಂ ಚಾನ್ವಗ್ರಹೀತ್ತುಷ್ಟಂ ದೇವಸ್ತಮರುಣೇಶ್ವರಃ ॥ ೨ ॥

ನಂದಿಕೇಶ್ವರ ಉವಾಚ :—

ನಿವರ್ತನೇಚ್ಛಾಂ ಹಿತ್ವಾಥ ನೃಪೋ ನಿಜಪುರಂ ಪ್ರತಿ ।
ತಸ್ಯೈವ ಪಾದಪರ್ಯಂತೇ ಸ್ವಸ್ಯ ವಾಸಮರೋಚಯತ್ ॥ ೩ ॥
ಅಥಾಸ್ಯ ಮಹತೀ ಸೇನಾ ವಾಹಮಾರ್ಗಾನುಸಾರಿಣೀ ।
ಪ್ರಾಪ್ತಾ ಶತಾಂಗಮಾತಂಗತುರಂಗಭಟಸಂಕುಲಾ ॥ ೪ ॥
ಸಮದೃಶ್ಯತ ಭೂಪಾಲಸ್ತಾದೃಶೋ ಧೈರ್ಯಸಾಗರಃ ।
ಪುರೋಧೋ ಮಂತ್ರಿಸಾಮಂತಸೇನಾಪತಿಸುಹೃತ್ತಮೈಃ ॥ ೫ ॥

---

### ಕನ್ನಡದ ಅನುವಾದ

#### ವಜ್ರಾಂಗದನು ಸದ್ಗತಿಯನ್ನು ಹೊಂದಿದುದು

೧. ಮಾರ್ಕಂಡೇಯನು ಹೇಳುತ್ತಾನೆ:—"ಎಲೈ ನಂದಿಕೇಶ್ವರನೆ! ಪರಮೇಶ್ವರನ ಮಾಹಾತ್ಮ್ಯವೆಂಬ ಸಮುದ್ರಕ್ಕೆ ಚಂದ್ರನಂತಿರುವ ವಿದ್ಯಾಧರರ ಚರಿತ್ರೆಯನ್ನು ಕೇಳಿದುದಾಯಿತು.

೨. ವಜ್ರಾಂಗದನು ಯಾವಾಗ ಮುಕ್ತನಾದನು? ದೇವನನ್ನು ಹೇಗೆ ಪೂಜಿಸಿದನು? ವಿನೀತನಾದ ಆತನಿಗೆ ಅರುಣಾಚಲೇಶ್ವರನು ಹೇಗೆ ಅನುಗ್ರಹವನ್ನು ಮಾಡಿದನು?"

೩. ನಂದಿಕೇಶ್ವನು ಹೇಳುತ್ತಾನೆ:—ಆಗ ವಜ್ರಾಂಗದ ಮಹಾರಾಜನು ತನ್ನ ಪಟ್ಟಣಕ್ಕೆ ಹಿಂದಿರುಗುವ ಇಚ್ಛೆಯನ್ನು ಬಿಟ್ಟು ಆ ಅರುಣಾಚಲದ ಮೂಲದಲ್ಲಿಯೇ ವಾಸಮಾಡಲು ನಿಶ್ಚಯಿಸಿದನು.

೪–೫. ಆಗ ಆತನನ್ನು ಹುಡುಕಿಕೊಂಡು ಗಜ ರಥ ತುರಗ ಪದಾತಿಗಳಿಂದೊಡಗೂಡಿ ಆತನ ಮಹಾಸೈನ್ಯವು ಕುದುರೆಯ ಹೆಜ್ಜೆಗಳನ್ನೇ ಅನುಸರಿಸುತ್ತ ಅಲ್ಲಿಗೆ ಬಂದಿತು. ಆ ರಾಜನು ಧೈರ್ಯಸಾಗರನಾಗಿ ಪುರೋಹಿತ, ಮಂತ್ರಿ, ಅಧೀನ ರಾಜರು, ಸೇನಾಪತಿಗಳು, ಸ್ನೇಹಿತರುಗಳೊಡನೆ ಶೋಭಿಸಿದನು.

ತತಸ್ತಾಮಾಗತಾಂ ಸೇನಾಮವನೀಪತಿರಾದೃತಃ ।
ಅರುಣಾದ್ರೇಶ್ಚ ಸೀಮಾಯಾ ಬಹಿರೇವ ನ್ಯವೇಶಯತ್ ॥ ೬ ॥
ಸ್ವಕೀಯಮಖಿಲಂ ಕೋಶಂ ದೇಶಾನಪಿ ಮಹಾಫಲಾನ್ ।
ಶೋಣಾದ್ರಿನಾಥಪೂಜಾಯೈ ಕಲ್ಪಯಾಮಾಸ ಭಕ್ತಿಮಾನ್ ॥ ೭ ॥
ಗೌತಮಸ್ಯಾಶ್ರಮಾಭ್ಯಾಶೇ ಸ್ವಯಂ ಕೃತತಪೋವನಃ ।
ಪುರೋಧೋಕ್ತಃ ಸಸಚಿವಃ ಶಿವಾರ್ಚನರತೋಽಭವತ್ ॥ ೮ ॥
ರತ್ನಾಂಗದಾಖ್ಯಂ ತನಯಂ ಸ್ಥಾಪಯಿತ್ವಾ ನಿಜೇ ಪದೇ ।
ತತ್ಪ್ರೇಷಿತೈರಪರ್ಯಾಪ್ತೈಃ ಶೋಣೇಶಂ ಪರ್ಯತರ್ಪಯತ್ ॥ ೯ ॥
ಪರಿತಃ ಶೋಣಶೈಲಸ್ಯ ಪರಿಪೂರ್ಣಜಲಾಶಯಾನ್ ।
ಅಗ್ರಹಾರಾನ್ಬಹುಫಲಾನ್ಬ್ರಾಹ್ಮಣೇಭ್ಯೋಽತಿ ಸೃಷ್ಟವಾನ್ ॥ ೧೦ ॥
ತೇಜಸಾರುಣನಾಥಸ್ಯ ಜ್ವಲನಸ್ತಂಭರೂಪಿಣಃ ।
ಧನ್ವಪ್ರಾಯೇಽಪಿ ದೇಶೇಽಸ್ಮಿನ್ದೀರ್ಘಿಕಾಃ ಶತಶೋ ವ್ಯಧಾತ್ ॥ ೧೧ ॥
ಸೌಂದರ್ಯಶಾಲಿನೀರಾತ್ಮಪರಿವಾರವರಾಂಗನಾಃ ।
ಸೇವಾರ್ಥಂ ಶೋಣನಾಥಸ್ಯ ದತ್ತವಾನ್ದೀರ್ಘದರ್ಶನಃ ॥ ೧೨ ॥

---

೬. ಆ ಸೇನೆಯನ್ನು ಭೂಪತಿಯು ಆದರದಿಂದ ಬರಮಾಡಿಕೊಂಡು ಅರುಣಾಚಲ ಪ್ರದೇಶದ ಹೊರಗಡೆಯಲ್ಲಿಯೇ ಬಿಡಾರ ಮಾಡಿಸಿದನು.

೭. ಭಕ್ತಿಯುಕ್ತನಾಗಿ ತನ್ನ ಭಂಡಾರವನ್ನೂ ಸಮೃದ್ಧಗಳಾದ ದೇಶಗಳನ್ನೂ ಅರುಣಾಚಲೇಶ್ವರನ ಸೇವೆಗೆಂದು ಸಂಕಲ್ಪಮಾಡಿದನು.

೮. ಪುರೋಹಿತನ ಮಾತಿನಂತೆ ಮಂತ್ರಿಸಮೇತನಾಗಿ ಗೌತಮಾಶ್ರಮದ ಸಮೀಪದಲ್ಲಿಯೇ ತಪೋವನವನ್ನು ಮಾಡಿಕೊಂಡು ಶಿವಪೂಜೆಯಲ್ಲಿ ನಿರತನಾದನು.

೯–೧೨. ರತ್ನಾಂಗದನೆಂಬ ತನ್ನ ಮಗನನ್ನು ಪಟ್ಟಣದಲ್ಲಿರಿಸಿ ಅವನಿಂದ ಕಳುಹಿಸಲ್ಪಟ್ಟ ಅನೇಕ ಪದಾರ್ಥಗಳಿಂದ ಅರುಣಾಚಲೇಶ್ವರನನ್ನು ಪೂಜಿಸುತ್ತಿದ್ದನು. ಅರುಣಾಚಲದ ಸುತ್ತಲೂ ನೀರಿನಿಂದ ತುಂಬಿದ ತಟಾಕಗಳನ್ನೂ, ಸಮೃದ್ಧಗಳಾದ ಅಗ್ರಹಾರಗಳನ್ನೂ ನಿರ್ಮಿಸಿ ಬ್ರಾಹ್ಮಣರಿಗೆ ದಾನಮಾಡಿದನು. ಜ್ಯೋತಿಸ್ತಂಭದ ರೂಪದಿಂದಿರುವ ಅರುಣಾಚಲೇಶ್ವರನ ತೇಜಸ್ಸಿನಿಂದ ದಗ್ಧವಾದ ನೆಲದಲ್ಲಿಯೂ ನೂರಾರು ಕಾಲುವೆಗಳನ್ನು ಮಾಡಿಸಿದನು. ದೂರದೃಷ್ಟಿಯುಳ್ಳ ಮಹಾರಾಜನು ತನ್ನ ಪರಿವಾರದಲ್ಲೆಲ್ಲ ಅತ್ಯಂತ ಸುಂದರಿಯರಾದ ಸ್ತ್ರೀಯರನ್ನು ಅರುಣಾಚಲೇಶ್ವರನ ಸೇವೆಗಾಗಿ ಸಮರ್ಪಿಸಿದನು.

ಅಥಾಗತೇನಾಗಸ್ತ್ಯೇನ ಲೋಪಾಮುದ್ರಾಸಖೇನ ಸಃ ।
ಅಭ್ಯನಂದ್ಯತ ಶೋಣಾದ್ರಿನಾಥಪೂಜಾಪರಾಯಣಃ ॥ ೧೩ ॥
ಪ್ರತ್ಯಹಂ ನವತೀರ್ಥಾಖ್ಯೇ ಸರಸಿ ಸ್ನಾನಮಾಚರನ್ ।
ಪಾಪನಾಶಪ್ರವಾಳೇಶೌ ಪ್ರಯತಃ ಪರ್ಯಪೂಜಯತ್ ॥ ೧೪ ॥
ಮಹಿಷಾಸುರಸಂಹಾರಕಾರಿಣೀಂ ಮಾನವೇಶ್ವರಃ ।
ನಿತ್ಯಮಾರಾಧಯಾಮಾಸ ದುರ್ಗಾಂ ದುರ್ಗಾರ್ತಿಹಾರಿಣೀಂ ॥ ೧೫ ॥
ಪ್ರತಿಕ್ಷಣಂ ಬ್ರಹ್ಮವಿಷ್ಣುಪೂಜ್ಯಸ್ಯ ಲಿಂಗರೂಪಿಣಃ ।
ಆದಿದೇವಸ್ಯ ವಿವಿಧಾಃ ಸಪರ್ಯಾಃ ಪರ್ಯಕಲ್ಪಯತ್ ॥ ೧೬ ॥
ಪ್ರತ್ಯುಷಸ್ಯುತ್ಥಿತಃ ಸ್ನಾತಃ ಪಾದಾಭ್ಯಾಮೇವ ಪಾರ್ಥಿವಃ ।
ಜಪನ್ಪಂಚಾಕ್ಷರೀಮಂತ್ರಮಕಾರ್ಷೀತ್ತ್ರಿಃ ಪ್ರದಕ್ಷಿಣಾಂ ॥ ೧೭ ॥
ಪೌರ್ಣಮಾಸ್ಯಾಂ ಸ ಕಾರ್ತಿಕ್ಯಾಂ ಪಾರ್ವತೀವಲ್ಲಭಪ್ರಿಯಂ ।
ಮಹಾದೀಪೋತ್ಸವಂ ಚಕ್ರೇ ಮಹಿತಂ ಭುವನತ್ರಯೇ ॥ ೧೮ ॥
ಸುಗಂಧಸಾರಕಲ್ಹಾರಕರ್ಪೂರಜಲಪೂರಿತೈಃ ।
ಸಹಸ್ರೈಃ ಸ್ವರ್ಣಕುಂಭಾನಾಮಭ್ಯಷಿಂಚತ್ತ್ರಿಯಂಬಕಂ ॥ ೧೯ ॥

---

೧೩–೧೪. ಅರುಣಾಚಲನಾಥನ ಪೂಜೆಯಲ್ಲಿ ನಿರತನಾಗಿದ್ದ ಈತನನ್ನು ಕಂಡು ಲೋಪಾಮುದ್ರೆಯೊಡನೆ ಅಲ್ಲಿಗೆ ಬಂದ ಅಗಸ್ತ್ಯಮಹರ್ಷಿಯೂ ಶ್ಲಾಘನೆ ಮಾಡಿದನು. ಪ್ರತಿ ಪ್ರಾತಃಕಾಲದಲ್ಲಿಯೂ ನವತೀರ್ಥವೆಂಬ ಸರೋವರದಲ್ಲಿ ಮಿಂದು ನಿಯಮಸಹಿತನಾಗಿ ಪಾಪನಾಶನ ಮತ್ತು ಪ್ರವಾಳೇಶ ಲಿಂಗಗಳನ್ನು ಪೂಜಿಸುತ್ತಿದ್ದನು.

೧೫. ಆ ಮಹಾರಾಜನು ಮಹಿಷಾಸುರಮರ್ದಿನಿಯೂ, ಕಷ್ಟನಿವಾರಕಳೂ ಆದ ದುರ್ಗಾದೇವಿಯನ್ನು ನಿತ್ಯದಲ್ಲಿಯೂ ಆರಾಧಿಸುತ್ತಿದ್ದನು.

೧೬. ಪ್ರತಿಕ್ಷಣದಲ್ಲಿಯೂ ಬ್ರಹ್ಮವಿಷ್ಣುಗಳಿಂದ ಪೂಜ್ಯನೂ, ಲಿಂಗರೂಪಿಯೂ ಆದ ಮಹಾದೇವನಿಗೆ ವಿಧವಿಧವಾದ ಸೇವೆಗಳನ್ನು ಮಾಡುತ್ತಿದ್ದನು.

೧೭. ನಿತ್ಯದಲ್ಲಿಯೂ ಉಷಃಕಾಲದಲ್ಲಿ ಎದ್ದು ಸ್ನಾನವನ್ನು ಮಾಡಿ ಪಂಚಾಕ್ಷರೀಮಂತ್ರವನ್ನು ಜಪಿಸುತ್ತ ನಡೆದುಕೊಂಡೇ ಅರುಣಾಚಲಕ್ಕೆ ಮೂರು ಪ್ರದಕ್ಷಿಣೆಗಳನ್ನು ಮಾಡುತ್ತಿದ್ದನು.

೧೮. ಕಾರ್ತೀಕಮಾಸದ ಪೂರ್ಣಿಮೆಯ ದಿನಗಳಲ್ಲಿ ಪಾರ್ವತೀಪತಿಗೆ ತ್ರಿಲೋಕಪ್ರಸಿದ್ಧವಾದ ದೀಪೋತ್ಸವವನ್ನು ನಡೆಸುತ್ತಿದ್ದನು.

೧೯. ವಾಸನಾದ್ರವ್ಯಗಳು, ಬೆಳುದಾವರೆಗಳು, ಕರ್ಪೂರ ಮುಂತಾದುವುಗಳಿಂದ ವಾಸಿತವಾದ ನೀರನ್ನು ಸಾವಿರಾರು ಸ್ವರ್ಣಕಲಶಗಳಲ್ಲಿ ತಂದು ತ್ರಿನೇತ್ರನಿಗೆ ಅಭಿಷೇಕವನ್ನು ಮಾಡಿದನು.

ಪ್ರತಿಮಾಸಂ ಧ್ವಜಾರೋಹಪೂರ್ವಂ ತೀರ್ಥೋತ್ಸವಾದಿಕಂ ।
ತ್ರೈಲೋಕ್ಯಾಭ್ಯರ್ಹಿತಂ ಚಕ್ರೇ ರಥಾರೋಹಂ ಮಹೋತ್ಸವಂ ॥ ೨೦ ॥
ಲಿಂಗಂ ಪ್ರದಕ್ಷಿಣಂ ಚಾಸ್ಯ ವಿದಧೇ ವಿಶದಾಶಯಃ ।
ಯೋಜನತ್ರಿತಯಾಯಾಮವ್ಯಾಪಿನಃ ಶೋಣಭೂಭೃತಃ ॥ ೨೧ ॥
ಅರುಣಾಚಲನಾಥೇತಿ ಕರುಣಾಮೃತಸಾಗರ ।
ಅರುಣಾಂಬಾಸನಾಥೇತಿ ತುಷ್ಟಾವ ಚ ಮುಹುರ್ಮುಹುಃ ॥ ೨೨ ॥
ಸಂಲಿಪ್ಯ ವಿವಿಧೈರ್ದ್ರವ್ಯೈರ್ನಿತ್ಯಂ ಪಂಚಾಮೃತಾದಿಭಿಃ ।
ಅಚರ್ಚಯದ್ಗಂಧಸಾರಪಂಕೈಃ ಕರ್ಪೂರಪಾಂಡುರೈಃ ॥ ೨೩ ॥
ಅಪೂಜಯತ ಕಲ್ಹಾರೈಃ ಸ್ರವನ್ಮೃಗಮದದ್ರವೈಃ ।
ಪ್ರಾತರಾರಭ್ಯ ಶೋಣಾದ್ರಿನಾಯಕಂ ಗಣರೂಪಿಣಂ ॥ ೨೪ ॥
ಇತಿ ವರ್ಷತ್ರಯಂ ತಸ್ಯ ವಶಿನೋ ವರಿವಸ್ಯಯಾ ।
ಅರುಣಾದ್ರೀಶ್ವರಸ್ತುಷ್ಟಃ ಪ್ರತ್ಯಕ್ಷತ್ವಮುಗಾಹತ ॥ ೨೫ ॥
ನೀಹಾರಾಚಲಸಂಕಾಶಮಾರೂಢೋ ವೃಷಪುಂಗವಂ ।
ಅನ್ವಗಾಸೀನಯಾ ದೇವ್ಯಾ ಕೃತಗಾಢೋಪಗೂಹನಃ ॥ ೨೬ ॥

---

೨೦. ಪ್ರತಿಮಾಸದಲ್ಲಿಯೂ ಧ್ವಜಾರೋಹಣವನ್ನು ಮಾಡಿಸಿ ತೀರ್ಥೋತ್ಸವಗಳನ್ನೂ, ರಥಾರೋಹಣ ಮೊದಲಾದ ಉತ್ಸವಗಳನ್ನೂ ತ್ರಿಲೋಕ ಪ್ರಸಿದ್ಧವಾಗುವಂತೆ ಮಾಡಿಸಿದನು.

೨೧. ಮೂರು ಯೋಜನದ ಸುತ್ತಳತೆಯುಳ್ಳ ಅರುಣಾಚಲದ ಪ್ರದಕ್ಷಿಣೆಯನ್ನು ಶುದ್ಧಾಂತರಂಗನಾಗಿ ಪೂಜೆಗೆ ಅಂಗವನ್ನಾಗಿ ಮಾಡುತ್ತಿದ್ದನು.

೨೨. ಅರುಣಾಚಲೇಶ್ವರನೆಂದೂ, ಕರುಣಾಸಮುದ್ರನೆಂದೂ, ಅರುಣಾಂಬಾ ಸಮೇತನೆಂದೂ ಮತ್ತೆ ಮತ್ತೆ ಆ ಸ್ವಾಮಿಯನ್ನು ಸ್ತುತಿಸಿದನು.

೨೩. ಪಂಚಾಮೃತ ಮೊದಲಾದ ಅನೇಕ ದ್ರವ್ಯಗಳಿಂದ ಲೇಪನೆಮಾಡಿ ಕರ್ಪೂರದಿಂದ ಶುದ್ಧವೂ, ಶ್ವೇತವೂ ಆದ ಗಂಧದ್ರವ್ಯಗಳಿಂದಲಂಕರಿಸಿದನು.

೨೪. ಗಣರೂಪಿಯಾದ ಅರುಣಾಚಲೇಶ್ವರನನ್ನು ಪ್ರತಿ ಪ್ರಾತಃಕಾಲದಲ್ಲಿಯೂ ಕಸ್ತೂರಿಕಾಮೋದಿತಗಳಾದ ಬೆಳುದಾವರೆಗಳಿಂದ ಪೂಜೆಯನ್ನು ಮಾಡುತ್ತಿದ್ದನು.

೨೫. ಈ ವಿಧವಾಗಿ ಮೂರು ವರ್ಷಗಳಕಾಲ ಯತೇಂದ್ರಿಯನಾಗಿ ಅರ್ಚಿಸಿದ ಆ ದೊರೆಯ ಭಕ್ತಿಗೆ ಮೆಚ್ಚಿ ಅರುಣಾಚಲೇಶ್ವರನು ಸಂತೋಷದಿಂದ ಪ್ರತ್ಯಕ್ಷನಾದನು.

೨೬–೨೮. ಹಿಮವತ್ಪರ್ವತದಂತೆ ಶುಭ್ರವಾದ ವೃಷಭವಾಹನವನ್ನೇರಿ ಪಕ್ಕದಲ್ಲಿ ಕೂತಿರುವ ಪಾರ್ವತಿಯಿಂದ ಗಾಢವಾಗಿ ಆಲಿಂಗಿಸಲ್ಪಟ್ಟವನಾಗಿ

ಬ್ರಹ್ಮರ್ಷಿಭಿರ್ವಸಿಷ್ಠಾದ್ಯೈರ್ನಾರದಾದ್ಯೈರ್ಮಹರ್ಷಿಭಿಃ ।
ಗಣೈರ್ನಿಕುಂಭಕುಂಭಾದ್ಯೈಃ ಕ್ರಿಯಮಾಣ ಜಯಸ್ತುತಿಃ ॥ ೨೭ ॥
ಕರುಣಾಸಿಂಧುಕಲ್ಲೋಲೈಃ ಕಮಲಾವಾಸವೇಶ್ಮಭಿಃ ।
ಕಟಾಕ್ಷಪಾತೈರ್ಜಗತಾಂ ಕಾಲುಷ್ಯಮಿವ ವಾರಯನ್ ॥ ೨೮ ॥
ದೃಷ್ಟ್ವಾ ಚ ದೇವದೇವಂ ತಮಷ್ಟಾಂಗಂ ನ್ಯಸ್ಯ ಭೂತಲೇ ।
ಪ್ರಣನಾಮ ಪರಂ ಹೃಷ್ಟೋ ವಜ್ರಾಂಗದಮಹೀಪತಿಃ ॥ ೨೯ ॥
ವ್ಯಜ್ಞಾಪಯಚ್ಚ ಭೂಪಾಲೋ ಮೌಳೀಕೃತಶತಾಂಜಲಿಃ ।
ಕ್ಷಾಲಯನ್ನಿವ ದಂತಾಂಶುಜಾಲೈಸ್ತತ್ಪಾದಪಂಕಜೇ ॥ ೩೦ ॥

ವಜ್ರಾಂಗದ ಉವಾಚ :—

ದೇವೇಶ ಯದಹಂ ಮೋಹಾದ್ಬಹುಪಾತಕಸಂಚಯಂ ।
ಅಚಾರಿಷಂ ಸ ಏಕೋಽಯಂ ಕ್ಷಮ್ಯತಾಂ ಮೇ ವ್ಯತಿಕ್ರಮಃ ॥ ೩೧ ॥
ಇತಿವಾದಿನಮತ್ಯಂತಂ ದೀನಮೇವ ದಯಾನಿಧಿಃ ।
ಜಗಾದ ಜಗತೀನಾಥೋ ದೇವಃ ಶೋಣಾಚಲೇಶ್ವರಃ ॥ ೩೨ ॥

---

ವಸಿಷ್ಠಾದಿ ಬ್ರಹ್ಮರ್ಷಿಗಳಿಂದಲೂ, ನಾರದಾದಿ ಮಹರ್ಷಿಗಳಿಂದಲೂ, ಕುಂಭ ನಿಕುಂಭರೇ ಮೊದಲಾದ ಪ್ರಮಥಗಣಗಳಿಂದಲೂ ಜಯಕಾರಗಳನ್ನು ಮಾಡಿಸಿಕೊಳ್ಳುತ್ತ, ಕರುಣಾಸಮುದ್ರದ ತರಂಗಗಳಂತೆಯೂ, ಸೌಭಾಗ್ಯದ ತವರ್ಮನೆಯಂತೆಯೂ ಇರುವ ಕಟಾಕ್ಷದೃಷ್ಟಿಯಿಂದ ಸಕಲ ಲೋಕಗಳ ಪಾಪಗಳನ್ನು ಕಳೆಯುತ್ತಿರುವವನಂತೆ ಬಂದು ನಿಂತನು.

೨೯. ವಜ್ರಾಂಗದ ಮಹಾರಾಜನು ಆ ಮಹಾದೇವನನ್ನು ಕಂಡು ಸಾಷ್ಟಾಂಗವಾಗಿ ಭೂಮಿಯಲ್ಲಿ ನಮಸ್ಕರಿಸಿ ಅತ್ಯಂತ ಸಂತೋಷಗೊಂಡನು.

೩೦. ಮತ್ತು ತಲೆಯಲ್ಲಿ ನೂರಾರು ಅಂಜಲಿಬಂಧಗಳನ್ನು ಮಾಡುತ್ತ ದಂತಕಾಂತಿಯಿಂದ ಪರಮೇಶ್ವರನ ಪಾದಗಳನ್ನು ತೊಳೆಯುವವನಂತೆ ನಮಸ್ಕರಿಸಿ ವಿಜ್ಞಾಪಿಸಿಕೊಂಡನು.

೩೧. "ಎಲೈ ಮಹಾದೇವನೆ! ನಾನು ಅಜ್ಞಾನದಿಂದ ಯಾವ ಪಾಪರಾಶಿಯನ್ನು ಇಲ್ಲಿಯವರೆಗೆ ಮಾಡಿರುವೆನೊ, ಆ ನನ್ನ ವ್ಯತಿಕ್ರಮವೆಲ್ಲವನ್ನೂ ಕ್ಷಮಿಸುವವನಾಗು."

೩೨. ಹೀಗೆ ದೀನವಾಗಿ ಪ್ರಾರ್ಥನೆ ಮಾಡಿದ ವಜ್ರಾಂಗದನನ್ನು ಕುರಿತು ದಯಾಸಮುದ್ರನೂ, ಜಗನ್ನಾಥನೂ ಆದ ಅರುಣಾಚಲೇಶ್ವರನು ಅನುಗ್ರಹಿಸಿ ಹೇಳಿದನು.

ಮಹೇಶ್ವರ ಉವಾಚ :—

ಮಾಭೈಷೀರ್ವತ್ಸ ಭದ್ರಂ ತೇ ಸಂತ್ಯಷ್ಟೌ ಮಮ ಮೂರ್ತಯಃ ।
ತಾಃ ಸರ್ವಾಃ ಸರ್ವಜಂತೂನಾಮುತ್ಯರ್ಥಂ ಪರಿಕಲ್ಪಿತಾಃ ॥ ೩೩ ॥
ಪುರಾ ಪುರಂದರಸ್ತ್ವಂ ಹಿ ಕೈಲಾಸಶಿಖರೇ ಸ್ಥಿತಂ ।
ಗರ್ವಿತೋ ಮಾಮವಾಮಂಸ್ಥಾಃ ಸ್ತಂಭಿತಶ್ಚ ತದಾ ಮಯಾ ॥ ೩೪ ॥
ಕ್ಷಣಂ ಗಳಿತಗರ್ವಸ್ತ್ವಂ ಸ್ತಂಭನಾವ್ರೀಡಿತಸ್ತದಾ ।
ಅಯಾಚಿಷ್ಠಾಃ ಶಿವಜ್ಞಾನಮಖಿಲೈಶ್ವರ್ಯಕಾರಣಂ ॥ ೩೫ ॥
ಆದಿಷ್ಟಸ್ತ್ವಂ ಮಯಾ ವಜ್ರಿನ್ನವತೀರ್ಯಾವನಿಂ ಭವಾನ್ ।
ರಾಜಾ ವಜ್ರಾಂಗದೋ ಭೂತ್ವಾ ಲಪ್ಸ್ಯಸೇ ಮತ್ಕೃಪಾಮಿತಿ ॥ ೩೬ ॥
ಜಾತಂ ತತಃ ಪ್ರಭಾವೇಣ ಕ್ಷೇತ್ರಮೇತನ್ಮದಾಸ್ಪದಂ ।
ಶಿಕ್ಷಿತೋಽತೀವ ಮುಗ್ಧಸ್ತ್ವಂ ಭಕ್ತೋಽಸಿ ಚ ಪರಂ ಮಯಿ ॥ ೩೭ ॥
ಅಧುನಾತಿಸಪರ್ಯಾಭಿಸ್ತ್ವತ್ಕೃತಾಭಿರಹರ್ನಿಶಂ ।
ಪರಿತುಷ್ಟೋಽಸ್ಮ್ಯಹಂ ರಾಜನ್ನತಸ್ತ್ವಾಂ ಬೋಧಯಾಮ್ಯಹಂ ॥ ೩೮ ॥
ಖಂ ವಾಯುರನಲೋ ವಾರಿ ಭೂಃ ಸೂರ್ಯಶಶಿನೌ ಪುಮಾನ್ ।
ಇತಿ ಮನ್ಮೂರ್ತಿಭಿರ್ವಿಶ್ವಂ ಭಾಸತೇ ಸಚರಾಚರಂ ॥ ೩೯ ॥

---

೩೩. "ಎಲೈ ಭಕ್ತನೆ! ನೀನು ಭಯಪಡಬೇಡ. ನನಗೆ ಅಷ್ಟಮೂರ್ತಿಗಳುಂಟು. ಅವುಗಳೆಲ್ಲವೂ ಸರ್ವಜಂತುಗಳ ಮೋಕ್ಷಾರ್ಥವಾಗಿ ಕಲ್ಪಿತಗಳಾಗಿರುವುವು.

೩೪. ಪೂರ್ವದಲ್ಲಿ ನೀನು ಮಹೇಂದ್ರನಾಗಿ ಕೈಲಾಸದಲ್ಲಿದ್ದ ನನ್ನನ್ನು ಕಡೆಗಂಡುದರಿಂದ ನಾನು ನಿನ್ನನ್ನು ಸ್ತಂಭೀಭೂತನನ್ನಾಗಿ ಮಾಡಿದೆನು.

೩೫. ಒಂದು ಕ್ಷಣದಲ್ಲಿಯೇ ನಿನ್ನ ಗರ್ವವು ನಷ್ಟವಾಗಿ ಸ್ತಂಭನದಿಂದ ಲಜ್ಜೆಗೊಂಡವನಾಗಿ ಸಕಲಸಂಪತ್ತುಗಳಿಗೆ ಕಾರಣವಾದ ಶಿವಜ್ಞಾನವನ್ನು ಯಾಚಿಸುವವನಾದೆ.

೩೬. ನನ್ನಿಂದ ನೀನು ಭೂಲೋಕದಲ್ಲಿ ವಜ್ರಾಂಗದ ರಾಜನಾಗಿ ಹುಟ್ಟಿ ನನ್ನ ಕೃಪೆಯನ್ನು ಸಂಪಾದಿಸುವೆ ಎಂದು ಆಜ್ಞಪ್ತನಾದೆ.

೩೭. ಪ್ರಭಾವದಿಂದ ಈ ಕ್ಷೇತ್ರವು ನನಗೆ ನಿವಾಸಸ್ಥಾನವಾಯಿತು. ನೀನೂ ಮುಗ್ಧನಾಗಿ ಶಿಕ್ಷೆಯನ್ನನುಭವಿಸಿ ನನ್ನ ಪರಮಭಕ್ತನಾಗಿರುವೆ.

೩೮. ಈಗ ರಾತ್ರಿ ಹಗಲುಗಳೆನ್ನದೆ ನೀನು ಮಾಡಿದ ಉಪಚಾರಗಳಿಂದ ನಾನು ಸಂತೋಷಗೊಂಡಿರುವೆನಾದುದರಿಂದ ನಿನಗೆ ಉಪದೇಶವನ್ನು ಮಾಡುತ್ತೇನೆ.

೩೯. ಆಕಾಶ, ವಾಯು, ಅಗ್ನಿ, ಜಲ, ಭೂಮಿ, ಸೂರ್ಯನು, ಚಂದ್ರನು,

ಕಾಲೋ ಹಿ ಕಾಲಯಾಮ್ಯರ್ಥಾನ್ಸತ್ತ್ವಾನಧ್ವನ ಏವ ಚ ।
ತತ್ತ್ವಾತೀತಃ ಶಿವಶ್ಚಾಹಂ ನ ಮತ್ತೋಽಸ್ತೀಹ ಕಿಂಚನ ॥ ೪೦ ॥
ಅಪರ್ಯಂತಚಿದಾನಂದಸಿಂಧೋರ್ಮೇ ಕೇಚಿದೂರ್ಮಯಃ ।
ವೇಧೋಮುಕುಂದರುದ್ರೇಂದ್ರಮುಖಾನಾಹುರುದಿತ್ವರಾಃ ॥ ೪೧ ॥
ವಾಣೀಲಕ್ಷ್ಮೀಕ್ಷ್ಮಾಶ್ರದ್ಧಾಪ್ರಜ್ಞಾಸ್ವಾಹಾಸ್ವಧಾದಯಃ ।
ಅಸಂಖ್ಯೇಯಮಹಾಶಕ್ತೇರ್ಮಮ ವಿಸೃಷ್ಟಿಶಕ್ತಯಃ ॥ ೪೨ ॥
ಇಯಂ ಮಮ ಮಹಾಶಕ್ತಿರ್ಗೌರೀ ಮಾಯಾ ಜಗತ್ಪ್ರಸೂಃ ।
ಅನಯಾಚ್ಛಾದ್ಯತೇ ವಿಶ್ವಂ ಶಶ್ವದ್ವಿಸ್ತಾರ್ಯತೇಽಪಿ ಚ ॥ ೪೩ ॥
ಶಕ್ತ್ಯಾನಯಾನ್ವಿತಃ ಸರ್ಗರಕ್ಷಾಸಂಹೃತಿವಿಭ್ರಮಃ ।
ವಿಚಿತ್ರಮೇತತ್ಪಶ್ಯಾಮಿ ಜಗಚ್ಚಿತ್ರಂ ನಿಜೇಚ್ಛಯಾ ॥ ೪೪ ॥
ಅಪವಾಹಿತಮೋಹಸ್ತ್ವಂ ಮಹಿಮ್ನಾ ಮೇ ವಿಚಾರಯ ।
ಆತ್ಮಾನಮವಿಭಿನ್ನಂ ಮೇ ತರಂಗಮಿವ ವಾರಿಧೇಃ ॥ ೪೫ ॥

---

ಆತ್ಮ— ಈ ನನ್ನ ಅಷ್ಟಮೂರ್ತಿಗಳಿಂದ ಚರಾಚರಾತ್ಮಕವಾದ ಜಗತ್ತೆಲ್ಲವೂ ಪ್ರಕಾಶಿಸುತ್ತಿರುವುದು.

೪೦. ನಾನೇ ಕಾಲನಾಗಿ ಪದಾರ್ಥಗಳನ್ನೂ, ಜೀವರನ್ನೂ ಕರ್ಮಾನುಸಾರವಾಗಿ ನಾಶಮಾಡುತ್ತೇನೆ. ತತ್ತ್ವಾತೀತನಾದ ಶಿವನೂ ನಾನೇ. ನನಗಿಂತ ಬೇರೆಯಾದ ವಸ್ತುವು ಎಲ್ಲಿಯೂ ಇಲ್ಲ.

೪೧. ಬ್ರಹ್ಮ, ವಿಷ್ಣು, ರುದ್ರ, ಮಹೇಂದ್ರ ಮುಂತಾದವರೆಲ್ಲರೂ ಅನಂತ ಜ್ಞಾನಾನಂದಸಾಗರನಾದ ನನ್ನ ತರಂಗಗಳೆಂದು ತಿಳಿದವರು ಹೇಳುವರು.

೪೨. ಸರಸ್ವತಿ, ಲಕ್ಷ್ಮೀ, ಭೂಮಿ, ಶ್ರದ್ಧಾ, ಪ್ರಜ್ಞಾ, ಸ್ವಾಹಾ, ಸ್ವಧಾ ಮುಂತಾದವರೆಲ್ಲರೂ ಅನಂತ ಶಕ್ತಿಯುತನಾದ ನನ್ನ ಸೃಷ್ಟಿಶಕ್ತಿಯರಾಗಿರುವರು.

೪೩. ಈ ಪಾರ್ವತಿಯೇ ಜಗತ್ಸೃಷ್ಟಿಕರ್ತಳಾದ ಮಾಯೆಯೆಂಬ ಮಹಾಶಕ್ತಿಯು. ಈಕೆಯಿಂದಲೇ ಲೋಕಗಳು ಪ್ರಳಯದಲ್ಲಿ ನಾಶವನ್ನು ಹೊಂದಿ ಮತ್ತೆ ವಿಸ್ತಾರವನ್ನು ಹೊಂದುತ್ತವೆ.

೪೪. ಈ ಶಕ್ತಿಯಿಂದ ಕೂಡಿಯೇ ನಾನು ಬ್ರಹ್ಮಾಂಡದ ಸೃಷ್ಟಿಸ್ಥಿತಿಲಯಗಳೆಂಬ ಭ್ರಮವನ್ನುಂಟುಮಾಡುತ್ತೇನೆ. ನನ್ನ ಸ್ವೇಚ್ಛೆಯಿಂದಲೇ ವಿಚಿತ್ರವಾದ ಈ ಜಗಚ್ಚಿತ್ರವನ್ನು ನೋಡುತ್ತೇನೆ.

೪೫. ನನ್ನ ಅನುಗ್ರಹದಿಂದ ಮೋಹವನ್ನು ಕಳೆದುಕೊಂಡು ಆತ ವಿಚಾರವನ್ನು ಮಾಡು. ಅಲೆಯು ಸಮುದ್ರದಿಂದ ಹೇಗೆ ಬೇರೆಯಲ್ಲವೊ, ನಿನ್ನ ಆತ್ಮನೂ ಹಾಗೆಯೇ ನನ್ನಿಂದ ಬೇರೆಯಲ್ಲ.

ತತೋ ಮದ್ರೂಪಶಾಲಿನ್ಯಾ ಆಧಿಪತ್ಯಂ ಕ್ಷಿತೇರ್ಗತಃ ।
ಮತ್ಪ್ರಸಾದೇನ ರಾಜೇಂದ್ರ ಭುಂಕ್ಷ್ವ ಭೋಗಾನ್ಯಥಾಸುಖಂ ॥ ೪೬ ॥
ಪುನಃ ಪುರಂದರತ್ವೇನ ಭುಕ್ತ್ವಾದಿವ್ಯಸುಖಶ್ಚಿರಂ ।
ಮದೇಕರೂಪತಾಂ ರಾಜನ್ನಿಶ್ಚಯಾತ್ತ್ವಮವಾಪ್ಸ್ಯಸಿ ॥ ೪೭ ॥

ನಂದಿಕೇಶ್ವರ ಉವಾಚ:—

ಇತ್ಯುಕ್ತ್ವಾಂತರ್ಹಿತೇ ದೇವೇ ರಾಜಾ ವಜ್ರಾಂಗದಃ ಕೃತೀ ।
ಶೋಣೇಶಂ ಪೂಜಯನ್ನೇವ ಸರ್ವಾನ್ಭೋಗಾನವಾಪ್ತವಾನ್ ॥ ೪೮ ॥
ಇತ್ಥಂ ತೇ ಕಥಿತಂ ಸಾಧೋ ಶಿವಭಕ್ತವಿಜೃಂಭಣಂ ।
ಪ್ರದಕ್ಷಿಣಾಫಲಂ ಚೈವ ಶೋಣಶೈಲಸ್ಯ ಶಾಶ್ವತಂ ॥ ೪೯ ॥
ಕಿಂ ವಾಚಾಂ ವಿಸ್ತರೇಣಾತ್ರ ಶೋಣಶೈಲಪ್ರದಕ್ಷಿಣಾ ।
ಮಹತಾಮಶ್ವಮೇಧಾನಾಂ ಶತಾದಪಿ ವಿಶಿಷ್ಯತೇ ॥ ೫೦ ॥
ವಿಷುವಾಯನಸಂಕ್ರಾಂತಿವ್ಯತೀಪಾತಾದಿ ಪರ್ವಸು ।
ಪ್ರದಕ್ಷಿಣಾಚ್ಛೋಣಗಿರೇರಸಂಖ್ಯೇಯಂ ಫಲಂ ಭವೇತ್ ॥ ೫೧ ॥

---

೪೬. ಆದುದರಿಂದ ನನ್ನ ರೂಪವಾದ ಭೂಮಿಯ ಆಧಿಪತ್ಯವನ್ನು ಹೊಂದಿ ನನ್ನ ಅನುಗ್ರಹದಿಂದ ಮಹಾರಾಜನಾಗಿ ಯಥಾಸುಖವಾಗಿ ಭೋಗಗಳನ್ನನುಭವಿಸು.

೪೭. ಮತ್ತೆ ಮಹೇಂದ್ರನಾಗಿ ಬಹಳಕಾಲ ದಿವ್ಯಸುಖಗಳನ್ನನುಭವಿಸಿ ನಿಶ್ಚಯವಾಗಿಯೂ ನನ್ನ ಸಾರೂಪ್ಯಪದವಿಯನ್ನು ಅಂತ್ಯದಲ್ಲಿ ಪಡೆಯುವೆ.''

೪೮. ನಂದಿಕೇಶ್ವರನು ಹೇಳುತ್ತಾನೆ:—ಹೀಗೆ ಅನುಗ್ರಹವನ್ನು ಮಾಡಿ ಅರುಣಾಚಲೇಶ್ವರನು ಅಂತರ್ಧಾನವನ್ನು ಹೊಂದಲು ವಜ್ರಾಂಗದ ಮಹಾರಾಜನು ಆ ಶಿವನ ಪೂಜೆಯಿಂದಲೇ ಸಕಲ ಇಷ್ಟಾರ್ಥಗಳನ್ನು ಪಡೆದನು.

೪೯. ಎಲೈ ಮಾರ್ಕಂಡೇಯನೆ! ಶಿವಭಕ್ತರ ಮೇಲ್ಮೆಯನ್ನೂ ಅರುಣಾಚಲದ ಪ್ರದಕ್ಷಿಣೆಯಿಂದಾಗುವ ಶಾಶ್ವತವಾದ ಫಲವನ್ನೂ ನಿನಗೆ ತಿಳಿಸಿರುವೆನು.

೫೦. ಹೆಚ್ಚು ಮಾತುಗಳನ್ನು ಬೆಳಸಿದುದರಿಂದೇನು? ಅರುಣಾಚಲಕ್ಕೆ ಮಾಡಿದ ಒಂದು ಪ್ರದಕ್ಷಿಣೆಯೂ ಮಹತ್ತರವಾದ ನೂರು ಅಶ್ವಮೇಧಗಳನ್ನು ಮಾಡಿದುದಕ್ಕಿಂತಲೂ ಅಧಿಕ ಫಲವನ್ನು ಕೊಡುವುದು.

೫೧. ವಿಷುವತ್ಪುಣ್ಯಕಾಲ, ಉತ್ತರಾಯಣ ದಕ್ಷಿಣಾಯಣ ಪುಣ್ಯಕಾಲಗಳು, ಸಂಕ್ರಮಣಗಳು, ವ್ಯತೀಪಾತ ವೈಧೃತಿಗಳು ಮುಂತಾದ ಪರ್ವಕಾಲಗಳಲ್ಲಿ ಮಾಡಿದ ಪ್ರದಕ್ಷಿಣೆಗಳಿಗೆ ಅನಂತ ಫಲಪ್ರಾಪ್ತಿಯಾಗುವುದು.

ನ ಕ್ಷೇತ್ರಮರುಣಾದಸ್ತಿ ನಾಸ್ತಿ ದೇವೋಽರುಣೇಶ್ವರಾತ್ ।
ನಾಪಿ ಪ್ರದಕ್ಷಿಣಾದನ್ಯದ್ವಿದ್ಯತೇಽಭ್ಯಧಿಕಂ ತಪಃ ॥ ೫೨ ॥
ಇತಿ ಕಥಯತಿ ನಂದಿಕೇಶ್ವರೇಽಸ್ಮಿ
ನ್ಪುಲಕಿತಸರ್ವವಪುರ್ಮೃಕಂಡುಪುತ್ರಃ ।
ಮುಹುರಧಿಗತಹರ್ಷಬಾಷ್ಪವೃಷ್ಟಿ
ರ್ಮಹತಿ ನಿಮಗ್ನ ಇವಾಭವತ್ಸುಧಾಬ್ಧೌ ॥ ೫೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ತೃತೀಯೇ ಅರುಣಾಚಲಮಾಹಾತ್ಮ್ಯೇ ಉತ್ತರಾರ್ಧೇ
"ವಜ್ರಾಂಗದ ಸದ್ಗತಿವರ್ಣನಂ" ನಾಮ ಚತುರ್ವಿಂಶತಿತಮೋಽಧ್ಯಾಯಃ ।

## ಮಾಹೇಶ್ವರಖಂಡಃ ಸಮಾಪ್ತಃ

---

೫೨. ಅರುಣಾಚಲಕ್ಕಿಂತ ಉತ್ತಮವಾದ ಕ್ಷೇತ್ರವಿಲ್ಲ. ಅರುಣಾಚಲೇಶ್ವರನಿಗಿಂತ ಹಿರಿದಾದ ದೈವವಿಲ್ಲ. ಪ್ರದಕ್ಷಿಣಕ್ಕಿಂತ ಅಧಿಕವಾದ ತಪಸ್ಸು ಪ್ರಪಂಚದಲ್ಲಿರುವುದಿಲ್ಲ.

೫೩. ಈ ರೀತಿಯಾಗಿ ನಂದಿಕೇಶ್ವರನು ನಿರೂಪಿಸುತ್ತಿರಲು ಮಾರ್ಕಂಡೇಯನು ಪುಲಕಿತ ಸರ್ವಶರೀರನಾಗಿ ಮತ್ತೆ ಮತ್ತೆ ಆನಂದಬಾಷ್ಪಗಳ ಮಳೆಯನ್ನೇ ಕರೆಯುತ್ತ ಅನಂತವಾದ ಅಮೃತದ ಸಮುದ್ರದಲ್ಲಿ ಮಗ್ನನಾದವನಂತೆ ಕಾಣುತ್ತಿದ್ದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೂರನೆಯ ಅರುಣಾಚಲ
ಮಾಹಾತ್ಮ್ಯದ ಉತ್ತರಾರ್ಧದಲ್ಲಿ "ವಜ್ರಾಂಗದನು ಸದ್ಗತಿಯನ್ನು ಹೊಂದಿದುದು"
ಎಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

## ಅರುಣಾಚಲ ಮಾಹಾತ್ಮ್ಯದ ಉತ್ತರಾರ್ಧವು ಮುಗಿದುದು

## ಮಾಹೇಶ್ವರಖಂಡವು ಸಮಾಪ್ತವಾದುದು

